# ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರ : ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ
ಭಾಷಾ ನಿಕಾಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಸುಚೇತಾ ನವರತ್ನ

ಮಾರ್ಗದರ್ಶಕರು
ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ- ೫೮೩ ೨೭೬

೨೦೦೨

# ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರ : ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ
ಭಾಷಾ ನಿಕಾಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಸುಚೇತಾ ನವರತ್ನ



ಮಾರ್ಗದರ್ಶಕರು
ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ- ೫೮೩ ೨೭೬

೨೦೦೨



# ಕೃತಜ್ಞತೆಗಳು

''ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರ : ಒಂದು ಅಧ್ಯಯನ'' ಎಂಬ ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಅರ್ಪಿಸಲು ನನಗೆ ತುಂಬಾ ಹರ್ಷವೆನಿಸುತ್ತದೆ.

. ಈ ಮಹಾಪ್ರಬಂಧ ಸಲ್ಲಿಸಲು ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ॥ ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ಕುಲಸಚಿವರಾದ ಡಾ॥ ಕೆ.ವಿ. ನಾರಾಯಣ ಅವರಿಗೆ,

ಈ ಅಧ್ಯಯನವನ್ನು ಕೈಗೊಳ್ಳಲು ವಿಷಯ ಸೂಚಿಸಿ, ಪ್ರೋತ್ಸಾಹಿಸಿ ಸೂಕ್ತ ಮಾರ್ಗದರ್ಶನ ವನ್ನಿತ್ತ ಹಿತಚಿಂತಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೂ, ಅಧ್ಯಯನಕ್ಕೆ ಅನುವು ಮಾಡಿಕೊಟ್ಟ ಅಧ್ಯಯನಾಂಗದ ನಿರ್ದೇಶಕರಾದ ಡಾ॥ ಹಿ.ಚಿ. ಬೋರಲಿಂಗಯ್ಯ ಅವರಿಗೂ ನನ್ನ ಕೃತಜ್ಞತೆಗಳು.

ಸೂಕ್ತ ಸಲಹೆ ಸೂಚನೆಗಳನ್ನಿತ್ತ ಡಾ॥ ಕರೀಗೌಡ ಬೀಚನಹಳ್ಳಿ, ಡಾ॥ ಕೆ. ಹೆಚ್. ಕಟ್ಟಿ, ಡಾ॥ ಮೋಹನ್ ಕುಂಟಾರ್, ಡಾ॥ ಸುಬ್ಬಣ್ಣ ರೈ, ಡಾ॥ ಮಾಧವ್ ಪೆರಾಜೆ, ಡಾ॥ ಅಮರೇಶ್ ನುಗಡೋಣಿ ಅವರಿಗೂ ನನ್ನ ಅನಂತ ಕೃತಜ್ಞತೆಗಳು ಸಲ್ಲುತ್ತವೆ.

ನನ್ನ ಬರವಣಿಗೆಯಲ್ಲಿ ಅನೇಕ ವಿಚಾರಗಳನ್ನು ಹುಡುಕಿಕೊಟ್ಟು ಪ್ರತಿ ಹಂತಕ್ಕೂ ಪೂರಕ ಚರ್ಚೆಯನ್ನೊದಗಿಸಿದ ಪತಿ ಶ್ರೀ ಪ್ರತಾಪ್ ಕುಲಕರ್ಣಿಯವರಿಗೂ, ಅಧ್ಯಯನಕ್ಕೆ ಅವಶ್ಯವಿರುವ ಚರ್ಚೆಯನ್ನು ಬರವಣಿಗೆಯ ವಿಧಿವಿಧಾನಗಳನ್ನು ಹೇಳಿಕೊಟ್ಟ ಶ್ರೀ ಪಿಸ್ಸೆ, ಡಾ॥ ಎಂ. ಉಷಾ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ನನ್ನ ಅಧ್ಯಯನಕ್ಕೆ ಪ್ರೀತಿಯ ಪ್ರೋತ್ಸಾಹವನ್ನಿತ್ತ ತಂದೆ ನಾರಾಯಣರಾವ್, ತಾಯಿ ಲಕ್ಷ್ಮಿ ಹಾಗೂ ಸಹೋದರ-ಸಹೋದರಿ ಸಂಗೀತ ಗುರುರಾಜರಿಗೂ, ಅತ್ತೆ ಲೀಲಾಬಾಯಿಯವರಿಗೂ, ಡಾ॥ಎಂ.ನಾಗರಾಜ್, ಶಿವಪ್ರಕಾಶ್, ಡಾ॥ ಕೆ.ಬಿ. ಅರ್ಚಕ್, ಮೀನಾಕ್ಷಿ, ಪರಮೇಶ್ವರಪ್ಪ, ಕೃಷ್ಣಮೂರ್ತಿ, ಎಸ್.ಕೆ. ವಿಜಯೇಂದ್ರ, ಹಾಗೂ ವಿಶ್ವವಿದ್ಯಾಲಯದ ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೂ, ಕರ್ನಾಟಕ ವಿದ್ಯಾವರ್ಧಕ ಸಂಘದ ಸಿಬ್ಬಂದಿ ವರ್ಗಕ್ಕೂ ಹಾಗೂ

ವಿಶೇಷ ಕಾಳಜಿವಹಿಸಿಕೊಂಡು ಅಂದವಾಗಿ ಗಣಕಯಂತ್ರದಲ್ಲಿ ನನ್ನ ಮಹಾಪ್ರಬಂಧದ ಅಕ್ಷರ ಜೋಡಣೆ ಮಾಡಿಕೊಟ್ಟ ಶಶಿ ಕಂಪ್ಯೂಟರ್ಸ್‌ನ ಮಾಲಕರಾದ ಶ್ರೀಯುತ ಹೆಚ್.ಎಂ. ಜಂಬುನಾಥ, ಶೇಷಗಿರಿ,ಕು. ಲತಾ,ಖಾದರ್‌ಬಾಷ, ಪ್ರಭು, ಕು. ರೇಷ್ಮ ಇವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.



ಸುಚೇತಾ ನವರತ್ನ

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀಮತಿ ಸುಚೇತಾ ನವರತ್ನ ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಯಿಸಿ **''ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರಗಳು: ಒಂದು ಅಧ್ಯಯನ''** ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದಾರೆ. ಈ ಮಹಾಪ್ರಬಂಧವನ್ನು ಭಾಗಶಃ ಆಗಲಿ, ಪೂರ್ಣ ಪ್ರಮಾಣದಲ್ಲಾಗಲಿ, ಬೇರಾವುದೇ ಪದವಿ, ಡಿಪ್ಲೊಮೋ ಅಥವಾ ತತ್ಸಮಾನ ಪದವಿಗಾಗಿ ಈ ಹಿಂದೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ :

ಸ್ಥಳ :

ಮಾರ್ಗದರ್ಶಕರು

ಮಲ್ಲೇಪುರಂ ಜಿ. ವೆಂಕಟೇಶ್

**(ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್)**

# ಪ್ರಮಾಣ ಪತ್ರ

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್‌ರವರ ಮಾರ್ಗದರ್ಶನದಲ್ಲಿ **"ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರಗಳು: ಒಂದು ಅಧ್ಯಯನ"** ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದಲ್ಲಿರುವ ಯಾವುದೇ ಭಾಗದ ವಿಷಯವನ್ನು ಇತರೆ ಯಾವುದೇ ವಿಶ್ವವಿದ್ಯಾಲಯದ ಪದವಿ, ಡಿಪ್ಲೊಮೋ ಅಥವಾ ತತ್ಸಮಾನ ಪದವಿಗಾಗಿ ಬಳಸಿಕೊಂಡಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ :

ದಿನಾಂಕ :

S.N. Navaratna

**ಶ್ರೀಮತಿ ಸುಚೇತಾ ನವರತ್ನ**

ಸಂಶೋಧಕರು.

# ಪರಿವಿಡಿ

# ಅಧ್ಯಾಯ - ೧

# ಅಧ್ಯಯನದ ಉದ್ದೇಶ - ಸ್ವರೂಪ ಮತ್ತು ವ್ಯಾಪ್ತಿ

ಅನುವಾದ ಬಹುಶಿಸ್ತಿಯ ಅಧ್ಯಾಯನಕ್ಕೆ ತನ್ನನ್ನು ಒಡ್ಡಿಕೊಳ್ಳುವ ಮೂಲಕ Translatology ಎನ್ನುವ ಶಾಸ್ತ್ರವಾಗಿ ಬೆಳೆದಿದೆ. ಅನುವಾದ ಕುರಿತಾದ ವೈವಿಧ್ಯಮಯ ಅಧ್ಯಯನ ಸಾಧ್ಯತೆಗಳನ್ನು ಕಂಡುಕೊಂಡಿರುವ ಈ ಯುಗದಲ್ಲಿ, ಅನುವಾದ ಚಿಂತನೆ ಎಂಬುದು ಹೊಸ ಪ್ರಕ್ರಿಯೆಯಾಗಿಯೇನು ಉಳಿದಿಲ್ಲ. ಈ ಸಾಧ್ಯತೆಯನ್ನು ಮನಗಂಡಾಗಲೂ ಅಂತರ ಶಿಸ್ತಿಯ ಅಧ್ಯಯನವಾಗಿ ಅನುವಾದವನ್ನು ಅರ್ಥೈಸುವ ಪ್ರಕ್ರಿಯೆ ಈ ಹೊತ್ತಿನ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ.

ಅನುವಾದ ಎನ್ನುವದು ಜಗತ್ತಿನ ಪ್ರತಿನಿಮಿಷವನ್ನು ನಿಯಂತ್ರಿಸುತ್ತಿರುವ ಈ ಘಟ್ಟದಲ್ಲಿ ಕಂಪ್ಯೂಟರೀಕೃತ ಅನುವಾದ ಅಥವಾ ಯಾಂತ್ರಿಕ ಅನುವಾದ ಕೂಡ ಕೇವಲ ಪರಿಚಯಾತ್ಮಕವಾಗಿ ಅಲ್ಲ. ವಿಸ್ತ್ರುತವಾದ ವ್ಯಾಪ್ತಿಯನ್ನು ಹೊಂದಿ ಚರ್ಚೆಗೆ ಒಳಗಾಗಿದೆ. ಆದರೆ ಇಂದು ಚರ್ಚಿತವಾಗುತ್ತಿರುವ ಬಹುತೇಕ ಚಿಂತನೆಗಳು ಪಾಶ್ಚತ್ಯ ಮೂಲದ ಭಾಷಾಂತರ ಸ್ವರೂಪ ಮತ್ತು ಪ್ರಕ್ರಿಯೆಗಳು ಆಧರಿಸಿದೆ. ಆದರೆ ತನ್ನದೇ ಆದ ತಾತ್ವಿಕ ಚಿಂತನೆಯೊಂದನ್ನು ಹುಟ್ಟುಹಾಕಿದೆ. ಭಾರತೀಯ ಮೂಲದ ಅನುವಾದ ಕುರಿತಾದ ಚರ್ಚೆಗಳು ಅಷ್ಟಾಗಿ ಕಾಣಬರುವುದಿಲ್ಲ. ಅದರಲ್ಲೂ ಕನ್ನಡದ್ದೇ ಆದ ಒಂದು ಅನುವಾದ ಪ್ರಕ್ರಿಯೆಯ ಚಿಂತನೆ ಕೇವಲ ಪ್ರಸ್ಥಾಪವಾಗಿದೆ. ಅದರ ತಾತ್ವಿಕತೆಯ ಬಗ್ಗೆ ಅಥವಾ ಅದನ್ನು ಒಂದು ಚೌಕಟ್ಟಿನಲ್ಲಿಟ್ಟು ನೋಡುವ ದೃಷ್ಟಿಕೋನ/ ಅಧ್ಯಯನ ಮಾದರಿ ದೊರಕುವುದಿಲ್ಲ.

ಪ್ರಸ್ತುತ ಅಧ್ಯಯನವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅನುವಾದ ಯುಗವೆಂದೇ ದಾಖಲಾದ, ವಸಾಹತು ರಾಜಕಾರಣದ ಪ್ರಮುಖ ಘಟ್ಟವೆನಿಸಿದ ಈ ೧೮-೧೯ ನೇ ಶತಮಾನದ ಅಧ್ಯಯನವನ್ನು ಕುರಿತಾಗಿದೆ. ಪ್ರಸ್ತುತ ಅಧ್ಯಯನವು ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರಗಳಿಗೆ ಸಂಬಂಧಿಸಿದ್ದಾಗಿದೆ. ಇದು ರಾಜಕೀಯವಾಗಿ ಸಾಂಸ್ಕೃತಿಕವಾಗಿ ಬದಲಾವಣೆಗೊಳ್ಳುತ್ತಿದ್ದ ಕಾಲ. ಪಾಶ್ಚಾತ್ಯ ಮತ್ತು ವಿದ್ವಾಂಸರು ಭಾರತೀಯ ಸಾಂಸ್ಕೃತಿಯ ಬಹುಬಗ್ಗೆ ನೆಲೆಗಳನ್ನು ಹುಡುಕುತ್ತಿದ್ದ ಕಾಲ. ದೇಶೀ ವಿದ್ವಾಂಸರು ಆಯಾ ದೇಶಿ ಭಾಷೆಗಳ ಬಹು ಸಾಧ್ಯತೆಗಳನ್ನು ತಿಳಿಯುತ್ತಲೇ, ದೇಶಿ ಭಾಷೆಗಳ ಸಂರಕ್ಷಣೆಗೆ ಒಳಗಾಗುತ್ತಿದ್ದ ಕಾಲ. ಈ ಕಾಲಾವಧಿಯ ಅಧ್ಯಯನವು ಯಾರಿಗಾದರೂ ಸವಾಲುಗಳನ್ನು ಒಡ್ಡುವ ಅಂಶಗಳನ್ನು ಒಳಗೊಂಡಿದೆ.

ಎ. ಆರ್. ಕೃಷ್ಣಶಾಸ್ತ್ರಿ, ಕೆ. ಕೃಷ್ಣಮೂರ್ತಿ, ಕೀರ್ತಿನಾಥ ಕುರ್ತಕೋಟಿ ಮುಂತಾದವರು ನಡೆಸಿದ ಅಧ್ಯಯನಗಳು ಕನ್ನಡದ ಮಟ್ಟಿಗೆ ಈವತ್ತಿನ ಹಲವು ಚರ್ಚೆಗಳಿಗೆ ನಮ್ಮನ್ನು ಒಯ್ಯುವಂತವಾಗಿದೆ. ಅಸಂಖ್ಯ ಅನುವಾದಗಳೇನೋ ಬಂದಿವೆ ಆ ಎಲ್ಲಾ ಅನುವಾದಗಳನ್ನು ಗಮನಿಸಿ ತಾತ್ವಿಕವಾದ

ಚರ್ಚೆಬೆಳೆಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಕನ್ನಡದಲ್ಲಿ ಈವರೆಗೂ ಬಂದ ವಿಮರ್ಶಾತ್ಮಕ ಬರಹಗಳನ್ನು ಹಾಗೂ ಅನುವಾದಗಳನ್ನು ಗಮನಿಸುತ್ತಲೇ, ಅನುವಾದ ಎನ್ನುವುದು ಕೇವಲ ಅನುವಾದವಲ್ಲ. ಈ ಅನುವಾದದ ಸಾಂಸ್ಕೃತಿಕ ಆಶಯಗಳು ಯಾವುವು? ಒಂದೇ ಪಠ್ಯವು ಪುನಃ ಪುನಃ ಅನುವಾದವಾಗಲು ಕಾರಣವೇನು? ಪ್ರತಿಯೊಬ್ಬ ಅನುವಾದಕನು ಯಾವುದೇ ಸಂಸ್ಕೃತ ನಾಟಕಗಳನ್ನು ಅನುವಾದಿಸುವಾಗ ಇಟ್ಟುಕೊಂಡ ಮಾನದಂಡಗಳೇನು? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಈ ಅಧ್ಯಯನದ ಮೂಲಕ ಕಂಡು ಕೊಳ್ಳಲು ಪ್ರಯತ್ನಿಸಲಾಗಿದೆ. ಇಂತಹ ಸಂಕೀರ್ಣ ಮನೋಭೂಮಿಕೆಯನ್ನು ಹೊಂದಿವೆ. ಈ ಕಾಲಘಟ್ಟದ ಕುರಿತಾದ ಅಧ್ಯಯನವು ಅತ್ಯಂತ ಮಹತ್ವಪೂರ್ಣದ್ದಾಗಿದೆ. ಅರ್ಥಾತ್ ಈ ಅಧ್ಯಯನವು ಕನ್ನಡದ ಅನುವಾದ ಯುಗದ ಸಾಂಸ್ಕೃತ ನಾಟಕಗಳ ಅನುವಾದ ಪ್ರಕ್ರಿಯೆಯನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ ಸಂಸ್ಕೃತ ಮೂಲದ ಅನುವಾದ ಸ್ವರೂಪ ಮತ್ತು ಪ್ರಕ್ರಿಯೆಯ ನೆಲೆಯನ್ನು ಕೇಂದ್ರೀಕರಿಸಿ ಚರ್ಚಿಸಲ್ಪಡುತ್ತಿದೆ. ಹಾಗೂ ಅನುವಾದವನ್ನು ಈ ನೆಲೆಯಿಂದ ಕಂಡರಿಸುವ ಪ್ರಯತ್ನವನ್ನು ಶೋಧದ ನೆಲೆಯಾಗಿಸಿದೆ. ಮೂಲತಃ ಅಭಿಜಾತ ಸಾಹಿತ್ಯವೆನಿಸಿದ ಸಂಸ್ಕೃತ ಸಾಹಿತ್ಯದ ಪ್ರಮುಖ ಪ್ರಕಾರದಂಥ ನಾಟಕವನ್ನು ಮತ್ತು ಕನ್ನಡ ಸಾಹಿತ್ಯಗಳೆರಡರ ಅನುಸಂಧಾನವನ್ನು ಈ ಅಧ್ಯಾಯನ ಒಳಗೊಂಡಿದೆ.

ಅನುವಾದದ ಇತಿಹಾಸ, ಭಾಷೆಯ ಉಗಮದವರೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಅನುವಾದವೆನ್ನುವುದು ಭಾಷೆಯಷ್ಟೇ ಪ್ರಾಚೀನ ಅನುವಾದ ಮತ್ತು ಭಾಷಾಂತರ ಎನ್ನುವುದು ಸಾಮಾನ್ಯವಾಗಿ ಉಪಯೋಗಿಸಲ್ಪಡುತ್ತದೆ. ಆದರೆ ಇವೆರಡರಲ್ಲಿ ಉದ್ದೇಶ ಮತ್ತು ಸ್ವರೂಪದ ದೃಷ್ಟಿಯಿಂದ ಭೇದಗಳಿವೆ. ಭಾಷಾಂತರ ಒಂದು ಯಾಂತ್ರಿಕ, ನೀರಸ ಪ್ರಕ್ರಿಯೆ ಅದು ಮಾನವಿಕ ಶಾಸ್ತ್ರಗಳು ಹಾಗೂ ವೈಜ್ಞಾನಿಕ ಶಾಸ್ತ್ರಗಳ ಸಂಬಂಧದಲ್ಲಿ ಹೆಚ್ಚು ಬಳಕೆಯಾಗುತ್ತದೆ. ಆದ್ದರಿಂದ ಅದರಲ್ಲಿ ಸೃಜನಶೀಲ ಅಂಶವೆನ್ನುವುದು ಹೆಚ್ಚು ಕಮ್ಮಿ ಇಲ್ಲವೆಂದು ಹೇಳಿರಬೇಕು. ಅನುವಾದ ಮಾತ್ರವಿಲ್ಲ. ಅಂಶಗಳನ್ನು ಒಳಗೊಂಡಿರತಕ್ಕಂಥದು, ಅನುವಾದವು ನಿಜವಾದ ಪ್ರತಿಭೆ, ಸೃಜನಶೀಲತೆ ಬೇಡುವಂತದು. ಅದು ಸ್ವತಂತ್ರ ಸಾಹಿತ್ಯ ಸೃಷ್ಟಿಯಷ್ಟೇ ಮಹತ್ವವಾದುದು. ಮತ್ತು ಅಷ್ಟೇ ಅಪಾರ ಶ್ರಮ ಬೇಡುವಂತದು.

ಈ ಅನುವಾದ ಪ್ರಕ್ರಿಯೆಯು ಮೂರು ಹಂತಗಳಲ್ಲಿ ರೂಪಿತವಾಗಿದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಈ ಪ್ರಕ್ರಿಯೆ ತನ್ನದೇ ಆದ ಚಾಪು ಮೂಡಿಸಿದೆ.

೧. ಪ್ರಾಪ್ತಸ್ಯ ಪುನಃಕಥನ

೨. ಕನ್ನಡೀಕರಣ ಪ್ರಕ್ರಿಯೆ

೩. ದಾಸ/ವಚನ ಚಳುವಳಿಗಳ ಪ್ರಭಾವ

ವಹಾಸತು ಪೂರ್ವ ಘಟ್ಟದಲ್ಲಿ ಈ ಮೂರು ಹಂತಗಳಲ್ಲಿ ಅನುವಾದ ತನ್ನನ್ನು ವಿಸ್ತರಿಸಿಕೊಂಡಿದೆ. ಪಂಪ ರನ್ನಾದಿಗಳ ಕಾಲವನ್ನು ಪ್ರಾಪ್ತಸ್ಯ ಪುನಃ ಕಥನವಾಗಿಯೂ ಅರ್ಥಾತ್ ನಾಗವರ್ಮನ ವರೆಗಿನ ಈ ಕಾಲ ಘಟ್ಟವು ಈಗಾಗಲೇ ಪ್ರಚಲಿತವಿರುವ ವಿಷಯವನ್ನು ಪ್ರಾಪ್ತಸ್ಯ ಪುನಃ ಕಥನ ಎನ್ನುವ ರೀತಿಯಲ್ಲಿಯೇ ಗ್ರಹಿಸಿದಂತಿದೆ. ಸಾಂಸ್ಕೃತಿಕ ಅಂಶ ನಂತರದ ಕಾಲಘಟ್ಟದಲ್ಲೂ ಮುಂದುವರೆಯಿತಾದರೂ ಈ ಕಾಲಘಟ್ಟವನ್ನು ನಿಯಮತ್ರಿಸಿದ ಪ್ರಮುಖ ಅಂಶವಾಗಿದೆ. ಹೇಳಿದ ಅಂಶವನ್ನೇ ಪುನಃ ಹೇಳುವ, ಹಾಗೆ ಹೇಳುವುದಲ್ಲಿಯೂ ಕನ್ನಡತನವನ್ನೇ ಮರೆಯುವ ಜಾಣ್ಮೆ ಈ ಕಾಲಕ್ಕೆ ಕಂಡುಬಂದಿದೆ. ಅನುವಾದ ಪ್ರಮುಖ ಬಗೆಯೊಂದನ್ನು ಕನ್ನಡ ಸಾಹಿತ್ಯ ಸೃಷ್ಟಿಸಿದೆ.

ಒಂದನೆಯ ನಾಗವರ್ಮನಿಂದ ಕರ್ನಾಟಕತ್ವದ ಹೊಸ ಪರಿಕಲ್ಪನೆಗೆದರಿ ನಿಂತಿದೆ. ಕನ್ನಡಿಸ್ತೀನಿ ಎಂಬ ಮಾತಿನಿಂದ ಕನ್ನಡತನವನ್ನು, ಕರ್ನಾಟಕತ್ವವನ್ನು ಪರಿಚಯಿಸಿದ ನಾಗವರ್ಮನಿಂದ ಕರ್ನಾಟಕದ ಹೊಸ ಟ್ರೆಂಡ್ ಬಂದು ಆರಂಭಗೊಂಡು ಕನ್ನಡೀಕರಣ ಪ್ರಕ್ರಿಯೆಗೆ ಚಾಲನೆ ದೊರಕಿದೆ. ನಂತರ ದಾಸ ಮತ್ತು ವಚನ ಚಳುವಳಿಗಳು ಸಾಂದರ್ಭಿಕ ಅಗತ್ಯತೆಗೆ ತಕ್ಕಂತೆ ಸಂಸ್ಕೃತವನ್ನು ಬಳಸಿಕೊಂಡು ಸೃಜನ ಶೀಲ ಎನ್ನುವ ಮಾತೊಂದನ್ನು ಹೇಳುತ್ತದೆ. ಒಟ್ಟಿನಲ್ಲಿ ಹದಿನಾರನೆಯ ಶತಮಾನದವರೆಗೂ ಒಂದಿಲ್ಲೊಂದು ಬಗೆಯಿಂದ ಕನ್ನಡ-ಸಂಸ್ಕೃತಗಳ ಈ ಹೊಕ್ಕುಬಳಕೆ ಕಾಣಬರುತ್ತದೆ. ನಂತರದ ಕಾಲದಲ್ಲಿ ಗುಪ್ತಗಾಮಿನಿಯಾದ ಈ ಪ್ರಕ್ರಿಯೆ ೧೮-೧೯ ಶತಮಾನದಿಂದ ಮತ್ತೆ ಉದ್ಭವಗೊಳ್ಳುತ್ತದೆ.

ವಹಾಸತುಶಾಹಿಯ ಕಾಲಘಟ್ಟವನ್ನು ವಿದ್ವಾಂಸರು ಕಗ್ಗತ್ತಲ ಖಂಡ ಎಂದು ಗುರುತಿಸಿದರು. ಸಂಸ್ಕೃತದಲ್ಲಿ ಮಾನ್ಯವಾದ, ಅಭಿಜಾತ ಕೃತಿಗಳನ್ನು ತದನಂತರದಲ್ಲಿ ಅಪರಿಚಿತ ಕೃತಿಗಳನ್ನು ಕನ್ನಡಿಕರಣ ಪ್ರಕ್ರಿಯೆಗೆ ಅಳವಡಿಸಲಾಗಿದೆ. ಇಂಥ ಕಾಲಘಟ್ಟದಲ್ಲಿ ಅನುವಾದಕರು ಹೆಚ್ಚಿನ ಸ್ವಾತಂತ್ರ ತೆಗೆದುಕೊಳ್ಳದೇ ಮೂಲ ಕಥಾನಕದಲ್ಲಿ ವಿಶೇಷ ಬದಲಾವಣೆ ಮಾಡದೆ ಕನ್ನಡ ಸಾಹಿತ್ಯ ಕಣಜವನ್ನು ತುಂಬುವ ಪ್ರಯತ್ನ ಮಾಡಿದರು. ಈ ಎಲ್ಲ ಪ್ರಕ್ರಿಯೆಗಳನ್ನು ಗರ್ಭೀಕರಿಸಿಕೊಂಡು ಬಂದಂಥ ಈ ಕೃತಿಗಳನ್ನು ಸಂಸ್ಕೃತದ ನೆಲೆಯಿಂದ ನೋಡುವ ಪ್ರಯತ್ನ ಮಾಡಲಾಗಿದೆ. ಅನುವಾದವು ಒಂದು ಸೃಜನಶೀಲ ಕ್ರಿಯೆಯಾಗಿ ಮೂಡಿಬರುವ ಈ ಕಾಲದಲ್ಲಿ ಆ ಕಾಲವನ್ನು ''ಕಗ್ಗತ್ತಲ ಖಂಡ'' ಎಂದು ಗುರುತಿಸುವಿಕೆಯನ್ನು ಆದಷ್ಟು ನಿವಾರಿಸುವ ಪ್ರಯತ್ನವನ್ನು ಈ ಅಧ್ಯಯನವು ಹೊಂದಿದೆ.

ಕನ್ನಡಿಸುವಿಕೆಯ ಕ್ರಿಯೆ ಯಾವುದೇ ಅನುವಾದಕನ ಉದ್ದೇಶ ಅಗತ್ಯ ಮತ್ತು ಪರಿಸರಕ್ಕೆ ತಕ್ಕಂತೆ ರೂಪಗೊಳ್ಳುತ್ತದೆ. ಕನ್ನಡಿಸುವಿಕೆ ಪ್ರಕ್ರಿಯೆ ಎಂಬುದು ಕನ್ನಡದ ಜಾಯಿಮಾನಕ್ಕೆ ಹೊಂದುವಂತೆ ಮೂಲಕೃತಿಯನ್ನು ಹೊಂದಿರುವ ಪ್ರಕ್ರಿಯೆ. ಇದು ಹಲವಾರು ಸಲ ಮಾನದಂಡವಾಗಿ ಬಳಸಬೇಕಾದ ಸಂದರ್ಭವಾಗಿ ಮೂಡಿಬರುತ್ತದೆ. ಸಂಸ್ಕೃತ ಭೂಯಿಷ್ಟ ಶೈಲಿ, ಹಳಗನ್ನಡದ ಅಥವಾ ತೆಲುಗನ್ನಡದ ಶೈಲಿ ಪದ್ಯಗಳ ಅನುವಾದದಲ್ಲಿ ಬಂದಂತ ವ್ಯತ್ಯಾಸಗಳು ಇವೆಲ್ಲ. ನಾಟಕದ ಕನ್ನಡಿಸುವಿಕೆಯ ಬಗೆಯನ್ನು ವಿವರಿಸುತ್ತವೆ. ಅಧ್ಯಯನದಲ್ಲಿ ಈ ಮಹತ್ವದ ವಿಷಯದ ಮೇಲೆ ವಿವೇಚಿಸಲು ಉದ್ದೇಶ

ಇಟ್ಟುಕೊಳ್ಳಲಾಗಿದೆ. ಕನ್ನಡದಲ್ಲಿ ಅನುವಾದಿತ ಕೃತಿಯಬಗ್ಗೆ ಚರ್ಚಿತವಾಗಿರುವುದೇನೋ ನಿಜ. ಅದೂ ಕೂಡ ಅನುವಾದದ ಗೃಹೀತ ನೆಲೆಗಳನ್ನು ತಿಳಿಯಲು ಹೋಗುವುದಿಲ್ಲ. ಅನುವಾದಗೊಂಡ ಕೃತಿಯ ಅಂತಃ ಸತ್ವವನ್ನು ಅವರ ವಿಶೇಷತೆಗಳನ್ನು ಹಲವು ಬಗೆ ಅನುವಾದ ಪಠ್ಯಗಳನ್ನು ಪಾಸ್ವಾರಿತವಾಗಿ ಅಕ್ಕ-ಪಕ್ಕದಲ್ಲಿಟ್ಟು ನೋಡುವ, ವಿಶ್ಲೇಷಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಹಲವಾರು ಪ್ರಸಿದ್ಧ ಸಂಸ್ಕೃತ ಕೃತಿಗಳು ಪುನಃ ಪುನಃ ಅನುವಾದವಾಗುವುದನ್ನು ನಾವು ನೋಡುತ್ತೇವೆ. ಆದರೆ ಹೆಚ್ಚು ಪ್ರಸಿದ್ಧವಲ್ಲದ ಆದರೆ ಆ ಕಾಲದ ಅನುವಾದ ಪ್ರಕ್ರಿಯೆಯ ಒಳನೋಟವನ್ನು ಹೆಚ್ಚಿಸುವ ಮತ್ತು ಅವರ ಅನುವಾದ ರೀತಿಯನ್ನು ಸ್ಪುಟವಾಗಿ ಹೇಳುವ ಕೃತಿಗಳನ್ನು ಈ ಅಧ್ಯಯನದಲ್ಲಿ ಸೇರಿಸಿ ಒಟ್ಟಾರೆ ನೋಟವನ್ನು ವಿಸ್ತೃತ ಗೊಳಿಸುವ ಹಂಬಲ ಈ ಅಧ್ಯಯನದ್ದು. ಅದೇ ರೀತಿ ಆ ಅಪರಿಚಿತ ಮತ್ತು ಕಾಲಗರ್ಭದಲ್ಲಿ ಅಡಗಿ ಹೋಗಬಹುದಾದ ಕೃತಿಗಳನ್ನು ಆದಷ್ಟು ಪರಿಚಯಿಸುವ ಉದ್ದೇಶವು ಈ ಅಧ್ಯಯನದ ಹಿನ್ನೆಲೆಯಲ್ಲಿ ಕೆಲಸ ಮಾಡಿದೆ.

ಇಲ್ಲಿ ಈ ಯುಗದ ಕುರಿತಾಗಿ ಚಿಂತನೆ ನಡೆಸಿರುವ ಡಾ.ಕೆ. ಕೃಷ್ಣಮೂರ್ತಿಯವರ ಮಾತನ್ನು ಅಧ್ಯಯನದ ಅಗತ್ಯತೆಯಾಗಿ ಬಳಸಿಕೊಳ್ಳಲಾಗಿದೆ. ಅವರು ಈ ಯುಗವನ್ನು ಕುರಿತು ಹೀಗೆ ಹೇಳುತ್ತಾರೆ. ''ಈ ಒಂದು ಪೀಳಿಗೆಯವರ ಕಾರ್ಯವನ್ನು ಸಾಹಿತ್ಯ ಚರಿತ್ರೆಕಾರರು ಯಾರು ವಿವರವಾಗಿ ವಿಮರ್ಶಿಸದೆ ಕೈಬಿಟ್ಟಿರುವುದು ವಿಷಾದಕರ ಸಂಗತಿಯಾಗಿದೆ. ಯಾರಾದರೂ ಉತ್ಸಾಹಿಗಳು ಈಗಲಾದರೂ ಮನಸ್ಸುಮಾಡಿ ಪ್ರೌಢವ್ಯಾಸಾಂಗಕ್ಕೆ ವಸ್ತುವನ್ನಾಗಿ ತೆಗೆದುಕೊಂಡರೆ ಒಂದು ಡಾಕ್ಟರೇಟ್ ಪದವಿ ಲಭಿಸಬಹುದೋ ಎನಿಸುವಷ್ಟು ವಿಸ್ತಾರವು ವಿಶಿಷ್ಟತೆ ಉಳ್ಳದ್ದೂ ಆಗಿದೆ. ಈ ಸಂಸ್ಕೃತದಿಂದಾದ ಅನುವಾದಗಳ ಆ ಕೃಷ್ಣ ಕ್ಷೇತ್ರ ತುರಮರಿಯವರು 'ಬಾಣ ಕಾದಂಬರಿ' ಬಸವಪ್ಪಶಾಸ್ತ್ರಿಗಳ 'ಶಾಕುಂತಲ' ಧೊಂಢೋ ನರಸಿಂಹ ಮುಳಬಾಗಲವರ ' ಮೃಚ್ಛಕಟಿಕ' ಇವು ಮೇಲೆ ಸೂಚಿಸಿದ ಸಾಮಾನ್ಯ ಅನಾದರಕ್ಕೆ ಅಪವಾದಗಳಂತೆ ಉಳಿದುಬಂದಿದೆ ಎನ್ನಬಹುದು. ಅದಕ್ಕೆ ಕಾರಣ ಕನ್ನಡ ಜೀವನಾಡಿಯನ್ನು ಬಿಡದ ಅವರ ರಸಿಕತೆಯೇ ಎನ್ನಬಹುದು.

ಇಡಿಯ ಒಂದು ತಲೆಮಾರಿನ ವಿದ್ವಾಂಸರ ಅನುವಾದ - ಪರಿಶ್ರಮವೆಲ್ಲ ವ್ಯರ್ಥಪ್ರಾಯವೆಂದುದೇಕೆ? ಎಂಬ ಪ್ರಶ್ನೆಗೆ ಓದುಗರ ಅಭಿರುಚಿಯಲ್ಲಿ ನವೋದಯ ಕ್ರಾಂತಿಯಿಂದ ಒದಗಿಬಂದ ಮಾರ್ಪಾಟು ಒಂದು ಉತ್ತರವಾದರೆ ಅಷ್ಟೇ ಮುಖ್ಯವಾದ ಒನ್ನೊಂದು ಉತ್ತರ ಪಂಡಿತರಲ್ಲಿರಬೇಕಾಗಿದ್ದ ಸಾಹಿತ್ಯ ವಿಮರ್ಶೆಯ ಅತ್ಯಂತ ಅಭಾವ, ಸಂಸ್ಕೃತದಲ್ಲಿ ಇದ್ದುದ್ದೆಲ್ಲ ಒಳ್ಳೆಯದೇ ಎಂಬ ಸಾಮಾನ್ಯ ಭಾವನೆ ವಿದ್ವಾಂಸರ ವಿಮರ್ಶೆಯನ್ನು ಮಂಕು ಮಾಡಿತು. ಕಾಳಿದಾಸನ ನಾಟಕಗಳಿಗಿಂತ ಉಳಿದ ಸಂಸ್ಕೃತ ನಾಟಕಗಳೇ ಅನುವಾದಕರ ಲಕ್ಷ್ಯವನ್ನು ಸೆಳೆದವು''( ಪ್ರಬುದ್ಧ ಕರ್ನಾಟಕ : ೧೯೬೯ : ಪು.೫೫೧).

ಈ ದ್ವಂದ್ವ ಅನುವಾದ ಪ್ರತಿ ಹಂತದಲ್ಲೂ ಕಾಣುತ್ತದೆ. ಅರ್ಥಾತ್ ಅನುವಾದಿಸಬೇಕೆಂದು ಅನುವಾದಿಸುತ್ತಾ ಹೋಗುವುದು ಮಧ್ಯ ಅಲ್ಲಲ್ಲಿ ವಿಮರ್ಶೆಯ ದೃಷ್ಟಿಕೋನ ವಿರದಿದ್ದುದರಿಂದ ನಿಕಟ ಎನ್ನುವಲ್ಲಿಯೂ ಎಷ್ಟೋ ಬದಲಾವಣೆ ಮಾಡಿಕೊಂಡಿರುವದು ಗೋಚರ ಸತ್ಯ. ಹೀಗೆ ಈ ಎಲ್ಲ ಅಂಶಗಳ ಸಾಧ್ಯಾಸಾಧ್ಯತೆಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ಸ್ವರೂಪ :

ಮೂಲ ಸಂಸ್ಕೃತ ಕೃತಿಗಳನ್ನು ಅನುವಾದ ಪ್ರಕ್ರಿಯೆಗೆ ಒಳಪಡಿಸಿದಾಗ ಬಂದಂಥ ಕೃತಿಗಳನ್ನು ವಸಾಹತು ಪೂರ್ವ ಮತ್ತು ವಸಾಹತುಶಾಹಿ ಕಾಲಘಟ್ಟದಲ್ಲಿ ವರ್ಗಿಕರಿಸಲಾಗಿದೆ. ವಸಾಹತು ಪೂರ್ವದಲ್ಲಿ ಬಂದಂಥ ಕೃತಿಗಳನ್ನು ಸಂಸ್ಕೃತಿಕ ಅನುವಾದಗಳೆಂದು ಮತ್ತು ವಸಾಹತು ಶಾಹಿ ಕಾಲದಲ್ಲಿ ಬಂದಂಥ ಕೃತಿಗಳನ್ನು ಸಾಹಿತ್ಯಿಕ ಅನುವಾದಗಳೆಂದು ಅಧ್ಯಯನಕ್ಕೆ ಸಹಕಾರಿಯಾಗುವಂತೆ ವರ್ಗೀಕರಿಸಲಾಗಿದೆ. ಸಾಂಸ್ಕೃತಿಕ ಅನುವಾದಗಳಲ್ಲಿ ಆ ಕಾಲದಲ್ಲಿ ಇದ್ದಂತ ಸಾಂಸ್ಕೃತಿಕ ಬಿತ್ತನೆಗಳನ್ನು ಅನುವಾದ ಕೃತಿಯ ಹಿನ್ನೆಲೆಯಲ್ಲಿ ವಿವೇಚನೆಯನ್ನು ಮನದಲ್ಲಿರಿಸಿಕೊಂಡು ಮುನ್ನಡೆದಿದೆ. ಅದರಂತೆ ಅದರ ಮುಖ್ಯಭಾಗವಾದ ಸಾಹಿತ್ಯದ ನೆಲೆ ಬೆಲೆಗಳನ್ನು ಗುರುತಿಸಲು ಮಾಡುವ ಪ್ರಯತ್ನಕ್ಕೆ ಅನುಗುಣವಾಗಿ ಮಹಾ ಪ್ರಬಂಧವನ್ನು ಮೂಡಿಸುವ ಪ್ರಯತ್ನ ಇದಾಗಿದೆ. ವಸಹತುಶಾಹಿ ಕಾಲ ಘಟ್ಟದಲ್ಲಿ ಬಂದಂಥ ಮೂಲ ಕೃತಿಯು ನಿಕಟ ಅನುವಾದಗಳನ್ನು ಪಾರಸ್ಪರಿಕ ನೆಲೆಯಲ್ಲಿ ವಿವೇಚಿಸುವಂಥ ವಿಧಾನವನ್ನು ಇಲ್ಲಿ ಅಳವಡಿಸಿಕೊಳ್ಳಲಾಗಿದೆ.

ಮೂಲ ಕೃತಿಗೂ ಮತ್ತು ಅನುವಾದ ಗೊಂಡ ಕೃತಿಗೂ ಇರುವ ಸಾಮ್ಯತೆಗಳು, ವ್ಯಾತ್ಯಾಸಗಳು, ಅಂತರಗಳು ಇವೆಲ್ಲವನ್ನೂ ಆಧಾರವಾಗಿಟ್ಟುಕೊಂಡು ವಿಶ್ಲೇಷಿಸುವ ವಿಧಾನವನ್ನಾಗಿ ಮಾಡಿಕೊಡಲಾಗಿದೆ.

ಸಂಸ್ಕೃತ ನಾಟಕಗಳ ಅನುವಾದದ ಬಗೆಯನ್ನು ಈ ರೀತಿಯಾಗಿ ಪರಿಶೀಲಿಸ ಬಹುದಾಗಿದೆ.

೧. ಅನುವಾದಕನೊಬ್ಬ ಹಲವು ಮೂಲ ಕೃತಿಗಳನ್ನು ಕನ್ನಡಕ್ಕೆ ತಂದ ಬಗೆ

೨. ಮೂಲ ಕೃತಿಯೆಂದು ಹಲವು ಅನುವಾದಕರಗಳ ಶೈಲಿಯಲ್ಲಿ ಕನ್ನಡದಲ್ಲಿ ಮರುರೂಪ ಪಡೆದ ಬಗೆ

೩. ಒಬ್ಬ ಕೃತಿಕಾರ ಕೇವಲ ಒಂದೇ ಕೃತಿಯನ್ನು ಅನುವಾದ ಮಾಡಿದ ಬಗೆ

ಅಧ್ಯಯನದ ಯೋಜಿತ ನಿರೂಪಣೆಯಾಗಿ ಅಧ್ಯಯನದ ಐದು ವಿಭಾಗಗಳನ್ನಾಗಿ ಮಾಡಲಾಗಿದೆ.

ಅ. ಸಾಂಸ್ಕೃತಿಕ ಸಮೀಕ್ಷೆ

ಬ. ಅನುವಾದದ ಪರಿಕಲ್ಪನೆ

ಕ. ತೌಲನಿಕ ಸಮೀಕ್ಷೆ

ಡ. ತೌಲನಿಕ ಅಧ್ಯಯನ

ಇ. ತಾತ್ವಿಕ ಚರ್ಚೆ

**ಅ. ಸಾಂಸ್ಕೃತಿಕ ಸಮೀಕ್ಷೆ :**

ಯಾವುದೇ ಸಾಹಿತ್ಯದ ಉತ್ಪತ್ತಿಯಲ್ಲಿ ಆಯಾ ಕಾಲದ ಸಾಂಸ್ಕೃತಿಕ ಪರಿಸರದ ಪ್ರಭಾವನ್ನುಪ್ರತ್ಯಕ್ಷ್ಯವಾಗಿ ಅಥವಾ ಪರೋಕ್ಷವಾಗಿ ಆ ಕೃತಿಯಲ್ಲಿ ಬಿಂಬಿತವಾಗುತ್ತದೆ. ಅನುವಾದ ಕೃತಿಯ ಮೌಲ್ಯಮಾಪನ ಅಥವಾ ಅಧ್ಯಯನ ಮಾಡುವಾಗ ಸಾಂಸ್ಕೃತಿಕ ಪರಿಸರ ಲೆಕ್ಕಕ್ಕೂ ತೆಗೆದುಕೊಳ್ಳದೇ ಅದು ಪರಿಪೂರ್ಣವಾಗುವುದಿಲ್ಲ. ಪ್ರಸ್ತುತ ಅಧ್ಯಯನವು ಅನುವಾದಿತ ಕೃತಿಗಳ ರಚನಾ ಕಾಲದಲ್ಲಿ ಇದ್ದಂಥ ಸಾಂಸ್ಕೃತಿಕ ಪರಿಸರದ ಅಧ್ಯಯವನ್ನು ಒಂದು ಮಹತ್ವದ ಅಂಶವನ್ನಾಗಿ ಪರಿಗಣಿಸುತ್ತದೆ. ವಸಹತು ಶಾಹಿಯಿಂದ ಪೂರ್ವದಲ್ಲಿ ಅಂದರೆ ಕವಿರಾಜಮಾರ್ಗದಿಂದ ಹರಿದು ಬಂದ ಪಂಪ, ರನ್ನಾದಿ ಕವಿಗಳ ಮುಖಾಂತರ ೧೬ ನೇ ಶತಮಾನದ ಕುಮಾರವ್ಯಾಸನ ಕನಕ ಬಂದಂಥ ಅನುವಾದ ಕೃತಿಗಳು ಒಂದು ಸಾಂಸ್ಕೃತಿಕ ಅನುವಾದಗಳಾಗಿ ಪ್ರಸ್ತುತ ಅಧ್ಯಯನ ಗುರುತಿಸಿವೆ. ಇದರರ್ಥ ಇವೆಲ್ಲಾ ಕೃತಿಗಳು ಸಾಹಿತ್ಯಿಕವಾಗಿ ಮಹತ್ತರ ವಾದವುಗಳಲ್ಲ ಎಂಬ ಅರ್ಥದಲ್ಲಿರದೇ ಆ ಕೃತಿಗಳು ಸಾಂಸ್ಕೃತಿಕ ಪರಿಸರದ ಮೇಲೆ ಉಂಟು ಮಾಡಿದ ಪರಿಣಾಮ ಹಾಗೂ ಪರಿಸರದ ಪ್ರಭಾಚ ಕೃತಿಯ ಮೇಲೆಆಗಿದ ರೀತಿ ಸಾಂಸ್ಕೃತಿಕ ಅನುವಾದಗಳು ಎಂದು ಗುರುತಿಸುವಂತೆ ಮಾಡಿದೆ.

ಪಂಪನ ವಿಕ್ರಮಾರ್ಜುನ ವಿಜಯ ಕೃತಿ ವೀರಯುಗದ ಕೃತಿಯಾಗಿದೆ. ಪಂಪ ಸ್ವತಃ ಒಬ್ಬಯೋದ್ಧ ಆಶ್ರಯಧಾತನಾದ 'ಅರಿಕೇಸರಿ' ಒಬ್ಬ ಸಮರ್ಥ ರಾಜ ಹಾಗೂ ಯೋದ್ಧ ಆ ಕಾಲದಲ್ಲಿ ಯುದ್ಧದ ಸನ್ನಿವೇಶಗಳನ್ನು ಪಂಪ ಕಣ್ಣಾರೆ ಕಂಡ. ಆ ವೀರ ಯುಗದ ಪ್ರಭಾವ ಪಂಪನ ಕೃತಿಯಲ್ಲಿ ನಾವು ಸೃಷ್ಟಿಯಾಗಿ ಕಾಣಬಹುದು.

ಕವಿ ತನ್ನ ಜೀವಿತಕಾಲದಲ್ಲಿ ಬಹಳ ದಿವಸ ಇದ್ದನೆಂದು ಹೇಳಲಾದ ಬನವಾಸಿನ ಪರಿಸರ ಕೃತಿಯ ಪ್ರಕೃತಿ ವರ್ಣನೆಯಲ್ಲಿ ಪರಿಣಾಮ ಬೀರಿದೆ. ರಾಜಾಶ್ರಯ ಹಾಗೂ ಈಗಾಗಲೇ ಆದಿ ಪುರಾಣದಿಂದ ಪಂಪ ತನ್ನ ಕೃತಿಯಿಂದ ಸಾಂಸ್ಕೃತಿಕ ಪರಿಸರದ ಮೇಲೆ ಪ್ರಭಾವ ಬೀರಿದನೆಂದು ಹೇಳಬಹುದು. ಆ ಕಾಲದ ಜನರು ತಮ್ಮ ಸಾಂಸ್ಕೃತಿಕ ಪರಿಸರದ ಪ್ರತಿನಿಧಿತ್ವವನ್ನು ಈ ಕೃತಿಯಲ್ಲಿ ಕಂಡರು.

ಪಂಪನ ನಂತರ ಬಂದ ರನ್ನ ತನ್ನ 'ಸಾಹಸಭೀಮ ವಿಜಯ'ದಲ್ಲಿ ಭೀಮನನ್ನು ನಾಯಕನನ್ನಾಗಿ ಮಾಡಿ ಮಹಾಭಾರತದ ಕೊನೆಯಲ್ಲಿ ಬಂದ ಗದಾಯುದ್ಧ ಪ್ರಸಂಗವನ್ನು ಮಾತ್ರ ತೆಗೆದುಕೊಂಡು ಭೀಮನಲ್ಲಿ ತನ್ನ ರಾಜ ಇರಿವೆಬೆಡಂಗನನ್ನು ಆರೋಪಿಸಿ ಕಾವ್ಯ ಬರೆದ ಜೈನಧರ್ಮ ವೈಧಿಕ ಧರ್ಮಕ್ಕೆ ಪ್ರತಿಯಾಗಿ ರೂಪಗೊಂಡಿದ್ದರಿಂದ ರಾಮಾಯಣ ಮತ್ತು ಮಹಾಭಾರತದಲ್ಲಿ ಖಳರೆಂದು ಗುರುತಿಸಲಾದ ಪಾತ್ರಗಳನ್ನು ಹೊಗಳುವುದು ಸಹಜವಾಗಿದೆ. ಕಾವ್ಯದುದ್ದಕ್ಕೂ ಭೀಮನ ಪರವಾದ ಮಾತುಗಳು ಬಂದಿದ್ದರೂ ದುರ್ಯೋಧನನನ್ನು 'ಸಮರ ಧೈರ್ಯನಂ ಮಹಾಶೌಮಂ' ಎಂದು ಅಂದದ್ದು ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಪರಿಸರ ಮತ್ತು ಕವಿಯ ಜೈನಮತದ ಹಿನ್ನೆಲೆ ಕಾರಣವಾಗಿದೆ.

ನಾಗವರ್ಮನ ಕಾಲದಿಂದ 'ಕರ್ನಾಟಕ ಎಂಬ ಪದ ಕಾಣಿಸಿಕೊಳ್ಳಲು ಅದು ಸಮಕಾಲಿನ ಸಂದರ್ಭ ಕಾರಣವಾಗಿದೆ. ಕನ್ನಡಕ್ಕೆ ಸಂಸ್ಕೃತದ ಆಧಾರ ಇಲ್ಲಿ ಪ್ರತ್ಯಕ್ಷ್ಯವಾಗಿ ಮೂಡಿ ಬರಲು ಆ ಕಾಲದ ಸಾಂಸ್ಕೃತಿಕ ಅಗತ್ಯವಾಗಿತ್ತು.

ಆಮೇಲೆ ಬಂದಂತ ಜನ್ನ ಮಧ್ಯಕಾಲಕ್ಕೆ ಸೇರಿದವನಾದ್ದರಿಂದ ರಾಜಾಶ್ರಯ ವಿರೋಧಿ ಹಾಗೂ ಜನಮುಖಿ ಧೋರಣೆ ಅವನ ಕೃತಿಗಳಲ್ಲಿ ಮೂಡಿಬಂದಿವೆ. ಹೆಣ್ಣು ಗಂಡಿನ ಸಮಸ್ಯೆಯನ್ನು ಪ್ರಮುಖವಾಗಿ ಚಿಂತಿಸಿ ಬದಲಾದ ಕಾಲಧರ್ಮ ಮತ್ತು ಮನೋಧರ್ಮವನ್ನು ತನ್ನ ಕೃತಿಯಲ್ಲಿ ತರುತ್ತಾನೆ. ಬದಲಾದ ಸಾಂಸ್ಕೃತಿಕ ಪರಿಸರ ಅವನ ಭಾಷಾ ಶೈಲಿ ಮತ್ತು ಚಂದೋರೂಪದಲ್ಲಿ ಅಡಕಗೊಳಿಸಿ ಪ್ರತಿಬಿಂಬಿಸಿದೆ.

ವಚನ ಚಳುವಳಿ ಹರಿಹರದಿಂದ ಪ್ರಾರಂಭವಾಗಿದೆ. ಭಕ್ತಿ, ಶರಣ ತತ್ವಗಳು ಪ್ರಧಾನವಾಗಿ ಮೂಡಿಬಂದಿವೆ. ಆಧ್ಯಾತ್ಮಿಕ ಜ್ಞಾನ ಶೂದ್ರರಿಗೆ ಮತ್ತು ಸ್ತ್ರೀಯರಿಗೆ ಇಲ್ಲದಿದ್ದುದು ವಚನಕಾರರಿಂದ ಪ್ರಶ್ನಿಸಲಾಗಿದೆ. ಆ ಮೂಲಕ ಸಾಂಸ್ಕೃತಿಕ ಚಳುವಳಿಗೆ ತಕ್ಕಂತೆ ವಚನಗಳಲ್ಲಿ ಜ್ಞಾನ ಹರಿದು ಬಂದದು ಒಂದು ನಿದರ್ಶನವಾಗಿದೆ. ಪ್ರಸ್ತುತ ಅಧ್ಯಯನವು ಈ ಸಾಂಸ್ಕೃತಿಕ ಪಲಟವನ್ನು ಪ್ರಥಮ ಸ್ಥಾನವನ್ನು ನೀಡಿ ವಿಶ್ಲೇಷಿಸಿದೆ.

ದಾಸಸಾಹಿತ್ಯದ ಚಳುವಳಿ ಕಾಲದಲ್ಲಿ ಬಂದಂಥ ಕುಮಾರವ್ಯಾಸ ಆ ಪ್ರಭಾವವನ್ನು ತನ್ನ 'ಕರ್ನಾಟಕ ಭಾರತ ಕಥಾಮಂಜರಿ' ಯಲ್ಲಿ ಕೃಷ್ಣ ಕಥೆಯಾಗಿ ಬಳಸಿದ್ದಾರೆ. ದಾಸ ಚಳುವಳಿಯ ಭಗವಂತನ ಶರಣಾಗತಿ ತತ್ವ ಮತ್ತು ಭಗವಂತನ ದಾಸರಾಗಿದ್ದರೂ ಕೂಡ ದೈನ್ಯತೆಯನ್ನು ತೋರದಿರುವುದು ಎಂಬ ತತ್ವಗಳನ್ನು ಕುಮಾರವ್ಯಾಸ ತನ್ನ ಕೃತಿಯಲ್ಲಿ ಅಳವಡಿಸಿ ಅದು ವೀರಭಕ್ತಿಯಾಗುವಂತೆ ಮಾಡಿದ್ದಾನೆ.

ಬ) ಅನುವಾದದ ಪರಿಕಲ್ಪನೆ :

ಅನುವಾದದ ಪರಿಕಲ್ಪನೆಯ ಉಗಮವಾಗಲು ಮೂರು ಪ್ರಮುಖ ಕಾರಣವನ್ನು ಈ ಪ್ರಬಂಧದಲ್ಲಿ ವಿವೇಚಿಸಲಾಗಿದೆ. ವಸಾಹತುಶಾಹಿಯ ಪ್ರಜ್ಞೆ, ರಂಗಭೂಮಿಯ ಆದ್ಯತೆ ಮತ್ತು ಕನ್ನಡದ ಅಭಿಮಾನ ಈ ಮೂರು ಪ್ರಮುಖ ಅಂಶಗಳಾಗಿ ಅನುವಾದ ಪರಿಕಲ್ಪನೆ ಹುಟ್ಟು ಹಾಕಿದೆ.

ವಸಾಹತುಶಾಹಿಯ ಪ್ರಜ್ಞೆ ಅನುವಾದ ಸಾಹಿತ್ಯಕ್ಕೆ ಕೊಟ್ಟಂಥ ಪ್ರೇರಣೆಯನ್ನು ಆದಷ್ಟು ನಿರ್ದಿಷ್ಟಪಡಿದಲು ಈ ಅಧ್ಯಯನ ಪ್ರಯತ್ನಿಸುತ್ತದೆ. ಅನುವಾದ ಲೋಕಾಭಿಮುಖವಾಗಲು ರಂಗಭೂಮಿ ಎಂಬ ಸಾಧ್ಯತೆಗಳನ್ನು ಬಳಸಿದ ಬಗೆಯನ್ನು ವಿವೇಚಸಲು ಪ್ರಯತ್ನಿಸಲಾಗಿದೆ. ಸ್ವಭಾಷೆಯಾದ ಕನ್ನಡ ಪ್ರಜ್ಞೆ, ಸ್ಥಳೀಯ ಪ್ರಭೇಧಗಳನ್ನು ಮೀರಿ ಹೇಗೆ ಕೆಲಸ ಮಾಡಿದೆ? ಎನ್ನುವದರ ಆಧಾರದ ಮೇಲೆ ಅನುವಾದದ ಪರಿಕಲ್ಪನೆಯನ್ನು ಕಟ್ಟಬೇಕಾಗಿದೆ.

ಕ) ತೌಲನಿಕ ಸಮೀಕ್ಷೆ:

ಒಬ್ಬ ಕೃತಿಕಾರನ ಒಂದು ಕೃತಿಯನ್ನು ಒಬ್ಬರಿಗಿಂತ ಹೆಚ್ಚು ಜನ ಅನುವಾದ ಮಾಡಿದಾಗ ಅಥವಾ ಒಬ್ಬ ಕೃತಿಕಾರನ ಎಲ್ಲಾ ಕೃತಿಗಳನ್ನು ಒಬ್ಬನೇ ಅನುವಾದಕ ಅನುವಾದ ಮಾಡಿದಾಗ ತಳೆಯುವ ಧೋರಣೆಯನ್ನು ಇಲ್ಲಿ ಸಮೀಕ್ಷೆಗೆ ಒಳಪಡಿಸುವ ಪ್ರಯತ್ನ ಮಾಡಲಾಗಿದೆ. ಕೃತಿಕಾರನ ಉದ್ದೇ----- ಅನುವಾದಕ ತಳೆಯುವ ಧೋರಣೆ ವಿಭಿನ್ನವಾಗಿರಲು ಸಾಧ್ಯ.

ಡ) ತೌಲನಿಕ ಅಧ್ಯಯನ :

ಇಲ್ಲಿ ಒಂದೇ ಕೃತಿಯನ್ನು ಒಬ್ಬರು ಅಥವಾ ಒಬ್ಬರಿಗಿಂತ ಹೆಚ್ಚು ಜನ ಅನುವಾದ ಮಾಡಿದಾಗ ಆ ಅನುವಾದದ ಸಂದರ್ಭದಲ್ಲಿ ಅವರು ತಳೆಯುವ ನಿಲುವುಗಳು, ಆ ಕೃತಿಯ ವಿವೇಚನೆ ಮಾಡುವಾಗ ಕೆಲವು ಮಾನದಂಡಗಳನ್ನು ಒದಗಿಸುತ್ತವೆ. ಸಂಸ್ಕೃತದಿಂದ ಕನ್ನಡಕ್ಕೆ ತರುವಾಗ ಕೃತಿಕಾರನ ಧೋರಣೆಯಿಂದ ಆದ ಬದಲಾವಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅನುವಾದಕನ ಉದ್ದೇಶ ಮತ್ತು ಅನುವಾದಕ್ಕೆ ಹಿಂದಿನ ಪ್ರೇರಣೆಯನ್ನು ವಿವೇಚಿಸಲಾಗಿದೆ. ಲೌಕಿಕ ಮತ್ತು ಅಲೌಖಿಕ ಈ ಎರಡರ ಮಿಶ್ರಣವಿರುವ ಈ ಕೃತಿಗಳು ಜನರ ಮನಸ್ಸನ್ನು ಸೂರೆಗೊಂಡ ಬಗೆಯನ್ನು, ನಾಟಕ ರಂಗಕ್ಕೆ ಅಳವಡಿಸಿದಲ್ಲಿ ಆಗುವ ಅನುವಾದದಲ್ಲಿನ ಬದಲಾವಣೆ ಇವುಗಳನ್ನು ಅಧ್ಯಯನಕ್ಕೆ ಒಳಪಡಿದಿ ವಿವೇಚಿಸಲಾಗಿದೆ. ಕೃತಿಯ ಗದ್ಯ ಹಗೂ ಪದ್ಯ ಭಾಗಗಳನ್ನು ಕನ್ನಡದ ಜಾಯಮಾನಕ್ಕೆ ಹೊಂದಿಸುವಾಗ ಆದ ಬದಲಾವಣೆಗಳು ಇವುಗಳನ್ನು ಅಧ್ಯಯನ ಮಾಡಲಾಗಿದೆ.

**ಇ) ತಾತ್ವಿಕ ಚರ್ಚೆ :**

ಸಂಸ್ಕೃತಕ್ಕೆ ಇದ್ದ ಅಪ್ರತ್ಯಕ್ಷ ರಾಷ್ಟ್ರೀಯ ಮತ್ತು ಅಭಿಜಾತ ಸಾಹಿತ್ಯ ಭವ್ಯ ಭಂಡಾರ ಅನುವಾದಕರನ್ನು ಸಂಸ್ಕೃತದಿಂದ ಕನ್ನಡಿಸುವಿಕೆಯ ಪ್ರಕ್ರಿಯೆಯಲ್ಲಿ ತೊಡಗಿಸಿತೆನ್ನಬಹುದು. ಆದ್ದರಿಂದ ರಾಷ್ಟ್ರೀಯತಾ ತತ್ವ ಕೆಲಸ ಮಾಡಿದೆ ಎನ್ನುವುವು ಸ್ಪಷ್ಟವಾಗಿದೆ. ಸಾಂಸ್ಕೃತಿಯ ಸಾಮ್ಯತಾ ತತ್ವ ಕೂಡ ಈ ಅನುವಾದಗಳ ಹಿಂದೆ ಕೆಲಸ ಮಾಡಿದೆ. ಸಾಂಸ್ಕೃತಿಕ ಮೌಲ್ಯಗಳು ಸಾಂಸ್ಕೃತ ಮತ್ತು ಕನ್ನಡ ಭಾಷೆಗಳ ಆಧಾರದಲಿ ಒಂದೇ ಆಗಿದ್ದು ಕೂಡ ಈ ಅನುವಾದ ಪ್ರೇರಣೆ ಆಗಿದೆ. ವಸಹತುಶಾಹಿ ತತ್ವ ಅನುವಾದಕರ ಮೇಲೆ ನೇರ ಪರಿಣಾಮಮಾಡಿದೆ. ಎನ್ನುವುದಕ್ಕಿಂತ ಅನುವಾದಕರ ಚಿಂತನಾಕ್ರಮದಲ್ಲಿ ಸಾಂಸ್ಕೃತಿಕ ಎಚ್ಚರ ಮೂಡಿಸಿದೆ ಎನ್ನಬಹುದು. ಮತ್ತು ದೃಷ್ಟಿಕೋನದಲ್ಲಿ ಬದಲಾವಣೆ ತಂದಿದೆ ಎನ್ನಬಹುದು. ಮೂಲ ಕೃತಿಕಾರನನ್ನು ತನ್ನವನನ್ನಾಗಿ ಮಾಡಿರುವುದು ಕೂಡ ಈ ಅನುವಾದ ತತ್ವ ಹಿನ್ನೆಲೆಯಾಗಿದೆ. ಇದರ ಹೊರತಾಗಿಯೂ ಭಿನ್ನ ಭಿನ್ನ ತತ್ವಗಳು ಅನುವಾದದ ಹಿಂದೆ ಕೆಲಸ ಮಾಡಿವೆ. ಪ್ರಸ್ತುತ ಅಧ್ಯಯನ ಈ ಎಲ್ಲಾ ತತ್ವಗಳ ವಿವೇಚನೆಯಾಗಿದೆ.

## ಅನುವಾದದ ವ್ಯಾಪ್ತಿ :

ಪ್ರಸ್ತುತ ಪ್ರಬಂಧವು ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರಗಳ ಬಗೆಗಿನ ಅಧ್ಯಯನವೆನ್ನು ಕುರಿತಂತಿದೆ.

ಪ್ರಬಂಧದಲ್ಲಿ ರೂಪಾಂತರದ ಅಧ್ಯಯನವನ್ನು ಅನುವಾದದ ಅಧ್ಯಯನದಲ್ಲಿಯೇ ಸಮೀಕರಿಸಲಾಗಿದೆ. ರೂಪಾಂತರ ಬಹುಮಟ್ಟಿಗೆ ಸ್ವತಂತ್ರ ಕೃತಿ ಮೂಲ ಕೃತಿಯೂ ಸೃಜನ ಶೀಲ ಅನುವಾದಕನ ಮೇಲೆ ವಿಶಿಷ್ಟ ಪ್ರಭಾವಬೀರಿ, ತನ್ನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸದೃಶ್ಯ ಕೃತಿಯೊಂದನ್ನು ರಚಿಸುವಂಥ ಪ್ರೇರಣೆಯನ್ನೊದಗಿಸಿದಾಗ ಯಥಾರ್ಥ ಭಾಷಾಂತರಕ್ಕೆ ಬದಲಾಗಿ ರೂಪಾಂತರವನ್ನು ಸೃಷ್ಟಿಸಲು ಉದ್ಯುಕ್ತನಾಗುತ್ತಾನೆ. ವಸಾಹತುಶಾಹಿಯ ಪೂರ್ವದಲ್ಲಿ ಬಂದಂಥ ಪಂಪ, ಕುಮಾರವ್ಯಾಸಾದಿಗಳ ಕೃತಿಗಳು ರೂಪಾಂತರವೆನ್ನಬಹುದಾದ ಸಾಧ್ಯತೆಯಿದ್ದರೂ ಕೂಡ ಪ್ರಸ್ತುತ ಪ್ರಬಂಧ ವಸಾಹತುಶಾಹಿಯ ಕಾಲ ಘಟ್ಟದಲ್ಲಿ ಬಂದಂಥ ಅನುವಾದಗಳ ಅಧ್ಯಯನದ ಮೇಲೆ ಹೆಚ್ಚು ಕೇಂದ್ರಿ ಕೃತವಾಗಿರುವ ಹಿನ್ನೆಲೆಯನ್ನು ಅಧ್ಯಯನದ ವ್ಯಾಪ್ತಿ ಹೊಂದಿದೆ. ವಸಾಹತುಶಾಹಿ ಕಾಲದ ಘಟ್ಟವೆಂದೇ ಗುರುತಿಸಬಹುದಾದ ೧೮೫೦ರ ನಂತರದ ಅವಧಿಯಲ್ಲಿ ಮೂಡಿಬಂದು ಚುರುಮುರಿ ಶೇಷಗಿರಿರಾಯರ ಶಾಕುಂತಲದ ಅನುವಾದದಿಂದ ಅಧ್ಯಯನದ ವ್ಯಾಪ್ತಿ ಆರಂಭಗೊಂಡಿದೆ. ಸುಮಾರು ೧೮೬೯ರಲ್ಲಿ ಶೇಷಗಿರಿರಾಯರ ಶಾಕುಂತಲ ನಾಟಕ ಪ್ರಕಟಗೊಂಡಿದೆ. ನಂತರದ ಸುಮಾರು ೧೯೨೦ರವರೆಗಿನ ಅನುವಾದಿತ ಕೃತಿಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅಧ್ಯಯತನದ ಶೀರ್ಷಿಕೆ "ಸಂಸ್ಕೃತ ನಾಟಕಗಳ ಅನುವಾದಗಳು ಮತ್ತು ರೂಪಾಂತರಗಳು : ಒಂದು ಅಧ್ಯಯನ" ಎಂದಾಗಿದೆ. ಪ್ರಸ್ತುತ ಅಧ್ಯಯನದ ನಂತರ ಕಂಡುಬಂದ ಫಲಿತಗಳನ್ನು ಆಧರಿಸಿ ಹೇಳುವದಾದಲ್ಲಿ ವಸಾಹತುಶಾಹಿ ಕಾಲಘಟ್ಟದಲ್ಲಿ ಪಡಿಮೂಡಿಸಲ್ಪಟ್ಟ ಕೃತಿಗಳನ್ನು ಅನುವಾದಗಳೆನ್ನಬಹುದೇ ವಿನಃ ರೂಪಾಂತರ ಎನ್ನುವ

ಪದವನ್ನು ಹೆಚ್ಚು ಚರ್ಚಿಸುವ ಸಾಧ್ಯತೆ ಇಲ್ಲ. ಸಿಂಗರಾರ್ಯನ ಮಿತ್ರವಿಂದಾ ಗೋವಿಂದವಾಗಲೀ, ಚುರುಮುರಿಶೇಷಗಿರಿಯರ ಕೃತಿಗಳನ್ನು ರೂಪಾಂತರಗಳೆಂದು ಕೆಲ ವಿದ್ವಾಂಸರು ಹೇಳಿದ್ದಾರಾದರೂ, ಅವುಗಳನ್ನು ಅಧ್ಯಯನ ಮಾಡಿದಾಗ ರೂಪಾಂತರಗಳೆನ್ನುವ ಸಾಧ್ಯತೆಗೆ ಯಾವುದೇ ತಾತ್ವಿಕ ಹಿನ್ನೆಲೆ ದೊರಕುವದಿಲ್ಲ. ರೂಪಾಂತರವನ್ನು ಅದರ ಮೂಲಾರ್ಥದ ಹಿನ್ನೆಲೆಯಲ್ಲಿ ನೋಡಿದರೆ ''ದೇಶಕಾಲಗಳಿಗೆ ಸಂಭಂದಿಸಿದಂತೆ ಮೂಲ ಕೃತಿಯನ್ನು ಮತ್ತೊಂದು ಭಾಷೆಗೆ ಅಳವಡಿಸಿಕೊಳ್ಳುವುದು'' ಎಂಬುದಾಗಿದೆ. ರೂಪಾಂತರ ವಾಸ್ತುವಾಗಿ ಮೂಲದ ಸತ್ವಶೈಲಿಯನ್ನು ಅನುಸರಿಸಿ ರಚಿಸಿದ ಕೃತಿಯಾಗುತ್ತದೆ. ಬಿ. ಎಂ. ಶ್ರೀಕಂಠಯ್ಯನವರು ಅಜಾಕ್ಸ್ ನಾಟಕವನ್ನು ' ಅಶ್ವತ್ಥಾಮನ್' ಎಂಬ ಕನ್ನಡ ನಾಟಕವನ್ನಾಗಿ ರೂಪಾಂತರಿಸಿದರು. ರೂಪಾಂತರದ ಅರ್ಥದ ದೃಷ್ಟಿಯಿಂದ ಈ ಕೃತಿ ಮೂಡಿ ಬಂದಿದೆ. ಮಹಾಭಾರತದ ಅಶ್ವತ್ಥಾಮನಲ್ಲಿ ಮೂಲ ಅಜಾಕ್ಸ್ ನಾಟಕದ ದುರಂತನಾಯಕನನ್ನು ಕಂಡಿದ್ದಾರೆ. ಅಶ್ವತ್ಥಾಮನ ಆಯ್ಕೆ ಇಲ್ಲಿನ ಸಾಂಸ್ಕೃತಿಕ ಪರಿಸರಕ್ಕೆ ಹೆಚ್ಚಾಗಿ ಬಗ್ಗಿಬರುವ ಸಾಧ್ಯತೆಯಿದ್ದುದರಿಂದ ಬಿ.ಎಂ.ಶ್ರೀ ಅವರು ರೂಪಾಂತರಕ್ಕೆ ಪ್ರಯತ್ನಿಸಲು ಉದ್ಯುಕ್ತರಾದರೆನ್ನಬಹುದಾಗಿದೆ. ಈ ತರಹದ ರೂಪಾಂತರದ ಉದಾಹರಣೆಗಳ ಹಿನ್ನೆಲೆಯಲ್ಲಿ ನೋಡಿದಾಗ ನಮಗೆ ವಸಾಹತುಶಾಹಿಯ ಕಾಲಘಟ್ಟದಲ್ಲಿ ಇವಕ್ಕೆ ಸಂವಾದಿಯಾಗಿ ಯಾವ ಉದಾಹರಣೆಗಳು ಕಾಣಬರುವುದಿಲ್ಲ. ಆದ್ದರಿಂದ ಈ ಕಾಲಘಟ್ಟದಲ್ಲಿ ಬಂದಂಥ ಕೃತಿಗಳನ್ನು ರೂಪಾಂತರವೆಂದು ಕರೆಯುವುದಕ್ಕಿಂತ ಅನುವಾದವೆಂದು ಕರೆಯುವುದು ಹೆಚ್ಚು ತರ್ಕಬದ್ದವೆನಿಸುವುದರಿಂದ ಇದನ್ನು ಅನುವಾದಿತ ರೂಪವನ್ನಾಗಿ ಚರ್ಚಿಸಲಾಗಿದೆ. ಹಾಗಾಗಿಯೇ ಅಧ್ಯಯನದ ವ್ಯಾಪ್ತಿಯನ್ನು ಅನುವಾದದ ಅರ್ಥದಲ್ಲಿಯೇ ಗ್ರಹಿಸಿಕೊಳ್ಳಲಾಗಿದೆ. ಇದನ್ನು ಅನುವಾದಿತ ರೂಪವನ್ನಾಗಿ ಚರ್ಚಿಸಲಾಗಿದೆ. ಹಾಗಾಗಿಯೇ ಅಧ್ಯಯನದ ವ್ಯಾಪ್ತಿಯನ್ನು ಅನುವಾದದ ಅರ್ಥದಲ್ಲಿಯೇ ಗ್ರಹಿಸಿಕೊಳ್ಳಲಾಗಿದೆ.

ಅಧ್ಯಯನದ ವ್ಯಾಪ್ತಿಯನ್ನು ಸ್ಥೂಲವಾಗಿ ಎರಡು ವಿಭಾಗಗಳಲ್ಲಿ ಕೈಗೊಳ್ಳಲಾಗಿದೆ.

೧. ವಸಾಹತುಶಾಹಿಯ ಪೂರ್ವದಲ್ಲಿ ಬಂದಂಥ ಅನುವಾದ ಕೃತಿಗಳು

೨. ವಸಾಹತುಶಾಹಿಯ ಕಾಲದಲ್ಲಿ ಬಂದಂಥ ಅನುವಾದ ಕೃತಿಗಳು

**೧. ವಸಾಹತುಶಾಹಿಯ ಪೂರ್ವದಲ್ಲಿ ಬಂದಂಥ ಅನುವಾದ ಕೃತಿಗಳು :**

ಕನ್ನಡದ ಮೊಟ್ಟಮೊದಲ ಕೃತಿ 'ಕವಿರಾಜಮಾರ್ಗ ಕಾವ್ಯದರ್ಶ' ಭಾಗಶಃ ಅನುವಾದ ಈ ಮೊದಲ ಕೃತಿಯಿಂದ ಹಿಡಿದು ಕುಮಾರವ್ಯಾಸನ ' ಕರ್ಣಾಟ ಕಥಾ ಮಂಜರಿ' ಯತನಕ ವಸಾಹತುಶಾಹಿಯ ಪೂರ್ವದ ಕಾಲಘಟ್ಟವಾಗಿ ಸ್ವೀಕರಿಸಲಾಗಿದೆ. ಯಾವುದೇ ಕೃತಿಯೂ ಆ ಕಾಲದ ಸಾಂಸ್ಕೃತಿಕ ಒತ್ತಾಸೆಯಿಂದ ಮೂಡಿಬರುತ್ತದೆ. ಈ ಕಾಲಘಟ್ಟದಲ್ಲಿ ಬಂದಂಥ ಅನುವಾದಗಳ ಹಿಂದೆ ಇದ್ದಂಥ ಸಾಂಸ್ಕೃತಿಕ ಒತ್ತಾಸೆಗಳು ಯಾವುವು ಎನ್ನುವವನ್ನು ಚರ್ಚಿಸಲಾಗಿದೆ. ಮೂಲಕೃತಿಯು ಎಷ್ಟು ಪ್ರಮಾಣದಲ್ಲಿ ಮತ್ತು ಹೇಗೆ ಅನುವಾದಗೊಂಡ ಕೃತಿಯಲ್ಲಿ ಅನಾವರಣಗೊಂಡಿದೆ ಸ್ಥೂಲವಾಗಿ

ಚರ್ಚಿಸಲಾಗಿದೆ. ಅನುವಾದಕ ಮಾಡಿಕೊಂಡ ಮೂಲಕಥೆಯಲ್ಲಿ ಬದಲಾವಣೆಗಳು ಅನುವಾದಕ ಮಾಡಿಕೊಂಡ ಮೂಲಕಥೆಯಲ್ಲಿ ಬದಲಾವಣೆಗಳು ಅನುವಾದ ದೃಷ್ಟಿಯಿಂದ ಎಷ್ಟು ಪ್ರಸ್ತುತ ಎಂಬುದನ್ನು ವಿವೇಚಿಸಲು ಪ್ರಯತ್ನಿಸಲಾಗಿದೆ. ಕೃತಿಕಾರನ ಕಾಲದಲ್ಲಿ ಬಂದಿರಬಹುದಾದಂಥ ಚಳುವಳಿಗಳು ಸಾಮಾಜಿಕ ಅಭಿಪ್ರಾಯಗಳು ಹೇಗೆ ಕೃತಿಯಲ್ಲಿ ಪ್ರತಿಬಿಂಬಿಸುವಾಗಿವೆ. ಎನ್ನುವುದನ್ನು ಅಲ್ಲಲ್ಲಿ ಉದಾಹರಣೆಗಳ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಉದಾಹರಣಾರ್ಥವಾಗಿ ಕುಮಾರವ್ಯಾಸನ ಮೇಲೆ ಆದಂಥ ದಾಸಸಾಹಿತ್ಯದ ಚಳುವಳಿಯ ಪ್ರಭಾವದ ಕುರಿತು ಪ್ರಸ್ತಾಪಿಸಲಾಗಿದೆ.

ಅದೇ ವೇಳೆಗೆ ಕನ್ನಡ ಸಾಹಿತ್ಯದಲ್ಲಿ ಸ್ವತಂತ್ರ ಕೃತಿಗಳ ದೃಷ್ಟಿಯಿಂದ ಯಾವ ಚಟುವಟಿಕೆಯೂ ನಡೆಯಲು ವಾತಾವರಣ ಅನುಕೂಲಕರವಾಗಿರಲಿಲ್ಲವಾದ್ದರಿಂದ ಅನುವಾದದ ಮುಖಾಂತರ ಆ ಶೂನ್ಯವನ್ನು ತುಂಬುವ ಪ್ರಯತ್ನ ಮಾಡಲಾಯಿತು. ಚುರಮರಿ ಶೇಷಗಿರಿರಾಯರ, ಬಸವಪ್ಪ ಶಾಸ್ತ್ರಿಗಳ ಶಾಕುಂತಲ ನಾಟಕಗಳನ್ನು ಮೊದಲು ಮಾಡಿಕೊಂಡು ವಿವಿಧ ಬಗೆಯ ಅನುವಾದ ಸಾಹಿತ್ಯ ಸೃಷ್ಟಿಯಾಯಿತು. ಅನುವಾದ ಪ್ರಕ್ರಿಯೆಯ ಮೂಲ ಭಾಷೆಯಾಗಿ ಸಂಸ್ಕೃತವನ್ನೇ ಬೆಳೆಸಿದರು. ಈ ಎಲ್ಲ ಕಾಲದ ಒತ್ತಾಸೆಗಳು, ಉತ್ತೇಜನಗಳನ್ನು ಚರ್ಚಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಸಂಸ್ಕೃತಕ್ಕೆ ಇದ್ದ ರಾಷ್ಟ್ರೀಯ ಪ್ರಭಾವ ಹೇಗೆ ಅನುವಾದದ ಹಿಂದೆ ಕೆಲಸಮಾಡಿದೆ ಎಂದು ಅಲ್ಲಲ್ಲಿ ವಿವೇಚಿಸಲಾಗಿದೆ.

ಸಂಸ್ಕೃತ ನಾಟಕಗಳಿಂದ ಕನ್ನಡಕ್ಕೆ ಬಂದ ಅನುವಾದಗಳು ರಂಗಭೂಮಿಯ ಅಗತ್ಯವನ್ನು ಪೂರೈಸುವ ಒಂದು ಅವಕಾಶವಾಗಿಸಿಟ್ಟುಕೊಂಡು ಹೊರಬಂದವು. ರಂಗಭೂಮಿಯ ಅಗತ್ಯಕ್ಕೆ ತಕ್ಕಂತೆ ಹೊರಬಂದವು. ಆ ದೃಷ್ಟಿಯಿಂದ ಕೂಡ ಕೃತಿಗಳನ್ನು ವಿವೇಚನೆಗೆ ಒಳಪಡಿಸಲಾಗಿದೆ.

ಒಬ್ಬನೇ ಅನುವಾದಕ ಹಲವಾರು ಕೃತಿಗಳನ್ನು ಅನುವಾದಿಸಿದ ಉದಾಹರಣೆಗಳು ಇವೆ. ಇವು ತುಲನಾತ್ಮಕ ಅಧ್ಯಯನಕ್ಕೆದಾರಿ ಮಾಡಿಕೊಟ್ಟಿವೆ. ಒಂದೇ ಮೂಲವನ್ನು ಹಲವಾರು ಅನುವಾದಕರು ಅನುವಾದ ಮಾಡಿದ್ದಾರೆ. ಅದು ಕೂಡ ತುಲನಾತ್ಮಕ ಅಧ್ಯಾಯನಕ್ಕೆ ಒಳಪಡಿಸಲು ಪ್ರಯತ್ನಿಸಲಾಗಿದೆ. ಕೆಲವು ಅಪರಿಚಿತ ನಾಟಕಗಳು ಉದಾಹರಣಾರ್ಥವಾಗಿ ಸಂಕಲ್ಪ ಸೂರ್ಯೋದಯ, ಸ್ನುಷಾವಿಜಯಂ, ಭರ್ತೃಹರಿ ನಿರ್ವೇದ ನಾಟಕ, ಅನುತಾಪ ಪ್ರೇಕ್ಷಣಿಕಂ, ಪಾರ್ವತಿ ಪರಿಣಯ ಮುಂತಾದ ಕೃತಿಗಳನ್ನು ಸಮೀಕ್ಷಿಸುವ ಜೊತೆಗೆ ಪರಿಚಯಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ತೌಲನಿಕ ಅಧ್ಯಯನದಲ್ಲಿ ಸಂಸ್ಕೃತದ ಪ್ರಸಿದ್ಧ ನಾಟಕಕಾರರೆನಿಸಿದ ಭವಭೂತಿ, ಕಾಳಿದಾಸ, ಶ್ರೀಹರ್ಷ, ಆರ್ಯಕ್ಷೇಮೇಶ್ವರ, ಶೂದ್ರಕ ಇವರುಗಳ ಕೃತಿಗಳನ್ನು ಕೃತಜ್ಞನಾಗಿದ್ದಾನೆ. ಆದರೆ ಮಹಾಭಾರತದ ವಿಸ್ತಾರವನ್ನು ಸಂಕ್ಷೇಪಗೊಳಿಸಿ ತನ್ನದೇ ಆದಂಥ ಕೃತಿರಚನೆ ಮಾಡಿದ್ದಾನೆ. ಅರಿಕೇಸರಿ ಆಸ್ಥಾನದಲ್ಲಿದ್ದರಿಂದ ರಾಜನಲ್ಲಿಯೇ ಅರ್ಜುನನನ್ನು ಸಮೀಕರಿಸಿದ್ದರಿಂದ ಹಲವಾರು ಒಳ ಒಪ್ಪಂದ ಮಾಡಿಕೊಳ್ಳುತ್ತಾನೆ. ಇಂಥ ರಾಜಾಶ್ರಯದ ಪರಿಣಾಮವಾಗಿ ಕವಿಗಳು ತಮಗೆ ಒಗ್ಗದ ಅಂಶಗಳನ್ನು

ಕಾವ್ಯದಲ್ಲಿ ಸೇರಿಸಬೇಕಾದಂಥ ಸಾಧ್ಯತೆ ಜಾಸ್ತಿಯಾಗುತ್ತದೆ. ಅಂಥ ಅಂಶಗಳನ್ನು ಇತರ ರಾಜಾಶ್ರಯ ಹೊಂದಿದ ಕವಿಗಳ ಕುರಿತಾಗಿಯೂ ವಿವೇಚನೆಗೆ ಒಳಪಡಿಸಲಾಗಿದೆ. ಆ ಕಾಲದ ಜನರು ತಮ್ಮ ಸಾಂಸ್ಕೃತಿಕ ಪ್ರತಿಬಿಂಬವನ್ನು ಅದರಲ್ಲಿ ಕಂಡಿದ್ದರಿಂದ ಅವೆಲ್ಲ ಕೃತಿಗಳನ್ನು ಸಾಂಸ್ಕೃತಿಕ ಅನುವಾದವೆಂದು ಕರೆಯಲಾಗಿದೆ. ಜೊತೆಗೆ ಸಾಹಿತ್ಯಿಕ ಮೌಲ್ಯವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಕುಮಾರವ್ಯಾಸ ಮಹಾಭಾರತವನ್ನು ಕೃಷ್ಣ ಕಥೆಯಾಗಿ ಹೇಳಿದ್ದರಿಂದ ಭಕ್ತಿಯನ್ನು ಪಾರಮ್ಯ ಸ್ಥಿತಿಗೆ ಒಯ್ದು ಅದರಲ್ಲಿ ಭಕ್ತಿರಸ ಹೊಮ್ಮಿಸಿದ್ದಾನೆ. ಮಹಾಭಾರತವನ್ನು ಹೊಸ ಪರಿಪಾಕದಲ್ಲಿ ನೋಡಿದ ರೀತಿ ಇದಾಗಿದೆ.

ನಾಗವರ್ಮನ 'ಕರ್ಣಾಟಕ ಕಾದಂಬರಿ' ಎಂಬ ಕೃತಿ ಬಾಣಭಟ್ಟನ ಕಾದಂಬರಿಯ ಅನುವಾದ. ಪ್ರಥಮ ಬಾರಿಗೆ ಅನುವಾದದಲ್ಲಿ ಕರ್ನಾಟಕ ಪದದ ಬಳಕೆಯಾಗಿರುವುದು ಸ್ಪಷ್ಟ. ಅಲ್ಲಿಂದ ಬಹುತೇಕ ಅನುವಾದಿತ ಕೃತಿಗಳು 'ಕರ್ಣಾಟಕ' ಎಂಬ ಶಿರೋನಾಮ ಹೊತ್ತು ಹೊರಬಂದಿವೆ. ಅದೊಂದು ನೇರ ಅನುವಾದವೆಂಬುದು ಇದರಿಂದ ಗೊತ್ತಾಗುತ್ತದೆ. ಆದ್ದರಿಂದಲೇ ನೇರ ಅನುವಾದವಾಗಿರುವ ವಸಾಹತುಶಾಹಿ ಕಾಲಘಟ್ಟದಲ್ಲಿ ಬಂದಂಥ ಕೃತಿಗಳು 'ಕರ್ಣಾಟಕ' ಎಂಬ ಶಿರೋನಾಮವನ್ನು ಯಥೇಚ್ಛವಾಗಿ ಬಳಸಿಕೊಂಡು ಹೊರಬಂದವು.

## ೨) ವಸಾಹತುಶಾಹಿಯ ಕಾಲಘಟ್ಟದಲ್ಲಿ ಬಂದಂಥ ಅನುವಾದ ಕೃತಿಗಳು :

ಸಮಕಾಲೀನ ಸಂದರ್ಭ ಯಾವಾಗಲೂ ಕವಿ ಮನಸ್ಸನ್ನು ಪ್ರಚೋದಿಸುತ್ತದೆ. ಸಾಂಸ್ಕೃತಿಕ ಒತ್ತಾಸೆಯ ಪಾತ್ರ ಯಾವತ್ತು ಇರಬಹುದಾದಂಥದು. ಅದರಲ್ಲೂ ಅನ್ಯ ಸಾಂಸ್ಕೃತಿಕ ಪರಿಸರದ ಆಕ್ರಮಣ ಕ್ರಮೇಣ ತನ್ನ ಅಸ್ತಿತ್ವವನ್ನು ತೋರಿಸಲಾರಂಭಿಸಿದಾಗ ಸ್ಥಳೀಯ ಸಂಸ್ಕೃತಿಯ ಮುಖಾಮುಖಿ ಈ ಅನ್ಯ ಸಂಸ್ಕೃತಿಯ ಜೊತೆಗೆ ಆಗುವ ಸಾಧ್ಯತೆ ಇದೆ. ಪಾಶ್ಚಾತ್ಯರ ಸಂಸ್ಕೃತಿ, ಅವರ ಇಂಗ್ಲೀಷ್ ಭಾಷೆ ಶಿಕ್ಷಣವರ್ಗವನ್ನು ಆಕರ್ಷಿಸಿದಾಗ ಆ ಸಂಸ್ಕೃತಿಯ ನೆರಳಿನಲ್ಲಿ ದೇಸಿ ಕೊಡುಗೆಯನ್ನು ನೋಡುವ ಪ್ರಯತ್ನ ಆರಂಭವಾಯಿತು. ವಸಾಹತುಶಾಹಿಯ ರಾಜಕಾರಣ ದೇಶದ ಜನ ಜೀವನದ ಮೇಲೆ ಪ್ರಭಾವ ಬೀರತೊಡಗಿದಾಗ ಆ ಸಂಸ್ಕೃತಿಕ ಪಡಿಯಚ್ಚಿಗೆ ನಮ್ಮ ಪ್ರಾಚೀನ ಸಂಸ್ಕೃತ ಕೃತಿಗಳ ಅನುವಾದದ ಮುಖಾಂತರ ಉತ್ತರ ಕೊಡಲು ಪ್ರಯತ್ನಿಸಲಾಯಿತು.

ಅನುವಾದಕ್ಕೆ ಗುರಿಪಡಿಸಿದ ಅನುವಾದಕರ ಧೇಯೋದ್ದೇಶಗಳು, ಸಾಮ್ಯತೆಗಳು, ಭಿನ್ನತೆಗಳು, ಸಮಕಾಲೀನ ಸಂದರ್ಭ, ಈ ಅಂಶಗಳಿಂದ ತೂಗಿ ನೋಡಲು ಪ್ರಯತ್ನಿಸಲಾಗಿದೆ.

| | | |
|---|---|---|
| ಕಾಳಿದಾಸ | - | 'ಅಭಿಜ್ಞಾನ ಶಾಕುಂತಲಂ' |
| ಶ್ರೀಹರ್ಷ | - | 'ರತ್ನಾವಳಿ' |
| ಶೂದ್ರಕ | - | ಮೃಚ್ಛಕಟಿಕ |
| ಆರ್ಯಕ್ಷೇಮೇಶ್ವರ | - | ಚಂಡಕೌಶಿಕ |
| ಭವಭೂತಿ | - | ಉತ್ತರರಾಮಚರಿತ |

ಇಲ್ಲಿ ಆರ್ಯಕ್ಷೇಮೇಶ್ವರನ ಚಂಡಕೌಶಿಕದ ಸಂಸ್ಕೃತ ನಾಟಕದ ಮೂಲಪಠ್ಯವನ್ನು ಗಮನಿಸಿಲ್ಲವಾದ್ದರಿಂದ ಮತ್ತು ಬಸವಪ್ಪಶಾಸ್ತ್ರಿಗಳ ಅನುವಾದಿತ ಕೃತಿಗಳೆಲ್ಲವೂ ಮೂಲ ಪಠ್ಯಕ್ಕೆ ಹೆಚ್ಚು ನಿಕಟವಾದದ್ದರಿಂದ ಬಸವಪ್ಪ ಶಾಸ್ತ್ರಿಗಳ ನಾಟಕಾನುವಾದಕ್ಕಿಂತ ಜಯರಾಯಾಚಾರ್ಯರ ಚಂಡಕೌಶಿಕ ನಾಟಕಾನುವಾದ ಯಾವ ರೀತಿ ವಿಶಿಷ್ಟವಾಗಿ ಮೂಡಿ ಬಂದಿದೆ ಎಂಬುದನ್ನು ಚರ್ಚಿಸಲಾಗಿದೆ.

# ಅಧ್ಯಾಯ - ೨

# ಅನುವಾದ ಪ್ರಕ್ರಿಯೆಯ ಹಿನ್ನೆಲೆ

ಕನ್ನಡ ಸಾಹಿತ್ಯ ಸಂದರ್ಭವನ್ನು ಅವಲೋಕಿಸಿದಾಗ ಭಾಷಾಂತರ ಮತ್ತು ಕನ್ನಡ ಸಾಹಿತ್ಯ ಅನ್ಯೋನ್ಯಾಶ್ರಯಿಗಳಾಗಿರುವಂತೆ ತೋರುತ್ತವೆ. ಕನ್ನಡ ಸಾಹಿತ್ಯದ ಪ್ರಾಚೀನತೆ, ಭಾಷ್ಯಾಂತರದ ಪ್ರಾಚೀನತೆಯೇ ಆಗಿದೆ. ಒಂದು ಭಾಷೆಯಲ್ಲಿ ತನಗಿರುವ ಅನುಭವವನ್ನು ಇತರ ಭಾಷೆಗಳಿಗೂ ನಿಲುಕುವಂತೆ, ಅಭಿವ್ಯಕ್ತಿ ಸಬೇಕಾದರೆ ಭಾಷಾಂತರ ಕಾರ್ಯ ಎಂಬುದು ಅನಿವಾರ್ಯ. ಕನ್ನಡಕ್ಕೂ, ಸಂಸ್ಕೃತಕ್ಕೂ ಇರುವ ಅವಿನಾಭಾವ ಸಂಬಂಧದ ಹಿನ್ನೆಲೆಯಲ್ಲಿ ಅನುವಾದ ಪ್ರಕ್ರಿಯೆ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಪಾರಂಪರಿಕ ಅನಿವಾರ್ಯತೆ, ಸಾಂದರ್ಭಿಕ ಒತ್ತಾಸೆಗಳೆರಡೂ ಈ ಬಗೆಯಲ್ಲಿ ಪೂರಕವಾಗಿ ನಿಂತಿವೆ. ಆಯಾ ಯುಗಧರ್ಮಕ್ಕೆ ಅನುಗುಣವಾಗಿ ಈ ಎರಡೂ ಭಾಷೆಗಳ ಆದಾನ-ಪ್ರದಾನ ಸಂಬಂಧಗಳು ಬೇರೆ ಬೇರೆ ರೂಪಗಳನ್ನು ಪಡೆದುಕೊಂಡು ಬಂದಿವೆ. ಈ ಬದಲಾವಣೆಗಳು ಅನೇಕ ಸ್ತರಗಳಲ್ಲಿ ಅಥವಾ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತನ್ನ ಸಾಫಲ್ಯವನ್ನು ದೃಷ್ಟಿಕೋನದ ಪ್ರಯೋಗ ಶೀಲತೆಗಾಗಲಿ ತೊಡಗಿಕೊಳ್ಳುವ ನಿಟ್ಟಿನಲ್ಲಿ, ಆಯಾ ಸಾಂದರ್ಭಿಕ ಹಿನ್ನೆಲೆಯಲ್ಲಿ ನಡೆದು ಬಂದಿದೆ ಎಂದು ತಿಳಿಯಬಹುದು. ಹೊರಗಿನ ಪ್ರಪಂಚದಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳು ಸೂಕ್ಷ್ಮವಾಗಿ ಆಯಾ ಕಾಲದ ಬರಹಗಾರರ ಸಂವೇದನೆಗಳನ್ನು ಪ್ರಚೋದನೆಗೊಳಿಸುತ್ತವೆ. ಈ ಪ್ರಚೋದನೆ ಹಳೆಯ ಸಂವೇದನೆಗಳನ್ನು ವಿರೋಧಿಸಬಹುದು. ಇಲ್ಲವೆ ಪೂರಕ ಆಕರವಾಗಿ ಬೆಳಸಬಹುದು. ನಾವು ಕೃತಿ ಸಂದರ್ಭಗಳನ್ನು ಪರಿಶೀಲಿಸಿದರೆ, ಕನ್ನಡ ಸಾಹಿತ್ಯ ಸಂದರ್ಭದಲ್ಲೂ ಈ ಮಾತು ಸತ್ಯವೆನಿಸುತ್ತದೆ.

ಸಂಸ್ಕೃತವನ್ನೇ ಆಧಾರವಾಗಿಟ್ಟುಕೊಂಡು ಸಾಂಸ್ಕೃತಿಕ ಸಂದರ್ಭವನ್ನು ಗ್ರಹಿಸುವುದಾದರೆ ವೇದಗಳ ಸಂದರ್ಭದಲ್ಲಿ ಅಂದರೆ, ಮೊದಲಲ್ಲಿ ಅದು ದರ್ಶನಾತ್ಮಕ ನೆಲೆಯನ್ನು ಹೊಂದಿತ್ತು. ಉಪನಿಷತ್ತುಗಳ ಸಂದರ್ಭದಲ್ಲಿ ತಾತ್ವಿಕತೆಯ ನೆಲೆಗಟ್ಟಿನಲ್ಲೂ; ಪುರಾಣಗಳ ಸಂದರ್ಭದಲ್ಲಿ ಧಾರ್ಮಿಕ ಅಂಶಗಳ ಆಧಾರದ ಮೇಲೂ ತನ್ನ ಅಸ್ತಿತ್ವವನ್ನು ಪಡೆದುಕೊಂಡಿತ್ತು. ಕ್ರಿ.ಶ.ದ ಆರಂಭದ ಹೊತ್ತಿಗೆ ಸ್ವಲ್ಪ ಭಿನ್ನ ನೆಲೆಯಲ್ಲಿ ಕಥಾನಕವನ್ನು ಅಳವಡಿಸಿಕೊಳ್ಳುವ ಮೂಲಕ ಪಾರಿಭಾಷಿಕವಾಗಿ ಹೇಳುವುದಾದರೆ ರಸಾತ್ಮಕತೆಯನ್ನು ತನ್ನ ಮೂಲಧನವಾಗಿ ಹೊಂದುವ ಮೂಲಕ ಸಾಮಾಜಿಕ ಸಂಬಂಧವನ್ನು ಏರ್ಪಡಿಸಿಕೊಂಡಿತು. ಈ ಪ್ರಕ್ರಿಯೆಯು ಸಮಾಜದ ಮೇಲ್ವರ್ಗದ ಕೈಯಲ್ಲಿದ್ದುದರಿಂದ ಅದಕ್ಕೆ ಸ್ಥಾನಮಾನಗಳು ಪ್ರಾಪ್ತವಾದವು. ನಂತರ ಅದರ ಧಾರ್ಮಿಕ ಹಿಡಿತ ಕಡಿಮೆಯಾಗಿ ಸಮಾಜದ ಇನ್ನೊಂದು ಪ್ರತಿಷ್ಠಿತ ವರ್ಗವಾದ ಕ್ಷತ್ರಿಯ ಸಮಾಜವು ಅದರ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರಿಸಿತು. ಈ ಅಂಶವೇ ಮುಂದುವರೆದು ಕೊನೆಗೆ ರಾಜರಾದವರೂ ಕವಿಗಳಾಗುವುದು ಹೆಮ್ಮೆಯ ಸಂಗತಿ ಎಂಬಲ್ಲಿಗೆ ಬಂದು ಮುಟ್ಟಿತು. ಅಲ್ಲಿಂದೀಚೆಗೆ ಪ್ರಾಚೀನ ಕಾವ್ಯಗಳು ಧಾರ್ಮಿಕವಾದವೋ ಪ್ರಭುನಿಷ್ಠವಾದವೋ ಎಂಬುದು

ಗೆರೆ ಎಳೆದು ತೋರಿಸಲು ಸಾಧ್ಯವಾಗದಷ್ಟು ಸಂಕೀರ್ಣ ವಿಚಾರವಾಯಿತು. ಆ ಹಂತದಲ್ಲಿ ಕನ್ನಡ ಕಾವ್ಯ ಚರಿತ್ರೆ ಆರಂಭಗೊಳ್ಳುತ್ತದೆ. ಸಂಸ್ಕೃತ ಸಾಹಿತ್ಯವು ಈ ಕಾಲಘಟ್ಟದಲ್ಲಿ ಕನ್ನಡ ಕಾವ್ಯವಾಗಿ ತನ್ನನ್ನು ಅಂಶಿಕ ಪ್ರತಿನಿಧಿಯಾಗಿ ರೂಪಿಸಿಕೊಳ್ಳತೊಡಗಿತು. ಇದು ಒಂದು ಬಗೆಯಲ್ಲಿ ಯಾಜಮಾನ್ಯ-ಅಧೀನ ಸಂಸ್ಕೃತಿಗಳ ಮುಖಾಮುಖಿಯನ್ನು ಸಮನ್ವಯತೆಯೊಡನೆ ತೂಗಿಸುವ ಪ್ರಯತ್ನವಾಗಿತ್ತು. ಅದುವರೆಗೂ ಪುರೋಹಿತ ಶಾಹಿಗಳ, ಆಡಳಿತಶಾಹಿಗಳ ಕೈಯಲ್ಲಿ ರಾಜಭಾಷೆಯಾಗಿ ಮೆರೆದ ಸಂಸ್ಕೃತ, ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಅನಿವಾರ್ಯವಿತ್ತು. ಬಹುತೇಕ ಅಳಿವಿನ ಅಂಚಿನಲ್ಲಿದ್ದ ಆ ಭಾಷೆ ಅಸ್ತಿತ್ವಕ್ಕಾಗಿ ತನ್ನ ಕೆಲ ಷರತ್ತುಗಳನ್ನು ಬಿಟ್ಟುಕೊಡುವ ಮೂಲಕ ಕನ್ನಡ ಭಾಷೆಯೊಡನೆ ರಾಜಿ ಏರ್ಪಡಿಸಿಕೊಂಡಿತು. ಅಪರೋಕ್ಷವಾಗಿ, ಉಭಯ ಭಾಷಾತ್ಮಕ ಪ್ರಕ್ರಿಯೆಯೊಡನೆ ರಾಜಮನ್ನಣೆಯನ್ನು ಪಡೆದುಕೊಳ್ಳಲು ತನ್ನನ್ನು ಪರಿವರ್ತಿಸಿಕೊಳ್ಳತೊಡಗಿತು. ಇದೊಂದು ಅತ್ಯಪೂರ್ವ ಸಾಂಸ್ಕೃತಿಕ ಅದಾನ-ಪ್ರದಾನ. ಕನ್ನಡ ಭಾಷೆಯು ಕೇವಲ ಸ್ವೀಕೃತಿ ಭಾಷೆಯಾಗದೇ ಸಂಸ್ಕೃತದ ಯಾಜಮಾನ್ಯ ಸಂಸ್ಕೃತಿಯನ್ನು ಅಧೀನ ಸಂಸ್ಕೃತಿ ಯನ್ನಾಗಿಸದೇ ವಿನಿಮಯ ಪ್ರಕ್ರಿಯೆಯ ಮೂಲಕ ಸೋಪಜ್ಞತೆಯನ್ನು ತಂದುಕೊಂಡಿತು.

ಕನ್ನಡದ ಮೊಟ್ಟಮೊದಲ ಕೃತಿಯಾದ ಕವಿರಾಜಮಾರ್ಗದಲ್ಲಿ ಸಂಸ್ಕೃತದ ದಂಡಿಯ 'ಕಾವ್ಯಾದರ್ಶ'ದ ಪ್ರಭಾವವಿದೆ ಎನ್ನುವುದನ್ನು ಗುರುತಿಸಲಾಗಿದೆ. ಅನೇಕ ಲಕ್ಷಣ ಪದ್ಯಗಳು ನೇರವಾಗಿಯೇ ಅನುವಾದಿತವಾಗಿವೆ. ಆದರೂ ಅನೇಕ ಲಕ್ಷ್ಯಗಳು ಈ ಲಕ್ಷಣ ಗ್ರಂಥ ನಿರ್ಮಾಣ ವಾಗುವ ಪೂರ್ವದಲ್ಲಿ ಇರುವುದು ಗೊತ್ತಾಗುತ್ತದೆ. ಸಂಸ್ಕೃತ ಲಕ್ಷಣ ಗ್ರಂಥಗಳನ್ನು ಅವಲಂಬಿಸಿ ಕವಿರಾಜಮಾರ್ಗದ ಬಹುಭಾಗವು ರಚಿತವಾಗಿದ್ದರೂ, ಒಂದು ಗಣ್ಯವಾದ ಗ್ರಂಥಭಾಗ ಪೂರ್ವಕಾವ್ಯಗಳನ್ನು ಅನುಲಕ್ಷಿಸಿಯೇ ಸಿದ್ಧವಾಗಿರುವುದು ಗ್ರಂಥದಿಂದಲೇ ವ್ಯಕ್ತಪಡುತ್ತದೆ. ಕವಿರಾಜಮಾರ್ಗ ದಂಡಿಯ 'ಕಾವ್ಯಾದರ್ಶ'ದ ಅನುವಾದವಾದರೂ ಇದು ತನ್ನ ಕಾಲದವರೆಗಿನ ಕನ್ನಡ ಕಾವ್ಯಮಾರ್ಗಕ್ರಮಣ ಪದ್ಧತಿಯ ತಪ್ಪು ಒಪ್ಪುಗಳನ್ನು ಗುರುತಿಸಿ ತಿಳಿಸುವುದರ ಜೊತೆಗೆ ಕವೀಶ್ವರ ಅಥವಾ ಕವಿರಾಜ ಎನ್ನಿಸಿಕೊಳ್ಳಬೇಕೆಂಬ ಕವಿಗಳಿಗೆ ಒಂದು ಹೆದ್ದಾರಿಯನ್ನು, ರಾಜಮಾರ್ಗವನ್ನು ಕಲ್ಪಿಸಿಕೊಡುವ ಘನವಾದ ಉದ್ದೇಶದಿಂದ ರಚಿತವಾದದ್ದು. ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನ ಕಾಲದಲ್ಲಿ ರಚಿತವಾದ ಈ ಗ್ರಂಥ ರಾಜನೂ, ವಿದ್ವಾಂಸನೂ, ಕವಿಯೂ, ವಿದ್ವತ್ಕುಲ ಆಶ್ರಯದಾತನೂ ಆಗಿರುತ್ತಿದ್ದನು ಎಂಬುದನ್ನು ತೋರಿಸುತ್ತದೆ. ಕವಿರಾಜಮಾರ್ಗಕಾರನು ದಂಡಿಯ ಕಾವ್ಯಾದರ್ಶವನ್ನು ಅನುಸರಿಸಿದ್ದರೂ ಗುಣ-ಮಾರ್ಗ ವಿವೇಚನೆಯಲ್ಲಿ ದಂಡಿಯ ಲಕ್ಷಣ ನಿರೂಪಣೆಯನ್ನು ಕನ್ನಡ ಕಾವ್ಯರಚನೆಗೆ ಅನ್ವಯಿಸಿ ಹೇಳಿದ್ದಾನೆ. ಲಕ್ಷಣಗಳಿಗೆ ಸ್ವಂತ ಲಕ್ಷ್ಯಗಳನ್ನು ಉದಾಹರಿಸಿ ಸ್ವಂತಿಕೆಯನ್ನು ತೋರಿಸಿದ್ದಾನೆ. ಕಾವ್ಯದೋಷ ಪ್ರಕರಣದಲ್ಲಿ ಭಾಮಹನ ಕಾವ್ಯಾಲಂಕಾರವನ್ನು ಅನುಸರಿಸಿದ್ದರೂ ಸ್ವತಂತ್ರ ವಿಚಾರಗಳನ್ನು ತಿಳಿಸಿಕೊಟ್ಟಿದ್ದಾನೆ. ದಂಡಿ ನಿರೂಪಿಸಿರುವ ೩೫ ಅಲಂಕಾರಗಳ ಜೊತೆಗೆ ೩೬ನೆಯದಾಗಿ 'ಧ್ವನ್ಯಾಲಂಕಾರ'ವನ್ನು ನಿರೂಪಿಸಿದ್ದಾನೆ. ಸಂಸ್ಕೃತ ಅಲಂಕಾರಿಕನಾದ ಉದ್ಭಟನ ಪ್ರಭಾವವನ್ನು ಇಲ್ಲಿ ಕಾಣಬಹುದು. ಈ ಕಾವ್ಯಲಕ್ಷಣ ಗ್ರಂಥದಲ್ಲಿ ಕನ್ನಡ ನಾಡು, ನುಡಿ, ಕನ್ನಡ ಭಾಷೆಯ ಸ್ಥಿತಿ, ಪೂರ್ವ ಕವಿಕಾವ್ಯ ವಿಚಾರಗಳಿವೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಪ್ರಸ್ತಾಪದ

ಸಾಂದರ್ಭಿಕ ಸಮಂಜಸತೆಯು ಗೊತ್ತಾಗುತ್ತದೆ. 'ಕಾವ್ಯ ಪ್ರಯೋಗ ಪರಿಣತಮತಿಗಳ್' ಎನ್ನುವಲ್ಲಿ ಕವಿರಾಜಮಾರ್ಗವೆಂಬ ಲಕ್ಷಣ ಗ್ರಂಥವೊಂದು ರಚನೆ ಏಕಾಯಿತು? ಎಂಬುದು ಗೊತ್ತಾಗುತ್ತದೆ. ಸಂಸ್ಕೃತದ ಅತಿವ್ಯಾಮೋಹವು ಇಲ್ಲದೆ ಕನ್ನಡದ ದುರಾಭಿಮಾನವನ್ನು ಬೆಳೆಯಗೊಡದೆ, ಸಂಸ್ಕೃತದಿಂದ ಕನ್ನಡ ಕಾವ್ಯ ಸಂಪುಷ್ಪವಾಗಬಲ್ಲ ನಿರ್ದಿಷ್ಟವೂ, ಉಪಯುಕ್ತವೂ ಆದ ಸೂಚನೆಗಳನ್ನು ಮೊದಲಿಗೆ ಶ್ರೀವಿಜಯನು ನೀಡಿದನು. ಸಂಸ್ಕೃತ ಅಲಂಕಾರವನ್ನು ಅನುಸರಿಸುತ್ತಿದ್ದರೂ ಬರೆಯುತ್ತಿರುವುದು ಕನ್ನಡ ಕವಿಗಳಿಗಾಗಿ ಎಂಬುದು ಗಮನೀಯ ಸಂಗತಿ. ಸಂಸ್ಕೃತೋಕ್ತ ಲಕ್ಷಣಗಳನ್ನು ಅನುವಾದಿಸಿ ಕನ್ನಡ ರಚನಾ ಪದ್ಧತಿಗೆ ಹೊಂದಿಕೊಳ್ಳುವಂತೆ ಉದಾಹರಣ ಪದ್ಯಗಳನ್ನು ರಚಿಸಿ, ದೋಷ-ಅದೋಷಗಳನ್ನು ನಿರ್ಣಯಿಸಿ ತೋರಿಸುವುದು ಕವಿರಾಜಮಾರ್ಗದ ವೈಶಿಷ್ಟ್ಯತೆಯಾಗಿದೆ. ಶಬ್ದ ಗುಣಗಳು ರಸವ್ಯಂಜಕಗಳೆಂಬ ತತ್ವವನ್ನು ಪ್ರತಿಪಾದಿಸಿ, ದಂಡಿ ಭಾಮಹರಿಗಿಂತ ಹೊಸ ವಿಚಾರವನ್ನು ತಿಳಿಸಿದ್ದಾನೆ. ಅಲ್ಲದೆ "ನುತಶಬ್ದಾಲಂಕಾರದೊಳ್ ಅತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ" ಎಂದು ಹೇಳಿ ಸಂಸ್ಕೃತದಲ್ಲಿಲ್ಲದ ಆದಿಪ್ರಾಸಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದಾನೆ. ಒಟ್ಟಿನಲ್ಲಿ ನೃಪತುಂಗನ ಕಾಲಕ್ಕಿಂತ ಹಿಂದಿನ ಕನ್ನಡ ಸಾಹಿತ್ಯದ ಸ್ಥಿತಿಯ ಮೇಲೆ ಇದು ಬೆಳಕು ಚೆಲ್ಲುತ್ತದೆ. "ಕಾವೇರಿಯಿಂದ ಗೋದಾವರಿ" ಎಂಬುವಲ್ಲಿ ಮಾರ್ಗಕಾರನ ಐತಿಹಾಸಿಕ ಪ್ರಜ್ಞೆಯೊಂದು ಕೆಲಸ ಮಾಡಿ, ಆ ಕಾಲದ ರಾಜಕೀಯ, ಭೌಗೋಳಿಕ ಪರಿಸರವೊಂದನ್ನು ನಮ್ಮೆದುರಿಗೆ ಇಟ್ಟಿದೆ. ಹೀಗೆ ಸಂಸ್ಕೃತದ ಲಾಕ್ಷಣಿಕ ಗ್ರಂಥವೊಂದನ್ನು ಆಧಾರವಾಗಿರಿಸಿ ರಚಿತಗೊಂಡಿರುವ ಈ ಕೃತಿ ಅನೇಕ ಸಾಂಸ್ಕೃತಿಕ ಅಂಶಗಳನ್ನೊಳಗೊಳ್ಳುತ್ತದೆ.

ಅಲ್ಲದೆ, ಮಾರ್ಗಕಾರನು ಆ ಕಾಲದ "ಪರಿಣತಮತಿಗಳ್" ಎನ್ನುವವರಿಗಾಗಿ ಸಮ ಸಂಸ್ಕೃತವನ್ನು ಬಳಸಿದನು. ಪ್ರೌಢ ಸಾಹಿತ್ಯ ಪ್ರಪಂಚ ಒಂದರ ಸರಳ ಸುಂದರ ಮಿಶ್ರಣವನ್ನು ಕವಿ ಕೊಟ್ಟಿದ್ದಾನೆ. ಎಂ.ವಿ. ಸೀತಾರಾಮಯ್ಯನವರು ಈ ಕಾವ್ಯ ರಚನಾ ಪ್ರಕ್ರಿಯೆ ಬಗ್ಗೆ ಹೀಗೆ ಹೇಳುತ್ತಾರೆ; "ಕಾವ್ಯ ವಿಚಾರದಲ್ಲಿ ಸದಭಿರುಚಿಯುಳ್ಳವರು, ಕಾವ್ಯಪರಿಚಯಉಳ್ಳವರು, ವಿಮರ್ಶನೆಯ ದೃಷ್ಟಿಯುಳ್ಳವರು ಆಗಿದ್ದರು. ಕನ್ನಡ ಜನ ಹೀಗೆ ಸಹಜವಾದ ಕಾವ್ಯ ಪ್ರಜ್ಞೆಯುಳ್ಳವರಾಗಿದ್ದರು. ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿದ್ದಂತೆ ಆಚಾರ್ಯ ಸ್ಥಾನದಲ್ಲಿ ನಿಂತು ಕಾವ್ಯ ರಚನೆಯ ವಿಷಯದಲ್ಲಿ ಸರಿಯಾದ ಮಾರ್ಗದರ್ಶನ ಮಾಡುವವರು ಇರಲಿಲ್ಲ. ಕನ್ನಡದಲ್ಲಿ ಕಾವ್ಯಶಾಸ್ತ್ರ ಪರಿಣಿತರಾಗಿದ್ದ 'ಪೂರ್ವಾಚಾರ್ಯರು' ಆಗಿ ಹೋಗಿದ್ದರು. ಲಕ್ಷಣ ಗ್ರಂಥವೊಂದು ಇರಲಿಲ್ಲ". ಈ ಕೃತಿಯು ಅಂದಿನ ಸಾಂಸ್ಕೃತಿಕ ಪರಿಸ್ಥಿತಿಯನ್ನು ಎತ್ತಿತೋರಿಸುತ್ತದೆ. ಸಂಸ್ಕೃತ ಅಥವಾ ಅಭಿಜಾತ ಪರಂಪರೆಯವರೂ ಕನ್ನಡ ಪರಂಪರೆಯನ್ನು ಎತ್ತಿ ಹಿಡಿಯಲು ತೋರುತ್ತಿದ್ದ ಭಾವ ಈ ಕೃತಿಗನ್ನಡಿಯ ಹಿಂದಿದೆ. ಕೃತಿಗಳು ರಚನೆಯಾಗುತ್ತಿದ್ದವೇ ವಿನಃ ಅನ್ವಯಿಕ ಸಿದ್ಧಾಂತವಿರಲಿಲ್ಲ. ಮತ್ತೆ ಇಲ್ಲಿ ಮಾರ್ಗಕಾರನು ಸಮ ಸಂಸ್ಕೃತವನ್ನು ಪ್ರಯೋಗಿಸಿ ಸಂಸ್ಕೃತ ಪದಗಳನ್ನು ಬಳಸಿಕೊಂಡಿದ್ದಾನೆ. ಆ ಕಾಲದ ಅಭಿಜಾತ ಸಂಸ್ಕೃತಿಯ ಲಕ್ಷಣ ಗ್ರಂಥ ಇದಾಗಿರಬಹುದೇ ಎಂಬ ಸಂಶಯ ನಮ್ಮ ಎದುರಿಗೆ ಬರುತ್ತದೆ.

ಸಮಸಂಸ್ಕೃತಂಗಳೊಳ್ ಸ
ಯ್ತಮರ್ವಿರೆ ಕನ್ನಡಮನರಿದು ಪೇಳ್ಗೆಂಬುದಿವಾ
ಗಮಕೋವಿದ ನಿದಿತ ಮಾ
ರ್ಗವಿಂದಂ ಬೆರಸಲ್ಕಮಾಗವೀ ಸಕ್ಕದದೊಳ್ .

ಬೆರಸಿರೆ ಕನ್ನಡದೊಳ್ ಬಂ
ಧುರಮಾಗದು ಕಾವ್ಯರಚನೆ ಪೇಳ್ದೊಡೆ ಪೀನಂ
ಪರುಷತರಮಕ್ಕುಮೊತ್ತುಂ
ಗರಡೆಯ ಮದ್ದಳೆಯ ಜರ್ಝರ ಧ್ವನಿಗಳಿವೋಲ್

ವಿವಿಧ ಸಮಸಂಸ್ಕೃತೋವಿತ
ಪದಂಗಳೊಳ್ ಪ್ರವಿದು ಬೆರಸಿ ಬರೆ ಕನ್ನಡದೊಳ್
ಮುದಮನವುತರ್ಕುಮತಿಶಯ
ಮೃದಂಗ ಸಂಗೀತಕಾದಿ ಮಧುರರವಂಬೋಲ್.

ನೆಗಳ್ದುರ್ದ ಕನ್ನಡಂಗಳೊ
ಳಗಣಿತ ಗುಣವಿದಿತ ಸಂಸ್ಕೃತೋಕ್ತಕ್ರಮಮಂ
ಬಗೆದೊಂದು ಮಾಡಿ ಪೇಳ್ದೊಡೆ
ಸೊಗಯಿಸುಗಂ ಕಾವ್ಯಬಿಂಧಮೆಂದುಮನಿಂದ್ಯಂ.

ತರುಸಂದಾ ಸಕ್ಕದಮುಮ
ನರಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುತು ಬೆರಸಿದೊಡೆ ವಿರಸಂ
ಮರುಗುವ ಪಾಲ್ಗಳೆಯ ಪನಿಗಳಿಂ ಬೆರೆಸಿದವೋಲ್

ಮೇಲಿನ ಪದ್ಯಗಳನ್ನು ನೋಡಿದಾಗ ಕನ್ನಡ-ಸಂಸ್ಕೃತ ಹದವಾಗಿ ಬೆರೆತ ಪಾಕ ಚಿತ್ರಣ ನಮ್ಮ ಕಣ್ಣೆದುರಿಗೆ ಬರುತ್ತದೆ. ಕನ್ನಡದ ಲಾಕ್ಷಣಿಕ ಗ್ರಂಥವಾದರೂ ಅದರಲ್ಲಿ ಸಂಸ್ಕೃತದ ಸಂದರ್ಭ ಎದ್ದು ತೋರುತ್ತದೆ. ಕವಿಯೊಬ್ಬ ರಾಜಮಾರ್ಗವೆನಿಸಿದ ಅರ್ಥಾತ್ ಮಾರ್ಗಿಕಾವ್ಯವಾದ ಸಂಸ್ಕೃತವನ್ನು ದೇಸಿಯಾಗಿ ಮಾರ್ಪಡಿಸುತ್ತಲೇ ಮಾರ್ಗ ದೇಸಿಗಳ ಸಮನ್ವಯತೆಯನ್ನು ಸಾಧಿಸಿರುವುದು ಈ ಕಾವ್ಯದ ಲಕ್ಷಣವಾಗಿದೆ. ಕವಿಯೂ-ರಾಜನೂ ಸೇರಿ ರಚಿಸಿರಬಹುದಾದ ಮಾರ್ಗ ಕಾವ್ಯ ಇದಾಗಿದೆ. ಈ ಕೃತಿಯ ಇನ್ನೊಂದು ಲಕ್ಷಣವೆಂದರೆ; ಮಾರ್ಗ ದೇಶಿಗಳ ಜೊತೆಗೆ ಜೈನಧರ್ಮದ ಪ್ರಾಚುರ್ಯವೂ ಕಂಡುಬರುತ್ತದೆ.

ಚತುರ್ಮುಖ ಮುಖಾಂಭೋಜವನ ಹಂಸ
............. ನಿತ್ಯಂ ಸರ್ವ ಶುಕ್ಲಾ ಸರಸ್ವತಿ ॥

ಶ್ರೀವಿಶದವರ್ಣೇ ಮಧುರಾ
ರಾವೋಚಿತೆ ಚತುರರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್.

ದಂಡಿಯಲ್ಲಿ ಸರಸ್ವತಿ ಬ್ರಹ್ಮಪತ್ನಿ ಎಂಬ ವೈದಿಕ ಕಲ್ಪನೆಯಿದ್ದರೆ ಜೈನಕವಿ ಶ್ರೀವಿಜಯನಲ್ಲಿ ಅದು ಬೇರೆ ರೂಪವನ್ನು ಪಡೆದಿದೆ. ದಂಡಿಯ ಪದ್ಯವನ್ನು ಶ್ರೀವಿಜಯ ಜೈನಧರ್ಮಕ್ಕೆ ತಕ್ಕಂತೆ ತಿರುಗಿಸಿಕೊಂಡಿದ್ದಾನೆ. ಮೂಲಪದ್ಯ ಶ್ಲೋಕದಲ್ಲಿದ್ದರೆ ಮಾರ್ಗಕಾರ ಕಂದವನ್ನು ಬಳಸಿದ್ದಾನೆ. ಶ್ಲೋಕದ ಸಂವಾದಿಯಾಗಿ ಕಂದ ಬಳಕೆಯಾಗಿರುವುದು ಗಮನಿಸತಕ್ಕ ಸಂಗತಿ.

ಪ್ರಾಚೀನ ಸಾಹಿತ್ಯಕ್ಕೆ ಪ್ರೇರಣೆ, ಪ್ರಚೋದನೆಗಳು ಒದಗಿದ್ದು, ವಸ್ತು ಪೂರೈಕೆಯಾದದ್ದು ವಿಶೇಷವಾಗಿ ಸಂಸ್ಕೃತ, ಪ್ರಾಕೃತ ಸಾಹಿತ್ಯಗಳಿಂದ. ಜೈನ ಸಾಹಿತ್ಯವಂತೂ ಪ್ರಾಕೃತವನ್ನು ಹೆಚ್ಚು ಬಳಸಿಕೊಂಡಿದೆ. ಕನ್ನಡ ಸಾಹಿತ್ಯವು ಸಂಸ್ಕೃತಕ್ಕೆ ಋಣಿಯಾಗಿದ್ದು, ದೇಶಿ ಸಂಸ್ಕೃತಿಯನ್ನು ಕಳೆದು ಹಾಕದೆ ಗುಣಾತ್ಮಕವಾಗಿ ಅಭಿವೃದ್ಧಿ ಹೊಂದಿದೆ. ಪ್ರಾಚೀನ ಕನ್ನಡ ಸಾಹಿತ್ಯವು ಧರ್ಮದೊಂದಿಗೆ ತಳುಕು ಹಾಕಿಕೊಂಡಿದೆ. ವಿವಿಧ ಧಾರ್ಮಿಕ ಒತ್ತಾಸೆಗಳಿಗೆ ಪರಿಸ್ಪಂದಿಸಿದ ಇದಕ್ಕೆ ಧಾರ್ಮಿಕ ಪರಿವೇ ಅತಿಶಯವಾಗಿದೆ. ಇ.ಪಿ.ರೈಸ್ ಅವರ ಹೇಳಿಕೆಯಂತೆ ''ಕನ್ನಡ ಲೇಖಕರ ಆಸಕ್ತಿ ಬಹುಮಟ್ಟಿಗೆ ಧಾರ್ಮಿಕವಾದುದೆಂಬುದು ಗಮನಾರ್ಹ. ಪ್ರಾಚೀನ ಸಾಹಿತ್ಯದ ಒಂದು ಪ್ರವೃತ್ತಿ ಪದ್ಯಾತ್ಮಕ ಅಭಿವ್ಯಕ್ತಿ. ಅದು ಈ ಕಾಲದ ಕವಿಗಳ ವೈಶಿಷ್ಟ್ಯವಾಗಿದೆ. ಕನ್ನಡ ಸಾಹಿತ್ಯ ನಿರ್ಮಾಣಕ್ಕೆ ಜೈನ ಕವಿಗಳ ಕೊಡುಗೆ ಅನನ್ಯವಾಗಿದೆ''. ಈ ಅಂಶವನ್ನು ಆಧುನಿಕ ವಿಮರ್ಶಕರು ಹಲವು ಬಗೆಗಳಲ್ಲಿ ಗುರುತಿಸಿ ವ್ಯಾಖ್ಯಾನಿಸಿದ್ದಾರೆ.

ಸಂಸ್ಕೃತದಿಂದ ಬಂದ ಚಂಪೂ ಎನ್ನುವ ಬಗೆಯನ್ನು ಸಂಸ್ಕೃತದಿಂದ ಆಯ್ದುಕೊಂಡು ಈ ಕಾಲದ ಕವಿಗಳು ರಚನೆ ಮಾಡಿದ್ದಾರೆ. ವರ್ಣವೃತ್ತಗಳು ಸಂಸ್ಕೃತ ಮೂಲವಾದವು. ಇದರ ಬಳಕೆಗೆ ಕಾರಣ ಜೈನ ಕವಿಗಳು ಪ್ರಾಕೃತ ಮೂಲದಿಂದ ಕಥಾ ವಸ್ತುವನ್ನು ಆಯ್ದುಕೊಳ್ಳುವುದು. ಕಂದ ಪ್ರಾಕೃತದ ಮೂಲಕ ಸಂಸ್ಕೃತದಿಂದ ಬಂದದ್ದು. ಚಂಪೂ ಕವಿಗಳು ರಾಜಾಸ್ಥಾನಗಳಲ್ಲಿ ವಿದ್ವಜ್ಜನಕ ಮೆಚ್ಚುಗೆಗಾಗಿ ಕೃತಿ ರಚನೆ ಮಾಡಿದರು. ಕೃತಿಗಳ ನಾಯಕರು ಅಸಾಮಾನ್ಯ, ಅಪ್ರಾಕೃತ ವ್ಯಕ್ತಿಗಳಾಗಿದ್ದರು. ''ಪಂಡಿತರು ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರ ಕೇಳ್ವೊಡೆ ಡುಂಡುಚಿಯೆ ? ಬೀದಿವ ಯೆ? ಬೀರನ ಕತೆಯೆ?'' ಎಂಬ ಮಧುರನ ಪ್ರಶ್ನೆ ಔಚಿತ್ಯಪೂರ್ಣ ಪ್ರಶ್ನೆಯಾಗಿದೆ.

ಅಷ್ಟಾದಶ ವರ್ಣನೆಗಳು, ಕ್ಲಿಷ್ಟತೆ, ವಿದಗ್ಧತೆ, ಚಮತ್ಕಾರ, ಪ್ರೀತಿ, ಕವಿ ಸಮಯ, ಬಾಹುಳ್ಯ ಮುಂತಾದ ಅಂಶಗಳಲ್ಲಿ ಸಂಸ್ಕೃತ ಕೃತಿಗಳನ್ನೇ ಕನ್ನಡ ಕವಿಗಳು ಅನುಸರಿಸಿದರೂ ಕೂಡ, ಅಲ್ಲಲ್ಲಿ ಸ್ವಂತಿಕೆಯನ್ನು ಪ್ರದರ್ಶಿಸಿದ್ದಾರೆ. ಜನಜೀವನ ಚಿತ್ರಣಕ್ಕಿಂತ ಆಶ್ರಯದಾತ ವ್ಯಕ್ತಿಯನ್ನು ಪೌರಾಣಿಕ ನಾಯಕನೋರ್ವನಿಗೆ ಸಮೀಕರಿಸುವ ಮೂಲಕ ಪುರಾಣಧರ್ಮವನ್ನು ಕಾವ್ಯಧರ್ಮವಾಗಿ ಪರಿವರ್ತಿಸಿ ಕೊಳ್ಳುವುದು ಆ ಕಾಲದ ಕೃತಿಗಳಲ್ಲಿ ಧಾರಾಳವಾಗಿ ಕಂಡುಬರುತ್ತದೆ. ಕೇವಲ ನಾಯಕನಷ್ಟೇ ಅಲ್ಲದೆ, ಕಾವ್ಯದ ಸಂವಿಧಾನ, ರಚನಾ ಕೌಶಲ್ಯ, ವಸ್ತು ಎಲ್ಲವನ್ನು ಪುರಾಣಧರ್ಮದಿಂದ ಕಾವ್ಯಧರ್ಮವಾಗಿ ಪರಿವರ್ತಿಸಿಕೊಂಡಿರುವುದೇ ಆ ಕಾಲದ ಒಂದು ದೊಡ್ಡ ಸಾಂಸ್ಕೃತಿಕ ಪರಿವರ್ತನೆ (ಅನುವಾದ). ಕನ್ನಡ ಸಾಹಿತ್ಯ ಸಂದರ್ಭದ ಕೃತಿಗಳು ಸಾಹಿತ್ಯಕವೂ ಹೌದು, ಸಾಂಸ್ಕೃತಿಕವೂ ಹೌದು. ಮಾರ್ಗ ಸಾಹಿತ್ಯ ಪ್ರಕಾರ ಒಂದು ದೇಶಿ ಸಾಹಿತ್ಯ ಚಿಂತನೆಯಡಿಯಲ್ಲಿ ಚಂಪೂ ಕಾವ್ಯವಾಗಿ ಪಡಿಮೂಡಿವೆ. ಅನಂತರ ಇದು ಷಟ್ಪದಿ, ರಗಳೆ, ಸಾಂಗತ್ಯಗಳ ರೂಪದಲ್ಲಿ ಪರಿವರ್ತನೆಗೊಂಡಿದೆ. 'ಉಪದೇಶಂಗೈದು ಕಾವ್ಯಚ್ಛಲವಿನಖಿಳ ಧರ್ಮಂಗಳಂ'' ಎಂಬ ಹೇಳಿಕೆ ಇಡೀ ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಅನ್ವಯಿಸಬಹುದಾದ ಸೂತ್ರ. ಇದರಂತೆ ''ಜನ(ನಿ)ತಾಂತರ್ದೃಷ್ಟಿ'' ಎಂಬ ಉಕ್ತಿಯು ಔಚಿತ್ಯಪೂರ್ಣ. ಕಾರಣ ಆ ಕಾಲದ ಕೃತಿಗಳೆಲ್ಲವೂ ವೈದಿಕ ಸಂಸ್ಕೃತಿಯಿಂದ ಜೈನ ಸಂಸ್ಕೃತಿಗೆ ಅನುವದಿತವಾಗಿವೆ. ಅನಂತರದ ಘಟ್ಟಗಳಲ್ಲಿ ವೈದಿಕ ಸಂಸ್ಕೃತಿ ಯಿಂದ ವೀರಶೈವ ಸಂಸ್ಕೃತಿಗೆ ಅನುವಾದಗೊಂಡಿವೆ. ನಂತರ ವೈದಿಕ ಸಂಸ್ಕೃತಿಯಿಂದ ವೈದಿಕ ಚಿಂತನೆಯಿಂದ ಭಿನ್ನವಾದ ಭಕ್ತಿ ಪರಿಕಲ್ಪನೆಗೆ ಅನುವಾದಿತವಾಗಿವೆ. ಹೀಗೆ ಒಟ್ಟಿನಲ್ಲಿ ಆ ಕಾಲಘಟ್ಟದ ಕೃತಿ ರಚನೆಗಳೆಲ್ಲಾ ಧಾರ್ಮಿಕ ಅನುವಾದಗಳಲ್ಲ, ಸಾಹಿತ್ಯಿಕ ಅನುವಾದಗಳು ಅಲ್ಲ. ಆದರೆ ಸಾಂಸ್ಕೃತಿಕ ಅನುವಾದಗಳು. ಆಯಾ ಪರಿಸರಕ್ಕೆ ತಕ್ಕ ಪ್ರೌಢಪೂರ್ಣ, ಅನುಭವವೇದ್ಯ ಸಾಂಸ್ಕೃತಿಕತೆಯನ್ನು ಬಿಂಬಿಸಿದ ಅದ್ಭುತ ಕಲಾ ಸೃಷ್ಟಿಯಾಗಿ ಈ ಅನುವಾದಗಳು ಮೂಡಿಬಂದಿವೆ. ಪ್ರಾಚೀನ ಸಾಹಿತ್ಯದ ಕೃತಿಗಳನ್ನು ಅವಲೋಕಿಸಿದಾಗ ಸಾಂಸ್ಕೃತಿಕ ಒತ್ತಾಸೆಗಳು, ಪಾರಂಪರಿಕ ಅನಿವಾರ್ಯಗಳು ಹೇಗೆ ಕೃತಿಯೊಂದನ್ನು ಸಾಂಸ್ಕೃತಿಕ ಪರಿವರ್ತನೆಯಲ್ಲಿ ತೊಡಗಿಸಿದೆ ಎಂಬುದು ಕಣ್ಣಿಗೆ ಕಾಣಿಸುವಷ್ಟು ಸ್ಪಷ್ಟವಾಗಿಸಿದೆ. ಹಾಗಾಗಿ ವಸಾಹತುಶಾಹಿ ಕಾಲಘಟ್ಟಕ್ಕೆ ಪೂರ್ವವಾದ ಕೃತಿಗಳೆಲ್ಲವೂ ಸಾಂಸ್ಕೃತಿಕ ಅನುವಾದಗಳಾಗಿವೆ. ಆ ಕಾಲದ ಇಬ್ಬರು ಕವಿಗಳು ಆಡಿರುವ ಮಾತುಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

ವಸುಭಾಗಭಟ್ಟ ಕೃತಿಯಂ  
ವಸುಧಾಧಿಪ ಹಿತಮನಖಿಲ ವಿಭುಧಸ್ತುತಮಂ  
ಪೊಸತಾಗಿರೆ ವಿರಚಿಸುವೆಂ  
ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ.

ಎಂದು ದಾಕ್ಷಿಣಾತ್ಯ ಸಂಪ್ರದಾಯದ ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರವನ್ನು ದುರ್ಗಸಿಂಹನು ಅನುವಾದಿಸಿದ್ದಾನೆ. ಈ ಪಂಚತಂತ್ರ ನೇರ ಅನುವಾದವೇ ಅಥವಾ ಅಲ್ಲವೇ ಎಂಬುದನ್ನು ಹೇಳುವುದು ಕಷ್ಟವೆನಿಸಿದರೂ ''ವಸುಭಾಗಭಟ್ಟ ಕೃತಿಯಂ...... '' ಎಂದು ಹೇಳಿಕೊಂಡಿರುವುದರಿಂದ ಅವನ ಕೃತಿ ವಸುಭಾಗಭಟ್ಟನ ಕೃತಿಯ ಅನುವಾದವೇ ಎಂದು ಹೇಳಬಹುದು. ''ಪೊಸತಾಗಿರೆ'' ಎಂಬ ಶಬ್ದದಿಂದ ದುರ್ಗಸಿಂಹನು ಸಾಕಷ್ಟು ಸ್ವಾತಂತ್ರ್ಯವಹಿಸಿದ್ದಾನೆಂದು ಗೊತ್ತಾಗುತ್ತದೆ.

ನಯಸೇನನು ಧರ್ಮಾಮೃತದಲ್ಲಿ;

ಪೊಸಗನ್ನಡದಿಂ ವ್ಯಾವ ।
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ॥
ತಿಸಿಕೂಡಲಾರದಕ್ಕಟ ।
ಮಿಸುಕಾದ ಸಕ್ಕದ ಮನಿಕ್ಕುವವನುಂ ಕವಿಯೇ ? ॥

'ಇಕ್ಕುವವವನು' ಎಂಬ ವ್ಯವಹಾರಿಕೆ ಭಾಷೆಯ ಪ್ರಯೋಗವನ್ನು ಉಪಯೋಗಿಸಿದ್ದಾನೆ. ಇದು ಪ್ರಾಚೀನ ಗ್ರಾಂಥಿಕ ಭಾಷೆಯಲ್ಲಿ ಹೊಸ ರೂಪವಾಗಿ ಕಾಣುವುದರಿಂದ ಇದಕ್ಕೆ ಹೊಸಗನ್ನಡವೆಂಬ ಹೆಸರುಂಟಾಯಿತು. ಮುಂದೆ ಇದೇ ಪ್ರಾಯೋಗಿಕ ಭಾಷೆಯಾಗಿ ಬಂದಿತು. ಇದಕ್ಕೆ ಶಬ್ದಮಣಿ ದರ್ಪಣದ ೪೮೧ನೆಯ ಸೂತ್ರ ಸಾಕ್ಷಿ (ವಾಗ್ಭೂಷಣ: ಸಂ.೨೩, ಸಂಚಿಕೆ ೬, ಸೆಪ್ಟಂಬರ್ ೧೯೧೮). ಪೊಸಗನ್ನಡದಿಂ ವ್ಯಾವರ್ಣಿಸುವೆ ಎಂಬ ಹೊಸಪದವೊಂದನ್ನು ಕವಿ ಬಳಸಿದ್ದಾನೆ. ಕಥೆಯನ್ನು ಹೊಸಗನ್ನಡದಲ್ಲಿ ಹೇಳುವೆ ಎಂಬುದನ್ನು ಕವಿ ವ್ಯಾವರ್ಣಿಸುವೆ ಎಂದಿದ್ದಾನೆ. ಇದರಿಂದ ಆ ಕಾಲಕ್ಕೆ ಹಳೆಯ ಗ್ರಂಥಗಳನ್ನು ಹೊಸದಾಗಿ ಹೇಳುವ ಪ್ರಕ್ರಿಯೆಯೊಂದು ನಡೆಯುತ್ತಿತ್ತು. ಹೊಸತಾಗಿರೆ ಎಂಬುದು ಈ ಕ್ರಿಯೆಗೆ ಸಹಕಾರಿ ಅಂಶವೆನಿಸಿದೆ.

ಪ್ರಾಚೀನ ಕನ್ನಡ ಸಾಹಿತ್ಯಲೋಕದ ಅದ್ಭುತ ಸೃಷ್ಟಿ ಪಂಪ. ಎರಡನೆಯ ಜಿನಸೇನನಿಂದ ಸಂಸ್ಕೃತದಲ್ಲಿ ರಚಿತವಾದ ಪೂರ್ವ ಪುರಾಣವನ್ನೇ ಆಧಾರವಾಗಿಟ್ಟುಕೊಂಡು ' ಆದಿ ಪುರಾಣ'ವನ್ನು ರಚಿಸಿದನು. ಅದರಂತೆ ವ್ಯಾಸಭಾರತವನ್ನು ಆಧಾರವಾಗಿಸಿ (ಆಕರವಾಗಿಸಿ)ಕೊಂಡು ಪಂಪಭಾರತ ಅಥವಾ ವಿಕ್ರಮಾರ್ಜುನ ವಿಜಯವನ್ನು ರಚಿಸಿದನು. ''ವ್ಯಾಸಮುನೀಂದ್ರರುಂದ್ರ ವಚನಾಮೃತ ವಾರ್ಧಿಯ ನೀಸುವೆನ್'' ಎಂಬುದರಿಂದ ವ್ಯಾಸಭಾರತವೇ ಪಂಪನಿಗೆ ಮೂಲವೆಂಬುದರಲ್ಲಿ ಸಂಶಯವಿಲ್ಲ. ವ್ಯಾಸಕೃತ ಸಂಸ್ಕೃತ ಮಹಾಭಾರತ ಒಂದು ಸಂಕೀರ್ಣ ಕೃತಿ. ಡಿ. ಎಲ್. ನರಸಿಂಹಾಚಾರ್ ಅವರು ಹೇಳುವಂತೆ " Pampa converts the jungle of the Mahabarata in to a park''. ಧರ್ಮ, ಇತಿಹಾಸ, ಕಾವ್ಯ ಇನ್ನೂ ಮೊದಲಾದ ವಿಷಯಗಳನ್ನು ಒಳಗೊಂಡ ಮಹಾಭಾರತವು ಒಂದು

ಗೊಂಡಾರಣ್ಯ. ಅದನ್ನು ಉದ್ಯಾನವನವಾಗಿ ಪರಿವರ್ತಿಸಬೇಕೆಂಬುದು ಕವಿಯ ಆಶಯ. ಈ ಆಶಯವನ್ನೇ ಕವಿ ಸ್ವತಃ ಹೇಳಿಕೊಂಡಿದ್ದಾನೆ. ''ಕತೆ ಪಿರಿದಾದೊಡಂ ಕತೆಯ ಮೆಯ್ಗೆಡಲೀಯದೆ ಮುಂ ಸಮಸ್ತ ಭಾರತನಪೂರ್ವಮಾಗೆ'' ಎಂದು ಇಲ್ಲಿ ಸಮಸ್ತ ಎಂಬ ಪದ ಎರಡು ಅರ್ಥಗಳನ್ನು ಕೊಡುತ್ತದೆ. ಸಂಪೂರ್ಣ ಮತ್ತು ಸಂಗ್ರಹಿಸಿದ್ದು ಎಂದು ಈ ಎರಡೂ ಅರ್ಥಗಳೂ ಇಲ್ಲಿ ಗ್ರಹೀತ. ಇಂತಹ ಸಮಸ್ತ ಭಾರತವನ್ನು ಕತೆ ಮುಕ್ಕಾಗದಂತೆ ಮೂಲವನ್ನು ಸಂಕ್ಷೇಪಿಸಿ ನಿರೂಪಸಿದ್ದು ಪಂಪನ ಸಾಂದರ್ಭಿಕ ಅಗತ್ಯತೆ ಕೂಡ. ಮೂಲ ಭಾರತವನ್ನು ಪರಿವರ್ತಿಸುವಲ್ಲಿ ಪಂಪ ತಳೆದ ಧೋರಣೆಗಳು ಇವು. ''ವರ್ಣಕಂ ಕತೆಯೊಳೊಡಂಬಡಂ ಪಡೆಯೆ'' ಮತ್ತು ''ಬೆಳಗುವೆನಿಲ್ಲಿ ಲೌಕಿಕಮನ್'' ಎಂಬ ಉಕ್ತಿಗಳು ಪಂಪನ ದೃಷ್ಟಿ ಲೌಕಿಕ ಮತ್ತು ಕಲಾನಿಷ್ಠ ಎಂಬುದನ್ನು ತಿಳಿಸಿಕೊಡುತ್ತವೆ. ವ್ಯಾಸಭಾರತದಲ್ಲಿ ಕಾವ್ಯೇತರವಾದ ಅಂಶಗಳು, ಅದರ ಕಾವ್ಯತ್ವವನ್ನು ಹಿಂದೆ ಸರಿಸಿವೆ. ಇಂತಹ ತೀರ ಅನವಶ್ಯಕ ಎನಿಸುವಂತಹ ಅಂಶಗಳನ್ನು ಹೊರಗುಳಿಸಿ ಮಾನವೀಯ ಸ್ವಾರಸ್ಯವುಳ್ಳ ಕಾವ್ಯವನ್ನಾಗಿಸುವುದು ಪಂಪನ ಆಶಯ. ಅತಿಮಾನುಷ ವ್ಯಕ್ತಿ ಚಿತ್ರದಿಂದ ದೂರ ಉಳಿದು ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವುದು ಪಂಪನ ಕಾವ್ಯದ ವಿವಕ್ಷೆಯಾಗಿದೆ. ಪಂಪನ ಲೌಕಿಕ ದೃಷ್ಟಿಯಿಂದ ಸೂತ್ರಧಾರಿ ಶ್ರೀಕೃಷ್ಣ ಪಾತ್ರಧಾರಿಯಾಗಿ ಕಂಗೊಳಿಸಿದ್ದಾನೆ. ಕತೆಯ ಮೆಯ್ಗೆಡಲೀಯದೆ ಎನ್ನುತ್ತಲೇ ಅರ್ಜುನನ್ನು ಅರಿಕೇಸರಿಯಾಗಿಸಿದ ಬಗೆ, ಆ ಕಾಲದ ಅಗತ್ಯತೆಯೂ ಹೌದು. ಪಂಪಯುಗ ವೀರಯುಗ. ಆ ಯುಗಧರ್ಮಕ್ಕೆ ಅನುಗುಣವಾದ ಕ್ಷಾತ್ರಿಯ ತೇಜಸ್ಸಿಗೆ ಪೂರಕವಾದ ತತ್ವ ಆ ಅನುಸೃಷ್ಟಿಯಲ್ಲಿ ಕಂಡುಬಂದಿದೆ. ಅನುವಾದವೆನ್ನುವುದು ಕೇವಲ ಭಾಷಾಂತರವಾಗಬೇಕಿಲ್ಲ. ಅದು ಅನುಸೃಷ್ಟಿಯೂ ಹೌದು ಎಂಬ ಭಾರತೀಯ ತಾತ್ವಿಕ ಚೌಕಟ್ಟನ್ನು ತನ್ನ ಕಾವ್ಯ ಭಾಷೆಯಲ್ಲಿ ವ್ಯಕ್ತಪಡಿಸಿದವನು ಪಂಪ. ಕವಿರಾಜಮಾರ್ಗದಿಂದಲೇ ಕೃತಿ ಪ್ರಭುನಿಷ್ಠವೋ, ಭಾಷಿಕ ಹಿನ್ನೆಲೆಯಲ್ಲಿ ಕನ್ನಡದ ಪ್ರೌಢತ್ವವನ್ನು ಎತ್ತಿ ಹಿಡಿಯುವ ಪ್ರಯತ್ನವೋ ಎಂಬ ಗೊಂದಲವು ಪ್ರಾರಂಭವಾಯಿತು. ಈ ಗೊಂದಲದ ನೆಲೆಯಲ್ಲಿಯೇ ಪಂಪನ ಕೃತಿಗಳಾದಿಯಾಗಿ ಮೂಡಿ ಬಂದ ಕೃತಿಗಳು ಇದೇ ಬಗೆಯಾದ ಸಾಂಸ್ಕೃತಿಕ ಸಂಘರ್ಷವನ್ನು ಹುಟ್ಟು ಹಾಕುತ್ತವೆ. ಆಶ್ರಯದಾತನ ಗುಣಗಾನ ಈ ಕೃತಿಗಳ ವೈಶಿಷ್ಟ್ಯ. ಪೌರಾಣಿಕ ಹಿನ್ನೆಲೆಯಿಲ್ಲದೇ ಸ್ವತಂತ್ರ ಕೃತಿಯೊಂದು ಬಹುಕಾಲ ಬಾಳುವ ಸ್ಥಿತಿ ಇಲ್ಲದಿರುವುದು ಸಾಂಸ್ಕೃತಿಕ ಬದಲಾವಣೆಯ ಪ್ರಮುಖ ಘಟ್ಟವಾಗಿದೆ. ಸಾಂಸ್ಕೃತಿಕ ವಿನ್ಯಾಸವನ್ನು ಅರ್ಥೈಸಿಕೊಂಡು, ಸೃಜನಶೀಲವಾಗಿ ಈಗಾಗಲೇ ಇರುವ ಕೃತಿಯೊಂದನ್ನು ಬಳಸುವ ಬಗೆ ಈ ಅನುವಾದದಲ್ಲಿ ಕಂಡುಬಂದಿದೆ. ಪುರಾಣದ ಆದರ್ಶಪ್ರಿಯತೆ, ರಾಜಾಶ್ರಯವನ್ನು ನೆಚ್ಚಿದಾಗಲೂ ಸ್ವಾತಂತ್ರ್ಯಕ್ಕೆ ಹಂಬಲಿಸುವ ಮನಸ್ಥಿತಿ ಪಂಪನ ಕಾವ್ಯದಲ್ಲಿ ಎದ್ದು ಕಾಣುತ್ತವೆ.

ಕವಿರಾಜಮಾರ್ಗಕಾರನಿಂದ ಈ ಬಗೆಯ ಪ್ರಕ್ರಿಯೆ ಆರಂಭಗೊಂಡರೂ ಕೂಡ ೧೦ನೆಯ ಶತಮಾನದ ಹೊತ್ತಿಗೆ ಸಂಪೂರ್ಣ ಸ್ವಾವಲಂಬನೆಯನ್ನು ಕನ್ನಡ ಸಾಹಿತ್ಯ ಪಡೆದುಕೊಳ್ಳಲು ಪ್ರಯತ್ನಿಸುತ್ತಿತ್ತು. ಹಾಗಾಗಿಯೇ ೧೦ನೆಯ ಶತಮಾನದ ಕನ್ನಡ ಸಾಹಿತ್ಯದ ಸುವರ್ಣಯುಗವೆನಿಸಿದೆ. ಪರಂಪರಾಗತ ಕ್ರಮದಂತೆ ಅರ್ಥಾತ್ ಮಾರ್ಗಕಾರನ ಮಾರ್ಗಿಕ್ರಮದಂತೆ ಈ ಹರಿವು ಜೈನಮತ

ಪ್ರಚಾರಕವಾಗಿಯೇ ಮೈತಳೆದರೂ ಅಂದಿನ ಸಾಂಸ್ಕೃತಿಕತೆಗೆ ತನ್ನನ್ನು ಒಡ್ಡಿಕೊಳ್ಳುವುದೇ ಆಗಿದೆ. ಅನಂತನಾಥಪುರಾಣ, ಆದಿಪುರಾಣಗಳನ್ನು ಜೈನಧರ್ಮಾರ್ಥವಾಗಿ ಬರೆದರೂ, ಅದರಲ್ಲಿನ ಸಾಂಸ್ಕೃತಿಕ ಸಂದರ್ಭದ ಕೃತಿಯಾಗಿಸಿರುವುದು ಅತ್ಯಂತ ಮಹತ್ವಪೂರ್ಣ ವಿಷಯ. ಪಂಪ ಆದಿಪುರಾಣವನ್ನು ಮಹಾ ಪುರಾಣದಿಂದ ರಚಿಸಿದರೆ, ಪಂಪಭಾರತವನ್ನು ವ್ಯಾಸ ಭಾರತದಿಂದ ಆಯ್ದುಕೊಂಡ. ಎರಡೂ ಮೂಲತಃ ಧರ್ಮಗ್ರಂಥಗಳೇ ಆದರೂ ಉತ್ಪಾದನೆ ಸಾಂಸ್ಕೃತಿಕ ಸಾಹಿತ್ಯ ಕೃತಿ. ಹಾಗಾಗಿ ಈ ಕಾಲಘಟ್ಟದಲ್ಲಿ ಬಂದ ಅರ್ಥಾತ್ ವಸಾಹತುಶಾಹಿ ಕಾಲಘಟ್ಟದ ಪೂರ್ವದ ಅನುವಾದಗಳೆಲ್ಲಾ ಧಾರ್ಮಿಕವೂ ಅಲ್ಲ, ಸಾಹಿತ್ಯಿಕವೂ ಅಲ್ಲ. ಸಂಸ್ಕೃತವು ಮೂಲ ಕಥಾವಸ್ತುವನ್ನು ಆಕರವಾಗಿಸಿ ಬರೆದ ಸಾಂಸ್ಕೃತಿಕ ಅನುವಾದಗಳು. ಇವುಗಳು ನೇರ ಭಾಷಾಂತರಗಳಲ್ಲ. ಹಾಗೆಂದು ತಿರುಚಿ ಬರೆದ ಕಥೆಗಳಲ್ಲ. ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳ ಯಥಾವತ್ತಾದ ಪದಪ್ರಯೋಗಗಳಿದ್ದರೂ ಕೂಡ ಸಮಕಾಲೀನ ಸಂದರ್ಭವನ್ನು ಅವುಗಳ ಮೇಲೆ ಆರೋಪಿಸಿ ಬರೆದ, ಆ ಹಂತದಲ್ಲೂ ಸೃಜನಶೀಲತೆಯನ್ನು ತೋರಿಸಿಕೊಟ್ಟ ಅಭೂತ ಪೂರ್ವ ಅನುವಾದಗಳು ಈ ಕಾಲಘಟ್ಟದ ಕೃತಿಗಳು. ಇಲ್ಲಿನ ಕವಿಗಳು ಉದಾಹರಣೆಗಾಗಿ ಪಂಪ ತಾನು ವ್ಯಾಸಭಾರತಕ್ಕೆ ಋಣಿ ಎನ್ನುತ್ತಲೇ 'ವ್ಯಾಸನೆಂಬ ಗರ್ವಮೆನಗಿಲ್ಲ' ಎಂದು ಹೇಳುವಲ್ಲಿಯೂ ಧಾರ್ಮಿಕ ನಾಯಕನಾದ ಧರ್ಮರಾಜನನ್ನು ಬಿಟ್ಟು ವ್ಯಾಸಭಾರತವನ್ನು ಉಪಕ್ರಮಿಸಿದ್ದಾನೆ. ಅಷ್ಟೇ ಸಮಕಾಲೀನ ಸಂದರ್ಭಕ್ಕೆ ತಕ್ಕಂತೆ ವೀರಯುಗಧರ್ಮವಾಗಿ ಅರ್ಜುನನ್ನೂ, ಅರಿಕೇಸರಿಯನ್ನೂ ತಾದಾತ್ಮ್ಯಗೊಳಿಸಿ, ಕೆಲವೊಮ್ಮೆ ಕಥಾತೊಡಕುಗಳನ್ನೆದುರಿಸಿದರೂ ಅದನ್ನು ಸ್ವಪ್ರತಿಭೆಯಿಂದ ಲೌಕಿಕವಾಗಿಸಿದ್ದಾನೆ. ದುರ್ಯೋಧನನು ವ್ಯಾಸಭಾರತದಲ್ಲಿ ಖಳನಾಯಕನಾದರೂ ಜೈನಮತಾವಲಂಬಿಯಾದ ಪಂಪ ಛಲದೊಳ್ ದುರ್ಯೋಧನನೆಂದು, ದುರ್ಯೋಧನನ್ನು ಛಲದ ಪ್ರತೀಕವಾಗಿಸುತ್ತಾನೆ. ಅಲ್ಲದೆ ಅವನಲ್ಲಿಯೂ ಒಂದು ಔನತ್ಯ ಧರ್ಮವನ್ನು ಆರೋಪಿಸಿ ವ್ಯಕ್ತಿ ಚಿತ್ರಣವನ್ನು ಕೊಟ್ಟಿದ್ದಾನೆ. ಹೀಗೆ ಪಂಪನು ವ್ಯಾಸಭಾರತದ ಕ್ರಮವನ್ನು ಮುರಿದು ವಿಕ್ರಮಾರ್ಜುನ ವಿಜಯಂ ಕೃತಿ ರಚಿಸಿದ್ದಾನೆ. ವ್ಯಾಸ ಭಾರತದ ಕ್ರಮವನ್ನು ತಪ್ಪಿಸಿ ವಿಕ್ರಮನಾಗಲು ಹೊರಟಿರುವಂತೆ ತೋರುತ್ತದೆಯಾದರೂ, ಅಲ್ಲಲ್ಲಿ ಸೋತಿದ್ದಾನೆ. ಮತ್ತು ಕೆಲವುಗಳನ್ನು ಅನಾಮತ್ತಾಗಿ ಎತ್ತಿಕೊಂಡಿದ್ದಾನೆ. ಕ್ರಮವರಿದು 'ವಿಕ್ರಮ' ಸಾಧಿಸುವ ಬಗೆ ವಿಕ್ರಮಾರ್ಜುನ ವಿಜಯದಲ್ಲಿ ಕಾಣಬಹುದಾಗಿದೆ.

ಪಂಪನು ಭಾರತವನ್ನು ರಚಿಸಲು ಕೇವಲ ವ್ಯಾಸಭಾರತವನ್ನಲ್ಲದೇ ಇನ್ನುಳಿದ ಸಂಸ್ಕೃತ ಕವಿಕಾವ್ಯವನ್ನು ಸಂದರ್ಭೋಚಿತವಾಗಿ ಬಳಸಿಕೊಂಡು ವಿಕ್ರಮಾರ್ಜುನ ವಿಜಯವನ್ನು ಪರಿಪುಷ್ಟಗೊಳಿಸಿದ್ದಾನೆ. ಶ್ರೀಹರ್ಷ, ಭಾರವಿ, ಬಾಣ, ಕಾಳಿದಾಸ ಮೊದಲಾದವರ ಪದ್ಯಗಳು ಇಲ್ಲಿ ಸಂವಾದಿಯಾಗಿವೆ.

ಉದಾ : (ವಾಲ್ಮೀಕಿ ರಾಮಾಯಣ, ಅಯೋಧ್ಯಾಕಾಂಡ ೧೧೨-೧೮).

ಲಕ್ಷ್ಮೀಶ್ಚನ್ದ್ರಾದಪೇಯಾದ್ವಾ ಹಿಮವಾನ್ ವಾ ಹಿಮಂ ತ್ಯಜೇತ್ ।
ಅತೀಯಾತ್ಸಾಗರೋ ವೇಲಾಂನ ಪ್ರತಿಜ್ಞಾಮಹಂ ಪಿತುಃ ॥

ರಂಗತ್ತರಂಗೆ ವಾರ್ಧಿಚ।ಯುಗಳ್ ತಂತಮ್ಮ ಮೇರೆಯಿಂ ದಾಟು
ವೊಡಂ ॥ಗಾಂಗೇಯನುಂ ಪ್ರತಿಜ್ಞಾ । ಗಾಂಗೇಯನುಮೊರ್ಮೆ
ನುಡಿದುದಂ ತಪ್ಪುವರೇ ॥

(ಪಂಪ ಭಾರತ, ೧-೧೮).

ಮೇದಶ್ಛೇದ ಕೃಶೋದರಂ ಲಘು ಭವತ್ಯುತ್ಥಾನ ಯೋಗ್ಯಂ ವಸು ।
ಸತ್ತ್ವಾನಾಮವೆ ಲಕ್ಷ್ಯತೇ ವಿಕ್ರಿಮಚ್ಚಿತ್ತಂ ಭಯಂ ಕ್ರೋಧಯೋ ।
ಉತ್ಕರ್ಷ ಸ ಚ ಧ್ವನಿನಾಂ ಯವಿಷವೆ ಸಿದ್ಧ್ಯಂತಿ ಲಕ್ಷ್ಯೇಚಲೇ ।
ಮಿಥ್ಯೈವ ವ್ಯಸನಂ ವದಂತಿ ಮೃಗಯಾಮಿದೃಗ್ವಿನೋದಂ ಕುತಃ ॥

( ಶಾಕುಂತಲ, ೨-೫).

ಪಸಿವು ದೊರೆಕೊಳ್ಳ್ಗ ಮುಣಿಸುಗಳಿನಿಕೆಯ್ಯ್ಗ ಮಾವಂದೊಳ್ಕನಿಲ್ವಾದಮೆಯ್ಯ ।
ನಸಿಯನಾಗಿಪುದುಳಿದುವಪ್ಪುವು ಬಗೆಗೊಳಲಪ್ಪುದು ಮೃಗದ ಮೈಯ್ಯೊಳ್ ॥
ನಿಸದಮೆಸೆವುದು ಬಿಲ್ಲಾಳಿ ಬಿಲ್ಬಲ್ಮೆ ತನ್ನೊಳಿಮಿಸುತೆ ಲೇಸಪ್ಪುದು
ಬಸವವೆಂದ ಯದೇಳಿಸುವರ್ ಬೇಟೆಯಂ ಬೇಂಟೆಯೆ ಬಿನದಂಗಳಿರಸಲ್ತೇ ॥

(ಪಂಪಭಾರತ ೫-೪೭).

ಮುಚುಕುಂದ ತಲ್ಪ ಶರಣಸ್ಯ ಮಗಧಪತಿ ಶಾತಿತೌಜಸಃ ।
ಸಿದ್ಧಮಬಲ ಸಬಲತ್ವಮಹೋ ತಾವ ರೋಹಿಣೀ ತನಯ ಸಾಹಚರ್ಯತಃ ॥

(ಶಿಶುಪಾಂದಧ, ಪು. ೧೫-೨೪).

ಮರ್ದ್ದಿ ದ ಮುಚುಕುಂದನೆಂಬವನ। ಮರ್ದ್ದಿ ವೊಕ್ಕುದನಿಮದು ನೀಂ ಜರಾಸಂಧಂಗಂ ॥
ಬಿರ್ದ್ದು ತೋಡಿದುದಂ ಭೂತಳಿ। ಮರ್ದ್ದಿ ಯದೆ ನೆನೆಯುವೊ ಗೋವುಗಾದುದು ಪುಸಿಯೇ ॥

(ಪಂಪಭಾರತ, ೬-೫೬)

"ಬಹಳ ವಿಸ್ತಾರವಾದ ಸಂಸ್ಕೃತ ಮಹಾಭಾರತದ ಕಥೆಯನ್ನು ಇಷ್ಟು ಅಂದವಾಗಿ ಸಂಗ್ರಹಿಸಿ, ಮುಖ್ಯವಾದ ವಿಷಯವೊಂದನ್ನೂ ಬಿಡದೆ, ಮೂಲ ಕಾವ್ಯದ ಪುನರುಕ್ತಿಗಳಿಗೂ ಕಥೆಗೆ ಅವಶ್ಯಕವಿಲ್ಲದ ಉಪಾಖ್ಯಾನಗಳಿಗೂ ಎಡೆಗೊಡದೆ, ಕಥಾಸರಣಿಯು ನಿರರ್ಗಳವಾಗಿ ಹರಿಯುವಂತೆ ರಚಿಸುವ ಕೌಶಲವು

ಪಂಪನಿಗಲ್ಲದೆ ಬೇರೊಬ್ಬನಿಗೆ ಸಲ್ಲದು. ಕಥೆಯನ್ನು ಅಲ್ಲಲ್ಲಿ ಸ್ವಲ್ಪ ಮಾರ್ಪಡಿಸಿದ್ದರೂ ಈ ಕಾವ್ಯಕ್ಕೆ ವ್ಯಾಸಭಾರತವೇ ಮೂಲವೆಂದು ತೋರುವುದು'' ಎಂದು ಕುವೆಂಪು ಅವರು ಹೇಳುತ್ತಾರೆ. (ಡಾ. ಕೆ.ವಿ. ಪುಟ್ಟಪ್ಪ, ೧೯೯೦, ಲೇಖನ: ಉಪೋದ್ಘಾತ v-ix-x/vii).

ಪಂಪಭಾರತದಲ್ಲಿ ಕವಿ ಜೈನಮತದವನಾದರೂ ಅರಿಕೇಸರಿಯ ಮತದಂತೆ ಬ್ರಾಹ್ಮಣ ಧರ್ಮವಾದ ಯಜ್ಞವನ್ನು, ಜೈನಮತ ವಿರೋಧಿಯಾದರೂ ವರ್ಣಿಸಿರುವನು. ಹಾಗಾಗಿಯೇ ವೈದಿಕ ಗ್ರಂಥಗಳಲ್ಲಿ ಒಂದಾದ ಮಹಾಭಾರತವನ್ನು ಕಥಾವಸ್ತುವಾಗಿ ತೆಗೆದುಕೊಂಡಿರಬಹುದೇನೋ ಎನಿಸುತ್ತದೆ. ಪಂಪಭಾರತ ವೈದಿಕ ಪರಂಪರೆ ಜೈನಪರಂಪರೆಯಾಗಿ ಪರಿವರ್ತಿಸಿದ ಅದ್ಭುತ ಪ್ರತಿಮೆ. ಎಲ್. ಗುಂಡಪ್ಪನವರು ಹೇಳುವಂತೆ ''ಮಹಾಭಾರತ ವೈದಿಕ ಧರ್ಮದವರಿಗೆ ಪವಿತ್ರ ಗ್ರಂಥವಾದರೂ ಜೈನನಾದ ಪಂಪನಿಗೆ ಅದು ಲೌಕಿಕ ಗ್ರಂಥವೇ. ಅದನ್ನು ಲೌಕಿಕ ದೃಷ್ಟಿಯಿಂದಲೇ ನೋಡಿ ಉದಾತ್ತವಾದ ಪುರುಷ ಗುಣಗಳನ್ನು ಮೆರೆದ ಮಹಾಪುರುಷರ ಚರಿತ್ರೆಯನ್ನೊಳಗೊಂಡು ಭಾರತ ಲೋಕಪೂಜ್ಯ ವಾಯಿತು''ಎಂದು ಅದರ ಘನತೆಯನ್ನು ಎತ್ತಿ ತೋರಿಸಿದ್ದಾನೆ. ಇದು ಈ ಶ್ಲೋಕದಿಂದ ವ್ಯಕ್ತವಾಗುತ್ತದೆ. ಚಲದೊಳ್ ಮರ್ಯೋಧನಂ, ನನ್ನಿಯೊಳ್ ಇನತನಯಂ, ಗಂಡಿನೊಳ್ ಭೀಮಸೇನಂ, ಬಂದೊಳ್ ಮದ್ರೇಸನ್, ಅತ್ಯುನ್ನತೆಯೊಳ್ ಅಮರಸಿಂಧೂದ್ಭವಂ ಚಾಪವಿದ್ಯಾ / ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ , ಧರ್ಮದೊಳ್ ನಿ / ರ್ಮಲಚಿತ್ತಂ ಧರ್ಮವೃತ್ರಿಂ ಮಿಗಲ್ ಇವರರ್ಗಳಿನೀ ಭಾರತಂ ಲೋಕಪೂಜ್ಯಂ'.

ಮಾರ್ಗಿ ಸಾಹಿತ್ಯ - ದೇಸಿ ಸಾಹಿತ್ಯಗಳನ್ನು ಮುಖಾಮುಖಿಯಾಗಿಸಿ ತನ್ನ ಅಗತ್ಯಕ್ಕೆ ತಕ್ಕಂತೆ ಮಾರ್ಗ ಸಾಹಿತ್ಯವನ್ನು ದೇಸೀ ಸಾಹಿತ್ಯದಲ್ಲಿ ತನ್ನ ಕಾವ್ಯ ರಚನೆ ಮಾಡಿದ್ದಾನೆ '' ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದೊಂದಿ ದೇಸಿಯೊಳ್। ಪುಗುವುದು ಪೊಕ್ಕ ಮಾರ್ಗದೊಳ್ ತಳ್ವುದು ತಳ್ತೊಡೆ ಕಾವ್ಯ ಬಂಧನೊಪ್ಪಗುಂ'' ಎನ್ನುತ ಕವಿ ದೇಸೀ ಶೈಲಿಯನ್ನು ಅಳವಡಿಸಿಕೊಂಡಿದ್ದಾನೆ. ಹಾಗಿದ್ದರೂ ಅನೇಕ ಪದ್ಯಗಳಲ್ಲಿ ಸಂಸ್ಕೃತ ಪದಗಳು ಸಮಾಸಗಳು ಅನವಾದಗೊಂಡಿವೆ.

ಉದಾ: ಪ್ರಚಂಡ ಲಯ ತಾಂಡವ ಕ್ಷುಭಿತಯಾಶೆ ? ಯಸ್ಯಾನಯಾ ।
ಸದ್ವಿಗ್ವಳಿಯಯಾ ಭುಮ ಸ ಗಿರಿ ಸಾಗರ ದ್ವೀಪಯಾ ॥
ಕುಲಾಲ ಕರ ನಿರ್ಭರ ಭ್ರಮಿತೆ ಚಕ್ರ ಲೀಲಾಯಿತು ।
ಸ ಸರ್ವ ಜಗತಾಂ ಗುರುರ್ಗಿರಿಸುತಾ ಪತೀ ಪಾತುನ ॥

ಮಹಾಪ್ರಲಯ ಮಾರುತೆ ಕ್ಷುಭಿತ ಪುಷ್ಕಲಾವರ್ತಕ ।
ಪ್ರಚಂಡ ಘನಗರ್ಜಿತ ಪ್ರತಿರವಾನು ಕಾರೀ ಮುಹುಃ ॥
ರವಃ ಶ್ರವಣ ಭೈರವಃ ಸ್ಥಗಿತ ರೋದಸೀ ಕಂದರಃ ।
ಕುತೋದ್ಯ ಸಮರೋದಧೇರಯಮ ಭೂತ ಪೂರ್ವೋದಯಃ ॥

(ವೇಣಿ ಸಂಹಾರ, ಅಂಕ ೩)

ದುಶ್ಶಾಸನಸ್ಯ ಹೃದಯಕ್ಷತ ಜಾಂಬು ಪಾನೇ
ದುರ್ಯೋಧನಸ್ಯ ಚ ಯಥಾ ಗದಯೋರುಭಂದೇ
ತೇಜಸ್ವಿನಾಂ ಸಮರ ಮೂರ್ಧನಿ ಪಾಂಡುವಾನಾಂ
ಜ್ಞೇಯಾ ಜಯದ್ರಥ ವಧೇಽಪಿ ತಥಾ ಪ್ರತಿಜ್ಞಾ

ಮರುಳಕ್ಕ ಮಗನ ಶೋಕದೀ
ನುರುಳ್ದಂ ಪೊಣ್ವಗನ ಪೊಣ್ಣೆ ದುಶ್ಶಾಸನನೊಳ್
ಕರತನದಿಂದೆನ್ನೊಳ ಮಾ
ಮರುತ್ಸುತಂ ಪೂಣ್ದ ಪೂಣ್ಣೆಯಂತೆ ವೊಲಕ್ಕೂ.

ಮಹಾಭಾರತವನ್ನು ಪಂಪ 'ವಿಕ್ರಮಾರ್ಜುನ ವಿಜಯವನ್ನಾಗಿ ಮಾರ್ಪಡಿಸಿದ್ದಾನೆ. ಪಾಂಡವ ರೈವರ ಕಥೆಯನ್ನು ಅರ್ಜುನನೊಬ್ಬನಲ್ಲಿ ಆರೋಪಿಸಿರುವುದು, ಆಶ್ರಯದಾತ ಅರಿಕೇಸರಿಯನ್ನು ಅರ್ಜುನನಿಗೆ ಸಮಿಾಕರಿಸಿರುವದರ ಹಿನ್ನೆಲೆ. ಅವನೇ ಹೇಳುವಂತೆ " ಈ ಕಥೆಯೊಳ್ ತಗುಳ್ಚಿ ಪೋಲಿ ಪೊಡೆನಗ ಯಾದಂದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ " ಎನ್ನುತ್ತ " ಸಂದರ್ಜುನನೊಳ್ ಪೋಲ್ವೀ ಕಥಾ ಭಿತ್ತಿಯನುನಯದಿಂ ಪೇವಿಲೆಂದೆತ್ತಿಕೊಂಡೆಂ" ಎಂದಿದ್ದಾನೆ. ಮಹಾಭಾರತ ಯುಗವನ್ನು ತನ್ನ ಯುಗವನ್ನಾಗಿ ಬೆಸೆದಿದ್ದಾನೆ.

ಅರ್ಜುನನ್ನು ನಾಯಕನನ್ನಾಗಿ ಮಾಡಿಕೊಂಡು ಅರಿಕೇಸರಿಗೆ ಅಭೇದ ಕಲ್ಪಿಸಿರುವದರಿಂದ ದ್ರೌಪದಿಯನ್ನು ಅರ್ಜುನನಿಗೆ ಮಾತ್ರ ಮಡದಿಯನ್ನಾಗಿಸುವ ಪರಿಸ್ಥಿತಿ ಪಂಪನಿಗಿದೆ. ಹಾಗಾಗಿಯೇ ಪಂಪನು ವ್ಯಾಸಭಾರತದಂತೆ ದ್ರೌಪದಿಯನ್ನು ಪಾಂಡವರೈವರಿಗೂ ಮಡದಿ ಎನ್ನದೆ "ವಿವಾಹ ಗೇಹಮಂ ಸಮೆಯಿಸಿಯದೇಂ ನಡುವವಣಾರ್ದ್ರ ಮೃತಿಕಾ ವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ ಚೆಂಬೊನ್ನೆ ಪಟ್ಟಣೆಯ ಮೇಗಣ ದುಗುಲದ ಪಸೆಯೊಳ್ ಗುಣಾರ್ಣವನನಾ ದ್ರುಪದಚೆಯನೊಡನೆ ಕುಳ್ಳಿರಿಸಿ ಹಿತ ಪುರೋಹಿತ ಪ್ರಾಜ್ಯಾಜ್ಯಾಹುತಿ ಹುತ ಹುತವಹ ಸಮಕ್ಷದೊಳ್ ಕೆಯ್ನೀರೆಳಿದು ಪಾಣಿಗ್ರಹಣಂ ಗೆಯ್ದೆ" - ಎಂದು ಹೇಳಿದ್ದಾನೆ. ಅರ್ಜುನ, ಅರಿಕೇಸರಿ ಸಮೀಕರಣ ದಿಂದಾಗಿ ಅಕ್ಷಯವಸ್ತ್ರದ ಪ್ರಸಂಗ ಪಂಪಭಾರತದಲ್ಲಿ ಇಲ್ಲ. ಅಪಮಾನದಿಂದ ದ್ರೌಪದಿಯನ್ನು ಪಾರು ಮಾಡುವುದು ಅರಿಕೇಸರಿಯ ದೃಷ್ಟಿಯಿಂದ ಅತ್ಯಗತ್ಯವಾಗಿತ್ತು. ಅರ್ಜುನನ ಪ್ರಾಧಾನ್ಯತೆಗೋಸ್ಕರವೇ ಸುಭದ್ರೆಯೂ ಕಾವ್ಯದಲ್ಲಿ ಸ್ಥಾನವನ್ನು ಪಡೆಯುತ್ತಾಳೆ. ಅಷ್ಟೇ ಅಲ್ಲ ಅರ್ಜುನನೊಡನೆ ಪಟ್ಟಕ್ಕೇ ರುತ್ತಾಳೆ. ಪಂಪ ಆಶ್ರಯದಾತನ ಸಮೀಕರಣಕ್ಕಾಗಿ ಸಾಕಷ್ಟು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ. ಅಂದಿನ ಸಮಾಜಕ್ಕೆ ತಕ್ಕಂತೆ ಪಂಪಭಾರತದಲ್ಲಿ ಸೂಳೆಗೇರಿಯ ವರ್ಣನೆಯೂ ಬರುತ್ತದೆ.

ವ್ಯಾಸಭಾರತದಲ್ಲಿ ದುರ್ಯೋಧನ ಭಯದಿಂದ ಓಡಿ ಹೋಗಿ ಮಡುವಿನಲ್ಲಿ ಅಡಗಿಕೊಂಡಂತೆ ಹೇಳಿದೆ. ಆದರೆ 'ಛಲದೊಳ್ ದುರ್ಯೋಧನ' ಎಂಬಂತೆ ಛಲವಿರುವ ವ್ಯಕ್ತಿಯಾಗಿ ಚಿತ್ರಿಸಿದ ಪಂಪ, ಸಂದರ್ಭವನ್ನು ದುರ್ಯೋಧನ ಹಿಂಸಾಪರ ವ್ಯಕ್ತಿಯಲ್ಲ, ಕ್ಷಾತ್ರ ತೇಜಸ್ಸುಳ್ಳ ಸಮರ್ಥ ವ್ಯಕ್ತಿಯನ್ನಾಗಿ ಚಿತ್ರಿಸಿದ್ದಾನೆ. ''ಎಂಬುದುಂ ನೀನುಮೆಂತುಂ ಕಾವಿಯಲ್ಲದಿರೆಯಪ್ಪೊಡಿಂದಿ ನೊಂದಿವಸಮನ್ನೆನ್ನ ಪೇಳ್ವೆ ಬೆಳಮಂತೋಪದೇಶಮಂ ಕೆಯ್ಕೊಂಡು ಕುರುಕ್ಷೇತ್ರದುತ್ತರ ದಿಗ್ಭಾಗದ ವೈಶಂಪಾಯನ ಸರೋವರದೊಳ್ ಮುಳುಗಿ.....'' ಎಂದು ಭೀಷ್ಮನಿಂದ ಜಲಮಂತ್ರೋಪದೇಶವನ್ನು ಪಡೆದು ಕಾಲವಂಚನೆಗಾಗಿ ವೈಶಂಪಾಯನ ಸರೋವರದಲ್ಲಿ ಅಡಗಿಕೊಂಡಿರುತ್ತಾನೆಂದು ಹೇಳಿದ್ದಾನೆ.

ಪಂಪಯುಗ, ಕ್ಷಾತ್ರಯುಗವಾದ್ದರಿಂದ ಸತ್ವಗುಣ ಸಂಪನ್ನನಾದ ಯುಧಿಷ್ಠಿರನನ್ನು ನಾಯಕನನ್ನಾಗಿ ಒಪ್ಪದೇ ಕ್ಷಾತ್ರ ತೇಜಸ್ಸಿನ ಅರ್ಜುನನನ್ನು ಅರಿಕೇಸರಿಯಾಗಿಸಿದ್ದಾನೆ. ಅರಿಕೇಸರಿಯು ತನ್ನ ಕಥೆಯನ್ನು ಬೆಳಗಿಸುವಂತೆ ಇತಿಹಾಸ ಕಥೆಯೊಂದನ್ನು ಬರೆಯಬೇಕೆಂದು ಕೇಳಿಕೊಂಡಿದ್ದು, ಈ ಬಗೆಯ ರಚನೆಗೆ ಪ್ರಮುಖ ಕಾರಣ. ಮೂಲತಃ ವೈದಿಕ ಪರಂಪರೆಯಲ್ಲಿದ್ದು, ಆಶ್ರಯದಾತನ ಧರ್ಮಕ್ಕೆ ಅನುಗುಣವಾಗಿಯೂ ಜೈನಧರ್ಮದ ಪ್ರಾಸಂಗಿಕತೆಯನ್ನು ಮನಗಂಡು, ಇಲ್ಲವೆ ತಾನು ಜೈನಧರ್ಮಕ್ಕೆ ಆಶ್ರಯಿಸಿ ಬರೆದ ಬಗೆ ಈ ಸಾಂಸ್ಕೃತಿಕ ಪರಿವರ್ತನೆಗೆ ಕಾರಣ.

ಪಂಪಂ ಧಾತ್ರೀವಳಿಯ ನಿ। ಳಿಂಪಮ ಚತುರಂಗ ಬಳಿ ಭಯಮಕರಾಣಂ ನಿ ॥
ಷ್ಕಂಪಂ ಲಲಿತಾಲಂಕರ ।ಣಂ ಪಂಚಶರೈಕರೂಪನಪಗತ ಪಾಪಂ ॥
ಕವಿತೆ ನೆಗ ಯಂ ನಿ ಸೆ ಜೋಳಿದ ಪಾಮಿ ನಿಜಾಧಿನಾಥನಾ ।
ಹವದೊಳಿರಾತಿ ನಾಯಕರ ಪಟ್ಟನೆ ಪಾ ಸೆ ಸಂದ ಪೆಂಪು ಭೂ ।
ಭುವವದೊಳಾಗಳುಂ ಬೆಳಗೆ ಮಿಕ್ಕಾಭಿಮಾನದ ಮಾತು ಕೀರ್ತಿಯಂ ।
ವಿವರಿಸೆ ಸಂದನೇಂ ಕರಿಯೋ ಸತ್ಕವಿಯೋ ಕವಿತಾ ಗುಣಾರ್ಣವಂ ॥

ಎಂಬ ಮಾತಿನಿಂದ ಪಂಪನು ಉದ್ದಾಮ ಕವಿಯಲ್ಲದೆ, ಪ್ರಚಂಡ ಯೋಧನು ಆಗಿದ್ದನು. ಹಾಗಾಗಿ ಕ್ಷಾತ್ರ ತೇಜಸ್ಸು ಕಾವ್ಯದಲ್ಲಿ ಹುಟ್ಟಿ ಬಂದಿದೆ. ಉದಾ: ಕಡಲುರಿಯಂತಕಾಲ ಘ...

ಆದಿಪುರಾಣವು ಜಿನಸೇನನ ಪೂರ್ವಪುರಾಣವನ್ನು ಆಕರವಾಗಿಸಿಕೊಂಡಿದೆ. ಪ್ರಾಯೋಗಿಕತೆಯ ನೆಲೆಯಲ್ಲಿ ತೀರ ಸೃಜನಶೀಲವೂ ಅಲ್ಲದ, ಭಾಷಾಂತರವೂ ಅಲ್ಲದ ಶ್ರೇಷ್ಠ ರೀತಿಯ ಅನುವಾದ. ಸಂಸ್ಕೃತ ಪೂರ್ವಪುರಾಣದಲ್ಲಿ ಅತಿ ವಿಸ್ತಾರವಾಗಿ ಚರ್ಚಿಸಿರುವ ಎಷ್ಟೋ ಮತ ಪ್ರಕ್ರಿಯೆಗಳನ್ನು, ಜನ್ಮಾಂತರ ವಿವರಗಳನ್ನು ಆದಿಪುರಾಣದಲ್ಲಿ ಅಡಕವಾಗಿ ಹೇಳಿದೆ. ಕಾವ್ಯ ದೃಷ್ಟಿ ಮುಖ್ಯವಾಗಿರುವುದರಿಂದ ಜೈನಧರ್ಮದ ಅಗತ್ಯ ವಿಷಯಗಳು ಮಾತ್ರ ಪ್ರಸ್ತಾಪಿಸಲ್ಪಟ್ಟಿವೆ. ಆದಿ ಪುರಾಣದಲ್ಲಿ ಪೂರ್ವ ಪುರಾಣದ ಸಂಸ್ಕೃತ ಪ್ರಭಾವ ಕಾಣುತ್ತವೆ.

ಆದಿಪುರಾಣ ಜಿನಾಗಮವನ್ನು ಬೆಳಗುವ ಮತಗ್ರಂಥ. ಇದು ಭವ್ಯರು ಮತತತ್ವಗಳನ್ನು ತಿಳಿದುಕೊಂಡು ಸದ್ಗತಿ ಪಡೆಯಲು ಸಾಧಕವಾಗಲೆಂದು ಸಂಸ್ಕೃತ 'ಮಹಾಪುರಾಣ'ದಿಂದ ಸಂಗ್ರಹಿಸಿ ಕೊಟ್ಟಿರುವ ಕನ್ನಡ ಅನುವಾದ. ತತ್ವನಿರೂಪಣೆಯೇ ಮುಖ್ಯೋದ್ದೇಶವಾದರೂ ಪಂಪ ಇಲ್ಲಿ ಅನುಸರಿಸುವುದು ಕಾವ್ಯಮಾರ್ಗ. ಕಾವ್ಯ ಧರ್ಮಕ್ಕೆ ಹೊಂದುವಂತೆ ಅದರೊಡನೆ ಬೆರೆಸಿ, ಧರ್ಮವನ್ನು ವಿವರಿಸಲು ಯತ್ನಿಸಿದ್ದಾನೆ. ಸಂಸ್ಕೃತ ಪೂರ್ವಪುರಾಣದಲ್ಲಿ ಅತಿ ವಿಸ್ತಾರವಾಗಿ ಚರ್ಚಿಸಿರುವ ಎಷ್ಟೋ ಮತ ಪ್ರಕ್ರಿಯೆಗಳನ್ನೂ ಜನ್ಮಾಂತರ ವಿವರಗಳನ್ನು ಆದಿಪುರಾಣದಲ್ಲಿ ಅಡಕವಾಗಿ ಹೇಳಿದೆ. ಪಂಪನ ಆದಿಪುರಾಣ ಸಂಗ್ರಹದಲ್ಲಿ ಕಾವ್ಯದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡಿರುವುದರಿಂದ ಜೈನಧರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಹೆಚ್ಚಾಗಿ ಅವಲಂಬಿಸದೆ, ಅಗತ್ಯವಾದಷ್ಟನ್ನು ಮಾತ್ರ ಉಳಿಸಿಕೊಂಡಿದೆ (ಆದಿಪುರಾಣ ಸಂಗ್ರಹ, ಸಂ: ಎಲ್.ಗುಂಡಪ್ಪ, ಪೀಠಿಕೆ , ಪ್ರಸಾರಾಂಗ ಮೈ.ವಿ.ವಿ, ೧೯೫೪) ಎನ್ನುತ್ತಾರೆ. ಆದಿಪುರಾಣ ಮೂಲತಃ ಜೈನ ಪುರಾಣವಾದರೂ ''ಬೆಳಗುವೆನಿಲ್ಲಿ ಲೌಕಿಕಮಮಲ್ಲಿ ಜಿನಾಗಮಮ್'' ಎಂದು ಹೇಳಿಕೊಂಡರೂ ಅದು ಜೈನಧರ್ಮಗ್ರಂಥವಾಗದೇ ಪುರಾಣಧರ್ಮವನ್ನು ಕಾವ್ಯಧರ್ಮ ವಾಗಿಸುವ ಪ್ರಕ್ರಿಯೆ ಎನಿಸುತ್ತದೆ. ಜೈನತತ್ವ ನಿರೂಪಣೆಯಾದರೂ ಅನುಸರಿಸುವುದು ಕಾವ್ಯಮಾರ್ಗ ಪೂರ್ವಪುರಾಣದ ಹತ್ತು ಸಾವಿರ ಶ್ಲೋಕಗಳನ್ನು ಪಂಪ ೧೬೦೦ ಪದ್ಯಗಳಿಗೆ ಇಳಿಸಿದ್ದಾನೆ. ಆದರೂ ಕಾವ್ಯಧರ್ಮಕ್ಕೆ ಉಚಿತವೆನಿಸದಿದ್ದರೂ ಧರ್ಮದ ದೃಷ್ಟಿಯಿಂದ ಧರ್ಮೋಪದೇಶಗಳನ್ನು ಅಲ್ಲಲ್ಲಿ ಸೇರಿಸಿದ್ದಾನೆ. ಪಂಪ ಇಲ್ಲಿನ ಧಾರ್ಮಿಕ ಕಟ್ಟುಪಾಡುಗಳಿಗೆ ಒಳಗಾಗಿದ್ದಾನೆ. ''ಪಂಪ ಪೂರ್ವ ಪುರಾಣದ ಸಂಸ್ಕೃತಕ್ಕೆ ಪೂರ್ಣವಾಗಿ ಮನ ಸೋತಿದ್ದಾನೆ. ಅವನಿಗೂ ಪಾಂಡಿತ್ಯಾಭಿಮಾನ ಹೆಚ್ಚಾಗಿದ್ದಂತೆ ತೋರುತ್ತವೆ. ಸಂಸ್ಕೃತವನ್ನು ಯಾವ ತಡೆಯೂ ಇಲ್ಲದೆ ಉಪಯೋಗಿಸಿದ್ದಾನೆ. ಅಚ್ಚಗನ್ನಡದಲ್ಲೇ ಲಲಿತವಾದ ಚೆಲುವಾದ ಹಲವು ಪದ್ಯಗಳನ್ನು ಬರೆದಿರುವನಾದರೂ ಒಟ್ಟಿನಲ್ಲಿ ಇಲ್ಲಿ ಸಂಸ್ಕೃತದ ಪ್ರಭಾವ ಹೆಚ್ಚು. ಗದ್ಯದಲ್ಲಂತೂ ಉದ್ದುದ್ದವಾದ ಸಂಸ್ಕೃತ ಸಮಾಸಗಳು ಅಡಿಗಡಿಗೆ ಎದ್ದು ನಿಲ್ಲುತ್ತವೆ'' (ಎಲ್.ಗುಂಡಪ್ಪ)[೬].

ಉದಾ: ಪೂರ್ವ ಪುರಾಣದಲ್ಲಿರುವ ಸ್ವಯಂ ಬುದ್ಧನ ಧರ್ಮೋಪದೇಶವನು.

> ವೈದ್ಯಧರೀಮಿಯಾಂ ಲಕ್ಷ್ಮೀಂ ವಿದ್ಧಿ ಪುಣ್ಯ ಫಲಂ ವಿಭೋ
> ಧರ್ಮಾವಿಷ್ಟಾರ್ಥ ಸಂಪತ್ತಿಸ್ತತೆ ಕಾಮಸುಖೋದಯಃ
> ಸಚ ಸಂಪ್ರೀತಯೇ ಪುಂಸಾಂ ಧರ್ಮಾತ್ ಸೈಷಾಪರಂಪರಾ
> ರಾಜ್ಯ ಚ ಸಂಪದೋ ಭೋಗಾಃ ಕುಲೇ ಚಿನ್ಮ ಸುರೂಪತಾ
> ಪಾಂಡಿತ್ಯಮಾಯುರಾರೋಗ್ಯಂ ಧರ್ಮಸ್ಯೈತತ್ ಫಲಂ ವಿಮಃ.

> ಯತೋಭ್ಯುದಯನಿಃಶ್ರೇಯಸಾರ್ಥಸಿದ್ಧಿಃ ಸುನಿಶ್ಚಿತಾ
> ಸಧರ್ಮಸ್ತಸ್ಯ ಧರ್ಮಸ್ಯ ವಿಸ್ತರಂ ಶ್ರಾಣು ಸಾಂಪ್ರತಂ
> ದಯಾಮೂಲೋ ಭವೇದ್ಧರ್ಮೋದಯಾ ಪ್ರಾಣಾನುಕಂಪನಂ
> ದಯಾಯಾಃ ಪುರಕ್ಷಾರ್ಥಂ ಗುಣಾಃ ಶೇಷಾಃ ಪ್ರಕೀರ್ತಿತಾಃ.

ಧರ್ಮಸ್ಯ ತಸ್ಯ ಲಿಂಗಾನಿ ದಮಃಕ್ಷಾಂತಿರಹಿಂಸತಾ
ತಪೋದಾನಂ ಚ ಶೀಲಂ ಚ ಯೋಗೋ ವೈರಾಗ್ಯಮೇವಚ.
ಅಹಿಂಸಾ ಸತ್ಯವಾದಿತ್ವಮಚೌರ್ಯಂ ತ್ಯಕ್ತಿಕಾಮತಂ
ನಿಷ್ಪರಿಗ್ರಹತಾ ಚೇತಿ ಪ್ರೋಕ್ತೋ ಧರ್ಮಃ ಸನಾತನಃ
ತಸ್ಮಾತ್ ಧರ್ಮಫಲಂ ಜ್ಞಾತ್ವಾ ಸರ್ವಂ ರಾಜ್ಯವಿಲಕ್ಷಣಂ
ತದರ್ಥಿನಾ ಮಹಾಭಾಗ ಧರ್ಮೇಕಾರ್ಯಮತಿಃ ಸ್ಥಿರಾ
ಧೀದುನ್ನಿಮಾಂ ಚಲಾಂ ಲಕ್ಷ್ಮೀ ಶಾಶ್ವತೀಂ ಕರ್ತುಮಿಚ್ಛತಾ
ತ್ವಯಾ ಧರ್ಮೋನುಮಂತವ್ಯಃ ಸೋsನುಷ್ಠೇಯಶ್ಚ ಶಕ್ತಿತಃ
ಇತ್ಯುಕ್ತ್ವಾಥ ಸ್ವಯಂಬುದ್ಧೇ ಸ್ವಾಮಿ ಶ್ರೇಯೋನುಬಂಧಿನಿ
ಧರ್ಮ್ಯಮರ್ಥಂ ಯಶಸ್ಯಂ ಚ ವಚೊ ವಿರತಿಮೀಯುಷಿ

ಈ ಶ್ಲೋಕಗಳನ್ನು ಪಂಪ ಸಂಗ್ರಹಾನುವಾದವಾಗಿಸಿದ್ದಾನೆ.

ನಿನ್ನೀ ವಿದ್ಯಾಧರಲಕ್ಷ್ಮಿ ಪುಣ್ಯಜನಿತಂ ವಿದ್ಯಾಧರಾಧೀಶ್ವರಾ
ಭವ ವಾರಾಶಿನಿಗ್ನರಂ ದಯೆ ದಮಂದಾನಂ ತಪಂಶೀಲವೆಂಬ
ವಿವೆ ಮೆಯ್ಯಾಗಿರೆ ಸಂದ ಧರ್ಮಮೆ ಫಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯವಸಾನಂಬಿರಮಾನುಷಂಗಿಕ ಫಲಂ ಭೂಪೇಂದ್ರ ದೇವೇಂದ್ರರಾ
ಜ್ಯವಿಳಾಸಂ ಪೆ ತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣೀ
ಧರ್ಮಪ್ರಭಾವಮುಮಂ ತತ್ಫಲ ಸ್ವಭಾವಮುಮಂ ತಿಳಿಪುವವಸರದೊಳ್.

ಇಡೀ ಪದ್ಯಗಳನ್ನು, ಪದ್ಯ ಖಂಡಗಳನ್ನು ಪಂಪ ಅನುವಾದ ಮಾಡಿರುವುದಕ್ಕೂ ತನ್ನ ಸ್ವಂತ ಕಲ್ಪನೆಯಿಂದ ಹೊಸ ಪರಿಯ ಕಳೆಕಟ್ಟಿರುವುದಕ್ಕೂ ನಿದರ್ಶನಗಳಿವೆ.

ಉದಾ : ಧರ್ಮ, ಪ್ರಾಣಿದಯಾ ಸತ್ಯಂ ಕ್ಷಾಂತಿಃ ಶೌಚಂ ವಿತೃಷ್ಣತಾ
ಜ್ಞಾನ ವೈರಾಗ್ಯ ಸಂಪತ್ತಿರಧರ್ಮಸ್ತದ್ವಿಪರ್ಯಯಃ ॥ (ಮ.ಪು. ೧೦:೧೫).

ಪುಸಿಯದುದು ಪರಾಂಗನೆಗಾ
ಡಿಸದುದು ಕೊಲ್ಲದುದು ಮೋಹಮಿಲ್ಲುದುದ ವಂ
ಪೊಸಯಿಸುವುದು ವೈರಾಗ್ಯದ
ದೆಸೆಗೆಸಪುದು ಧರ್ಮಮದ ತಡೆವುವಧರ್ಮಂ ( ಆ.ಪು. ೫:೨೯).

ತಾಂಬೂಲದಾಯನೀ ಕಾ ಚಿದ್ಭತಾ ಪುತ್ರೈ ಕರಸ್ಥಿತೈ :
ಶುಕಾಧ್ಯಾಸಿತ ಶಾಖಾಗ್ರಾ ಲತೇವಾಮರ ಕಾಮಿನೀ ॥ (ಮ.ಪು. ೧೨:೧೭೭).

ತಳಮೊಳ್ ತಂಬುಲದೆಲೆಗಳ್
ಪೊಳೆಸೆಮರ್ದಿರೆ ದೇವಕನ್ನೆ ಮತ್ತೊರ್ವಳ್ ಕೋ
ಮಳ ಲತೆಯ ನಿಮಿರ್ದ ಕುಡಿಯೊಳ್
ಕಾಳ ಪರಿಯೆದ್ದೆತ್ತನಿಸಿ ಸತಿಗೆ ತಂಬುಲಮಿತ್ತಳ್ ( ಆ.ಪು. ೭:೧೨).

ಪಂಪನು ಆದಿಪುರಾಣದಲ್ಲಿ ಪೂರ್ವಪುರಾಣವನ್ನು ಸಂಕ್ಷಿಪ್ತಗೊಳಿಸಿದ್ದಾನೆ ಎನ್ನಬಹುದು. ಇದು ಆಗಮಿಕ ಕಾವ್ಯವಾದುದರಿಂದ ಹೆಚ್ಚು ಬದಲಾವಣೆಯಿಲ್ಲದೆ ಮೂಡಿಸಲು ಕವಿ ಪ್ರಯತ್ನಿಸಿದ್ದಾನಾದರೂ ಅನೇಕ ಸಾಂಸ್ಕೃತಿಕ ಅಂಶಗಳು ಅದರಲ್ಲಿ ನುಸುಳಿವೆಯೇ ಅಥವಾ ಕವಿ ಉದ್ದೇಶಪೂರ್ವಕವಾಗಿ ಸಮಕಾಲೀನತೆಯನ್ನು ಚಿತ್ರಿಸಿದ್ದಾನೆಯೇ ಎಂಬುದು ಜಿಜ್ಞಾಸೆ. ಪ್ರಸ್ತುತ ಅದೊಂದು ಧಾರ್ಮಿಕ ಅನುವಾದ ಎನ್ನುವುದಕ್ಕಿಂತ ಅದೊಂದು ಔಚಿತ್ಯಪೂರ್ಣ ಸಾಂಸ್ಕೃತಿಕ ಅನುವಾದ ಎನ್ನುವುದು ಸಮಂಜಸ. ಅದು ನೀರಸ ತತ್ವ ಪ್ರಚಾರಕ ಗ್ರಂಥವಾಗದೇ ಸಮಗ್ರ ಸಮಕಾಲೀನ ದೃಷ್ಟಿಕೋನವನ್ನು ಒಡಲಲ್ಲಿರಿಸಿ ಹುಟ್ಟಿ ಇಲ್ಲಿ ತತ್ವ ಪ್ರತಿಪಾದನೆ ಅಂತಸ್ತಶಕ್ತಿಯಾಗಿ ಆ ಕಾವ್ಯಧರ್ಮ ಪ್ರಣೀತವಾದ ಸುಂದರ ಕಾವ್ಯವಾಗಿದೆ. ಸಮಕಾಲೀನ ಸಂದರ್ಭದ ಜೈನ ಪಂಥೀಯ ಚಟುವಟಿಕೆಗನುಗುಣವಾಗಿ, ರಾಜಾಶ್ರಯ ಧರ್ಮಕ್ಕೆ ಅನುಗುಣವಾಗಿ ಪ್ರೌಢತ್ವ ಪ್ರತಿಪಾದಕ ಕಾವ್ಯವಾಗಿ ಮಂಡಿಸಿರುವ ಪಂಪನ ಕಾವ್ಯಪ್ರಜ್ಞೆ ಇಲ್ಲಿ ಗಮನೀಯ. ಇದು ಯಶಸ್ವಿಯಾಗಿದೆಯೆಂಬುದು ಒಪ್ಪತಕ್ಕ ಮಾತು. ಜೊತೆಗೆ ಪಂಪ ತನ್ನ ಎರಡೂ ಕಾವ್ಯಗಳನ್ನು ಪುರಾಣ ಧರ್ಮವಾಗಿ ಸ್ವೀಕರಿಸಿ ಕಾವ್ಯ ಧರ್ಮವಾಗಿ ಮಾರ್ಪಡಿಸಿರುವ ರೀತಿ ಸಾಂಸ್ಕೃತಿಕ ಅನುವಾದಕ್ಕೊಂದು ಸ್ಪಷ್ಟ ಕನ್ನಡಿ. ಇದೇ ಪರಂಪರೆಯನ್ನು ಮುಂದಿನ ಕವಿಗಳು ಅನುಸರಿಸಿರುವುದು ಚರಿತ್ರೆಯಲ್ಲಿ ದಾಖಲಾಗಿದೆ.

ಮಹಾಪುರಾಣದಲ್ಲಿ ನರಕಕ್ಕೆ ಹೋಗುವವರು ಯಾರು ಎಂಬುದನ್ನು ಹೀಗೆ ಹೇಳಿದೆ;

ಹಿಂಸಾಯಾಂ ನಿರತಾಯೇ ಸ್ಯುರ್ಯೇ ಮೃಷಾವಾದ ತತ್ಪರಾಃ
ಚುರಾಶೀಲಾಃ ಪರಸ್ತ್ರೀಷು ಯೇ ರತಾ ಮಧ್ಯಪಾಶ್ಚ ಯೇ ॥
ಯೇ ಚ ಮಿಥ್ಯಾದೃಶಃ ಕ್ರೂರಾಃ ರೌದ್ರಧ್ಯಾನ ಪರಾಯಣಾ ಃ
ಸತ್ತ್ವೇಷು ನಿರನುಕ್ರೋಶಾ ಬಹ್ವಾರಂಭ ಪರಿಗ್ರಹಾಃ ॥

ಧರ್ಮದ್ರುಹಶ್ಚಯೇ ನಿತ್ಯಮಧರ್ಮಪರಿಪೋಷಕಾಃ
ದೂಷಾಕಾಃ ಸಾಧುವರ್ಗಸ್ಯ ಮಾತ್ಸರ್ಯೋಪಹತಾಶ್ಚಯೇ ॥
ರುಷ್ಯಂತ್ಯ ಕಾರಣಂ ಯೇಚ ನಿರ್ಗ್ರಂಥೇಭ್ಯೋ ತಿಪಾತಕಾಃ
ಮುನಿಭ್ಯೋ ಧರ್ಮಶೀಲೇಮಾಂಸಾಶನೇರತಾಃ ॥
ವಧಕಾನ್ ಪೋಷಯಿತ್ವಾನ್ಯ ಜೀವಾನಾಂಯೇऽತಿ ನಿರ್ಘೃಣಾ ॥
ಖಾದಕಾ ಮಧುವಮಾಂಸಸ್ಯ ತೇಷಾಂ ಯೇ ಚಾನು ಮೋದಕಾಃ ॥
ತೇ ನರಾಃ ಪಾಪಭಾರೇಣ ಪ್ರವಿಶಂತಿ ರಸಾತಲಂ.

ಈ ವಿಷಯವನ್ನು ಪಂಪ ಹೀಗೆ ಹೇಳುತ್ತಾನೆ:

ಮಾಂಸವಧುಮದ್ಯ ಸೇವನೆ
ಹಿಂಸಾರುಚಿಪರಮ ಜಿನಮತಾರುಚಿ ಕುಲಟ
ಸಂಸರ್ಗಮೆಂಬಿವಲ್ಲದೆ
ಸಂಸಾರಭ್ರಮಣ ಕಾರಣಂ ಪೇ ವೊಳಿವೇ
ಕಳಿಪಂ ಕಳ್ವಿನಗೆಂರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ
ಕೊಳಿಪಂ ಕೊಂಡೊಡೆ ಕಾಯ್ವನುಂ ಪಳ್ವಿವನುಂ ಧರ್ಮಕಾತಿದ್ರೋಹನುಂ
ಖಳಿನುಂ ಕಳ್ಳುಣಿಯುಂ ಘಳುಮ್ಮನಿ ಗುಮ ಶ್ವಭ್ರುಂತಮಂ ತಾಪಿನಂ.

ಪಂಪನು ಆದಿಪುರಾಣದಲ್ಲಿ ಪೂರ್ವಪುರಾಣದ ಯಥಾಸ್ಥಿತಿಯನ್ನು ಕಾಯ್ದುಕೊಂಡು ಬಂದಿದ್ದಾನೆ. ಇದು ಆಗಮಿಕ ಕಾವ್ಯವಾದುದರಿಂದ ಹೆಚ್ಚು ಬದಲಾವಣೆಯಿಲ್ಲದೆ ಮೂಡಿಬಂದಿದೆ. ಧಾರ್ಮಿಕ ಕೃತಿಗಳ ಅನುವಾದವಾದರೂ ಸಾಂಸ್ಕೃತಿಕ ಪರಿಸರವನ್ನು ಒಡಲಲ್ಲಿರಿಸಿ ಬೆಳೆದು ಬಂದ ಈ ಅನುವಾದಗಳು ಸಾಂಸ್ಕೃತಿಕ ಅನುವಾದಗಳು. ಪುರಾಣವನ್ನು ಶ್ರಮಿಸಿದ, ಸಂಸ್ಕೃತ ಕಥಾವಸ್ತುವನ್ನು ಆಧಾರವಾಗಿಸಿ ಕಾವ್ಯ ಲೌಕಿಕವೋ/ ಆಗಮಿಕವೋ ಎನ್ನುವಷ್ಟರ ಮಟ್ಟಿಗೆ ಸಾಂಸ್ಕೃತಿಕ ಅನುವಾದವಾಗಿದೆ ಎಂಬ ಮಾತಿಗೆ ಮೇಲೆ ಚರ್ಚಿಸಿದ ಅಂಶಗಳು ಪೂರ್ವವೂ ಅವಲಂಬಿತವೂ ಆಗಿರುವುದನ್ನು ಗಮನಿಸಬೇಕು.

ಪಂಪನ ವಿಕ್ರಮಾರ್ಜುನ ವಿಜಯದಂತೆ ರನ್ನನ ಸಾಹಸಭೀಮವಿಜಯವೂ ಮಹಾಭಾರತದ ವಸ್ತು ವಿಷಯವನ್ನೊಳಗೊಂಡ ಕೃತಿ. ಭಟ್ಟನಾರಾಯಣನ ನಾಟಕವಾದ ವೇಣಿಸಂಹಾರದಲ್ಲಿನ ಅನೇಕ ಪದ್ಯಗಳು ಇಲ್ಲಿ ಅನುವಾದಿತವಾಗಿವೆ. ಭೀಮ-ದುರ್ಯೋಧನರ ಗದಾಯುದ್ಧವೇ ಕೇಂದ್ರಬಿಂದುವಾಗಿರುವ ಈ ಕೃತಿ, ಸಾಹಸಭೀಮ ವಿಜಯವೆಂದರೂ ಗದಾಯುದ್ಧವೆಂದೇ ಪ್ರಖ್ಯಾತವಾಗಿದೆ. ರನ್ನನು ಮಹಾಭಾರತದ ಭೀಮನೊಡನೆ ತನ್ನ ಆಶ್ರಯದಾತನಾದ ಸತ್ಯಾಶ್ರಯ ಇರಿವ ಬೆಡಂಗನನ್ನು ಅಭೇದ ಕಲ್ಪಿಸಿ ಕಾವ್ಯ ರಚಿಸಿದ್ದಾನೆ;

ಎನಿಸಿದ ಸತ್ಯಾಶ್ರಯವೇ
ವನೆ ಪೃಥ್ವೀವಲ್ಲಭಂ ಕಥಾನಾಯಕನಾ
ಗನಿಂಜನೊಳ್ ಪೋಲಿಸಿ ಪೇ
ನೀ ಗದಾಯುದ್ಧಮಂ ಮಹಾಕವಿ ರನ್ನಂ.

ಪಂಪನಂತೆಯೇ ಈತನು 'ಅಜಿತಪುರಾಣ' ಮತ್ತು 'ಸಾಹಸಭೀಮವಿಜಯ' ಎಂಬ ಆಗಮಿಕ, ಲೌಕಿಕ ಕಾವ್ಯಗಳೆರಡನ್ನೂ ಬರೆದಿದ್ದಾನೆ. ರನ್ನನು ಭಟ್ಟನಾರಾಯಣನ ವೇಣಿಸಂಹಾರ, ವ್ಯಾಸಭಾರತ, ಪಂಪಭಾರತ, ಭಾಸನ ಊರುಭಂಗಗಳನ್ನು ಆಕರವಾಗಿಸಿಕೊಂಡು ಸಾಹಸಭೀಮವಿಜಯವನ್ನು ರಚಿಸಿದ್ದಾನೆ. ಮಹಾಭಾರತದ ಗದಾಸೌಪ್ತಿಕ ಪರ್ವಗಳ ಕಥೆಯನ್ನೇ ಜೀವಾಳವಾಗಿರಿಸಿದರು. ಪಂಪನಂತೆ ರನ್ನನು ಕೂಡ ಲೌಕಿಕ, ಆಗಮಿಕ ಕಾವ್ಯಗಳೆರಡನ್ನೂ ಬರೆದಿದ್ದಾನೆ. ಮೂಲತಃ ಜೈನ ಧರ್ಮೀಯನಾದ ರನ್ನ ಜೈನಧರ್ಮ ತಾತ್ವಿಕ ಚರ್ಚೆಯಲ್ಲಿಯೇ ತನ್ನ ಶ್ರೇಷ್ಠ ಕಾವ್ಯವನ್ನು ರಚಿಸಿದ್ದಾನೆ. ಮೂಲತಃ ಮಹಾಭಾರತ ಅಥವಾ ವಸ್ತುವನ್ನು ಸಮಕಾಲೀನ ಸಂದರ್ಭಕ್ಕೆ ತಕ್ಕಂತೆ ನಾಟಕೀಯ ಅಂಶಗಳಿಂದ ಯುಕ್ತವಾಗಿರುವಂತೆ ಬರೆಯುವ ಸಾಹಸ ಈ ಸಾಹಸಭೀಮ ವಿಜಯ ಕೃತಿಯೆಂದು. ಈ ನಾಟಕಾಂಶಗಳನ್ನು ಹೊಂದಿರುವುದಕ್ಕೆ ಮೂಲ ಪ್ರೇರಣೆ ಸಂಸ್ಕೃತ ಕವಿಗಳ ಕಾವ್ಯಗಳನ್ನು, ಅಭ್ಯಾಸಿಸಿ ಅವುಗಳಿಂದ ಪ್ರಭಾವಿತನಾಗಿರುವುದು ಇದನ್ನು ಅವನ ಮಾತುಗಳಲ್ಲೇ ಸ್ಪಷ್ಟಪಡಿಸಬಹುದಾಗಿದೆ.

ನೆಗಳ್ದುದು ರಾಮಾಯಣಮುಂ
ನೆಗಳ್ದುದು ಭಾರತಮುಮು ಮಹಾಕವಿಗಳಿನಾ
ನೆಗಳ್ದುರ್ ವ್ಯಾಸರ್ ವಾಲ್ಮೀ
ಕಿಗಳೆನೆ ನೆಗಳ್ದ ಭಯಕವಿಗಳೆಮಗಭಿವಂದ್ಯರ್

ಮೃದುಪದ್ಯ ರಚನೆಯೊಳ್ ಕಾ
ಳಿದಾಸನುಂ ಗದ್ಯ ರಚನೆಯೊಳ್ ಬಾಣನುಮಂ
ಕದ ಕವಿಗಳೆನಿಸಿ ನೆಗ
ರದ ಸತ್ಕವಿಗಳರ್ವರೆ ಮಗಭಿವಂದ್ಯರ್.

ರನ್ನನು ಸಂಸ್ಕೃತ ಕವಿಗಳನ್ನು ಅನುಸರಿಸಿದ್ದರೂ ಅನೌಚಿತ್ಯ ಸಂದರ್ಭಗಳನ್ನು ಕವಿ ತನ್ನ ಸಂದರ್ಭಗಳನ್ನಾಗಿದೊಂದಿದು ಸಾಂಸ್ಕೃತಿಕ ಅನುವಾದವೊಂದರ ಲಕ್ಷಣ, ಸ್ವಾತಂತ್ರ್ಯವಹಿಸಿರುವಲ್ಲಿಯೂ ಔಚಿತ್ಯ ಎದ್ದುತೋರುತ್ತದೆ.

ಭಟ್ಟನಾರಾಯಣ : ಮಯಾ ಪೀತಂ ಪೀತಂ ಭವತಾಂಬಾಸ್ತನಯುಗಂ
ಮುದುಚ್ಛಿಷ್ಟೈರ್ವೃತ್ತಿಂ ಜನಯಸಿ ರಸ್ಯೈರ್ವತ್ಸಲತಯಾ
ವಿತಾನೇಷ್ವಷ್ವೇವಂ ತವ ಮಮ ಚ ಸೋಮೇ ವಿಧಿರಭೂ-
ನಿವಾಪಾಂಭಃ ಪೂರ್ವಂ ಪಿಬಸಿ ಕಥಮೇವಂ ತ್ವಮಧುನಾ.

ರನ್ನ : ಜನನೀಸ್ತನ್ಯಮನುಂಡೆನಾಂ ಬವಿ ಕೆ ನೀಂ ಸೋಮಾಮೃತಂ ದಿವ್ಯಭೋ
ಜನಮೆಂಬಂತವನುಂಡೆನಾಂ ಬ ಕೆ ನೀಂ ಬಾಲತ್ವವಿಂದೆಲ್ಲಿಯುಂ
ವಿನಯೋಲ್ಲಂಘನ ಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್
ಮೊನೆಯೊಳ್ ಸೂ ತಡಮಾಯ್ತಿದೊಂದೆಡೆಯೊಳಿಂ ಹಾ ವತ್ಸದುಶ್ಶಾಸನಂ.

ಭಟ್ಟನಾರಾಯಣನು ಯಾವುದೇ ಔಚಿತ್ಯವಿಲ್ಲದೆ ಮೇಲಿನ ಶ್ಲೋಕವನ್ನು ರಚಿಸಿದ್ದಾನೆ. ಭೀಮ ದುರ್ಯೋಧನರಿಗೆ ಗದಾಯುದ್ಧ ನಡೆಯುತ್ತಿರುವಾಗ, ದುರ್ಯೋಧನನ ಕಡೆಯ ಚಾರ್ವಾಕನೆಂಬ ರಾಕ್ಷಸ ಯುಧಿಷ್ಠಿರನಲ್ಲಿ ಬಂದು ಭೀಮ ಸತ್ತನೆಂದು ಸುಳ್ಳು ಹೇಳುತ್ತಾನೆ. ಆಗ ಭೀಮನನ್ನು ನೆನೆದು 'ಮಯಾ ಪೀತಂ ಪೀತಂ ಎಂದು ತೋರಿಸುತ್ತಾನೆ. ಆದರೆ ಈ ಪ್ರಸಂಗವನ್ನು ರನ್ನ ಬೇರೊಂದು ಸಂದರ್ಭಕ್ಕೆ ವರ್ಗಾಯಿಸಿ ಕರುಣರಸವನ್ನು ಸರಿಯಾಗಿ ಪ್ರತಿಪಾದಿಸಿದ್ದಾನೆ.

ರನ್ನ ಭೀಮನನ್ನು ತನ್ನ ಕಥಾನಾಯಕನನ್ನಾಗಿ ಮಾಡಿರುವುದಕ್ಕೆ ಅನೇಕ ಒಳ ಒಪ್ಪಂದಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ವ್ಯಾಸಭಾರತದಲ್ಲಿ ದುರ್ಯೋಧನನು ಸರೋವರದಲ್ಲಿ ಅಡಗಿರುವ ವಿಷಯ ಅಶ್ವತ್ಥಾಮಾದಿಗಳು ದುರ್ಯೋಧನನೊಡನೆ ನಡೆಸುತ್ತಿರುವ ಸಂಭಾಷಣೆಯಲ್ಲಿ ಗೊತ್ತಾದರೆ, ಗದಾಯುದ್ಧದಲ್ಲಿ ಭೀಮನು ಕಳುಹಿಸಿದ ಚಾರರ ಮೂಲಕ ಗೊತ್ತಾಗುತ್ತದೆ. ಇದು ಸತ್ಯಾಶ್ರಯನು ಚಾರರ ಮೂಲಕ ಸುದ್ದಿ ಸಂಗ್ರಹಿಸುತ್ತಿದ್ದನು ಎಂಬುದರ ರಾಜಕೀಯ ಸನ್ನಿವೇಶವಾಗಿವೆ.

ರನ್ನನು ಜೈನಧರ್ಮಿಯನಾದುದರಿಂದ ಅಶ್ವತ್ಥಾಮನ ಪ್ರತಿಜ್ಞೆ, ಉಪಪಾಂಡವರ ಕೊಲೆ ಇವುಗಳ ನಂತರ ದುರ್ಯೋಧನ ದುಃಖಿತನಾಗುತ್ತಾನೆ. ಮೂಲಭಾರತದಲ್ಲಿ ಈ ಪ್ರಜ್ಞೆ ಇಲ್ಲ. ಪಂಪನಂತೆ ರನ್ನನು ದುರ್ಯೋಧನನ್ನು ಉದಾತ್ತ ವ್ಯಕ್ತಿಯಾಗಿ ಚಿತ್ರಿಸಿದ್ದಾನೆ. ದುರ್ಯೋಧನನ ಗದಾಘಾತದಿಂದ ಭೀಮ ನೆಲಕ್ಕೆ ಬೀಳುವಾಗ ದುರ್ಯೋಧನನು " ಎಲಾ ಭೀಮ ! ವೀರನಾದವನು ಎಂದೂ ಯುದ್ಧದಲ್ಲಿ ಕೆಳಗೆ ಬಿದ್ದವನನ್ನು ಕೊಲ್ಲುವುದಿಲ್ಲ. ಭಯವನ್ನು ಬಿಡು" ಎನ್ನುತ್ತಾನೆ. ಇದನ್ನೇ ರನ್ನನು ಗದಾಯುದ್ಧದಲ್ಲಿ ಹೀಗೆ ಹೇಳುತ್ತಾನೆ;

ಕೆಡೆದೊಡೆ ಪವನಜನಾಹವ
ದೆಡೆಯೊಳ್ ಬಿ  ವನನಿ  ಯಲಾರದುಮೆಂಬರ್
ಗಡಮೆಂದಂಬರತಳದೊಳ್
ಪೊಡವೀರಂ ಗದೆಯನೆತ್ತಿ ತಿಂಪಿದನಾಗಳ್.

ಭೀಮನು ದುರ್ಯೋಧನನ್ನು ಹೊಡೆದಾಗ ಅದು ತಪ್ಪೆಂದು ಬಲರಾಮ ಪ್ರತಿಭಟಿಸುವಾಗ ದುರ್ಯೋಧನ ವೈರವನ್ನು ಬಿಡಬೇಕೆಂದೂ, ತಾನು ಮಾಡಿದ ಅಪರಾಧ ಗಮನಿಸಿದರೆ, ಪಾಂಡವರದ್ದು ಕಡಿಮೆ ಎಂದು ಹೇಳುತ್ತಾನೆ. ದುರ್ಯೋಧನನ ಮೂಲಕ ಹೀಗೆ ಹೇಳಿಸುವದರೊಂದಿಗೆ ರನ್ನ ಉದಾತ್ತ ವ್ಯಕ್ತಿಯನ್ನಾಗಿ ಚಿತ್ರಿಸಿದ್ದಾನೆ. ರನ್ನ ತನ್ನ ಕಾವ್ಯದ ಕೊನೆಯಲ್ಲಿ ಭೀಮನಿಗೆ ಪಟ್ಟಾಭಿಷೇಕ ಮಾಡುವನು. ಕಥಾನಾಯಕನೇ ಭೀಮನಾದುದರಿಂದ ಇದು ಸಹಜ.

ರನ್ನ ಅನೇಕ ಐತಿಹಾಸಿಕ ಸಂಗತಿಗಳನ್ನು ತನ್ನ ಕಾವ್ಯದಲ್ಲಿ ಸೇರಿಸಿದ್ದಾನೆ. ವೃದ್ಧ ಕಂಚುಕಿಯ ಮೂಲಕ ಸತ್ಯಾಶ್ರಯನ ವಂಶಾವಳಿಯನ್ನು ಹೇಳಿಸಿದ್ದಾನೆ. ಭೀಮನು ಅಹವಮಲ್ಲ, ಚುಕವ್ವೆಯರ ಮಗನೆಂದು ಹೇಳಿದ್ದಾನೆ. ಈ ರೀತಿಯಾಗಿ ಚಾರಿತ್ರಿಕ ವಿಷಯಗಳ ಸಮೀಕರಣದಿಂದ ಕಾವ್ಯಕ್ಕೆ ಹೊಸ ಹೊಳಹು ದೊರೆತಿದೆಯಲ್ಲದೆ, ಆ ಕಾಲದ ಚಾರಿತ್ರಿಕ ಸಂಶೋಧನೆಗೂ ಮೆರಗುಕೊಟ್ಟಿದೆ.

ಅಭಿಮನ್ಯುವಿನ ಶವದ ಮುಂದೆ ನಿಂತು ;

ಅಸಮಬಲ ಭವದ್ವಿಕ್ರಮ
ಮಸಂಭವಂ ಪೆ ರರ್ಗೆ ನಿನ್ನನಾನಿನಿತಂ ಪ್ರಾ
ರ್ಥಿಸುವೆನಭಿಮನ್ಯು ನಿಜ ಸಾ
ಹಸೈಕದೇಶಾನುಮರಣವೆಮಗಕ್ಕೆ ಗಡಾ

ಎನ್ನುತ್ತಾನೆ. ಇದು ರನ್ನನ ಸ್ವಂತ ಸೃಷ್ಟಿಯಾಗಿ ಭಾರತೀಯ ಸಾಹಿತ್ಯದಲ್ಲಿ ಚಿರಸ್ಮರಣೀಯ ವಾಗಲು ಅರ್ಹವಾಗಿದೆ. ಸತ್ಯಾಶ್ರಯನನ್ನು ಕಥಾನಾಯಕನನ್ನಾಗಿಸಿರುವುದಕ್ಕಾಗಿ ಯುದ್ಧದ ಪರಿಸರವನ್ನು ಕವಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಕ್ಷಾತ್ರಧರ್ಮದ ಪ್ರತೀಕವಾಗಿ ಇದನ್ನು ವರ್ಣಿಸಿದ್ದಾನೆ. ರನ್ನ ಭೀಮನನ್ನು ನಾಯಕನನ್ನಾಗಿ ಮಾಡಿಕೊಳ್ಳುವಲ್ಲಿ ಕೆಲವು ಕಾರಣಗಳಿವೆ.

ಕನ್ನಡದಲ್ಲಿ ಸಾಹಿತ್ಯ ರಚನೆ ಆರಂಭವಾದ ಕಾಲಕ್ಕೆ ಸಂಸ್ಕೃತದಲ್ಲಿ "ಧರ್ಮನೀತಿಗಳಿಗೂ ಭಾವರಸಗಳಿಗೂ ಪ್ರಾಶಸ್ತ್ಯವನ್ನುಕೊಡುವ ಸಂಪ್ರದಾಯವು, ಅಭಿರುಚಿಯ ಹಿಂದೆ ಬಿದ್ದು ಅರ್ಥ ಚಮತ್ಕಾರ, ಉಕ್ತಿ ವೈಚಿತ್ರ್ಯಗಳಿಗೆ, ಪ್ರೌಢಿಮೆಗೆ ಹೆಚ್ಚು ಪ್ರಾಶಸ್ತ್ಯ ಕನ್ನಡದಲ್ಲಿ ಈ ರೀತಿಯ ಕಾವ್ಯ ರಚನೆಗೆ

ಮೇಲ್ಪಂಕ್ತಿಯನ್ನು ಹಾಕಿಕೊಟ್ಟ ಸಂಸ್ಕೃತ ಕವಿಗಳಲ್ಲಿ ಬಾಣನು ಮುಖ್ಯನಾದವನೆಂದು ಹೇಳಬಹುದು. ಆದಕಾರಣ ಕನ್ನಡ ಸಾಹಿತ್ಯವು ಪ್ರೌಢಾವಸ್ಥೆಗೆ ಬರುತ್ತಿದ್ದ ಕಾಲದಲ್ಲಿ ಬಾಣ ಕಾದಂಬರಿಯು ಕನ್ನಡಕ್ಕೆ ಪರಿವರ್ತಿತವಾದದ್ದು ಸ್ವಾಭಾವಿಕವೇ ಆಗಿದೆ''. ಈ ಹೇಳಿಕೆಯಿಂದ ಕನ್ನಡ ಸಾಹಿತ್ಯದ ಅಂದಿನ ಸ್ಥಿತಿಗತಿಗಳು ವ್ಯಕ್ತವಾಗುತ್ತವೆ.

೧. ಆಶ್ರಯದಾತನಾದ ಸತ್ಯಾಶ್ರಯ ಇರಿವಬೆಡಂಗನ ಸಾಹಸಗಳನ್ನು ಕೃತಿಯಲ್ಲಿ ಸೇರಿಸಬೇಕಾದ್ದರಿಂದ ಸಾಹಸಿ ಪಾತ್ರವನ್ನೇ ಆಯ್ದುಕೊಳ್ಳಬೇಕಾಗಿತ್ತು. ಅರ್ಜುನನ ಕುರಿತಾದ ಕಾವ್ಯ ಈಗಾಗಲೇ ಇರುವುದರಿಂದ ಭೀಮನನ್ನೇ ಆಯ್ದುಕೊಳ್ಳಲಾಯಿತು.

೨. ಭಾರತ ಕಥೆಯ ಮೂಲ ದ್ರೌಪದಿಯೇ, ಆ ದ್ರೌಪದಿಗಾಗಿ ಪ್ರತಿಜ್ಞೆಮಾಡಿ ಪೂರೈಸಿದವನು ಭೀಮನೆ.

ಈ ದೃಷ್ಟಿಯಿಂದ ಭೀಮನು ನಾಯಕನಾದುದು ಔಚಿತ್ಯಪೂರ್ಣವಾಗಿಯೇ ಇದೆ. ರನ್ನನಿಗೆ ಸಂಸ್ಕೃತ ನಾಟಕಗಳ ಪ್ರಭಾವವಿತ್ತಾದ್ದರಿಂದ ಈ ಬಗೆಯ ಸಂವಿಧಾನ ಸಾಧ್ಯವಾಗಿದೆ. ವೃದ್ಧ ಕುಂಟಣಿ ಬುದ್ಧಿಮತಿ ಮತ್ತು ವಿದೂಷಕನ ಪಾತ್ರಗಳಿಂದ ಈ ಬಗೆಯ ನಿಲುವು ಸಾಧ್ಯವಿದೆ. ಒಟ್ಟಿನಲ್ಲಿ ರನ್ನ ತನ್ನ ಕಾವ್ಯದಲ್ಲಿ ''ಸತ್ಯಾಶ್ರಯ ದೇವನೆ ಪೃಥ್ವೀ, ವಲ್ಲಭಂ ಕಥಾನಾಯಕನಾಗನಿಲಜನೊಳ್ ಪೋಲಿಸಿ ಪೇಳ್ವೆನೀ ಗದಾಯುದ್ಧಮಂ'' ಮತ್ತು ''ಕೃತಿಗೀಶಂ ಚಕ್ರವರ್ತಿ ಸಾಹಸಭೀಮಂ'' ಎನ್ನುವುದು ಗದಾಯುದ್ಧದ ಸಾಂಸ್ಕೃತಿಕ ಅನಿವಾರ್ಯತೆ ಗೊತ್ತಾಗುತ್ತದೆ.

ನಾಗವರ್ಮನು ರಚಿಸಿರುವ 'ಕರ್ಣಾಟಕ ಕಾದಂಬರಿ ' ಬಾಣಭಟ್ಟನ ಸಂಸ್ಕೃತ ಕಾದಂಬರಿಯ ಕನ್ನಡೀಕರಣ ಸಂಸ್ಕೃತ ಕಾದಂಬರಿಯನ್ನು ತಾನು ಕನ್ನಡಕ್ಕೆ ಇಳಿಸಿತ್ತಿರುವುದಾಗಿ ಕನ್ನಡಿಸಿತ್ತಿನ್ನೀ ಕವಿತೆಯಂ ಎಂದು ಹೇಳಿದ್ದಾನೆ ನಾಗವರ್ಮ ಇಲ್ಲಿ ಬಳಸಿರುವ ಕನ್ನಡಿಸು ಎಂಬ ಪದದಿಂದ ಅನುವಾದದ ಕಲ್ಪನೆ ಸ್ಪಷ್ಟವಾಗಿ ಗೋಚರಿಸುತ್ತದೆ. ಕರ್ನಾಟಕ ಕಾದಂಬರಿಯು ಎಲ್ಲ ರೀತಿಯಿಂದಲೂ ಸಂಸ್ಕೃತ ಕಾದಂಬರಿಯ ಯಶಸ್ವೀ ಕನ್ನಡೀಕರಣವೆನಿಸಿದೆ. ನಾಗವರ್ಮ ಅನುವಾದಿಸದ್ದರ ಔಚಿತ್ಯವೇನು ಎಂಬುವನ್ನು ಎ. ಎಚ್. ವೆಂಕಣಯ್ಯನವರು ಹೀಗೆ ಹೇಳುತ್ತಾರೆ. ''ಕನ್ನಡದಲ್ಲಿ ಸಾಹಿತ್ಯ ರಚನೆ ಆರಂಭವಾದ ಕಾಲಕ್ಕೆ ಸಂಸ್ಕೃತದಲ್ಲಿ ''ಧರ್ಮ ನೀತಿಗಳಿಗೂ ಭಾವರಸಗಳಿಗೂ ಪ್ರಾಶಸ್ತ್ಯವನ್ನು ಕೊಡುವ ಸಂಪ್ರದಾಯವು , ಅಭಿರುಚಿಯ ಹಿಂದೆ ಬಿದ್ದು ಅರ್ಥಚಮತ್ಕಾರ, ಉಕ್ತಿ ವೈಚಿತ್ರ್ಯಗಳಿಗೆ , ಪ್ರೌಢಿಮೆಗೆ ಹೆಚ್ಚು ಪ್ರಾಶಸ್ತ್ಯ ಕನ್ನಡದಲ್ಲಿ ಈ ರೀತಿಯ ಕಾವ್ಯರಚನೆಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟ ಸಂಸ್ಕೃತ ಕವಿಗಳಲ್ಲಿ ಬಾಣನು ಮುಖ್ಯನಾದವನೆಂದು ಹೇಳಬಹುದು ಆದಕಾರಣ ಕನ್ನಡ ಸಾಹಿತ್ಯವು ಪ್ರೌಢಾವಸ್ಥೆಗೆ ಬರುತ್ತಿದ್ದ ಕಾಲದಲ್ಲಿ ಬಾಣ ಕಾದಂಬರಿಯು ಕನ್ನಡಕ್ಕೆ ಪರಿವರ್ತಿತವಾದದ್ದು ಸ್ವಾಭವಿಕವೇ ಆಗಿದೆ'' ಈ ಹೇಳಿಕೆಯಿಂದ ಕನ್ನಡ ಸಾಹಿತ್ಯದ ಅಂದಿನ ಸ್ಥಿತಿಗತಿಗಳು ವ್ಯಕ್ತವಾಗುತ್ತವೆ.

ನಾಗವರ್ಮನ ಕಾಲದಿಂದ ಅನುವಾದ ಪ್ರಕ್ರಿಯೆ ಸ್ಪಷ್ಟರೂಪ ತಳೆಯಿತು. ಅದುವರೆಗಿನ ಸಾಹಿತ್ಯದಲ್ಲಿ ಅಪರೋಕ್ಷವಾಗಿ ಪ್ರವಹಿಸಿದ ಅನುವಾದ ನಾಗವರ್ಮನಾದ ಪ್ರತ್ಯಕ್ಷ ಕ್ರಿಯೆಯಾಗಿ ಚರಿತ್ರೆಯಲ್ಲಿ ದಾಖಲಾಗಿದೆ. ಕರ್ನಾಟಕ ಎಂಬ ಪದ ಕನ್ನಡೀಕರಣ ಪ್ರಕ್ರಿಯೆಗೆ ದಿಕ್ಸೂಚಿಯಂತಿದೆ;

ಸತ್ಕೃತಿ ಸಂಸ್ಕೃತದಿಂದೆ ಜ
ಗಕ್ಕೌತುಕಮಾಗಿ ಮತ್ತೆ ಕರ್ಣಾಟದೊಳಂ
ಸತ್ಕವಿ ನಿವಹಂ ಪೊಗಳು ಚ
ಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್

ಅಕೃತಿ ಮುನ್ನಂ ಚೆಲ್ವಿಂ
ಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿ
ನ್ನೀ ಕವಿತೆಯಿಂದ ಪ್ರಗಲ್ಭತೆ
ಯಾ ಕಾದಂಬರಿಯ ಸೊಬಗದೇನಚ್ಚರಿಯೋ.

ಈ ಪದ್ಯಗಳಿಂದ ಅನುವಾದ ಯಾಕಾಯಿತು ಎಂಬುದು ಗೊತ್ತಾಗುತ್ತದೆ. ಸಂಸ್ಕೃತದ ಕೃತಿಯೊಂದನ್ನು ಜಗತ್ತಿನ ಕೌತುಕಕ್ಕಾಗಿ ಕನ್ನಡ ಭಾಷೆಯಲ್ಲಿ ಚಮತ್ಕಾರ ಯುಕ್ತವಾಗಿ ರಚಿಸುತ್ತೇನೆ ಎಂದಿದ್ದಾನೆ. ಬಾಣನ ಗೊಂಡಾರಣ್ಯದ ಕೃತಿಯನ್ನು ಕನ್ನಡ ಚಂಪೂ ಕಾವ್ಯವನ್ನಾಗಿ ಕವಿತೆಯಿಂ ಪ್ರಗಲ್ಭತೆಯಂ ಎನ್ನುವಂತೆ ರಚಿಸಿರುವನು. ಮೂಲಕ್ಕೆ ನಿಷ್ಠನಾಗಿದ್ದರೂ ಕೆಲವು ಕಡೆ ತನ್ನ ಶೈಲಿಯನ್ನು ಉಪಯೋಗಿಸಿಕೊಂಡಿದ್ದಾನೆ. ನಾಗವರ್ಮನ ಭಾಷಾಂತರ ಕುರಿತಾಗಿ ಹೀಗೆ ಹೇಳಲಾಗುತ್ತದೆ. ''ಗದ್ಯಕ್ಕೆ ಬದಲಾಗಿ ಮಿತಿಯಂತೆ ಪದ್ಯದಲ್ಲಿ ವಿವಿಧ ಛಂದಸ್ಸುಗಳ ಗತಿಯಿಂದ ವೈವಿಧ್ಯ ಉಂಟಾಗುತ್ತದೆ. ದೀರ್ಘ ಸಮಾಸಗಳು ವಿಭಜನೆಯಾಗದೇ ಸಾಧ್ಯವೇ ಇಲ್ಲ. ನೂರಾರು ವಾಕ್ಯಗಳ ಮತ್ತು ವಾಕ್ಯಪುಂಜಗಳಿಗೆ ಅನ್ವಯಿಸಬೇಕಾದ ಒಂದು ಕ್ರಿಯಾಪದವು ಇಲ್ಲಿ ಹತ್ತಾರು ರೂಪಗಳನ್ನಾದರೂ ತಾಳಬೇಕು. ಈ ಎಲ್ಲ ಸೌಲಭ್ಯಗಳನ್ನು ನಾಗವರ್ಮನು ಉಪಯೋಗಿಸಿಕೊಂಡು ಆದಷ್ಟು ದೇಶೀಯ ಶೈಲಿಯಲ್ಲಿ ಕೃತಿ ರಚನೆ ಮಾಡಿದ್ದಾನೆ. ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಮೂಲದ ಪೂರ್ಣ ಸ್ವಾರಸ್ಯ ಕೆಡದೇ ಪರಿವರ್ತನೆ ಮಾಡುವುದು ಸುಲಭವಾದ ಕೆಲಸವಲ್ಲ. ಆದರೂ ಕವಿ ಕೃತಕೃತ್ಯನಾಗಿದ್ದಾನೆ''.

''ಕ್ಷಿತಿಯೊಳ್ ಸೌವರ್ಣಕಾಂತಿ ಪ್ರಸರಮಸದಳಂ ಪರ್ವೆ ಸಂದಿರ್ದು ದಂತಾಕೃತಿ ಮುನ್ನಂ ಬಾಣವಾಣೀ ಪ್ರಿಯನ ವಚನದಿಂ ಮತ್ತೆ ಕರ್ಣಾಟ ಭಾಷಾ ಚತುರತ್ವಂ ಬೊರ್ದಿ ಕಾದಂಬರಿ ಪಸರಿಸಿ ರಾಜೇಂದ್ರ ಚಂದ್ರಾರ್ಕನೊಳ್ ಸಂಗತಿ ವೆತ್ತಾದಂ ತ್ರಿಲೋಹೀ ಸಹಚರಿಯೆನೆ ತಾಂ ಸಮದುದಾಚಂದ್ರ ತಾರಂ'' ಎನ್ನುವ ನಾಗವರ್ಮ ಪಂಪನ ಯುಗಕ್ಕಿಂತ ಭಿನ್ನ ಸಾಂಸ್ಕೃತಿಕ ಪರಿಸರವನ್ನು, ಕನ್ನಡಾಭಿಮಾನದ ಜಾಗೃತಿಯೊಡನೆ ಕಟ್ಟಿಕೊಟ್ಟಿದ್ದಾನೆ. ಪ್ರಪ್ರಥಮವಾಗಿ ಕರ್ನಾಟಕ ಎಂಬ ಪದವನ್ನು ಬಳಸಿ, ಕನ್ನಡದ ಭಾಷೆ ಮತ್ತು ಸಾಹಿತ್ಯದ ಕುರಿತಾದ ಅಭಿಮಾನವನ್ನು ಹೊರಗೆಡಹಿದ್ದಾನೆ.

ಅನುವಾದಿತದಿಂದ ಕರ್ಣಾಟಕ ಕಾದಂಬರಿಗೂ ಸಂಸ್ಕೃತ ಕಾದಂಬರಿಗೂ ವ್ಯತ್ಯಾಸ ಕಂಡುಬರುವುದು ರೂಪ ಸಂಬಂಧ ಸಂಸ್ಕೃತ ಕಾದಂಬರಿ ಗದ್ಯರೂಪದಲ್ಲಿದ್ದರೆ, ಕನ್ನಡ ಕಾದಂಬರಿ ಚಂಪೂ ರೂಪದಲ್ಲಿದೆ. ಅವನು ಈ ರೀತಿ ರೂಪ ಬದಲಾವಣೆ ಮಾಡಿದುದು ಉಚಿತವೇ. ಈ ಧೋರಣೆ ಆತನ ಸಾಂದರ್ಭಿಕ ನಿಲುವಾಗಿರುವುದೇ ಎಂಬ ಪ್ರಶ್ನೆಗಳು ಎದುರಾಗುತ್ತವೆ. ಬಾಣನ ಲಯ ತರಂಗಿತವಾದ ಗದ್ಯ ಛಂದಸ್ಸಿನ ಅಂಶಗಳಿಂದ ಪ್ರೇರಿತವಾಗಿ ನಾಗವರ್ಮನು ತನ್ನ ಕೃತಿಯನ್ನು ಛಂದೋ ರೂಪಕ್ಕೆ ತಿರುಗಿಸಿದನು. ಕಾದಂಬರಿಯ ಕತೆಗೆ ಗದ್ಯಕ್ಕಿಂತ ಪದ್ಯವೇ ಅತ್ಯುಚಿತ ಮಾಧ್ಯಮವೆಂದು ನಾಗವಮ ಮನಗಂಡಿರ ಬೇಕು. ಅವನು ಚಂಪೂ ಮಾಧ್ಯಮವನ್ನು ಆರಿಸಿಕೊಂಡುದಕ್ಕೆ ಅವನ ಕೃತಿ ರಚನೆಯ ಐತಿಹಾಸಿಕ ಸಂದರ್ಭವೂ ನಿಸ್ಸಂದೇಹವಾಗಿ ಕಾರಣ. 'ಕನ್ನಡ ಕಾದಂಬರಿ' ರಚಿತವಾದ ಕಾಲ ೧೧ನೇ ಶತಮಾನ. ಅದು ಗದ್ಯ ಪದ್ಯ ಮಿಶ್ರಿತದಿಂದ ಚಂಪುವಿನ ಯುಗ. ಬಾಣ ಕಾದಂಬರಿಯಲ್ಲಿ ವಿಷಯಕ್ಕಿಂತ ಶೈಲಿಯೇ ಮಹತ್ವವಾಗಿದೆ. ನಾಗವರ್ಮ ಈ ದೋಷ ನಿವಾರಣೆಗಿಯೇ ಈ ರೂಪವನ್ನು ಅಳವಡಿಸಿಕೊಂಡ ಎನ್ನುವುದು ಸಮಂಜಸವೆನಿಸುತ್ತದೆ. ನಾಗವರ್ಮ ಪದ್ಯಶೈಲಿಯ ಮೂಲಕ ಕೃತಿ ವಿಷಯಕ್ಕೆ ತನ್ನನ್ನು ಸಮರ್ಪಿಸಿಕೊಳ್ಳುವಂತೆ ಮಾಡಿದ. ಅವನು ಗದ್ಯ ರೂಪದಲ್ಲಿ ಅನುವಾದಿಸಿದ್ದರೆ, ಅದು ಬಹುಶಃ ಕೃತಕವೂ, ಕನ್ನಡಕ್ಕೆ ಅಸಹಜವೂ ಆಗಿರುತ್ತಿತ್ತು. ಮುಗಳಿಯವರು ಹೇಳಿದಂತೆ ''ಸಂಪೂರ್ಣ ಗದ್ಯದಲ್ಲಿದ್ದ ಮೂಲವನ್ನು ಗದ್ಯಪದ್ಯ ಮಿಶ್ರವಾದ ಚಂಪೂ ಕಾವ್ಯ ರೂಪಕ್ಕೆ ತಿರುಗಿಸ ಬೇಕೆಂದು ಅವನು ಮಾಡಿದ ಹಂಚಿಕೆ ತುಂಬ ಯೋಗ್ಯವಾಗಿ ಪರಿಣಮಿಸಿತು'' ಎಂದು ಸಂಸ್ಕೃತ ಕೃತಿಯೊಂದನ್ನು ಕನ್ನಡಿಗರಿಗೆ ಸರಳ, ಸುಂದರ ಶೈಲಿಯಲ್ಲಿ ಕೊಟ್ಟ ಕೀರ್ತಿ ನಾಗವರ್ಮನದು. ಈ ಕೃತಿಯಲ್ಲಿ ಆತನ ಸಂಸ್ಕೃತ ಭಾಷಾ ಪ್ರೌಢಿಮೆಯೊಂದಿಗೆ ಕನ್ನಡ ಪ್ರೇಮ ಎದ್ದು ತೋರುತ್ತದೆ. ಕನ್ನಡಿಸುತ್ತೇನೆ ಎಂದು ಹೇಳಿದ ಆತನ ನಿಲುವು ಸಮಯೋಚಿತವೆನಿಸುತ್ತದೆ. ಕರ್ನಾಟಕ ಎಂಬ ಪದವನ್ನು ಆತ ಬಳಸಿರುವುದರಲ್ಲಿ ಕನ್ನಡಕ್ಕೆ ಆ ಪ್ರಕಾರದ ಕಾವ್ಯವೊಂದರ ಅಗತ್ಯತೆ ಹಾಗೂ ಸಂಸ್ಕೃತ ಸಾಹಿತ್ಯಕ್ಕೆ ತನ್ನನ್ನು ಪರಿವರ್ತನೆಗೊಳ್ಳಬೇಕಾದ ಸಂದಿಗ್ಧತೆಗಳೆರಡೂ ಗೋಚರಿಸುತ್ತವೆ. ಪಂಪ, ರನ್ನಾದಿಗಳು ಅಪರೋಕ್ಷವಾಗಿ ಸಂಸ್ಕೃತ ಕಾವ್ಯದ ಆಧಾರ ಪಡೆದುಕೊಂಡರೆ, ನಾಗವರ್ಮ ಬಾಣ ಕಾದಂಬರಿಯನ್ನು ಕನ್ನಡಿಸುತ್ತಿರುವೆನೆಂಬುದಾಗಿ ಹೇಳಿಕೊಂಡಿದ್ದಾನೆ. ಇದು ಆ ಕಾಲದ ಸಾಂಸ್ಕೃತಿಕ ಅಗತ್ಯತೆಯೂ ಹೌದು ಎನ್ನುವುದು ಗಮನೀಯ ಅಂಶ.

ನಾಗಚಂದ್ರನು ಪಂಪನ ವಿಕ್ರಮಾರ್ಜುನ ವಿಜಯದಂತೆ ಪಂಪ ರಾಮಾಯಣವೆಂಬುದನ್ನು ಬರೆದು ಅಭಿನವ ಪಂಪನೆನಿಸಕೊಂಡ. ಪಂಪ ರಾಮಾಯಣ ಅಥವಾ ರಾಮಚಂದ್ರ ಚರಿತ ಪುರಾಣ ಪ್ರಾಕೃತ 'ಪಉಮಚರಿಯಂ'(ಪದ್ಮ ಚರಿತಂ)ಎಂಬುದರ ಅನುವಾದ. 'ಪಉಮಚರಿಯಂ' ರಾಮಚರಿತ ವನ್ನು ವರ್ಣಿಸುವ ಜೈನ ಮಹಾಗ್ರಂಥ. ಇದು ಕ್ರಿ.ಶ. ೧ನೆಯ ಶತಾಬ್ದಿಯಲ್ಲಿ ವಿಮಲಾಚಾರ್ಯನಿಂದ ರಚಿತವಾದುದು. ಪದ್ಮನೆಂದರೆ ರಾವನು; ಸಂಸ್ಕೃತ ಭಾಷೆಯಲ್ಲಿ ಸು. ಕ್ರಿ.ಶ. ೨ನೆಯ ಶತಮಾನದಲ್ಲಿ ರವಿಷೇಣಾಚಾರ್ಯನಿಂದ ರಚಿತವಾದ ಪದ್ಮ ಪುರಾಣವೆಂಬುದು ಜೈನ ರಾಮಾಯಾಣವು. ಈ ಎರಡೂ ರಾಮಾಯಣಗಳು ಪಂಪರಾಮಾಯಣದ ಆಧಾರ ಗ್ರಂಥಗಳು. ಅಭಿನವ ಪಂಪನು ಪಂಪನಂತೆಯೇ

'ಕತೆಪಿರಿದಾ...' ಎಂಬಂತೆ ತನ್ನದೇ ಆದ ವೈಯಕ್ತಿಕ ಉದ್ದೇಶವೊಂದನ್ನು ಹೇಳಿಕೊಂಡಿದ್ದಾನೆ. ''ಪಿರಿದೆನಿಸಿರ್ದ ರಾಮ ಕಥೆಯಂ ಕಿರಿದಾಗಿರೆ ದೇಸಿ ಮಾರ್ಗಮೆಂಬೆರಡರೊಳಂ...ಕೃತಿವೇಳ್ದೊಡೆ ಸತ್ಕವಿ ನಾಗಚಂದ್ರನಂತಿರೆ'' ಎಂದಿದ್ದಾನೆ. ಪಂಪ ರಾಮಾಯಣ ಅನಾದಿ ಕಾಲದಿಂದ ಜಿನ ಅಥವಾ ಗಣಧರರೂ ಪರಂಪರೆಯಾಗಿ ಹೇಳುತ್ತಾ ಬಂದುದೂ ವರ್ತಮಾನದಲ್ಲಿ ''ವಿಪುಲಾಚಂದೊಳ್ ವೀರ ಜಿನ ಪಾರ್ಶ್ವದೊಳ್ ಗೌತಮಂ ಗಣಾಗ್ರಣಿ ಮಗಧಾ॥ ಧಿಪನಳಿಯೆ ನೆರೆಯೆ ಪೇಳ್ದ ದಿನ ಪೂರ್ವಮೆನೆ ರಾಮ ಕಥೆಯ ನಭಿವರ್ಣಿಸುವೆಂ ॥ ಎಂದು ಪ್ರತಿಪಾದಿತವಾಗಿದೆ. ಬಹುಶಃ ಅನುವಾದಗಳ ಹಿಂದಿರುವ ಉದ್ದೇಶವೇ ಇದು ಎಂದರೆ ಆಶ್ಚರ್ಯವೇನಿಲ್ಲ. ಬೃಹತ್ ಕಥಾಕೋಶವೊಂದರ ಸಾಧ್ಯಾಸಾಧ್ಯತೆಗಳನ್ನು ವರ್ತಮಾನ ಕಾಲದ ಸಾಂಸ್ಕೃತಿಕ ಬದಲಾವಣೆಗಳಿಗೆ, ಅನ್ವಯಿಸಿ ಹೇಳುವುದು ಅನುಸೃಷ್ಟಿಕಾರನ ಮೂಲಧ್ಯೇಯ. ಕಥೆಯ ಅಥವಾ ಕೃತಿ ವಸ್ತು ವಿಷಯದ ಅನಗತ್ಯ, ಅಪಾರಿತ ಅಂಶಗಳನ್ನು ಮೊಟಕುಗೊಳಿಸಿ ಸಾಂದರ್ಭಿಕತೆಯ ಅಗತ್ಯಕ್ಕೆ ತಕ್ಕಂತೆ ವಸ್ತುವನ್ನು ಮಣಿಸಿ, ಸುಂದರ ಕಲಾಕೃತಿಯನ್ನಾಗಿಸುವುದು ಈ ಅನುಸೃಷ್ಟಿಯ ಹಿಂದಿರುವ ಮೂಲೋದ್ದೇಶ.

ಅಭಿನವ ಪಂಪನೆನಿಸಿಕೊಂಡ ನಾಗಚಂದ್ರ, ಲೌಕಿಕ, ಆಗಮಿಕ ಕೃತಿ ರಚನಾ ಮಾರ್ಗವನ್ನು ಕೈಬಿಟ್ಟು ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರ ಚರಿತ ಪುರಾಣಗಳನ್ನು ಧಾರ್ಮಿಕ ಕಾವ್ಯಗಳಾಗಿಯೇ ರಚಿಸಿದ್ದಾನೆ. ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರ ಚರಿತಾ ಪುರಾಣಗಳೆರಡೂ ಜೈನ ಪುರಾಣಗಳೇ. ರಾಮಚಂದ್ರ ಚರಿತ ಪುರಾಣ ವೈದಿಕ ರಾಮಾಯಣದ ವಸ್ತುವನ್ನು ಹೊಂದಿದ್ದರೂ ಜೈನ ರಾಮಾಯಣವಾಗಿ ಪರಿವರ್ತನೆ ಹೊಂದಿದೆ. '' ಈ ಎರಡೂ ಕೃತಿಗಳ ರಚನೆಗೆ ಜೈನಧರ್ಮವನ್ನು ವೈದಿಕ ಒತ್ತಡದಿಂದ ಉಳಿಸಿಕೊಳ್ಳುವ ಹಂಬಲವೂ ಕಾರಣವಾಗಿದೆ'' (ಪ್ರಾಚೀನ ಸಾಹಿತ್ಯ, ಸಿ.ವೀರಣ್ಣ, ನವ ಕರ್ನಾಟಕ ಪ್ರಕಾಶನ, ೧೯೮೬, ಪು. ೩೭೩).

ಕಥೆ ಜಿನ ಚರಿತಮೆ ಕವಿ ಜಿನ
ಕಥೆಯಂ ಪೇ ವನೆ ರಾಜವಿಡಿಚೋರಕಥಾ
ಕಥೆಕಥೆಯೆ ಕವಿ ಕವಿಯೆ ತ
ತ್ಕಾಥೆಯಂ ಪೇ ಪ್ರಶಸ್ತಮಾ ಪುಟ್ಟಿಸುಗುಂ ( ೧-೫೦).

''ಸತ್ಕೃತಿ ಬಂಧಮದರ್ಕೆ ಸಜ್ಜನ ಪ್ರೀತಿ ನಿಬಂಧವಲ್ಲದೊಡದೇಂದುರಿತಕ್ಷಯ ಕಾರಣಂ ಜಿನ ಖ್ಯಾತಿ ನಿಬಂಧಮೆಂಬ ಬರೆ ಕೈಮಿಗೆ ಪೇ ಪೆನೀ ಪ್ರಬಂಧಮಂ'' ಎಂದು ದುರಿತಕ್ಷಯ ಕಾರಣವಾದ ಜಿನಕಥೆಯನ್ನು ಹೇಳುವ ಆಧ್ಯಾತ್ಮ ಪರವಾದ ನಿಲುವು ಅವನದಾಗಿದೆ.

ಗುಣಭದ್ರನ ಉತ್ತರ ಪುರಾಣದಲ್ಲಿರುವ ಕಥಾವಸ್ತುವನು ಮೂಲ ಸಾಮಗ್ರಿಯಾಗಿಸಿ ಮಲ್ಲಿನಾಥ ಪುರಾಣವನ್ನು ರಚಿಸಿದ್ದಾನೆ. ಚಿಕ್ಕಕಥೆಯೊಂದನ್ನು ಪುರಾಣವಾಗಿ ಪರಿವರ್ತಿಸಿದ ಆತನ ಪ್ರತಿಭೆಯನ್ನು ಆತನೇ ಹೇಳಿಕೊಂಡಿರುವ ಹೇಳಿಕೆಗಳಲ್ಲಿ ಕಾಣಬಹುದು. ''ಕಿರಿವೀ ಕಥಾ ಪರಿಸ್ಪಂದಮಿದಂ ನಿವಿಂರ್ಚಿ ಕವಿತಾರಸಮಂ ನೆರೆಪೇ ರಿಲ್ಲಮುನ್ನೆಂದು ಮಹಾ ಕವೀಶ್ವರರೊಳೊರ್ವ್ವರು ಮೆಂದೊಡೆ ಪೇಲಾಂ ಮನಂದಂದೆ'' ಎಂದು ಅನುವಾದದ ಬೇರೊಂದು ಬಗೆಯನ್ನು ಸೂಚ್ಯವಾಗಿ ತಿಳಿಸುತ್ತಾನೆ. ನಾಗಚಂದ್ರನ ಕಾಲಕ್ಕೆ ಜೈನ ಪ್ರಭಾವ ನಿಸ್ತೇಜವಾಗಿರುವ ಹಿನ್ನೆಲೆಯನ್ನು ಆತನ ಮಾತು ತೋರಿಸಿಕೊಡುತ್ತವೆ. ''ಕೃತಿ ಸಾಧಾರಣಮಾದೊಡಂ ಶ್ರವಣ ಸೇವ್ಯಂ'' ಎಂಬುದು ಆ ಕಾಲದ ಪರಿಸರವನ್ನು ಜನತೆಯ ಎದುರಿಗಿಡುತ್ತಿದೆ. ಒಟ್ಟಿನಲ್ಲಿ ಪಂಪನಂತೆ ಈತನು ಕತೆ ಪಿರಿದಾದೊಡಂ.... ಎನ್ನುವುದನ್ನು ಸ್ವಲ್ಪ ಬದಲಾಗಿ ಚಿಕ್ಕ ಕಥೆಯೊಂದನ್ನು ೧೪ ಆಶ್ವಾಸಗಳಲ್ಲಿ ಹಿಗ್ಗಿಸಿದ ಬಗೆ ಒಂದು ಬಗೆಯ ವಿಶಿಷ್ಟ ಅನುವಾದವನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದೆ.

ನಾಗಚಂದ್ರನ ಕಾಲಕ್ಕೆ ಸಂಸ್ಕೃತ ಮತ್ತು ಆ ಭಾಷೆಯಲ್ಲಿನ ಮಹಾಕಾವ್ಯ ಲಕ್ಷಣಗಳೇ ಕನ್ನಡ ಕವಿಗಳಿಗೆ ಆಳತೆಗೋಲಾಗಿ ಮಾರ್ಗದರ್ಶಕ ಆದುದರಿಂದ ಕಾವ್ಯ ನಾಯಕನ ಪಡ್ಡಿವನ್ನು ರಾಮನಿಗೆ ಕಡ್ಡಿ ರಾಮನೆಂಬ ಹೆಸರಿಗೆ ಬದಲಾಗಿ 'ಪದ್ಮ'ನೆಂದು ಕರೆದರು. 'ಪಿರಿದೆನಿಸಿರ್ದ ರಾಮಕಥೆಯಂ ಕಿರಿದಾಗಿರೆ' ಎಂದು ಹೇಳಿದ್ದಾನೆ. ಆವನು ತನ್ನ ಕಾವ್ಯ ವಿದ್ದಚ್ಚಮತ್ಕಾಂತಿಯಿಂದ ಕೂಡಿದ್ದೆಂದು ಭಾವಿಸುವುದು, ಅವನು ಕಾವ್ಯವನ್ನು ಗ್ರಹಿಸಿದ ಮನೋಧರ್ಮಕ್ಕೆ ಹಿಡಿದ ಕನ್ನಡಿಯಾಗುತ್ತದೆ. ಸಂಸ್ಕೃತ ಕಾವ್ಯ ಪರಂಪರೆಯ ಭಾರವನ್ನು ಹೊತ್ತುಕೊಂಡೇ ನಾಗಚಂದ್ರ ನಡೆದಿದ್ದಾನೆ. ನಾಯಕ ನನ್ಯನಾಗೆ ಕೃತಿ ವಿಶ್ರುತೆ ಮಾಗೆದುದಾತ್ತ ರಾಘವನಾಯಕನಾಗೆ ವಿಶ್ರುತಮೆನಿಪ್ಪದು ಎನ್ನುವ ವಿಮರ್ಶೆಯ ಮಾತು ಜೈನ ಪರಂಪರೆಗೆ ಬೇರೆಯಾಗಿ ಆವನು ಮಾಡಿಕೊಂಡ ಬದಲಾವಣೆಯನ್ನು ಸಮರ್ಥಿಸಲೇಂದೇ ಹುಟ್ಟಿಕೊಂಡಿದೆ. ಗೌತಮರೇ ಮೊದಲಾದ ಜಿನಮುನಿ ಮುಖ್ಯರು ಈ ಕಥೆಯನ್ನು ಹೇಳುತ್ತಿರುದಾಗಿ ನಾಗಚಂದ್ರ ತಾನೇಕೆ ರಾಮಾಯಣ ಕಥಾನಕವನ್ನೆತ್ತಿಕೊಂಡೆಂಬುದಕ್ಕೆ ಕಾರಣ ಒದಗಿಸುತ್ತಾನೆ. ನಾಗಚಂದ್ರನಿಗಿಂತ ಹಿಂದೆ ಇದ್ದ ಶ್ರೀವಿಜಯ ಬರೆದ ರಘುವಂಶ ಪುರಾಣವನ್ನು ಸಿಕ್ಕದೆ ಇರುವುದರಿಂದ, ಸದ್ಯಕ್ಕೆ ಮಹಾಭಾರತವನ್ನು ತಂದ ಪಂಪನಂತೆ ರಾಮಾಯಣವನ್ನು ಕನ್ನಡಕ್ಕೆ ಮೊದಲು ತಂದ ಕವಿ ನಾಗಚಂದ್ರನೆಂಬುದು ಉಳಿಯುತ್ತದೆ. ನಾಗಚಂದ್ರನು ಇಕ್ಷ್ವಾಕು ವಂಶದ ಪ್ರಾರಂಭವನ್ನು ಕೂಡ ನಾಭಿಸುವ್ರತನಾಥ, ವಕ್ರಬಾಹು ಗಳಿಂದ ವೈದಿಕ ಪರಂಪರೆಯನ್ನು ಬಿದ್ದು ಬಿಡುತ್ತಾನೆ. ಇಕ್ಷ್ವಾಕುವಂಶದ ರಾಜರು ಒಬ್ಬರಾದ ಮೇಲೊಬ್ಬರಂತೆ ಸನ್ಯಾಸ ಸ್ವೀಕರಿಸುವುದು ರಘುವಂಶಕ್ಕೆ ಜೈನಪರಂಪರೆಯ ಪ್ರಾಚೀನತೆಯನ್ನು ತೋರಿಸಲು ಮಾಡಿದ ಪ್ರಯತ್ನ ಎನಿಸುತ್ತದೆ. ಒಟ್ಟಿನಲ್ಲಿ ವೈವಿಕ ಪರಂಪರೆಯನ್ನು ಜೈನಪರಂಪರೆಯಾಗಿ ಪರಿವರ್ತಿಸುವ ಆತನ ಶೈಲಿಯ ಪ್ರಮುಖ ಘಡ್ಡಿವಾಗಿ ಗೋಚರಿಸಿದೆ.

ಅಭಿನವ ಪಂಪ ಚಿತ್ರಿಸಿದ ಈ ಕೃತಿ ವೈಶಿಷ್ಟ್ಯವು ಬೆಸಧರ್ಮದ ನೆಲೆಯಲ್ಲಿ ಅಭಿವ್ಯಕ್ತಗೊಂಡಿದೆ. ಜೈನಧರ್ಮದ ಜಗತ್ತಿಗೆ ಕರ್ತೃವುಂಟೆಂಬುದನ್ನು ಒಪ್ಪುವದಿಲ್ಲ, ಜಗತ್ತು ಅನಾದಿಸಿದ್ಧವು. ಜೀವನು ಮನುಷ್ಯಜನ್ಮ ಪಡೆದಾಗ ಅಂತರಂಗ, ಬಹಿರಂಗ ರೂಪವಾದ ದ್ವಿವಿಧ ತಪಸ್ಸಿನಿಂದ ಅನಾದಿಯಾಗಿ ಅಂಟಿಕೊಂಡಿದ್ದ ಸಮಸ್ತಕರ್ಮಗಳನ್ನು ನಾಶಗೊಳಿಸಿ ಮೋಕ್ಷವನ್ನೈದುವನು ಎಂಬ ಸತ್ಯದಡಿ ವೈದಿಕ ಸಂಸ್ಕೃತಿಯನ್ನು ಜೈನ ಸಂಸ್ಕೃತಿಯಲ್ಲಿ ಬೆಸೆದಿದ್ದಾನೆ. ಒಟ್ಟಿನಲ್ಲಿ ವೈದಿಕ ಕಥಾವಸ್ತುವನೇ ಜೈನ ಕಥಾವಸ್ತುವಾಗಿ ಮಾರ್ಪಡಿಸಿದ್ದಾನೆ ರಾಜಾಶ್ರಯ, ಜೈನಧರ್ಮದ ಪ್ರಾಮುಖ್ಯತೆ ಸಾಂದರ್ಭಿಕ ಅಂಶಗಳಾಗಿರುವದರಿಂದ ಈ ಬಗೆಯ ಸಾಂಸ್ಕೃತಿಕ ಪರಿವರ್ತನೆಯ ಅಗತ್ಯತೆ ಕಂಡು ಬಂದಿದೆ.

ಜನ್ನನು ಪಂಪ ರನ್ನಾದಿಗಳಂತೆ ರಾಜಾಶ್ರಯ ಹೊಂದಿದವನು ಆಗಿದ್ದನು. ಇವನು ಅದೇ ಸಾಂಪ್ರದಾಯದಂತೆ ಅನಂತನಾಥ ಪುರಾಣವೆಂಬ ಆಗಮಿಕ ಕಾವ್ಯವನ್ನು ಯಶೋಧರ ಚರಿತೆ ಎಂಬ ಲೌಕಿಕ ಕಾವ್ಯವನ್ನು ಬರೆದನು. ಯಶೋಧರ ಚರಿತೆಯನ್ನು ಬರೆದ ಸಂದರ್ಭದಲ್ಲಿ ಜನ್ನನು '' ನೃಪನ ಸಭೆಳನಾಳ ಕಳಂಗಿ ಪ್ರಣರ ನಟ್ಟ ನಡುವೆ ಬೊಟ್ಟೆತ್ತಿ ಗೆಂತ್ ತಾನೆ ಚತುರ್ವಿಧ ಪಂಡಿತ'' ಹೊಯ್ಸಳ ವೀರ ಬಲ್ಲಾಳನಲ್ಲಿ ಆಸ್ಥಾನ ಕವಿಯಾಗಿದ್ದನು.

ಜನ್ನ ಜೈನ ಪರಂಪರೆಯ ಕವಿಯಂತೆ ತೋರಿಕೆಗೆ ಎಲ್ಲ ಲಕ್ಷಣಗಳನ್ನು ಅಭಿವ್ಯಕ್ತಿಸಿ ಅದರ ತೂಢಿಯನ್ನು ಪಾಲಿಸಿ ಲೌಕಿಕ, ಆಗಮಿಕ ಕಾವ್ಯರಚನೆ ಮಾಡಿದನಾದರೂ ಆತ ಮಧ್ಯಕಾಲಕ್ಕೆ ಸೇರಿದವನು ಅದಕ್ಕೆ ತಕ್ಕಂತೆ ಭಾಷೆಯಲ್ಲಿ ಬಿಗುವಿನ ಬದಲು ಲಾಲಿತ್ಯ ಕಂಡುಬರುತ್ತದೆ. ಚಂಪೂ ಬದಲು ಕಂದಗಳಲ್ಲಿ ಇಡಿ ಕಾವ್ಯ ರಚನೆ ಮಾಡಿದ್ದಾನೆ. ಅಂದಿನಕಾಲದ ರಾಜಾಶ್ರಯ ವಿರೋಧಿ ಹಾಗೂ ಜನಾಮುಖಿ ಧೋರಣೆ ಆತನ ಕೃತಿಯ ಭಾಷೆ ಮತ್ತು ಶೈಲಿಯಲ್ಲಿ ಮೊತ್ತವಾಗಿರುವದು. ಆತನ ಕಾಲದ ಸಾಂಸ್ಕೃತಿಕ ಅಗತ್ಯವಾಗಿದೆ. ಲೌಕಿಕ ಆಗಮಿಕ ಎರಡೂ ಬಗೆಯ ಕೃತಿಗಳಲ್ಲಿ ಜನ್ನ ಹೆಣ್ಣು ಗಂಡಿನ ಸಮಸ್ಯೆಯನ್ನು ಪ್ರಮುಖವಾಗಿ ಚಿಂತಿಸಿರುವದು ಬದಲಾದ ಕಾಲಧರ್ಮದ, ಬದಲಾದ ಮನೋಧರ್ಮವನ್ನು ಸೂಚಿಸುತ್ತದೆ.

ಜನ್ನ ಮೇಲುನೋಟಕ್ಕೆ ಪ್ರಾಚೀನ ಸಾಹಿತ್ಯ ಪರಂಪರೆಗೆ ಸೇರಿದವನಾದರೂ ಆತ ಮಧ್ಯಕಾಲದವನ್ನು ಈತನ ಕೃತಿಗಳು ಬದಲಾಗುತ್ತಿರುವ ಯುಗಧರ್ಮದ ಗುಣಲಕ್ಷಣಗಳನ್ನು ಅಪ್ರಜ್ಞಾಪೂರ್ವಕವಾಗಿ ಒಳಗೊಂಡಿರುವದೇ ಅವುಗಳ ಶ್ರೇಷ್ಠತೆಯಾಗಿದೆ. ಇದು ಅಂದಿನ ಕಾಲದ ಬದಲಾಗುತ್ತಿರುವ ಸಾಂಸ್ಕೃತಿಕ ಸ್ವರೂಪವನ್ನು ತನ್ನ ಭಾಷೆ,ಶೈಲಿ ವಸ್ತು ಛಂದೋರೂಪದಲ್ಲಿ ಅಡಕಗೊಳಿಸಿ ಪ್ರತಿಬಿಂಬಿಸಿದೆ. ಜನ್ನ ಯಶೋಧರ ಚರಿತೆಯನ್ನು ಬರೆಯುವ ಸಮಯದಲ್ಲಿ ಬಲ್ಲಾಳಿ ನೃಪನ ಸಭೆಯೊಳಖಿಳ ಕಳುನಿಪುಣರ ನಟ್ಟನಡುವೆ ಬೊಟ್ಟೆತ್ತಿ ಗೇಲ್‌ತಾನೆ ಚತುರ್ವಿಧ ಪಂಡಿತನಾಗಿದ್ದನಾದರೂ ಕವಿಚಕ್ರವರ್ತಿಯಾಗಿರಲಿಲ್ಲ. ಅನಂತನಾಥಪುರಾಣ ಬರೆಯುವ ಹೊತ್ತಿಗೆ ಕವಿಚಕ್ರವರ್ತಿಯಾಗಿದ್ದ ಅರ್ಥಾತ್ ಕವಿಚಕ್ರವರ್ತಿಯಾಗುವ ಹವಣಿಕೆಯಲ್ಲಿ ಜನ್ನ ಇಂಥ

ಕೃತಿಯೊಂದನ್ನು ಅನುವದಿಸಿದನೇ? ಎಂಬ ಸಂದೇಹ ಮೂಡುತ್ತದೆ. ಇದಕ್ಕೆ ಇಂಬುಕೊಡುವಂತೆ ಅಂಕಿತ ಗದ್ಯದಲ್ಲಿ ಇರದೇ ಹೋದರೂ ಯಶೋಧರ ಚರಿತೆಯಲ್ಲಿ 'ಕನ್ನರನಾದರದಿಂ ಕುಡೆಹೊನೇಂ ಮನ ಮೊಸೆದು ತೆಲಪಂ ಕುಡೆ ರನ್ನಂ ಮನ್ನಿಸಿ ಬಲ್ಲಾಳಂ ಕುಡೆ ಜನ್ನಂ ಕವಿಚಕ್ರವರ್ತಿ ವೆಸರಂ ಪಡೆದರ್' ಎಂಬುದು ಜನ್ನನ 'ಜಿನೇಂದ್ರವಾಗ್ ವನಿತೆನಿಲ್ಕಸ್ಮನ್ ಮುಖಾಂಭೋಜದೊಳ್' ಎಂಬುದು ಜಿನವಾಣಿಯ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತದೆ. ಜೈನಧರ್ಮದ ಪ್ರಾಚಾರ್ಯವನ್ನು ಇದು ತಿಳಿಸಿಕೊಡುತ್ತದೆ. ಜನ್ನಕವಿಯು ಈ ಕೃತಿ ರಚಿಸುವ ವೇಳೆ ಜೈನಪುರಾಣದ ಮಾರ್ಗಸೂಚಿಯೊಂದು ಸಿದ್ಧವಾಗಿತ್ತು. ಯಶೋಧರಚರಿತೆ ಸಂಸ್ಕೃತ ಗ್ರಂಥದ ಅನುವಾದವಾಗಿದೆ.

ಕ್ಷತಿಯೊಳ್ ಸಂಸ್ಕೃತದಂ ಪ್ರಾ
ಕೃತದಿಂ ಕನ್ನಡ ದಿನಾದ್ಯರಾರ್ ಈಕೃತಿಯಂ
ಕೃತಿ ಮಾಡಿದರವರ್ಗಳ್ ಸನ್
ಮತಿ ಕೈಗುಡುಗೆಮಗೆ ಸರಸ ಪದ ಪದ್ಧತಿಯೊಳ್.

(ಯಶೋಧರ ಚರಿತೆ, ಸಂಪಾದಕ; ಕ.ವೆಂ. ರಾಘವಾಚಾರ್, ಉಷಾ ಸಾಹಿತ್ಯಮಾಲೆ ಮೈಸೂರು ೧೯೭೮).

ವಾದಿರಾಜ ಸೂರಿಯು ಸಂಸ್ಕೃತದಲ್ಲಿ ಬರೆದಿರುವ ನಾಲ್ಕು ಸರ್ಗಗಳ ಯಶೋಧರ ಚರಿತೆ ಜನ್ನನ ಕಾವ್ಯಕ್ಕೆ ಮೂಲ ಜೀವಾಳ. ಪ್ರೇಮದ್ರೋಹದಿಂದ ಬೇಸತ್ತು ಸಂಸಾರ ತೊರೆದು ಹೋಗುವುದರಲ್ಲಿದ್ದ ದೊರೆಯೊಬ್ಬನು ತಾಯಿ ಮೇಲಿನ ಮೋಹದಿಂದ ಆಕೆ ಒಡ್ಡಿದ ಬಲೆಗೆ ಸಿಕ್ಕಿ ಬಿದ್ದು,ವಿಷಗಳಿಗೆಯಲ್ಲಿ ಮಾನಸಿಕ ಹಿಂಸೆಗೆಡೆಗೊಟ್ಟು, ಆ ಪಾಪದ ಫಲವಾಗಿ ಜನ್ಮ ಜನ್ಮಗಳು ಕಷ್ಟವನುಭವಿಸಿ, ಕಡೆಗೆ ಪಾಪ ಮುಕ್ತವಾದ ಕಥೆ ಯಶೋಧರ ಚರಿತೆ ವಿಷಯ. ಇದರಲ್ಲಿ ಒಂದು ಆತ್ಮದ ಅಳಲು ತೊಳಲುಗಳ, ಏಳುಬೀಳುಗಳ, ಕಟ್ಟುಬಿಡುಗಡೆಗಳ ಕಥೆಯನ್ನು ನಾವು ಕಾಣುತೇವೆ. ಜೈನಧರ್ಮದ ಮೂಲತತ್ವಗಳಲ್ಲಿ ಎರಡಾದ ಅಹಿಂಸಾತತ್ವವನ್ನೂ, ಜನ್ಮಾಂತರ ತತ್ವವನ್ನೂ ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಬೋಧಿಸುವದು ಇದರ ಉದ್ದೇಶವಾದರೂ ಅನೇಕ ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ. ಮೊದಲಲ್ಲಿ ಕವಿಯ ಸ್ವವಿಷಯವೂ ಬಲ್ಲಾಳದೇವನ ಅನ್ವಯ ಕಥನವೂ ಮೊದಲಿಗೆ ಬರುತ್ತದೆ. ''ಒಟ್ಟಿನಲ್ಲಿ ಜನ್ನನ ಕನ್ನಡ ಕೃತಿ ವಾದಿರಾಜನ ಸಂಸ್ಕೃತ ಕೃತಿಯ ಸರಳನುವಾದ ಎನ್ನಬಹುದು. ಆದರೂ ಕನ್ನಡ ಬರವಣಿಗೆಯ ಓಲೆಗಳನ್ನಾಗಲಿ, ಅಚ್ಚುಕಟ್ಟನ್ನಾಗಲಿ, ನುಡಿಗಟ್ಟನ್ನಾಗಲಿ ನೋಡಿದರೆ ಅದು ಭಾಷಾಂತರವೆಂದು ಹೇಳುವಂತಿಲ್ಲ. ಅನ್ಯಭಾಷೆಯ ಕಾವ್ಯದ ಆತ್ಮವನ್ನು ಗ್ರಹಿಸಿ ಸ್ವಭಿಲಾಷೆಯ ನೈಸರ್ಗಿಕತೆಯಿಂದ ಪ್ರತಿಬಿಂಬಿಸುವ ಇಂಥ ಅನುವಾದ ಶೈಲಿ ಮೊದಲಿನಿಂದಲೂ ನಮ್ಮ ಕನ್ನಡ ಕವಿಗಳ ಒಂದು ಹಿರಿಯ ತನಿ ಗುಣ''(ಯಶೋಧರ ಚರಿತೆ;ಸಂಪಾದಕ, ಕ.ವೆಂ. ರಾಘವಾಚಾರ್, ಉಷಾಸಾಹಿತ್ಯಮಾಲೆ, ೧೯೭೮).

ಗುಣಭದ್ರಾಚಾರ್ಯರು ಸಂಸ್ಕೃತದಲ್ಲಿ ಪದ್ಯರೂಪದಲ್ಲಿ ಬರೆದಿರುವ ಉತ್ತರ ಪುರಾಣದಲ್ಲಿಯೂ, ಚಾವುಂಡರಾಯನು ಕನ್ನಡದಲ್ಲಿ ಗದ್ಯರೂಪದಲ್ಲಿ ಬರೆದಿರುವ ತ್ರಿಷಷ್ಟಿಶಲಾಕಾಪುರುಷ ಬರುವ ಅನಂತ ಸೇನನ ಕಥೆಯು ಜನ್ನನ ಯಶೋಧರ ಚರಿತೆಗೆ ಮೂಲ. ಭಾಷೆ ಸಂಸ್ಕೃತ ಭೂಯಿಷ್ಟವಾಗಿ ಸಾಮಾನ್ಯರಿಗೆ ಪೆಡಸಾಗಿದೆ''. ಪೊಸಗನ್ನಡದಿಂ ವ್ಯಾವರ್ಣಿಸುವೆಂಸತ್ ಕೃತಿಯನೆಂದು ಕನ್ನಡಮಂ ಚಿಂತಿಸಿ ಕೊಡಲಾ ದಕ್ಕಾಪಿ ಮಿಸುಕದ ಸಕ್ಕಾದೆಮನಿಕ್ಕುವನನಾಂ ಕವಿಯೇ?'. ''ಸಕ್ಕಾದಮಂ ಪೇ ಡೆ ನೆ ಸಕ್ಕಾದಮಂ ಪೇ , ಶುದ್ಧ ಕನ್ನಡದೊಳ್ ತಂದಿಕ್ಕುದ್ರವೆ ಸಕ್ಕಾದಂಗಳ ? ತಕ್ಕುದೆ ಬರೆಸಲ್ಲೆ ಘೃತಮಾಮಂ ತೈಲಯಾದುಂ ತೈಲಯಾದುಂ ?''.

ಉದಾ: ಅವನೀದೃಶ್ಯಾಂಚನಕ್ಷೇಪಣ ವಿಪುಳಕಪೋಲಂ ಶಿಖಂಡಿಸ್ಫುರತ್ತಾಂ
ಡವರಂಗ ಸಾಂದ್ರಚಂದ್ರೋದಯಮಮರಸರಿತ್ ಪದ್ಮಪತೋರದನೀಲೀ
ನಿವಹಂ ಪರ್ಜನ್ಯದೋಹಕ್ಷಮ ಬಹುಮಹಿಷಿ ಸಂಕುಲಂ ಯಾಮಿನಿ ಸಂ
ಭವಶುಂಭನ್ಮಂವಿರಂ ನಿಂದುದು ಪಿಕರುಚಿರೋತ್ತಾಳ ಮಂಭೋದಚಾಳಂ.

ಕವಿ ಜನ್ನನು ಧಾರ್ಮಿಕ ಕೃತಿಯೊಂದರ ಆಧಾರದ ಮೇಲೆ ಅನಂತನಾಥ ಪುರಾಣವಾಗಲೀ, ಸಂಸ್ಕೃತ ಕೃತಿಯೊಂದನ್ನು ಆಧರಿಸಿ ಬರೆದ ಯಶೋಧರ ಚರಿತೆವಾಗಲೀ ಗಂಡು ಹೆಣ್ಣಿನ ಪ್ರೀತಿ ಪ್ರೇಮವನ್ನು ತಿಳಿಸುವ ಸಾಂಸ್ಕೃತಿಕ ಪರಿಸರವನ್ನು ಕಾವ್ಯದ ಮೂಲಕ ಕಟ್ಟಿಕೊಟ್ಟಿದ್ದಾನೆ, ಜೊತೆಗೆ ಇದು ಆ ಕಾಲದ ಅಂತಃಪುರದ ವ್ಯವಹಾರವನ್ನು ಸೂಕ್ಷ್ಮವಾಗಿ ತಿಳಿಸಿಕೊಡುತ್ತಿರಬಹುದು. ಆತನ ಶೈಲಿಯೂ ಬದಲಾದ ಕಾವ್ಯಮನೋಧರ್ಮವನ್ನು ಸೂಚ್ಯವಾಗಿ ಸೂಚಿಸುವದು. ಮಾರ್ಗ ಸಾಹಿತ್ಯದಲ್ಲಿರುವ ಪದ್ಯವೊಂದನ್ನು ದೇಸಿ ಭಾಷೆಯಲ್ಲಿ ಅನುವಾದಿಸಿದಾಗ ಅದು ಮೂಲದ ಗ್ರಾಂಥಿಕ ಭಾಷೆಗಿಂತ ಹೇಗೆ ಭಿನ್ನ ಮಾದರಿಯಲ್ಲಿ ಎಷ್ಟು ಆಪ್ತವಾಗಿವೆ ಓದುಗನನ್ನು ಸೆರೆಹಿಡಿಯುತ್ತದೆ ಎಂಬುದು ಗಮನಾರ್ಹ ಸಂಗತಿ.

ಉದಾ: ತಸ್ಮಾದವಶ್ಯ ಮನುಭೋಕ್ತವ್ಯೇ ಕಿಮುದ್ವೇಗ: ಕರಿಷ್ಯತೇ!
ಕಂಚ ತೀವ್ರಂ : ತಪ: ಪ್ರಾಹು: ಪರೀಕ್ಷಹಜಯಂಬುಧಾಃ!

ನಿಯತಿಯನಾರ್ ಮೀ ದಪರ್
ಭಯಮೇವುದೋ ಮಾಡ್ದಿದೆಡೆಗೆ ಪ್ಪೆರಿಸುವುದೆ ಕೇಳ್
ನಯವಿದೆ ಪೆತ್ತ ಪರಿಕ್ಷಹ
ಜಯಮೆ ತಪಂ ತಪಕೆ ಭೇ ಕೂಡೆರಡೊಳವೇ.

ಜನ್ನ ತನ್ನೆರಡೂ ಕೃತಿಗಳಲ್ಲಿ ಜೀವನದ ಪುರುಷಾರ್ಥಗಳಲ್ಲಿ ಒಂದಾದ ಕಾಮವನ್ನು ಮೋಕ್ಷ ಪ್ರಾಪ್ತಿಯ ಮೆಟ್ಟಿಲಾಗಿ ಚಿತ್ರಿಸಿದ್ದಾನೆ. ಯಶೋಧರ ಚರಿತೆಯಲ್ಲಿ ಅಮೃತಮತಿ, ಇನ್ನೊಂದು ಕೃತಿಯಲ್ಲಿ ಚಂಡಶಾಸನನ ಮಿತ್ರನ ಹೆಂಡತಿ. ಈರೀತಿಯ ಹೆಣ್ಣು ಗಂಡಿನ ಸಮಸ್ಯೆಯಲ್ಲಿ ' ಜಿನಮತ ನಂದನದೊಳ್ ದಾನಲತೆ ದಯಾರಸದೆ ಜಗಂ ಹಂದರೆನೆ' ಎಂಬ ಜೈನಧರ್ಮ ಮಾರ್ಮಿಕವಾಗಿ ಮೂಡಿಬಂದಿದೆ.

ಭಕ್ತಿ ಪರಂಪರೆಯ ಭಿನ್ನನೆಲೆಯನ್ನು ಶಕ್ತಿಯುತವಾಗಿ ಮುಂದುವರೆಸಿದ ಹರಿಹರನ ಪುರಾತನರ ರಗಳೆಗಳು ಸಾಂಸ್ಕೃತಿಕ ಅನುವಾದ ಪ್ರಕ್ರಿಯೆಗೆ ಒಳಗಾದವುಗಳಲ್ಲಿ ಪ್ರಮುಖವಾದವುಗಳು. ೧೨ನೆಯ ಶತಮಾನದಲ್ಲಾದ ವಚನ ಕ್ರಾಂತಿಯಲ್ಲೂ ಅನುವಾದದ ಮೂಲಕ ತನ್ನನ್ನು ಸಂಸ್ಕೃತ ಗುರುತಿಸಿಕೊಂಡಿದೆ. ಶಿವಶರಣರ ವಚನಗಳಲ್ಲಿ ಉಪನಿಷತ್ ಭಾವಧಾರೆಯ ಬಿಂದುಗಳೆ ಅನುವಾದಿತ ರೂಪ. ''ಅನುಭವಿಯ ಅನುಭವವೇ ವೇದವೆಂದು'' ಅಲ್ಲಮ ಪ್ರಭು ಹೇಳಿದ ವಚನವಾದರೂ ವ್ಯಾಖ್ಯೆಯನ್ನು ಕನ್ನಡದಲ್ಲಿ ಅನುವಾದಿಸಿದಂತಾಗಿದೆ. ವಚನಗಳೆಂದರೆ ಕನ್ನಡ ಉಪನಿಷತ್ತುಗಳೇ ಎಂದು ಆರ್.ನರಸಿಂಹಾಚಾರ್ಯರು ಹೀಗೆ ಹೇಳಿರುತ್ತಾರೆ: ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯ ಸ್ಥಾನವನ್ನು ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನಮುಟ್ಟುವಂತೆ ಬೋಧಿಸುತ್ತವೆ. ಇವನ್ನು ಕನ್ನಡ ಉಪನಿಷತ್ತುಗಳೆಂದು ಕರೆಯಬಹುದು.

ಈ ವಚನ ಚಳುವಳಿ ಸಾಮಾಜಿಕ ಕ್ರಾಂತಿಗೆ ಕಾರಣವಾಗಿರುವಂತೆ ಧಾರ್ಮಿಕ ಚಳುವಳಿಯೂ ಆಗಿತ್ತು. ಈ ಮೂಲಕ ಅದು ಜೈನಧರ್ಮದ ಪ್ರಭಾವವನ್ನು ಕುಗ್ಗಿಸಿತು . ಹಾಗೂ ಶೈವಧರ್ಮದ ನೆಲೆಯಲ್ಲಿ ವೀರಶೈವವನ್ನು ಸ್ಥಾಪಿಸುವ ಗುರಿ ಹೊಂದಿತ್ತು. ಇದಕ್ಕೂ ಮಿಗಿಲಾಗಿ ಅದು ತನ್ನ ಆರಂಭಿಕ ಹಂತದಲ್ಲೆ ಸಾಧಿಸಿಕೊಂಡ ಅನುಭಾವಿಕ ಅಭಿವ್ಯಕ್ತಿ ಬೆರಗು ಹುಟ್ಟಿಸುವಂತಿದ್ದು , ಇದರ ಪರಣಾಮವಾಗಿ ಸಾಮಾಜಿಕ ಕಟ್ಟುಕಟ್ಟಳೆಯನ್ನು ಮೀರಿದ ವ್ಯವಸ್ಥೆಯ ಬಗ್ಗೆ ಮಾತನಾಡಲು ಸಾಧ್ಯವಾಯಿತು. ವೈದಿಕ ಧರ್ಮದ ಕೇವಲ ಕರ್ಮಾಚರಣೆಗಳನ್ನು ಪಾಲಿಸದ ಹಾಗೂ ಸಾಮಾಜಿಕ ಶ್ರೇಣೀಕರಣವನ್ನು ಅನುಸರಿಸಿದ ಭಕ್ತಿ ಹೊಸ ಜಗತ್ತಿನ ಕಲ್ಪನೆ ಕಟ್ಟಿಟ್ಟಿತು. ಈ ಕಲ್ಪನೆಗಳು ವೈದಿಕ ಮತ್ತು ವೈದಿಕೇತರ ಪಂಥಗಳಿಂದ ಪಡೆದವುಗಳಾಗಿವೆ. ವಚನಾಕಾರರು ತಮ್ಮ ಸ್ವಾನುಭವದಿಂದ ವಚನ ರಚನೆ ಮಾಡಿರುವಂತೆ ಕಂಡರೂ ಅವುಗಳ ಚಿಂತನೆಯ ಬೇರು ವೈದಿಕ ಮತ್ತು ವೈದಿಕೇತರ ಧರ್ಮಗಳ ತಾತ್ವಿಕ ನಿರೂಪಣೆಗಳು ಸಂಸ್ಕೃತದಲ್ಲಿ ರಚನೆಗೊಂಡಿದ್ದು ಆಗಿದೆ. ಹಾಗಾಗಿ ಎಷ್ಟೋ ವಚನಗಳು ಸಂಸ್ಕೃತ ಶ್ಲೋಕಗಳ ಅನುವಾದದ ಹಾಗೆ ಕಾಣುತ್ತವೆ. ಇಂಥ ಅನುವಾದದ ಸ್ವರೂಪವನ್ನು ಈ ಕೆಳಗೆ ಕಾಣಬಹುದು.

ಋಷಿ ಶಬ್ದಾರ್ಥದಂತೆಯೇ ಶರಣ ಶಬ್ದದ ಅರ್ಥವಾದರೂ ಬಹಳ ಮೇಲ್ಮೈ ಹೊಂದಿದ್ದಾಗಿರುತ್ತದೆ. ಇಬ್ಬರ ಉದ್ದೇಶವೂ ಒಂದೆ ಆಗಿದ್ದು ವಿವೇಚನಾ ಪದ್ಧತಿ ಮಾತ್ರ ಭಿನ್ನವಾಗಿರುತ್ತವೆ ಹಾಗೂ ತತ್ವಗಳ ಸಿದ್ಧಾಂತವು ಒಂದೇ ತರಹದ್ದಾಗಿರುತ್ತದೆ. ಉಪನಿಷತ್ತುಗಳ ಭಾಷೆಯು ಕಾವ್ಯದ ಭಾಷೆಗಿಂತ ಕ್ಲಿಷ್ಟವಾಗಿದೆ. ವಚನಗಳ ಭಾಷೆ ಸಂದರ್ಭಕ್ಕೆ ತಕ್ಕಂತೆ ಸುಲಭ, ಲಲಿತ ಶೈಲಿಯಾಗಿರುತ್ತದೆ. ತೈತ್ತಿರೀಯೊಪನಿಷತ್ತಿನ ಏಕಾದಶೋನುವಾಕ್‌ದಲ್ಲಿರುವ ವಾಕ್ಯಗಳು ಹೀಗಿವೆ.

'ಸತ್ಯಂ ವದ, ಧರ್ಮಂ ಚರ, ಸ್ವಾಧ್ಯಾಯಾನ್ಮಾಪ್ರಮದಃ ಆಚಾರ್ಯಾಯ ಪ್ರಿಯಂ ಧನಂ ಆಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ'' ಸತ್ಯಾನ್ನ ಪ್ರಮದಿತವ್ಯಂ, ಧರ್ಮನ್ನ ಪ್ರಮದಿತವ್ಯಂ, ಕುಶಲಾನ್ನ ಪ್ರಮದಿತವ್ಯಂ, ದೇವಪಿತೃ ಕಾರ್ಯಾಭಾಂ ನ ಪ್ರಮದಿತಾವ್ಯಂ ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಅತಿಥಿದೇವೋಭವ, ಯಾನಿ ಅನದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ, ನೋ ಇತರಾಣಿ, ಯಾನಿ ಅಸ್ಮಾಕಂ ಸುಚರಿತಾನಿ ತಾನಿ ತ್ವಯೋಪಸ್ಯಾನಿ , ಶ್ರದ್ಧಯಾದೇಯಂ , ಅಶ್ರಯಾದೇಯಂ, ಶ್ರಿಯಾಂದೇಯಂ ಭಿಯಾದೇಯ.

ಈ ವಾಕ್ಯಗಳೇ ವಚನಗಳಲ್ಲೂ ಮೂಡಿಬಂದಿವೆ, ಕಳಬೇಡ , ಕೊಲಬೇಡ , ಹುಸಿಯ ನುಡಿಯಲು ಬೇಡ , ಮುನಿಯಬೇಡ , ಅನ್ಯರಿಗೆ ಅಸಹ್ಯ ಪಡಬೇಡ , ತನ್ನ ಬಣ್ಣಿಸಿಬೇಡ ಇದಿರ ಹಳಿಯಲು ಬೇಡ , ಆಶೆಯಾಮಿಷ , ತಾಮಸ, ಹುಸಿ, ವಿಷಯ , ಕಂಟಿಲ , ಕುಹಕ ಕ್ಷಾದ್ರ , ಕ್ರೋಧ, ಮಿಥ್ಯೆ ಇವನೆನ್ನ ನಾಲಿಗೆಯ ಮೇಲಿಂದತ್ತ ತೆಗೆಯಯ್ಯ , ಸಾಧುಗುಣರಸುವುದೇ ಅವಗುಣಿಯಲ್ಲಿ? ಅಳಿದ ಮನಂಗೆ ಶಿವದೀಕ್ಷೆ ಕೊಟ್ಟರೆ ಭಕ್ತಿ ಎಂತಹುದೋ, ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ , ಹರಿಸ ಮಾಡುವದು ಹರಕೆಯ ದಂಡ ಇದ್ದುದ ವಂಚನೆಯ ಮಾಡದಿದ್ದರೆ ಅದು ನೇಮ, ನಡೆದು ತಪ್ಪದಿದ್ದರೆ ಅದು ನೇಮ ನುಡಿದು ಹುಸಿಯದ್ದಿರೆ ಅದು ನೇಮ ದಿಟವ ನುಡೆವುದು ನುಡಿದಂತೆ ನಡೆವುದು, ಸತ್ಯವ ನುಡಿವುದೇ ದೇವಲೋಕ , ಮಿಥ್ಯವ ನುಡಿವುದೇ ಮರ್ತ್ಯಲೋಕ , ಆಚಾರವೇ ಸ್ವರ್ಗ , ಅನಾಚಾರವೇ ನರಕ, ಅಯ್ಯಾ ಎಂದೊಡೆ ಸ್ವರ್ಗ , ಎಲವೋ ಎಂದೆಡೆ ನರಕ ಜಯ ಜಯ ಎಂಬ ನುಡಿಯೊಳಗೆ ಕೈಲಾಸ ಬಂದಿರಿ ಹದುಳವಿದರೆಂದರೆ ನಿಮ್ಮ ಮೈ ಸಿರಿ ಹಾರಿ ಹೋಹುದೇ ? ಮೃದು ವಚನವೆ ಸಕಲ ಜಪಂಗಳಯ್ಯ , ಲಿಂಗಕ್ಕಲ್ಲದೆ ಮಾಡೆನೀ ಮನವನು ಯಂತ್ರ ಜೀವ ; ತತ್ರ ಶಿವಃ ಎಂಬ ವಚನಗಳೆಲ್ಲ ತೈತ್ತಿರಿ ಉಪನಿಷತನ ಭಾವಬಿಂದುಗಳೇ ಆಗಿರುವುದನ್ನು ಸೂಕ್ಷ್ಮವಾಗಿ ಗಮನಿಸಿದವರಿಗೆ ಗೊತ್ತಾಗುತ್ತದೆ. ಗೂಳೂರು ವೀರಗೌಡ ಅವರು ಸಂಪಾದಿಸಿರುವ ಶೂನ್ಯ ಸಂಪಾದನೆ ಪುಟ - ೧೪ ರಲ್ಲಿ ಬಂದಿರುವ ಒಂದು ವಚನ ಹೀಗಿದೆ ; ''ಕಾಲಿಲ್ಲದೆ ನಡೆದನು ಕೈಯಿಲ್ಲದೆ ಓಡಿವನು ಕಣ್ಣಿಲ್ಲದೆ ನೋಡುವನು ಸಹಜವಾಗಿ ಮೈಯಿಲ್ಲದ ಬಣ್ಣ ಮಥನವಿಲ್ಲದ ಕೂಟ , ಅಲ್ಲಿ ಸ್ವೈವೆರವಾಗಿ ಶಿಲೆಯ ಮೇಲಿಹ ವಡಲು ತನ್ನ ತಾನರಿಯದೆ ಬಿಡದೆ ಎಲ್ಲಾ ಬೆಂಬತ್ತಿ ಬಂದ ಪರಿಯ ನೋಡಾ, ಜಡವಿಡಿದ ಎನ್ನ ಕಾಯದ ಕಳವಳವ ತಿಳುಹಲೆಂದು ಅಡಿಗಡಿಗೆ ಅನುಭಾವವ ತೋರುತ್ತಿದ್ದಾನೆ. ಕುಳಿಡೆಯಲ್ಲಿ ಕುಂಟಿನೆದ್ದಡೆಯಲ್ಲಿ ಹಳವ ಎಲ್ಲಿ ನೋಡಿದಡಲ್ಲಿ ಪರಿಪೂರ್ಣನು ಮೆಲ್ಲಮಲ್ಲನೆ ಒಳಗೆ ನೊರೆದು

ತೋರುತ್ತಿದ್ದಾನೆ. ಬಲ್ಲವರೆಲ್ಲ ಬದುಕಿ ಎಂದು ಝಲ್ಲರಿಯ ಮೇಲೊಂದು ಬೆಳಗೊಡೆಯ ಹಿಡಿಯನು ಬಲ್ಲ ದದಾನೆಯ ತಡೆದು ನಿಲ್ಲಿಸಬಲ್ಲನು ಕೂಡಲ ಸಂಗಮ ದೇವರ ಮಹಾಮನೆಯಲ್ಲಿ ಪ್ರಭುದೇವರ ಮರೆಹೊಕ್ಕು ಬದುಕಿದೆನು ನಾನು".

ಈ ಮೇಲ್ಕಂಡ ವಚನಕ್ಕೆ ಸಂವಾದಿಯಾದ ಉಪನಿಷತ್ ಮಂತ್ರಗಳು ಹೀಗಿವೆ :

೧) ಶ್ವೇತಾಶ್ವತರೋಪನಿಷತ್ - ಅಧ್ಯಾಯ ೩, ಶ್ಲೋಕ ೧೯
ಅಪಾಣಿಪಾದೋ ಜವನೋಗ್ರಹೀತಾ ಪಶ್ಯಿತ್ಯಚಕ್ಷು : ಸಶೃಣೋತ್ಯಕರ್ಣಃ।
ಸವೇತ್ತಿವೇದ್ಯಂ ನ ಚತ ಸ್ಯಾಸ್ತಿ ವೇತ್ತಾ ತಮಾಹುರವ್ಯಯಂ ಪುರುಕ್ಷಂ ಮಹಂತಂ।

೨) ಕೈವಲ್ಯೋಪ ನಿಷತ್ - ದ್ವಿತೀಯ ಖಂಡ, ಶ್ಲೋಕ ೨
ಅಪಾಣಿಪಾದೋಹ ಮಚಿಂತ್ಯ ಶಕ್ತಿಃ ಪಶ್ಯಾಮ್ಯಚಕ್ಷುಃ ಸಶೃಣೋಕರ್ಣಃ।
ಅಹಂ ವಿಜಾನಾಮಿ ವಿವಿಕ್ತ ರೂಪೋ ನ ಚಾಸ್ತಿವೇತ್ತಾ ಮಮಜಿತ್ ಸದಾಹಂ॥

೩) ಕಠೋಪ ನಿಷತ್ - ಪ್ರಥಮಾಧ್ಯಾಯ , ತೃತೀಯ ವಲ್ಲಿ
ಅಶಬ್ದ ಮಸ್ಪರ್ಶ ಮರೂಪಮವ್ಯಯಂ ತಥಾರಸಂ ನಿತ್ಯಮಗಂಧ ವಚಯತ್।
ಅನಾದ್ಯನಂತಂ ಮಹತಃ ಪರಂಧ್ರುವಂ ನಿಚಾಯ್ಯ ತನ್ಮೃತ್ಯು ಮುಖಾತ್ ಪ್ರಮುಚ್ಯತೇ॥

೪) ಮಂಡಕೊಪನಿಷತ್ - ಪ್ರಥಮ ಮುಂಡಕ, ಶ್ಲೋಕ ೨
ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ।
ಶ್ರೋತಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ॥

೫) ಮಾಂಡೂಕ್ಯೋಪನಿಷತ್ - ಶ್ಲೋಕ ೬
ನಾಂತಃ ಪ್ರಜ್ಞಂ ನ ಬಹಿಃ ಪ್ರಜ್ಞಂ ನೋಭಯತಃ ಪ್ರಜ್ಞಂನ ಪ್ರಜ್ಞಾನ ಘನಂ
ನಪ್ರಜ್ಞಂ ನಾ ಪ್ರಜ್ಞಂ ಅದೃಷ್ಟಮವ್ಯವಹಾರ್ಯಮಗ್ರಾಹ್ಯಂಮ ಲಕ್ಷಣಂ।
ಅಚಿಂತ್ಯಮವ್ಯಪದೇಶ್ಯಮೇಕಾತ್ಮ ಪ್ರತ್ಯಯಸಾರಂ ಪ್ರಪಂಚೊಪಶಮಂ
ಶಾಂತಂ ಶಿವಂ ಅದ್ವೈತಂ ಚತುರ್ಥಂ ಸ ಆತ್ಮಾ ಸವಿಜ್ಞೇಯಃ॥

ಬಸವಣ್ಣನವರು ದೇವರ ಸ್ವರೂಪ ಹೇಳುವ ಕಾಲಕ್ಕೆ ; 

''ಶ್ರುತಿತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯ ಘನಕ್ಕೆ ಘನ ಮಹಿಮನ ಮನಕ್ಕಗೋಚರನೆ? ಅಣೋರಣಿಯಾನ್ ಮಹತೋಮಹೀಮಾನ್ ಮಹಾದಾನಿ ಕೂಡಲಸಂಗಮದೇವ'' ಎಂದು ಇನ್ನೊಂದು ವಚನದಲ್ಲಿ ''ಹಿಂದಕ್ಕೆ ಹಿರಿದು ಕಿರಿದಕ್ಕೆ ಕಿರಿದು ವಾಙ್ಮನಕ್ಕಾಗೋಚರ ಕೂಡಲ ಸಂಗಮದೇವಾ'' ಎಂದು ಕಠೋಪನಿಷತ್‌ನ ಪ್ರಥಮಾಧ್ಯಾಯಿ, ದ್ವಿತೀಯ ವಲ್ಲ, ಶ್ಲೋಕ ೨೦ರ ಸಂವಾದಿಯಾಗಿ ಹೇಳಿದ್ದಾರೆ.

ಅಣೋರಣಿಯಾನ್ ಮಹತೋಮಹೀಯಾನಾತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಮ್
ತಮಕ್ರತುಃ ಪಶ್ಯತಿ ವೀತಶ್ಕೋ ಧಾತುಃ ಪ್ರಸಾದಾನ್ಮಹಿಮಾನಮಾತ್ಮನಃ ॥
ಶ್ವೇತಾಶ್ವತರೋಪನಿಷತ್ - ಮೂರನೆಯ ಶ್ಲೋಕ ೨೦.

ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಹಂ ವಿಚಿತ್ರಂ ।
ಪುರಾತನೋಹಂ ಪುರುಷೊಹಮೀಶೋ ಹಿರಣ್ಮಯೋಹಂ ಶಿವರೂಪಮಶ್ಮಿ ॥

**ನಾರಾಯಣೋಪನಿಷತ್**

ಅಣೋರಣೀಯಾನ್ ಮಹತೋಮಹಿಯಾನ್ ಆತ್ಮಾ ಗುಹಾಯಾಂ ನಿಹಿತೋಸ್ಯಜಂತೋಃ ।
ತಮಕ್ರುತುಂ ಪಶ್ಯತಿ ವೀತಶೋಕಃ ಧಾತುಃ ಪ್ರಸಾದನ್ಮಹಿಮಾನಮೀಶಂ ॥

ಇವೇ ಉಪನಿಷತ್ ವಾಕ್ಯಗಳನ್ನನುಸರಿಸಿ ನೋಡಿದರೆ ಸ್ವತಂತ್ರ ಸಿದ್ಧಲಿಂಗೇಶ್ವರ ದೇವರು ಬರೆದ ವಚನವು ಸಂವಾದಿಯಾಗಿದೆ.

''ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾಗಿ ಎಣಿಸಬಾರದ ಬಹುಳ ಬ್ರಹ್ಮಕ್ಕೆ ಏಣಿ ಯಾವುದು ಹೇಳಾ ? ಅಗಣಿತಕ್ಷಮ ಸರ್ವಜೀವಃ ಮನಃ ಪ್ರೇರಕ ಸರ್ವಜ್ಞ ಏಕೋದೇವ ಸಂವಿತ್ಪ್ರಕಾಶ ಪರಮೇಶ್ವರನ ಮನವೆಂಬ ದರ್ಪಣದೊಳಗೆ ಬಿಂದ್ವಾಕಾಶ ರೂಪವಾಗಿ ಬೆಳಗಿ ತೋರುವ ಶಿವನ ಅಂದವ ತಿಳಿದು ನೋಡಿ ಕೂಡಬಲ್ಲಾತನೇ ಪರಶಿವಯೋಗಿ, ಆತನ ಜನನ ಮರಣ ವಿರಹಿತ, ಆತನೇ ಸರ್ವಜ್ಞನು, ಆತನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ತಾನೆ''.

ಶ್ವೇತಾಶ್ವತರೋಪನಿಷತ್ - ಮೂರನೆಯ ಅಧ್ಯಾಯ, ಶ್ಲೋಕ ೧೪-೧೫.

ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥
ಪುರುಷ ಎವೇದಗ್ಂ ಸರ್ವಮ ಯದ್ಭೂತಂ ಯಚ್ಚ ಭವ್ಯಂ ।
ಉತಾ ಮೃತತ್ವಸ್ಯೇಶಾನೋ ಯದನ್ನೇ ನಾತಿರೋಹತಿ ॥.

ಈ ಶ್ಲೋಕಕ್ಕೆ ಸಂವಾದಿಯಾದ ಬಸವಣ್ಣನವರ ವಚನ ಹೀಗಿದೆ. ''ರುದ್ರಮುಖದಲ್ಲಿ, ವಿಷ್ಣು ಭೂಜದಲ್ಲಿ, ಜಂಘೆಯಲ್ಲಿ ಅಜನ ಜನನವು, ಇಂದ್ರಪಾದದಲ್ಲಿ ಚಂದ್ರಮನದಲ್ಲಿ ಚಕ್ಷುವಿನಲ್ಲಿ ಸೂರ್ಯನ ಜನನ, ಮುಖದಲ್ಲಿ ಅಗ್ನಿ, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಶಿರದಲುದಯವು ತೆತ್ತೀಸಕೋಟಿದೇವರ್ಕಳು, ಪಾದ ತಳದಲ್ಲಿ ಭೂಮಿಯ ಜನನವು ಶ್ರೋತ್ರದಲ್ಲಿ ದಶದಿಕ್ಕುಗಳು, ಜಗದ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನ ಗಣಿತನು ಸಾಸಿರತತೆ, ಸಾಸಿರಕಣ್ಣು, ಸಾಸಿರಕ್ಕೆ, ಸಾಸಿರಪಾದ, ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಮದೇವ''.

**ಚನ್ನಬಸವಣ್ಣನವರು :**

''ಮರೀಚಿಯೊಳಗಣ ಬಿಸಿಲಿನಂತೆ ಇದ್ದಿತ್ತು, ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು, ಚಿತ್ರಿಕನೊಳಡಗಿದ ಚಿತ್ರದಂತೆ ಇದ್ದಿತ್ತು, ನುಡಿಯೊಳಡಿಗದ ಅರ್ಥದಂತೆ ಇದ್ದಿತ್ತು. ಅಲೆಯೊಳಡಗಿದ ತೇಜದಂತೆ ಇದ್ದಿತ್ತು ಕೂಡಲ ಚನ್ನ ಸಂಗಯ್ಯ ನಿಮ್ಮ ನಿಲವು''.

**ಪ್ರಭುದೇವರು :**

ನೆಲದ ಮರೆಯ ನಿಧಾನದಂತೆ ಮುಗಿಲ ಮರೆಯಲ್ಲಡಗಿರ್ದ ಮಿಂಡಿನಂತೆ ಬಯಲ ಮರೆಯಲ್ಲಡಗಿರ್ದ ಬೆಳಗಿನಂತೆ ಗುಹೇಶ್ವರ ನಿಮ್ಮ ನಿಲವು''.

ವಿಶ್ವಾಧಿಕೋ ರುದ್ರನ ಹೊಗಳುವ ಶೃತಿಗಳು ವಿಶ್ವರೂಪಾಯವ್ವೆ ನಮಃ ಪರಮ ರೂಪಿಣೇ ನಮಃ ಪರತತ್ವಾತ್ಮನೇ ನಮಃ ಆದಿಯಾರೂಢ ಭಯಂಕರನೇ ನಮಃ ಹರಿಯನು ಹರಿಸಿದನೆಂದು ಶೃತಿ ಸಾರುತಿರಲು ಸಂಹಾರ ಕಾರಣನೇ ನಮಃ ನಮ್ಮ ಕೂಡಲಸಂಗಮದೇವರ ಮಹಾಮಿಹದ್ಭ್ಯೋ ನಮಃ ಆತ್ಮತಿಷ್ಠಿದ್ದಶಾಂಗುಲಮ್''. ''ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗೆಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ ಬ್ರಹಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ ಆಗಮ ಅಪ್ರಯಾಣ, ಅಗೋಚರ, ಅಪ್ರತಿಮ ಲಿಂಗವೇ ಕೂಡಲಸಂಗಮದೇವಯ್ಯ ಎನ್ನ ಕರಸ್ಥಳಕ್ಕೆ ಬಂದು ಚಳುಕಾವಿರಯ್ಯ'' ಎಂದು ಬಸವಣ್ಣನವರು ಬಹಳ ಸೊಗಸಾಗಿಯೂ ಸುಂದರವಾಗಿಯೂ ಇರುವ ವಚನವನ್ನು ಹೇಳಿರುತ್ತಾರೆ. ''ಶೃತಿತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನನ್ ನೆಂಬೆಯ್ಯ'' ದರಲ್ಲಿ ಅತ್ಯತಿಷ್ಠದ್ದಶಾಂಗುಲಂ ಎಂದು ಇದ್ದಕ್ಕಿದ್ದ ಹಾಗೆಯೇ ಉಚ್ಚಾರ ಮಾಡಿರುತ್ತಾರೆ.

**ಬಸವಣ್ಣನವರು :**

''ಸಹಸ್ರ ಶೀರ್ಷಾನಾದಿ ಪುರುಷನು ವೇದ ಪುರುಷನೊಬ್ಬ ಪುರುಷನು ಜ್ಯೋತಿ ಪುರುಷನೊಬ್ಬ ಪುರುಷನು ಉದನ್ಮಾಖ ಪುರುಷನೊಬ್ಬ ಪುರುಷನು ಉದಯಮುಖನೊಬ್ಬ ಪುರುಷನು ವಿರಾಟಜನನೊಬ್ಬ ಪುರುಷನು ವಿರಾಜಪುರುಷನೊಬ್ಬ ಪುರುಷನು ಆದಿಪುರುಷನೊಬ್ಬ ಪುರುಷನು ವಿಯತ್ಪಾರಷನೊಬ್ಬ ಪುರುಷನು ವಿರಾಜಪುರುಷನೊಬ್ಬ ಪುರುಷನು ಆದಿ ಪುರುಷನೊಬ್ಬ ಪುರುಷನು ವಿಯತ್ಪಾರಷನೊಬ್ಬ ಪುರುಷನು ತದ್ವಿಯತ್ ಪುರುಷ ಪುರುಷರಿಲ್ಲದ ಪ್ರಭೆಯ ನೋಡಿರೇ ವೇದನಾದಾತೀತ ತುರೀಯ ಪರಮಾನಂದ ನಿರವಯಂ ಷಟ್‌ತ್ರಿಂಶತ್ ಪ್ರಭಾ ಪಟಂದ ಬೆಳಗಿದ ನೋಡಿರೋ ಬೆಳಗಿನೊಳಗಿನ ಮಹಾಬೆಳಗಿನ ಬೆಳಗು ನಮ್ಮ ಕೂಡಲ ಸಂಗಮದೇವಯ್ಯ''.

''ಪಾತಾಳದಿಂ ಕೆಳಗೆ ಪಾದ, ಸುವರ್ಲೋಕದಿಂ ಮೇಲೆ ಉತ್ತುಮಾಂಗ ಬ್ರಹ್ಮಾಂಡವೇ ಮಕುಟ, ಗಗನವೇ ಮುಖ, ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕುಗಳೇ ಬಾಹುಗಳು, ಮಹದಾಕಾಶವೇ ಶರೀರ, ತರುಗಳೇ ತನೂರುಹ, ಶೂನ್ಯವೇ ಕರಸ್ಥಳದ ಲಿಂಗ, ನಕ್ಷತ್ರಗಳೇ ಪುಷ್ಪ, ನಿತ್ಯವೇ ಪೂಜೆ, ಮೇಘವೇ ಜಡೆ, ಬೆಳದಿಂಗಳೇ ವಿಭೂತಿ, ಪರ್ವತಗಳೇ ರುದ್ರಾಕ್ಷಿ, ಪಂಚಬ್ರಹ್ಮವೇ ಪಂಚಾಕ್ಷರ, ತತ್ವಂಗಳೇ ಜಪಮಾಲೆ. ಮೇರುವೇ ದಂಡ, ಜಗವೇ ಕಂಥಾ, ಅನಂತನೇ ಕೌಪೀನ ತ್ರಿಗುಣ ಒಂದಾದುದೇ ಕರ್ಪೂರ, ಚತುರ್ಯುಗಂಗಳೇ ಉಪದೇಶ, ಪೃಥ್ವಿಯೇ ಸಿಂಹಾಸನ, ದಿವಾರಾತ್ರಿಯೇ ಅರಮನೆ, ಶಿವಜ್ಞಾನವೇ ಐಶ್ವರ್ಯ, ನಿರಾಳವೇ ತೃಪ್ತಿ ಇಂಥಾ ಚೈತನ್ಯ ಜಂಗಮಕ್ಕೆ ನಾನು ನಮೋ ನಮೋ ಎನುತಿರ್ದೆನಯ್ಯ ಸೌರುಷ್ಟ್ರ ಸೋಮೇಶ್ವರ'' ಸೊಡ್ಡಳಬಾಚರಸ.

''ನೆಲದೀಪದೊಡೆಯನು ಜಲತಂಪಿನೊಡೆಯನು, ಹಿರಿಯಪೆಂಪಿನೊಡೆಯನು, ಅಗ್ನಿ ಉಷ್ಣ ಮೊಡೆಯನ್ನು ಚಂದ್ರಕಾಂತದೊಡೆಯನು, ಸೂರ್ಯಕಾಂತದೊಡೆಯನು, ಸಕಲ ದೈವಂಗಳಿಗೆ ಆಯುಷ್ಯ ಭಾಷೆಯ ಕೊಟ್ಟ ಭೋಗದೊಡೆಯನು ಜಗತ್ಪ್ರಭುಸೊಡ್ಡಳು''.

ಹೀಗೆ ಉಪನಿಷತ್ಕಾರರು ಹೇಳಿದ ಮಾತನ್ನೇ ದೇಸಿ ಶೈಲಿಯಲ್ಲಿ ಬರೆದ ಸಾಹಿತ್ಯವೇ ವಚನ ಸಾಹಿತ್ಯ ವೆನಿಸಿದೆ. ಉಪನಿಷತ್ತುಗಳ ಬ್ರಹ್ಮಪದವು ವಚನಕಾರರಲ್ಲಿ ಸಂದರ್ಭಾನುಸಾರ ಲಿಂಗವೆಂದು ಕರೆಯಲ್ಪಡುತ್ತದೆ. ಸಂಸ್ಕೃತದಲ್ಲಿ ಗೂಢವಾದ ತತ್ವಗಳನ್ನೇ ತಿಳಿಗನ್ನಡದಲ್ಲಿ ಬರೆದಿರುವುದು ಕಾಲದ ಅಗತ್ಯ. ಹಾಗಾಗಿ ವಚನಗಳು ಉಪನಿಷತ್‌ನ ಅನುವಾದಗಳು ಎನ್ನುವಲ್ಲಿ ಬೇರೆ ಮಾತಿಲ್ಲ. ಕನ್ನಡದ ಅದರಲ್ಲೂ ದೇಸೀ ಶೈಲಿಯಲ್ಲಿ ಜನಸಾಮಾನ್ಯರ ಬಳಿಗೆ ತತ್ವಜ್ಞಾನವನ್ನು ತಿಳಿಸಿಕೊಡಲಾಗಿದೆ. ವೇದದ ಕೆಲ ಅಂಶಗಳನ್ನು ಖಂಡಿಸಿದರೂ ಅದರಲ್ಲಿನ ತಾತ್ವಿಕತೆಯನ್ನು ಮನ್ನಿಸಿ ಜನರ ಬಳಿಗೆ ಈ ಮಾತನ್ನು ಕೊಂಡೊಯ್ಯಲು ತಕ್ಕಮಟ್ಟಿನ ಸಾಂಸ್ಕೃತಿಕ ಬದಲಾವಣೆಯನ್ನು ಮಾಡಿಕೊಂಡಿದ್ದಾರೆ.

ಈ ರೀತಿಯ ಅನುವಾದಕ್ಕೆ ಅಂದಿನ ಸಾಂಸ್ಕೃತಿಕ ಪ್ರಭಾವವನ್ನು ಬೀರಿದೆ. ವೇದೋಪನಿಷತ್ತುಗಳು ಸಂಸ್ಕೃತದಲ್ಲಿರುವುದರಿಂದ ಆ ಭಾಷೆಯನ್ನು ಸ್ತ್ರೀ ಶೂದ್ರಾದಿಗಳು ಓದಲು ಸಾಧ್ಯವಿಲ್ಲವೆಂಬ ಪ್ರತೀತಿ ಇತ್ತು. ಜ್ಞಾನಾರ್ಜನೆಯೇ ವೇದದ ಮುಖ್ಯ ತಾತ್ಪರ್ಯವಾಗಿರುವುದರಿಂದ ಅದರ ಜ್ಞಾನ ಸಂಪಾದನಾ ಮಾರ್ಗಕ್ಕೆ ಅಡ್ಡಿ ಏಕೆ ಎಂಬುದು ಅಂದಿನ ಕೆಲ ತಾತ್ವಿಕರ ಧೋರಣೆಯಾಗಿತ್ತು. ''ಸರ್ವೇಜನಾಃ ಸುಖಿನೋ ಭವಂತು'' ಎಂಬ ತತ್ವಕ್ಕೆ ಬದ್ಧರಾಗಿ ಸಮಾಜವಾದಿ ನೀತಿ ಸಂಹಿತೆಯನ್ನು ರೂಪಿಸುವುದು ಆ ಕಾಲದ ಅಗತ್ಯವಾಗಿತ್ತು. ಈ ಹಿನ್ನೆಲೆಯನ್ನುಳ್ಳ ಅಂದಿನ ಸಾಹಿತ್ಯಕಾರರು ಚಳುವಳಿ ರೂಪದಲ್ಲಿ ವಚನಗಳನ್ನು ರಚಿಸಿದರು. ಸ್ತ್ರೀ,ಶೂದ್ರಾದಿಗಳಿಗೂ ಅವಕಾಶ ನೀಡುವುದಕ್ಕಾಗಿ ಅಚ್ಚಗನ್ನಡದ ಶೈಲಿಯನ್ನು, ನೈತಿಕ ಮೌಲ್ಯಗಳ ಪ್ರತಿಪಾದನೆಗಾಗಿ ಬಳಸಿಕೊಂಡರು. ಅಧೋಮುಖಿ ಸಮಾಜವನ್ನು ತಿದ್ದುತ್ತಲೇ ಆತ್ಮೋನ್ನತಿಯ ಪರಾಕಾಷ್ಠೆಯ ಸಿದ್ಧಿಯನ್ನು ತಮ್ಮ ಅನುವಾದಿತ ಭಾಷೆಯ ಮೂಲಕ ವ್ಯಕ್ತಪಡಿಸಿದರು.

ಹರಿಹರನು ತನ್ನ ರಗಳೆಗಳನ್ನು ತಮಿಳಿನ ಪೆರಿಯ ಪುರಾಣದಲ್ಲಿ ಬರುವ ೬೩ ಪುರಾತನರ ಕಥೆಗಳನ್ನು ಆಧರಿಸಿ ತನ್ನದೇ ರೀತಿಯಲ್ಲಿ ರಚಿಸಿರುವುದು ಒಂದು ಬಗೆಯ ಅನುವಾದವೇ. ಅವನ ಗಿರಿಜಾಕಲ್ಯಾಣ ಕಾಳಿದಾಸನ ಕುಮಾರ ಸಂಭವದ ರೂಪಾಂತರ.

ವಚನ ಸಾಹಿತ್ಯ ಭಕ್ತಿಯನ್ನು ಮೊದಲಿಗೆ ಪ್ರಚಾರ ಮಾಡಿದ ಸಾಹಿತ್ಯ ಪ್ರಕಾರ ಭಕ್ತಿಯ ನಿರೂಪಣೆಗಾಗಿ ಹರಿಹರ ಶಿವಭಕ್ತರ ಜೀವನ ಚರಿತ್ರೆಯನ್ನು ರಗಳೆಗಳಲ್ಲಿ ಮೂಡಿಸಿದನು. ಭಕ್ತಿಯ ವೈವಿಧ್ಯವನ್ನು ಹರಿಹರನಷ್ಟು ಭಿನ್ನ ಬಗೆಯಲ್ಲಿ ಬೇರೆ ಯಾರೂ ಮಂಡಿಸಲಿಲ್ಲ. ಹರಿಹರ ಶಿವಭಕ್ತರ ಜೀವನವನ್ನು ಔನ್ನತ್ಯಕ್ಕೇರಿಸುವ ಹಂತದಲ್ಲಿ ಅವರ ಕತೆಗಳನ್ನು ಪುರಾಣಮಯಗೊಳಿಸಿದನು. ರಾಜಾಶ್ರಯ ವಿರೋಧಿಯಾಗಿದ್ದ ಕಾವ್ಯವನ್ನು ಜನತೆಯ ಆಸ್ವಾದನೆಗೆ ಅನುವು ಮಾಡಿಕೊಟ್ಟನು. ಈ ಸಂದರ್ಭದಲ್ಲಿ ಆಧುನಿಕ ರಗಳೆಗಳೊಂದಿಗೆ ಪುರಾತನರ ರಗಳೆಗಳನ್ನು ರಚಿಸಿದನು. ಈ ಪುರಾತನ ರಗಳೆಗಳಿಗೆ ಮೂಲ ಆಕರ ತಮಿಳಿನ ಪೆರಿಯ ಪುರಾಣ. ಶಿವಭಕ್ತರ ಕಥೆಗಳನ್ನು ಪುರಾಣಗೊಳಿಸುವ ಪ್ರಕ್ರಿಯೆಯನ್ನು ಹರಿಹರ ಪೆರಿಯ ಪುರಾಣದಿಂದ ಪ್ರಭಾವಿತನಾಗಿ ಪಡೆದಿರಬಹುದು. ಇದು ಅನುವಾದ ಪ್ರಕ್ರಿಯೆಯಲ್ಲಿ ಮೂಲಪಠ್ಯದ ಗುಣಗಳು ಅನುವಾದಿತ ಪಠ್ಯಕ್ಕೆ ಇಳಿದು ಬರುವ ಅಂಶಗಳಲ್ಲಿ ಒಂದೆಂದು ಪರಿಗಣಿಸಬಹುದಾಗಿದೆ. ಅಲ್ಲದೆ ಆತನಿಗೆ ಭಕ್ತಿಯನ್ನು ಶಕ್ತಿಯುಕ್ತವಾಗಿ ನಿರೂಪಿಸಲು ಇದರಿಂದ ಸಾಧ್ಯವಾಯಿತು. ಹರಿಹರನನ್ನು ಒಬ್ಬ ಶಕ್ತಿಕವಿ ಎಂದು ಕರೆದಿವುದು ಇದೇ ಕಾರಣದಿಂದ ಇರಬಹುದು.

ಭಕ್ತಿ ಚಳುವಳಿಯ ಪ್ರಭಾವದಲ್ಲಿ ಮೂಡಿಬಂದ ಕುಮಾರವ್ಯಾಸ ಭಾರತ, ವ್ಯಾಸ ಭಾರತದ ಪಡಿನೆಳಲಾಗಿ ಅನುವಾದಿತವಾಗಿದೆ. ಆದರೂ ಇದು ಪಂಪನ ಕಾವ್ಯಕ್ಕಿಂತ ಬೇರೆಯಾದ ಅನುಸೃಷ್ಟಿಯಾಗಿದೆ. ಪಂಪ ತನ್ನ ಅಗತ್ಯತೆಗೆ ತಕ್ಕಂತೆ ಪರಿವರ್ತಿಸಿಕೊಂಡರೆ, ಕುಮಾರವ್ಯಾಸ ಭಕ್ತಿ ಚಳುವಳಿಗೆ ಪೂರಕವಾಗಿ ಕೃಷ್ಣ ಕಥೆಯಾಗಿ ಮೂಡಿಸಿದ್ದಾನೆ.

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ.
ಹಲವು ಜನ್ಮದ ಪಾಪ ರಾಶಿಯ
ತೊಳೆವ ಜಲವಿದು ಶ್ರೀಮದಾಗಮ
ಕುಲಕೆ ನಾಯಕ ಭಾರತಾಕೃತಿ ಪಂಚಮ ಶ್ರುತಿಯ

ಪದದ ಪ್ರೌಢಿಯ ನವರಸಂಗಳ
ವುದಿತವೆನುವಭಿಧಾನ ಭಾವವ
ಬೆದಕಲಾಗದು ಬಲ್ಲ ಪ್ರೌಢರುಮೀಕಥಾಂತರಕೆ
ಇದ ವಿಚಾರಿಸೆ ಬರಿಯ ತೊಳಸಿಯ
ವುದಕದಂತಿರೆಯಿಲ್ಲಿ ನೋಳ್ಪುದು
ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು.

ಎನ್ನುತ್ತ ಧರ್ಮದ ವಿಶೇಷತೆಯನ್ನು ಈ ಕೃತಿಯಲ್ಲಿ ತೋರಿಸಿದ್ದಾನೆ. ಈ ಬಗೆಯ ಕಥಾಂತರಕೆ ದೈವಿ ಮೂಲದ, ಅದರಲ್ಲೂ ಕೃಷ್ಣನ ಸಾನಿಧ್ಯದ ಅಗತ್ಯತೆಯನ್ನು ಕವಿ ಮನಗಾಣಿಸಿದ್ದಾನೆ. ಭಕ್ತಿ ಪರಂಪರೆ ಉತ್ತರ ಭಾರತದಿಂದ, ದಕ್ಷಿಣ ಭಾರತಕ್ಕೆ ವ್ಯಾಪಿಸಿತು. ಉತ್ತರ ಭಾರತದಲ್ಲಿ ಸಂತ ಮೀರಾಬಾಯಿಯಿಂದ ಮೊದಲ್ಗೊಂಡು, ಶ್ರೀ ಕೃಷ್ಣನ ಆರಾಧನೆ ಮಹತ್ವಪಡೆದುಕೊಂಡಿತ್ತು. ಈ ಹಿನ್ನೆಲೆಯಲ್ಲಿ ಕುಮಾರವ್ಯಾಸ ಭಾರತ, ವ್ಯಾಸ ಭಾರತದಂತೆ ತಾತ್ವಿಕ ಚಿಂತನೆಯ ಕಾವ್ಯವೆನಿಸದೇ ಕೃಷ್ಣಕಥೆಯಾಗಿ ನಿರೂಪಿತವಾಗಿದೆ.

ತಿಣುಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ
ಬಣಗು ಕವಿಗಳ ಲೆಕ್ಕಿಪನೆ ಸಾ
ಕೆಣೆಸದಿರು ಶುಕರೂಪನಲ್ಲವೆ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ.

ಎನ್ನುವಾಗ ಕವಿ ತಾನು ಕುಮಾರವ್ಯಾಸನೆಂಬ ವಿಧೇಯತೆಗೆ ಕಟ್ಟುಬಿದ್ದಿರುವುದು ಗೊತ್ತಾಗುತ್ತದೆ. 'ವ್ಯಾಸನೆಂಬ ಗರ್ವಮೆನಗಿಲ್ಲ' ಎಂದು ಪಂಪನಂತೆ ಹೇಳಿಕೊಳ್ಳದೆ ವ್ಯಾಸರಂತೆಯೇ ತಾನು ಶ್ರೀ ಕೃಷ್ಣನನ್ನು ಸೂತ್ರಧಾರಿಯಾಗಿರಿಸಿ ಆ ಸಾಂದರ್ಭಿಕತೆಯ ಅಗತ್ಯತೆಗೆ ತಕ್ಕಂತೆ ಕುಮಾರ ವ್ಯಾಸನಾಗಿದ್ದಾನೆ. ಈ ಕೃತಿ ಪಂಪನ ಕಾಲದ ಲೌಕಿಕ ಕಾವ್ಯವಾಗದೇ ಭಕ್ತಿ ಕಾವ್ಯವಾಗಿ ಮೂಡಿಬಂದಿರುವುದು ಆ ಪರಾಕಾಷ್ಠೆಯಲ್ಲಿ

ಮುಳುಗಿರುವ ಕವಿಯ ಭಾವಾವೇಶದಲ್ಲಿ ವ್ಯಕ್ತಗೊಂಡಿದೆ. ಇಲ್ಲಿ ಶ್ರೀ ಕೃಷ್ಣನೇ ಕಥಾನಾಯಕ. ಇಲ್ಲಿ ಕುಮಾರವ್ಯಾಸ ಕೃತಿಕಾರನಲ್ಲಿ ಕೇವಲ ಲಿಪಿಕಾರ. ಭಾಮಿನಿ ಷಟ್ಪದಿಯ ಈ ಕಾವ್ಯವನ್ನು ಕರ್ನಾಟ ಭಾರತ ಕಥಾಮಂಜರಿ ಎನ್ನುವಲ್ಲಿ ಸಂಸ್ಕೃತ ವ್ಯಾಸಭಾರತದ ಕರ್ನಾಟ ರೂಪ ಎಂಬುದು ವೇದ್ಯ. ವ್ಯಾಸಭಾರತ ಮೂಲವೆಂದು, ಲಿಪಿಕಾರನೆಂದು ಕೇವಲ ವ್ಯಾಸಭಾರತದ ಲಿಪ್ಯಂತರ ಮಾಡದೇ ವ್ಯಾಸಭಾರತದ ಅನುವಾದಕಾರನಾಗಿರುವುದೊಂದು ವಿಶೇಷ. 'ರೂಪಕ ಸಾಮ್ರಾಜ್ಯ ಚಕ್ರವರ್ತಿ' ಎನಿಸಿಕೊಂಡ ಕುಮಾರವ್ಯಾಸನಲ್ಲಿ ರೂಪಕಗಳನ್ನು ಯಥೇಚ್ಛವಾಗಿ ಕಾಣಬಹುದು. 'ಹಡಗು ಜಲಧಿಯಳೋಡಿ ಗಿರಿಗಳನೆಡಹಿ ನುಗ್ಗಾದಂತೆ' ಕುಳಕೂಟದ ಕಮಲ ತುಂಬಿಗೆ ಪದ್ಯವಲ್ಲ. 'ಸೀಳಬಹುದೇ ಸೀಸಮಳಿಯಲಿ ಶೈಲವನು', 'ಬತ್ತಿದ ಕೆರೆಯೊಳಗೆ ಬಲೆಯೇಕೆ ?'. ಕುಮಾರವ್ಯಾಸ ಸಾಹಿತ್ಯ ಚರಿತ್ರೆಯ ಅದ್ಭುತ ಸೃಷ್ಟಿಗಳಲ್ಲಿ ಎರಡನೆಯವನೆನಿಸಿಕೊಳ್ಳುತ್ತಾನೆ. ಬಹುಕಾರಣಗಳಿಂದ ಕುಮಾರವ್ಯಾಸಭಾರತ ಭಿನ್ನ ನೆಲೆಯಲ್ಲಿ ಮೂಡಿಬಂದಿದೆ ಎನ್ನಬಹುದು. ಪಂಪನಿಂದ ಪ್ರಾರಂಭವಾದ ಒಂದು ಯುಗ ಲೌಕಿಕ, ಆಗಮಿಕ ಕಾವ್ಯಗಳ ಜಾಡನ್ನು ಹಿಡಿದು ಸಾಗುತ್ತಿರುವಾಗ ವಚನ ಸಾಹಿತ್ಯದ ಅದ್ಭುತಕ್ರಾಂತಿಯಾಗುತ್ತದೆ. ದೇಶದಲ್ಲೆಡೆ ಸಾಂಸ್ಕೃತಿಕ ಪಲ್ಲಟಗಳಾಗುತ್ತವೆ. ರಾಜಕೀಯವಾಗಿ/ಸಾಮಾಜಿಕವಾಗಿ ಈ ಕ್ರಾಂತಿ ಒಂದು ನೆಲೆಗೆ ಸಂದ ನಂತರ, ಸಾಹಿತ್ಯಕ್ಕೆ ಭಕ್ತಿ ಚಳುವಳಿಯ ಹೊಸ ಅಲೆ ಒಂದು ಸೇರುತ್ತದೆ. ಈ ಅಲೆಯ ಮೊರೆತ, ಆ ಕಾಲದ ಕವಿಗಳಲ್ಲೂ ಕೇಳಿಬರುತ್ತದೆ. ಕುಮಾರವ್ಯಾಸ ಭಾರತ, ಜೈಮಿನಿ ಭಾರತಗಳು ಈ ತರಂಗಗಳು. ಕುಮಾರವ್ಯಾಸ ಕರ್ಣಾಟ ಭಾರತ ಕಥಾಮಂಜರಿಯನ್ನು ಆಯ್ದುಕೊಳ್ಳುವ ಕಾರಣವನ್ನು ;

''ತಿಣುಕಿದನು ಫಣಿರಾಯ..........'' ರಾಮಾಯಣದ ವಸ್ತು ವಿಶೇಷ ಕಾವ್ಯಗಳು ಬಹಳವಾದ್ದರಿಂದ ಮಹಾಭಾರತದ ಕಥೆಯನ್ನಾಯ್ದುಕೊಂಡ ಎಂಬ ದಂತ ಕಥೆಗಿಂತಲೂ ಈ ವ್ಯಾಸ ಭಾರತದ ಅನುವಾದವನ್ನು ಆಯ್ದುಕೊಳ್ಳಲು ಆ ಕಾಲದ ಭಕ್ತಿ ಚಳುವಳಿಯ ಆರಾಧ್ಯ ದೈವವಾದ ಶ್ರೀ ಕೃಷ್ಣ ಕಾರಣ. ಪಂಪ ಕಾವ್ಯ ಪ್ರಜ್ಞೆ, ಪುರಾಣ ಪ್ರಜ್ಞೆಗಳೆರಡರ ದ್ವೈತ ಸಿದ್ಧಾಂತ ಪ್ರತಿಪಾದಕನಾದರೆ, ಕುಮಾರವ್ಯಾಸ ಪುರಾಣವನ್ನೇ ಸಮಕಾಲೀನ ಸಂದರ್ಭಕ್ಕೆ ತಕ್ಕಂತೆ ಭಕ್ತಿಧಾರೆಯಾಗಿ ಹರಿಸಿದವನು. ಪಂಪ ದ್ರೌಪದಿ ವಸ್ತ್ರಾಪಹರಣದ ವಿಷಯವನ್ನೇ ಬಿಟ್ಟರೆ ಕುಮಾರವ್ಯಾಸ ಆ ಸಂದರ್ಭ ದ್ರೌಪದಿ ಕೃಷ್ಣನನ್ನು ಪ್ರಾರ್ಥಿಸುವ ಮೂಲಕವಾಗಿ ಕೃಷ್ಣನ ಭಕ್ತಿಯನ್ನು ಮೆರೆದಿದ್ದಾನೆ.

**ಸಭಾಪರ್ವ :**

ನಾಥರಿಲ್ಲದ ಶಿಶುಗಳಿಗೆ ನೀ
ನಾಥನೈ ಗೋವಿಂದ ಸಲಹೈ
ಯೂಥಪತಿಗಳು ಬಿಸುಟ ತರುಣಿಗೆ ಕೃಪೆಯ ನೀ ಮಾಡೈ.
ನಾಥರಿಲ್ಲೆನಗಿಂದು ದೀನಾ
ನಾಥಬಾಂಧವ ನೀನಲೈವರ
ಮೈಥಿಲಿಪತಿ ಮನಿಸೆಂದೊರಲದಳು ಮೃಗನಯನೆ.

ಹೊಲಬುದಪ್ಪಿದ ಹುಲ್ಲೆ ಬೇಡನ
ಬಲೆಗೆ ಬಿದ್ದಂತಾದೆನ್ನೈ ಬಲು
ಹಳುವದಲಿ ತಾಯ್ಬಿಸುಟ ಶಿಶು ತಾನಾದೆನೆಲೆ ಹರಿಯೆ
ಕೊಲವವ್ವೆ ಕಾಗೆಗಳಕಟ ಕೋ
ಗಿಲೆಯ ಮರಿಯನು ಕೃಷ್ಣ ಕರುಣಾ
ಜಲಧಿಯೇ ಕೈಗಾಯಬೇಕೆಂದೊರಲದೊಳು ತರಳೆ.

(ಸಂ: ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ, ಪ್ರಸಾರಂಗ,
ಮೈಸೂರು ವಿ.ವಿ., ೧೯೭೪).

ಕರುಣೆ ನೀ ಕುರುಣ್ಯ ಪಾತ್ರದ 
ತಿರಳೆ ತಾ ದೀನಾರ್ತಿ ದುಃಖೋ
ತ್ತರಣ ನೀ ದೀನಾರ್ತ ದುಃಖಿತೆಯಾನು ಜಗವರಿಯೆ
ಪರದುಪಾಲಕ ನೀನೆ ಗತ್ಯಂ
ತರದ ವಿಹ್ವಲೆ ತಾನಲಂ ನಿ
ಷ್ಪಾರ ವಿದೇನ್ನೈ ಕೃಷ್ಣಯೊಂದೊರಳಿದೊಳು ತರಳಾಕ್ಷಿ.



ಋಷಿಗಳತಿ ತಾರ್ಕಿಕರು ಕರ್ಮ
ವ್ಯಸನಿಗಳು ಕೋವಿದರು ಮಿಕ್ಕಿನ
ವಿಷಯದೆರೆ ಮೀನುಗಳು ಮೂಢ ಮನುಷ್ಯರೆಂಬವರು
ಒಸೆದು ನಿನ್ನವರೆಂದು ಬಗೆದರೆ
ಬಸಿದು ಬೀಳುವ ಕೃಪೆಯಂ ನೀತೋ
ರಿಸೆಯಿದೇನ್ನೈ ಕೃಷ್ಣಯೆಂದೊರಲಿದಳು ನಳಿನಾಕ್ಷಿ.



ನೀಲಕಮಠನ ನೇತ್ರವಹ್ನಿ
ಜ್ವಾತಿಗಾಹುತಿಯಾಗಿ ಮಗ್ಗಿದ
ಕಾಲಕಾಮನ ಪಥವ ಪಡೆದರು ಪಾಂಡುನಂದನರು
ವಿಳು ಮುವ್ವೆಯೆನ್ನ ನುಡಿಯನು
ಪಾಲಿಸ್ಯೆ ಸಂಕಲ್ಪವಳಿದೊಡೆ
ಹಾಳು ಹೊರವುದು ಕೃಷ್ಣ ಮೈದದೋರೆಂದಳಿಂದು ಮುಖಿ.

ಹಿಂದೆ ನಾನಾ ಪರಿಯದಿರುಂಬಿನ
ಬಂಧನವ ಬಿಡಿಸಿದೆಯಲ್ಲೈ ಗೋ
ವಿಂದ ಶರಣಾನಂದಕಂದ ಮುಕುಂದ ಗುಣವೃಂದ
ಇಂದು ರುದ್ರನು ತಪ್ಪು ಸಾಧಿಸ
ಬಂದರೆಮ್ಮನು ಕಾವರಾಗೆಲೆ
ತಂದೆ ನೀನೇ ಗತಿಯೆನುತ ಹಲುಬಿದಳು ಲಲಿತಾಂಗಿ.

ಅರಸುವೆನೆ ಪರಿಪೂರ್ಣ ಕೇಳೆಂ
ದರಾಹುವೆನೆ ಸರ್ವಜ್ಞ ಸಾಕೆಂ
ದೊರಲಲಾರೆನು ತಾಯಿ ನೀ ನಿಮರಾವು ಶಿಶುಗಳಿಲೆ
ಕುರುಹುದೊರೈ ಕೃಷ್ಣ ಕರುಣವ
ಕರೆದು ಕಳೆಯಲು ಭಕುತರಾರ್ತಿಯ
ನರಿವವ ವಿಪುಳ ಘುರಟ್ಟರಾರಾಪೆಂದಳಿಂದುಮುಖಿ.

ಗತಿಹಿವೀನರಿಗಕಟ ನೀನೇ
ಗತಿಯಲ್ಲೈ ಗೋವಿಂದ ರಿಪು ಬಾ
ಧಿತರಿಗೆ ಬಲರಿಗಾರ್ತರಿಗೆ ನೀ ಪರಮ ಬಂಧು ಮ
ಸತಿ ಪಶು ದ್ವಿಜ ಬಾಧೆಯಲಿ ಜೀ
ವಿತವ ತೊರೆವರು ಗರುವರಿದು ಹಿಂ
ಗಿತೆ ಸುಯೋಧನ ಸಭೆಯೊಳೆಂದೊರಲಿದಳು ಲಲಿತಾಂಗಿ
ಕಾಯಿದ್ದೈ ಕರುಣದಲಿ ವಿವಿಜರ
ತಾಯ ಪರಿಭವವನು ಪಯೋಧಿಯ
ಹಾಯಿದಮರಾರಿಗಳ ಖಂಡಿಸಿ ತಲೆಯ ಚೆಂಡಾಡಿ
ಕಾಯಿದ್ದೈ ಜಾನಕಿಯನೆನ್ನಿನು
ಕಾಯಬೇಹುದು ಹೆಣ್ಣ ಹಂಚಿಕೆ
ನೋಯಬಲ್ಲರೆ ಕೆಲಬರೆಂದೊರಲಿದಳು ತಿರಳಾಕ್ಷಿ
ವೇದವಧದುಗಳೇ ಕಾಯ್ದೆಯ ತಮ
ಬಂಧೆಯಲಿ ಖಿಳಿನಿಂದ ಧರಣಿ ಮ
ಹೋದಧಿಯಲಕ್ಕಾಡಿದರೆ ದಾಡೆಯಲಿ ದಾನವನ
ಕೋದು ಹಾಕಿ ಭೂತ ಧಾತ್ರಿಯ
ಕಾದೊ ಕಾರುಣ್ಯ ಸಿಂಧುವೆ
ಮೇದಿನೀಪತಿ ಮನ್ನಿಸೆಂದೊರಲಿದೆಳು ತರಳಾಕ್ಷಿ.

ಹೀಗೆ ಇಡಿಯಾದ ಪರ್ವವನ್ನೇ ಕೃಷ್ಣಸ್ತುತಿಯಾಗಿ ನವ ಕುಮಾರವ್ಯಾಸನ ಕಾವ್ಯ ಶಕ್ತಿಗೆ ಭಕ್ತಿಯೇ ಕಾರಣ. ಇಲ್ಲಿಯ ಪದ್ಯಗಳನ್ನು ಗಮನಿಸಿದಾಗ ಈ ಮಾತಿಗೆ ಪುಷ್ಟಿದೊರೆತಿದೆ. ಪುರಾಣ ಧರ್ಮವನ್ನು ಕಾವ್ಯಧರ್ಮವಾಗಿಸಿ (ಭಕ್ತಿಯ ಹಿನ್ನೆಲೆಯಲ್ಲಿ)ದ ಕುಮಾರವ್ಯಾಸನ ಸಾಂಸ್ಕೃತಿಕ ಒತ್ತಾಸೆ ಪರಿವರ್ತನೆಯಲ್ಲಿ ಹೇಗೆ ಪರ್ಯಾವಸಾನ ಹೊಂದಿದೆ ಎನ್ನುವುದನ್ನು ಕಾಣಬಹುದು.

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವಾಚಂ ತತೋಜೆಯಮುದೀರಯೇತ್ ॥

- ವ್ಯಾಸ ಭಾರತ.

ನಮಿಸಿ ನಾರಾಯಣನ ನರನ ಪುರುಷೋತ್ತಮನ ।
ವ್ಯಾಸವಾಗ್ದೇವಿಯಿರ ಬಳಿಕ ಪೇಳ್ವುದು ಜಯವ ॥

- ಕುಮಾರವ್ಯಾಸ ಭಾರತ.

ಇಡೀ ವ್ಯಾಸಭಾರತವನ್ನು ಕೃಷ್ಣಕಥೆಯಾಗಿಸಿದಾಗಲೂ ಆ ಭಕ್ತಿಯ ಹಿನ್ನೆಲೆಯಲ್ಲೂ ಸೃಜನ, ಆದರೆ ನಿಕಟ ಅನುವಾದ ಎದ್ದು ಕಾಣುತ್ತದೆ. ಅನುವಾದದ ಅದರಲ್ಲೂ ಭಕ್ತಿ ಚಳುವಳಿಯ ಹಿನ್ನೆಯ ಸಾಂಸ್ಕೃತಿಕತೆ ಕುಮಾರವ್ಯಾಸ ಭಾರತದಲ್ಲಿ ಎದ್ದು ಕಾಣುತ್ತದೆ. ಅಪಥ್ಯ ಎನ್ನಬಹುದಾದ ಮಾತುಗಳನ್ನು ಸಂದರ್ಭಾನುಸಾರವಾಗಿ, ಶಕ್ತಿಯುತವಾಗಿ ಹೊಳೆಯಿಸಿದ್ದಾನೆ. 'ಗಂಡರೋ ನೀವ್ ಷಂಡರೋ ಹೇಳೆಂದಳಿಂದುಮುಖಿ' ಎಂಬ ಸತ್ಯದ ನುಡಿಗೆ ಹಾದರವಿಲ್ಲ. ಈ ಬಗೆಯಾದ 'ಪತಿತೋದ್ಧರಣಶಕ್ತಿ' ಕುಮಾರ ವ್ಯಾಸನಿಗೆ ಆ ಕಾಲಘಟ್ಟದ ಸಾಮಾಜಿಕ ಕೊಡುಗೆ ಎನ್ನಬಹುದು.

ವೇದಪಾರಾಯಣದ ಫಲಗಂ
ಗಾದಿ ತೀರ್ಥ ಸ್ನಾನ ಫಲಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗಫಲ
ಮೇದಿನಿಯನೊಲಿದಿತ್ತ ಫಲ
ಸ್ವಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ.

ಕುಮಾರವ್ಯಾಸ ಈ ಕಥೆ ಕರ್ಣಾನಂದಕರ ಮಾತ್ರವಲ್ಲದೆ, ಪುಣ್ಯಫಲಕ್ಕೂ ಕಾರಣ ಎನ್ನುತ್ತಾನೆ. ಇದು ಆ ಕಾಲದ ಸಂಪ್ರದಾಯಕ ಮನಸ್ಪಂದರ ತುಡಿತವನ್ನು ತೋರಿಸಿಕೊಟ್ಟಿದೆ. ಅಷ್ಟೇ ಅಲ್ಲ, ಈ ತತ್ವಕ್ಕೆ ಬದ್ಧವಾಗಿ ಕುಮಾರವ್ಯಾಸ ಭಾರತ ರಚಿಸಿದನೆ ಎಂಬುದು ಗಮನೀಯ ಅಂಶವೆನಿಸುತ್ತವೆ.

ಕನ್ನಡ ಜೈಮಿನಿ ಭಾರತವು ಸಂಸ್ಕೃತ ಜೈಮಿನಿ ಭಾರತದ ಅನುವಾದ. ಕಥಾವಸ್ತುವು ಬಹುಮಟ್ಟಿಗೆ ಮೂಲವನ್ನೇ ಅನುಸರಿಸಿದೆ. "ಗೀರ್ವಾಣ ಪುರ ನಿಲಯ ಲಕ್ಷ್ಮೀವರಂ ತಾನೆ ಸಂಗೀತ ಸುಕಲಾ ನಿಪುಣನು ವೀಣೆಯಿಂ ಗಾನಾನುಂ ನುಡಿಸುವಂದರೊಳ್ ಎನ್ನ ವಾನಿಯಿಂ ಕವಿತೆಯಂ ಪೇಳಿಸಿದಮ" ಎನ್ನುವ ಕವಿ ಕುಮಾರವ್ಯಾಸನಂತೆ ತಾನು ಶ್ರೀಕೃಷ್ಣನ ಭಕ್ತ ಎನ್ನುವುದನ್ನು ಸಾಬೀತುಪಡಿಸಿದ್ದಾನೆ. ತಾನು ಲಕ್ಷ್ಮೀಶನ ಕೈವೀಣೆ ಮಾತ್ರ ಎಂದಿದ್ದಾನೆ ಕವಿ. ಇದೊಂದು ಕೇವಲ ಭಕ್ತಿ ಕಾವ್ಯವಾಗದೇ ಸ್ವತಃ ಕವಿಯೇ ಹೇಳುವಂತೆ, "ವರವರ್ಣದಿಂದೆ ಶೋಭಿತಮಾಗಿ ಸುಮನೋನುರಾಗದಿಂ ಪ್ರಚುರಮಾಗಿ ನಿರುತ ಮಂಜುಳ ಶಬ್ದದಿಂದೆ ಕಿವಿಗಿಂಪಾಗಿ" ಆಹ್ಲಾದಕರವಾಗಿದೆ. ಲಕ್ಷ್ಮೀಶನು ಜೈಮಿನಿ ಭಾರತದ ಕಥೆಯ ಹೇಳಲು ಹೊರಟು ಸಂಪೂರ್ಣವಾಗಿ ಹೇಳಿರುವುದು ಶ್ರೀ ಕೃಷ್ಣಮಹಾತ್ಮ್ಯ. ಆದುದರಿಂದಲೇ ಕವಿ ಹೀಗೆ ಹೇಳುತ್ತಾನೆ.

ಪುಣ್ಯಮಿದು ಕೃಷ್ಣಾಚರಿತಾಮೃತಂ ಸುಕವೀಂದ್ರ ।
ಗಣ್ಯಮಿದು ಶೃಂಗಾರ ಕುಸುಮ ತರು ತುರುಗಿದಾ ।
ರಣ್ಯಮಿದು ನವರಸ ಪ್ರೌಢಿ ಲಾಲಿತ್ಯ ನಾನಾ ವಿಚಿತ್ರಾರ್ಥಂಗಳ ॥
ಗಣ್ಯಮಿದು ಶಾರದೆಯ ಸನ್ಮೋಹನಾಂಗಲಾ ।
ವಣ್ಯಮಿದು ಭಾವಕರ ಕಿವಿದೊಡವಿಗೊದವಿದ ಹಿ ।
ರಣ್ಯಮಿದು ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯ ರಚನೆ ॥

ಸಂಸ್ಕೃತದ ಮೂಲ ಜೈಮಿನಿಯು ಭಾರತವಾಗಿದೆಯೇ ವಿನಃ 'ಶ್ರೀಕೃಷ್ಣ ಚರಿತಾಮೃತಂ' ಆಗಿಲ್ಲವೆಂಬುದು ತಿಳಿದ ವಿಷಯವಾಗಿದೆ. ಜೈಮಿನಿ ಭಾರತಕ್ಕೆ ಪಾಂಡವರೈವರು ಕಥಾನಾಯಕರಾದರೆ, ಲಕ್ಷ್ಮೀಶನ ಕಾವ್ಯ ೧೬ನೇ ಶತಮಾನದ ಕೃತಿಯಾಗಿರುವುದರಿಂದ ಭಕ್ತಿ ಪರಂಪರೆಯ ಪ್ರಭಾವಕ್ಕೊಳಗಾಗಿದೆ. ಇದು ಕೃಷ್ಣ ಭಕ್ತಿಯ ಪರಿಣಾಮವಾಗಿ ಶ್ರೀ ಕೃಷ್ಣಚರಿತಾಮೃತವಾಗಿದೆ.

ಎಚ್ಚರಿಂದರಿದಿರ್ಪುದೆನೆ ವೀರವರ್ಮಕಂ ।
ನಿಚ್ಚಟದೊಳೀ ಮಗಳನಿತ್ತು ಮಗುಳೀಸಿ ಕೊಂ ।
ಬಚ್ಚಿರದ ವರಮದೇಕೆನೆ ಕನ್ಯಾಶುಲ್ಕಮತಿ ದೋಷಕರಮೆಂದನು ॥

ಲಕ್ಷೀಶನು ವಿಜಯನಗರವನ್ನು ಆಳುತ್ತಿದ್ದ ಶ್ರೀ ಕೃಷ್ಣದೇವರಾಯನನ್ನು ಗುರಿಯನ್ನಾಗಿಸಿ, ಜೈಮಿನಿ ಭಾರತವನ್ನು ರಚಿಸಿ ಶ್ರೀ ಕೃಷ್ಣ ಚರಿತಾಮೃತವನ್ನಾಗಿ ಮಾಡಿದ್ದಾನೆ ಎಂದೂ ಹೇಳಲಾಗಿದೆ. ಅಲ್ಲಿ ವರ್ಣಿಸಲ್ಪಟ್ಟಿರುವ ಭದ್ರಾವತಿ ವೈಭವವು ವಿಜಯನಗರದ ವೈಭವವೆಂದು ತಿಳಿದುಬಂದಿದೆ. ಶ್ರೀ ಕೃಷ್ಣದೇವರಾಯನ ರಾಯಚೂರು ವಿಜಯ ಮೊದಲಾದವುಗಳಿಂದ ಸ್ಫೂರ್ತಿಗೊಂಡು ಶ್ರೀ ಕೃಷ್ಣನ ವ್ಯಾಜ್ಯದಿಂದ ಕನ್ನಡ ರಾಜನಾದ ಶ್ರೀ ಕೃಷ್ಣ ದೇವರಾಯನನ್ನು ಅಭಿವರ್ಣಿಸಿರುವನೆಂಬ ವಿಷಯ

ಕನ್ನಡ ಜೈಮಿನಿ ಭಾರತವು ಸಂಸ್ಕೃತ ಜೈಮಿನಿ ಭಾರತದ ಅನುವಾದ. ಕಥಾವಸ್ತುವು ಬಹುಮಟ್ಟಿಗೆ ಮೂಲವನ್ನೇ ಅನುಸರಿಸಿದೆ. ''ಗೀರ್ವಾಣ ಪುರ ನಿಲಯ ಲಕ್ಷ್ಮೀವರಂ ತಾನೆ ಸಂಗೀತ ಸುಕಲಾ ನಿಪುಣನು ವೀಣೆಯಿಂ ಗಾನಾನುಂ ನುಡಿಸುವಂದರೊಳ್ ಎನ್ನ ವಾನಿಯಿಂ ಕವಿತೆಯಂ ಪೇಳಿಸಿದಮ'' ಎನ್ನುವ ಕವಿ ಕುಮಾರವ್ಯಾಸನಂತೆ ತಾನು ಶ್ರೀಕೃಷ್ಣನ ಭಕ್ತ ಎನ್ನುವುದನ್ನು ಸಾಬೀತುಪಡಿಸಿದ್ದಾನೆ. ತಾನು ಲಕ್ಷ್ಮೀಶನ ಕೈವೀಣೆ ಮಾತ್ರ ಎಂದಿದ್ದಾನೆ ಕವಿ. ಇದೊಂದು ಕೇವಲ ಭಕ್ತಿ ಕಾವ್ಯವಾಗದೇ ಸ್ವತಃ ಕವಿಯೇ ಹೇಳುವಂತೆ, ''ವರವರ್ಣದಿಂದೆ ಶೋಭಿತಮಾಗಿ ಸುಮನೋನುರಾಗದಿಂ ಪ್ರಚುರಮಾಗಿ ನಿರುತ ಮಂಜುಳ ಶಬ್ದದಿಂದೆ ಕಿವಿಗಿಂಪಾಗಿ'' ಆಹ್ಲಾದಕರವಾಗಿದೆ. ಲಕ್ಷ್ಮೀಶನು ಜೈಮಿನಿ ಭಾರತದ ಕಥೆಯ ಹೇಳಲು ಹೊರಟು ಸಂಪೂರ್ಣವಾಗಿ ಹೇಳಿರುವುದು ಶ್ರೀ ಕೃಷ್ಣಮಹಾತ್ಮ್ಯ. ಆದುದರಿಂದಲೇ ಕವಿ ಹೀಗೆ ಹೇಳುತ್ತಾನೆ.

ಪುಣ್ಯಮಿದು ಕೃಷ್ಣಾಚರಿತಾಮೃತಂ ಸುಕವೀಂದ್ರ।
ಗಣ್ಯಮಿದು ಶೃಂಗಾರ ಕುಸುಮ ತರು ತುರುಗಿದಾ।
ರಣ್ಯಮಿದು ನವರಸ ಪ್ರೌಢಿ ಲಾಲಿತ್ಯ ನಾನಾ ವಿಚಿತ್ರಾರ್ಥಂಗಳ॥
ಗಣ್ಯಮಿದು ಶಾರದೆಯ ಸಮ್ಮೋಹನಾಂಗಲಾ।
ವಣ್ಯಮಿದು ಭಾವಕರ ಕಿವಿದೊಡವಿಗೊದವಿದ ಹಿ।
ರಣ್ಯಮಿದು ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯ ರಚನೆ॥

ಸಂಸ್ಕೃತದ ಮೂಲ ಜೈಮಿನಿಯು ಭಾರತವಾಗಿದೆಯೇ ವಿನಃ 'ಶ್ರೀಕೃಷ್ಣ ಚರಿತಾಮೃತಂ' ಆಗಿಲ್ಲವೆಂಬುದು ತಿಳಿದ ವಿಷಯವಾಗಿದೆ. ಜೈಮಿನಿ ಭಾರತಕ್ಕೆ ಪಾಂಡವರೈವರು ಕಥಾನಾಯಕರಾದರೆ, ಲಕ್ಷ್ಮೀಶನ ಕಾವ್ಯ ೧೬ನೇ ಶತಮಾನದ ಕೃತಿಯಾಗಿರುವುದರಿಂದ ಭಕ್ತಿ ಪರಂಪರೆಯ ಪ್ರಭಾವಕ್ಕೊಳಗಾಗಿದೆ. ಇದು ಕೃಷ್ಣ ಭಕ್ತಿಯ ಪರಿಣಾಮವಾಗಿ ಶ್ರೀ ಕೃಷ್ಣಚರಿತಾಮೃತವಾಗಿದೆ.

ಎಚ್ಚರಿಂದರಿದಿರ್ಪುದೆನೆ ವೀರವರ್ಮಕಂ।
ನಿಚ್ಚಟದೊಳೀ ಮಗಳನಿತ್ತು ಮಗುಳೀಸಿ ಕೊಂ।
ಬಚ್ಚಿರದ ವರಮದೇಕೆನೆ ಕನ್ಯಾಶುಲ್ಕಮತಿ ದೋಷಕರಮೆಂದನು॥

ಲಕ್ಷೀಶನು ವಿಜಯನಗರವನ್ನು ಆಳುತ್ತಿದ್ದ ಶ್ರೀ ಕೃಷ್ಣದೇವರಾಯನನ್ನು ಗುರಿಯನ್ನಾಗಿಸಿ, ಜೈಮಿನಿ ಭಾರತವನ್ನು ರಚಿಸಿ ಶ್ರೀ ಕೃಷ್ಣ ಚರಿತಾಮೃತವನ್ನಾಗಿ ಮಾಡಿದ್ದಾನೆ ಎಂದೂ ಹೇಳಲಾಗಿದೆ. ಅಲ್ಲಿ ವರ್ಣಿಸಲ್ಪಟ್ಟಿರುವ ಭದ್ರಾವತಿ ವೈಭವವು ವಿಜಯನಗರದ ವೈಭವವೆಂದು ತಿಳಿದುಬಂದಿದೆ. ಶ್ರೀ ಕೃಷ್ಣದೇವರಾಯನ ರಾಯಚೂರು ವಿಜಯ ಮೊದಲಾದವುಗಳಿಂದ ಸ್ಫೂರ್ತಿಗೊಂಡು ಶ್ರೀ ಕೃಷ್ಣನ ವ್ಯಾಜ್ಯದಿಂದ ಕನ್ನಡ ರಾಜನಾದ ಶ್ರೀ ಕೃಷ್ಣ ದೇವರಾಯನನ್ನು ಅಭಿವರ್ಣಿಸಿರುವನೆಂಬ ವಿಷಯ

ಪರಂಪರೆಯನ್ನು ಸೃಷ್ಟಿಸುತ್ತದೆ. ವೈಶಂಪಾಯನ ಶಿಷ್ಯನಾದ ಜೈಮಿನಿಯು ಜನಮೇಜಯ ರಾಜನಿಗೆ ಅಶ್ವಮೇಧದ ಈ ಕಥೆಯನ್ನು ಹೇಳಿದಂತೆ ಎಂದು ಮೇಲ್ಪದರದಲ್ಲಿ ಅನ್ನಿಸಿದರೂ, ಒಳಗಿನ ಉಪಕಥೆಗಳ ಬೇರೆ ಬೇರೆ ಜನರು ಹೇಳಿದ್ದಾರೆ. ಉದಾ: ನಾರದ ಹೇಳಿದ ಚಂದ್ರಹಾಸನ ಕಥೆ, ಸೌಭರಿಯು ಚಂಡಿಯ ಕಥೆಯನ್ನು ಹೇಳಿದ್ದಾನೆ.

ಲಕ್ಷ್ಮೀಶನ ಕಾವ್ಯಕ್ಕೆ ನಾದದ ಝೇಂಕಾರ ಕಾವ್ಯದ ರಸಾನುಭೂತಿಗೆ ಬೇಕೇಬೇಕು. ಏಕೆಂದರೆ; ಲಕ್ಷ್ಮೀಶನಾದೋಪಾಸಕ. ಅವನ ಕಾವ್ಯದಲ್ಲಿ ನಾದದ ಬೆಲೆ ಕಟ್ಟದಿದ್ದರೆ ಏನೂ ತಿಳಿಯದಂತಾಗುವುದಿಲ್ಲ. ಸಂಗೀತವು ಪ್ರಾಣ ಮಾತ್ರ, ಕವನವು ಪ್ರಾಣದ ಗೋಚರಮೂರ್ತಿ, ಮೂರ್ತಿಯ ದೇಹ ಲಕ್ಷಣಗಳಲ್ಲಿ ಪ್ರಾಣದ ಪದವಿಯನ್ನು ಹೊಳೆಯಿಸುವುದು ಗಮಕಿಯ ಕಾರ್ಯ. ಗಮಕಿ ಶಬ್ಧಾರ್ಥ ಸಾಹಿತ್ಯದಿಂದ ಎಂದಿಗೂ ಕದಲುವುದಿಲ್ಲ. ಆದ್ದರಿಂದಲೇ ನಾದದಂತೆ ಮತ್ತು ಅರ್ಥ ಮಮತೆಯನ್ನು ಸಮರಸ ಗೊಳಿಸುವ ಗಮಕೀಯ ಕಾರ್ಯ ಲಕ್ಷ್ಮೀಶನ ಕಾವ್ಯ ಉದ್ದೀಪನ ಕಾರ್ಯಕ್ಕೆ ಅನಿವಾರ್ಯ. ಕವಿ,ಗಮಕಿ, ವಾದಿ, ವಾಗ್ಮಿ ಒಂದೇ ಮಾಲೆಯಲ್ಲಿನ ಮಣಿಗಳು. ಆದ್ದರಿಂದಲೇ ಲಕ್ಷ್ಮೀಶನು ''ಕಾವ್ಯಮಿದು ಭುವನದೊಳಿಸಕಲ್ ಜನರಿಂದೆ ಸುಶ್ರಾವ್ಯಮಪ್ಪಂತೆನ್ನವದನಾಬ್ಜದಲ್ಲಿ ನೀನೇ ವ್ಯಾಪಿಸು'' ಎಂದು ಬೇಡಿಕೊಳ್ಳುವನು. ಹೀಗೆ ಜೈಮಿನಿ ಭಾರತ ಕಾವ್ಯವನ್ನು ನಾದಲೋಲತೆಯಿಂದ ಲೋಲುಪ್ತಿಗೊಳಿಸಿದ ಲಕ್ಷೀಶನ ಕಾವ್ಯ ಸಂಸ್ಕೃತ ಕಾವ್ಯವೊಂದರ ಸಮರ್ಥ, ಸಾಂದರ್ಭಿಕ ಅಗತ್ಯಕ್ಕೆ ಅನುಗುಣವಾಗಿ ಮೂಡಿಬಂದ ಅನುವಾದ ವಲ್ಲವೇ ?. ವಸಾಹತುಶಾಹಿಯ ಕಾಲಘಟ್ಟದಲ್ಲಿ ಅನುವಾದಕರು ಭಾರತೀಯತ್ವವನ್ನು ಸಂಸ್ಕೃತದಲ್ಲಿ ಸಮೀಕರಿಸಿಕೊಂಡರು. ಆ ಭಾರತೀಯತ್ವವೆಂಬ ಸಮಷ್ಟಿ ಪ್ರಜ್ಞೆಯನ್ನು ತಮ್ಮ ಕನ್ನಡಾಭಿಮಾನದವನೆಂಬ ಸ್ಥಳೀಯ ಪ್ರಜ್ಞೆಗೆ ಅವಿರೋಧಿಯಾಗಿಸಿದ್ದರಿಂದಲೇ ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಗಳು ಹರಿದು ಬಂದವು. ವಸಾಹತು ರಾಜಕರಣದಿಂದ ಬಂದ ಆತಂಕ, ಕನ್ನಡ ಪ್ರಜ್ಞೆ ಮತ್ತು ಭಾರತೀಯತ್ವ ಇವೆಲ್ಲದರ ಕ್ರೋಢೀಕೃತ ಪರಿಣಾಮ ಈ ನಮ್ಮ ಅನುವಾದ ಯುಗದ ಅವಿರ್ಭಾವ, ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ ಶ್ರೀನಿವಾಸ ಜೋಯಿಸರು ಕನ್ನಡ ಜೈಮಿನಿ ಭಾರತದ ಬಗ್ಗೆ ಹೀಗೆ ಬರೆದಿದ್ದಾರೆ; ''ಸಮುದ್ರಗುಪ್ತನ ದಂಡಯಾತ್ರೆಯ ಕೆಲವು ಅಂಶಗಳನ್ನು ಮಹಾಭಾರತದ ಇತಿಹಾಸದೊಡನೆ ಜೋಡಣೆ ಮಾಡಿಕೊಂಡು ಜೈಮಿನಿ ಭಾರತವೆಂಬ ಹೆಸರಿನಿಂದ ಗ್ರಂಥ ರಚಿಸಿದಂತೆ ಭಾಸವಾಗುತ್ತದೆ. ಅದರಂತೆ ಇತಿಹಾಸ ಕಾಲದಲ್ಲಿ ಸಮುದ್ರಗುಪ್ತ ನಡೆಸಿದ ಅಶ್ವಮೇಧಯಾಗದ ವಿಜಯಯಾತ್ರೆಯ ವಿಷಯವು ಜೈಮಿನಿ ಭಾರತದಲ್ಲಿ ಸೇರಿದೆ. ವಾಕಾಪಿಕ ಅಥವಾ ವಿಂಧ್ಯ ವಂಶದರಸನಾದ ರುದ್ರದೇವನನ್ನು ನೀಲಧ್ವಜನೆಂದೂ ವನರಾಜ್ಯಾಧಿಪತಿಗಳನ್ನು ವ್ಯಾಘ್ರರಾಜನೆಂದೂ, ಕಂಚಿಯ ಪಲ್ಲವ ಸಾಮ್ರಾಟನಾದ ಶಿವಸ್ಕಂದವರ್ಮ ಮತ್ತು ಯುವರಾಜ ವಿಷ್ಣುಗೋಪರನ್ನು-ಮಯೂರ ಧ್ವಜ-ತಾಮ್ರಧ್ವಜರೆಂದೂ, ಸೌರಾಷ್ಟ್ರದರಸನನ್ನು ವೀರವರ್ಮನೆಂದೂ, ಕುಂತಳದರಸನಾದ ಮಯೂರ ವರ್ಮನನ್ನು ಚಂದ್ರಹಾಸನೆಂದೂ ಹೆಸರುಗಳನ್ನು ಮಾರ್ಪಡಿಸಿ ಸಮುದ್ರ ಗುಪ್ತನ ದಂಡಯಾತ್ರೆಯ ಕೆಲವು ಅಂಶಗಳನ್ನು ಮಹಾಭಾರತದ ಅಶ್ವಮೇಧಯಾಗವನ್ನೂ ಸೇರಿಸಿ ಜೈಮಿನಿ ಭಾರತವನ್ನು ಬರೆದಿದ್ದಾನೆ'' ಎಂದು ಈ ಎಲ್ಲ ಸಾಂಸ್ಕೃತಿಕ ಅಂಶಗಳು ಈ ಅನುವಾದದ ಹಿಂದಿ ಎಂಬುದು ಗಮನಾರ್ಹ.

ಈ ರೀತಿಯಾಗಿ ೯ನೇ ಶತಮಾನದಿಂದ ೨೦ನೆಯ ಶತಮಾನದ ಮುದ್ದಣವರೆಗೂ ಕನ್ನಡ ಸಾಹಿತ್ಯ ಸಂದರ್ಭವು ಸಂಸ್ಕೃತ ಮೂಲವೊಂದನ್ನು ಆಧಾರವಾಗಿರಿಸಿಕೊಡು ತನ್ನ ಅಸ್ಮಿತೆಯನ್ನು ಕಂಡುಕೊಂಡಿದೆ. ತಮ್ಮದೇ ಆದ ವಿಶಿಷ್ಟವಿಧಾನದಿಂದ ಪದ್ಯವನ್ನು ಗದ್ಯವಾಗಿಸಿ, ಗದ್ಯವನ್ನು ಪದ್ಯವಾಗಿಸಿ, ರೂಪಾಂತರ ಮಾಡಿಯೋ, ಭಾವಾನುವಾದ ಮಾಡಿಯೋ ಮೂಲವನ್ನು ಅನುಸರಿಸಿ, ಒಂದಲ್ಲ ಒಂದು ರೂಪದಿಂದ ಭಾಷಾಂತರಕಾರ್ಯ ನಡೆದಿರುವದು ಸ್ಪಷ್ಟವಾಗಿ ಗೋಚರಿಸುತ್ತದೆ. ಮೂಲಕೃತಿಯ ಸಾರವನ್ನುಳಿಸಿಕೊಂಡೇ ಕಥೆಯ ತಂತ್ರದಲ್ಲಿ ಪಾತ್ರಗಳ ಸ್ವಭಾವ ಚಿತ್ರಣದಲ್ಲಿ, ಛಂದೋವಿಧಾನದಲ್ಲಿ ತಮ್ಮತನ ಮೆರೆದು ಮಹಾಕವಿಗಳೇ ಎನಿಸಿಕೊಂಡಿದ್ದಾರೆ. ಕೆಲವು ಕೃತಿಗಳಲ್ಲಿ ಮೂಲವು ಹೆಚ್ಚು ಸ್ಪಷ್ಟವಾಗಿ ಮೂಡಿಬಂದಿದೆ.

ಭಕ್ತಿ ಚಳುವಳಿ ಫಲವಾಗಿ ಮೂಡಿಬಂದ ದಾಸಸಾಹಿತ್ಯವೂ ಕೂಡ ಈ ಪ್ರಭಾವದಿಂದ ಹೊರತಾಗಿಲ್ಲ. ದಾಸಸಾಹಿತ್ಯ ವೈದಿಕ ವಾಙ್ಮಯದ ಯಥಾವತ್ತಾದ ಅನುವಾದ. ಕಾವ್ಯ ಮಿಮಾಂಸೆಯಲ್ಲಿ ಹೇಳುವದಾದರೆ ಪ್ರಭುಸಮ್ಮಿತದಿಂದ ಕಾಂತಾ ಸಮ್ಮಿತದೆಡೆಗೆ ದಾಸಸಾಹಿತ್ಯ ಅನುವಾದಗೊಂಡಿದೆ. ಎಂದಿನಂತೆ ಈ ಅನುವಾದಕ್ಕೂ ಆ ಕಾಲದ ಸಾಂಸ್ಕೃತಿಕ ಪರಿಸರವೇ ಕಾರಣ. ವೈದಿಕ ಕರ್ಮಠ ಸಂಪ್ರದಾಯದ ವಿರುದ್ಧ ಸುಲಭ ಜ್ಞಾನಮಾರ್ಗದಿಂದ ಮುಕ್ತಿ ಪಡೆಯುವ ಪ್ರವರ್ತಕರಾಗಿ ಈ ಅನುವಾದಗಳು ಕೆಲಸಮಾಡಿವೆ.

ಶ್ರೀಪಾದರಾಜರಿಂದ ಈ ಬಗೆಯ ಪರಿವರ್ತನೆ ಆರಂಭಗೊಂಡಿತು. ಕನ್ನಡ ಶೂದ್ರ ಭಾಷೆ ಎಂಬ ಮಾತನ್ನು ಅಲ್ಲಗಳೆದು, ಅವರು ತಮ್ಮ ಮಠದ ಸಂಪ್ರದಾಯದ ವಿರುದ್ಧ ಸಂಸ್ಕೃತ ಸಾಹಿತ್ಯದ ತಿರುಳನ್ನು ಕನ್ನಡಕ್ಕೆ ವರ್ಗಾಂತರಿಸುವ ಕಾರ್ಯಕ್ಕೆಗೊಂಡರು. ಹರಿವಂಶ, ವಿಷ್ಣುಪುರಾಣ, ಭಾಗವತ, ಭಗವದ್ಗೀತೆಯ ಸಾರವೆಲ್ಲವೂ ಕೀರ್ತನ ರೂಪದಲ್ಲಿ ಅನುವದಿತವಾಗಿವೆ.

ಇವೇ ಕನ್ನಡ ಸಾಹಿತ್ಯ ಸಂದರ್ಭವನ್ನು ನೋಡಿದಾಗ, ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಕನ್ನಡ ಸಾಹಿತ್ಯದ ಪ್ರಧಾನ ಲಕ್ಷಣವೆನಿಸಿದೆ. ಈ ಅನುವಾದಗಳು ಆಯಾ ಯುಗಧರ್ಮದ ಅಭಿವ್ಯಕ್ತಿ ಮಾಧ್ಯಮವಾಗಿ ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ. ಈ ಸಂದರ್ಭದಲ್ಲಿ ಸಂಸ್ಕೃತ ಭಾಷೆಯು ತನ್ನ ಯಾಜಮಾನ್ಯ ಸ್ಥಿತಿಯಿಂದ ಬದಲಾದ ಕಾಲದಲ್ಲಿ ತನ್ನನ್ನು ಪರಿವರ್ತಿಸಿಕೊಳ್ಳಬೇಕಾದ ಸಾಧ್ಯತೆಯೆಡೆಗೆ ಬಾಗಿದೆ. ಕನ್ನಡ ಭಾಷೆಯು ಕೇವಲ ಅಧೀನ ಅಥವಾ ಸ್ವೀಕರಿಸುವ ಭಾಷೆಯಾಗಿದೆ ತನ್ನದೇ ಆದ ಬೇಡಿಕೆಗಳನ್ನು ಮಂಡಿಸುವ, ಒತ್ತಡವನ್ನು ತರುವ ಸಾಮರ್ಥ್ಯ ಹೊಂದಿತ್ತು. ಬದಲಾವಣೆಯನ್ನು ನಿರಾಕರಿಸುವ, ವೇದಪಾರಗಳಿಂದ, ಶ್ರುತಿ-ಸ್ಮೃತಿ ಸಂಪ್ರದಾಯಗಳಿಂದ ಬರಹರೂಪಕ್ಕೆ ಇಳಿಯಲಾರದ ಸ್ಥಿತಿಯಿಂದ ಸಂಸ್ಕೃತ ಕಾವ್ಯಭಾಷೆಯಾಗಿ ಮಾರ್ಪಟ್ಟಿತು. ರಸಪ್ರತಿಪಾದನಾತ್ಮಕ ಬರವಣಿಗೆಯಾಗಿ ಗೋಚರಿಸುತ್ತಲೇ ೧೧ನೆಯ ಶತಮಾನಕ್ಕೆ ಇಳಿಮುಖಿಯಾಗತೊಡಗಿತು. ಆ ಹಂತದಲ್ಲಿ ಸಂಸ್ಕೃತಕ್ಕೂ ಪುನರುಜ್ಜೀವಿತಗೊಳ್ಳುವ ಹವಣಿಕೆ ಇತ್ತು. ಕನ್ನಡ ಭಾಷೆಗೂ ಅದರದೆ ಕೆಲ

ಅಗತ್ಯತೆಗಳು ಇದ್ದವು. ಚಾರಿತ್ರಿಕವಾಗಿ ಗಮನಿಸಿದಾಗ ಅನುವಾದ ಕನ್ನಡ ಭಾಷೆಯಷ್ಟೆ ಪ್ರಾಚೀನ ವಾಗಿರುವದು ಕುರುಡನಿಗೂ ಕಾಣಿಸುವಷ್ಟು ಸ್ಪಷ್ಟವಾಗಿದೆ ಆದರೆ ಈ ಅನುವಾದಗಳು ಸಾಹಿತ್ಯಿಕ, ಸಾಂಸ್ಕೃತಿಕ ಅನುವಾದಗಳಾಗಿ ಹೊರಹೊಮ್ಮಿವೆ ಎಂಬುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಪೊನ್ನನು 'ಕಾಳಿದಾಸಂಗಂ ನೂರ್ಮಡಿ'ಎಂದು ಹೇಳಿಕೊಂಡಿದ್ದಾನೆ. ಸಂಸ್ಕೃತ ಸಾಹಿತ್ಯದ ಮೇರು ಕವಿ ಕಾಳಿದಾಸನಿಗಿಂತ ಎನ್ನುವಲ್ಲಿ ಅಂದಿನ ಸಂಸ್ಕೃತ-ಕನ್ನಡ ಭಾಷೆಗಳ ಸಂಬಂಧ ಅರ್ಥವಾಗುತ್ತದೆ. ವ್ಯಾಸಮುನೀಂದ್ರ' ಎನ್ನುವ ಪಂಪನಲ್ಲೂ ನಾವು ಕಾಣುವುದು ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯ ಪ್ರತಿಸ್ಪರ್ಧಿಯಾಗಿತ್ತು ಎಂಬುದೆ ಸಂಸ್ಕೃತ ಸಾಹಿತ್ಯದಲ್ಲಿರುವದು ಕನ್ನಡದಲ್ಲಿಲ್ಲ ಎಂಬ ಕೊರಗು ಉಭಯ ಭಾಷಾ ಪ್ರವೀಣರಾದ ಅಂದಿನ ಕವಿಗಳಿಗೆ ತಿಳಿದಿತ್ತು. ಆ ಕಾರಣಕ್ಕಾಗಿ ಸ್ಪರ್ಧಾಮನೋಭಾವದಿಂದ ಸಂಸ್ಕೃತ ಸಾಹಿತ್ಯ ಕೃತಿಯೊಂದನ್ನು ಆಧರಿಸಿ, ಸ್ವತಂತ್ರ, ಸೃಜನಶೀಲಕಾವ್ಯವೊಂದನ್ನು ಕಟ್ಟುವ ಬಗೆಯನ್ನು ಆ ಕಾಲದ ಕವಿಗಳಲ್ಲಿ ಕಾಣಬಹುದು. ಕನ್ನಡಕ್ಕೂ, ಸಂಸ್ಕೃತದಷ್ಟೇ ಸ್ವಂತಿಕೆಯೊದು ಇದೆ ಎನ್ನುವದನ್ನು ನಾನು ಕಾಳಿದಾಸನಷ್ಟೆ ಸರಿಸಮ ಎನ್ನುವ ಭಾವವನ್ನು ಪೊನ್ನನು, ವ್ಯಾಸನೆಂಬ ಗರ್ವಮೆನಗಿಲ್ಲ ಕಥೆಯ ಮೆಯ್ಗೆಡಲೀಯದೆ ಎನ್ನುತ್ತಲೇ ಕಥಾಂತರವೊಂದನ್ನು ಸೃಜಿಸಿದ ಪಂಪನು ಉದಾಹರಣೆಗಳಾಗಿದ್ದಾರೆ. ಹೀಗೆ ಇನ್ನು ಅನೇಕ ಕೃತಿಗಳನ್ನು ಈ ಹಂತದಲ್ಲಿ ಹೆಸರಿಸಬಹುದು. ಕನ್ನಡ ಭಾಷೆ ರಾಜಾಶ್ರಯದ ಮಾರ್ಗಿಸಾಹಿತ್ಯದ ಭಾಷೆಯಾಗಿ ಬದಲಾದುದಕ್ಕೂ ಅದು ಸಂಸ್ಕೃತ ಕಾವ್ಯದ ಅನುವಾದಕ್ಕೆ ತೊಡಗಿದ್ದು ಕನ್ನಡ ಹಾಗೂ ಸಂಸ್ಕೃತಗಳ ನಡುವೆ ಏರ್ಪಟ್ಟ ಒಳಒಪ್ಪಂದಕ್ಕೂ ಸಂಬಂಧವನ್ನು ಸೂಚಿಸುವದು. ಈ ಅನುವಾದ ಪ್ರಕ್ರಿಯೆ ಭಾಷಾಸ್ಥಾನವನ್ನು ಕಳೆದುಕೊಳ್ಳುತ್ತಲೆ ಅಂತಸ್ಥವಾದ ಸಂವೇದನೆಯನ್ನು ಅನುವಾದಿಸಿ ಪ್ರವಹಿಸುವ ಮಾದರಿಗಳನ್ನು ಅನ್ವೇಷಿಸಿಕೊಳ್ಳತೊಡಗಿತು. ಈ ಅರ್ಥದಲ್ಲಿ ನೋಡಿದರೆ ಅನುವಾದದ ಮೂಲಕ ಮೂಲಪಠ್ಯ ಹೊಸಹುಟ್ಟನ್ನು ಅಥವಾ ಮರುಜನ್ಮವನ್ನು ಸಂಸ್ಕೃತ ಪಡೆದುಕೊಂಡರೆ ಸಾಂದರ್ಭಿಕವಾಗಿ ಕನ್ನಡ ಭಾಷೆ ತನ್ನ ಉತ್ಕರ್ಷಕ್ಕಾಗಿ ಅನ್ಯ ಸಂವೇದನೆಯನ್ನು ಸ್ವೀಕರಿಸಿ ತನ್ನದಾಗಿಸಲು ಪ್ರಯತ್ನಿಸಿತು.

## ಅಧ್ಯಾಯ -೩

# ಅನುವಾದದ ಪರಿಕಲ್ಪನಾತ್ಮಕ ವ್ಯಾಖ್ಯಾನಗಳು

ಒಂದು ಭಾಷೆಯ ಸಂವೇದನೆಯನ್ನು ಇನ್ನೊಂದು ಭಾಷೆಯಲ್ಲಿ ತಲುಪಿಸುವದೇ ಅನುವಾದ. ಆದರೆ ಇದು ಭಾಷಾಂತರವಲ್ಲ , ಅನುವಾದ ಮತ್ತು ಭಾಷಾಂತರ ಎಂಬ ಪದಗಳು ಸಂವಾದಿ ಪದಗಳಾಗಿ ಬಳಕೆಯಾಗುತ್ತಿದ್ದರೂ, ಅಧ್ಯಯನ ಉದ್ದೇಶದಿಂದ ಅನುವಾದ ಎಂಬುದ ಸಮುಚಿತ ಎಂದು ಬಳಿಸಕೊಳ್ಳಲಾಗಿದೆ. ಅನು +ವದ್ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಪದ 'ತದ್ವತ್ ಹೇಳಿಕೆ' ಎಂಬ ಅರ್ಥವನ್ನು ಹೊಂದಿದೆ ಆದರೆ ಭಾಷಾಂತೆರ ಒಂದು ಭಾಷೆಯ ನೇರ ಶಬ್ದದ ಅರ್ಥವನ್ನೇ ಇನ್ನೊಂದು ಭಾಷೆಯಲ್ಲಿ ಇಟ್ಟಾಗ ಹೇಗಿರುತ್ತದೆ ಎಂಬುದನ್ನು ತಿಳಿಸುತ್ತದೆ. ಆ ಭಾಷೆಯ ಸಂದರ್ಭದ ಸಾಂಸ್ಕೃತಿಕ ಪರಿಸರವನ್ನು 'ಇನ್ನೊಂದು ಭಾಷೆಯ ಸಂದರ್ಭದ ಸಾಂಸ್ಕೃತಿಕ ಸ್ಥಿತಿಗೆ ಹೊಂದಿಕೊಳ್ಳುವಂತೆ ಮೂಡಿಬಂದ ಪ್ರಾಚೀನ ಸಾಹಿತ್ಯದ ಅನುವಾದಗಳಾಗಲೀ ತೀರ ಇತ್ತೀಚಿಗೆ ಬಂದ ಕೃತಿಗಳಾಗಲೀ ಅನುವಾದಗಳೇ ಆಗಿವೆ. ಅವು ಆದರೆ ಭಾಷಾಂತರವಲ್ಲ ಭಾಷೆ ಬದಲಾದಂತೆ ಸಾಂಸ್ಕೃತಿಕ ಪರಿವೇಷವೂ ಬದಲಾಬೇಕಾದ'' ಸನ್ನಿವೇಶದಲ್ಲಿ ಹುಟ್ಟಿದವುಗಳು ಎಂದು ಹೇಳಲಾಗಿದೆ. ಅನುವಾದಗಳು ಬಹುತೇಕ ಇದೇ ತಾತ್ವಿಕ ಹಿನ್ನೆಲೆಯಲ್ಲಿ ರೂಪು ಪಡೆದಿವೆ. ಅದರಲ್ಲೂ ವಸಾಹತುಶಾಹಿ ರಾಜಕಾರಣದ ಪೂರ್ವದಲ್ಲಿನ ಅನುವಾದಗಳೆಲ್ಲಾ ಇದೇ ಬಗೆಯಲ್ಲಿ ಸಾಂಸ್ಕೃತಿಕ ಅನುವಾದಗಳಾಗಿ ರೂಪುಗೊಂಡಿವೆಯೆಂದು ಹೇಳುಬಹುದು. ಆದರೆ ಅರ್ವಾಚೀನ ಯುಗದ, ೧೮-೧೯ನೇ ಶತಮಾನದ ಅನುವಾದಗಳು ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಅಗತ್ಯವಾಗಿರಿಸಿಕೊಂಡು ಹುಟ್ಟಿ ಬಂದ ಕೃತಿಗಳಾಗಿವೆ. ಸಾಂಸ್ಕೃತಿಕ ಪರಿವೇಷ ಮಹತ್ತರ ಕಾರಣವಾದರೂ, ಆ ಕಾರಣದಿಂದುಂಟಾದ ಸಾಂಸ್ಕೃತಿಕ ಪಲ್ಲಟಗಳು ಬಹುತೇಕ ಕಡಿಮೆ ಪ್ರಮಾಣದವುಗಳೇ ಆಗಿವೆ. ೧೮-೧೯ನೇ ಶತಮಾನದಲ್ಲಿ ಬಂದ ಅನುವಾದಗಳು ಸಾಹಿತ್ಯಿಕ ಪ್ರಪಂಚವನ್ನು ಅನುವದಿತ ಸಂಕೇತವಾಗಿ ಬಳಸಿರುವುದು ಗಮನಾರ್ಹ ಸಂಗತಿಯೆನಿಸುತ್ತವೆ.

ಮೂಲತಃ ಅನುವಾದಿತ ಕೇಂದ್ರವಲಯವನ್ನು ಗಮನಿಸಿದಾಗ ವ್ಯಕ್ತವಾಗುವ ಸಂಗತಿ ಏನೆಂದರೆ; ಸಂಸ್ಕೃತವನ್ನು ಆಧಾರವಾಗಿ ಉಳ್ಳ ವಸ್ತುವೊಂದನ್ನು ಸಾಂದರ್ಭಿಕ ಕೌಶಲ್ಯದಿಂದ ಹೆಣೆಯುವುದು. ಪ್ರಾಚೀನ,ಅರ್ವಾಚೀನ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಇದು ಧಾರಾಳವಾಗಿ ಕಂಡು ಬರುತ್ತದೆ. 'ಸಂಸ್ಕೃತ ಕೋಶ' ದಲ್ಲಿ ಅನುವಾದವನ್ನು ಈ ರೀತಿ ನಿರ್ವಚಿಸಲಾಗಿದೆ. '' ಪ್ರಾಪ್ತಸ್ಯ ಪುನಃ ಕಥನ '' ಅಥವಾ 'ಜ್ಞಾತಾರ್ಥಸ್ಯ ಪ್ರತಿಪಾದನೆ ' ಎಂದು ಪೂರ್ವದಲ್ಲಿ ಹೇಳಿದ್ದನ್ನು ಇನ್ನೊಮ್ಮೆ ಹೇಳುವದು ಎಂದರ್ಥ ಆಗುತ್ತದೆ.

ಈ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಸಂದರ್ಭ ಅನುವಾದವನ್ನು ಸ್ವೀಕರಿಸಿದಂತಿದೆ. ಮೊದಲು ಅನುವಾದವು ಅಪರೋಕ್ಷವಾಗಿ ಸ್ವೀಕೃತವಾಗುತ್ತಿದ್ದರೆ, ನಂತರ ಪ್ರತ್ಯಕ್ಷವಾಗಿರುವಂತೆ ೧೮-೧೯ನೆಯ ಶತಮಾನದಲ್ಲಿ ಅನುವಾದ ಕಂಡುಬಂದಿದೆ.

ಪಾಶ್ಚಾತ್ಯ ಅನುವಾದಗಳು ಮೂಲಕ್ಕೆ ನಿಷ್ಠವಾಗಿರುವಂತೆ ನೋಡಿಕೊಂಡರೆ, ಕನ್ನಡ ಸಾಹಿತ್ಯ ಸಂದರ್ಭದ ಅನುವಾದಗಳು ''ಕನ್ನಡ ಸಾಹಿತ್ಯದ ಸ್ಥಿತ್ಯಂತರಕ್ಕೆ ಕಾರಣವಾದ ಕೃತಿಗಳಲ್ಲಿ ಅನುವಾದದ ಪ್ರಕ್ರಿಯೆಯ ಮೂಲಕವೇ ರೂಪುಗೊಂಡವು. ತಮಗೆ ಬೇಕಾದುದ್ದನ್ನು ಬೇಕಾದ ಆಕರಗಳಿಂದ ಪಡೆದುಕೊಂಡು, ಹಾಗೆ ಪಡೆದುದನ್ನು ಬೇಕಾದ ರೀತಿಯಲ್ಲಿ ತಮ್ಮದಾಗಿಸಿಕೊಳ್ಳುವ, ಅನುವಾದಿಸಿ ಕೊಳ್ಳುವ ಸ್ವಾತಂತ್ರ್ಯ, ಧೈರ್ಯ ಹೊಂದಿದ್ದವು'' (ಓ.ಎಲ್. ನಾಗಭೂಷಣ ಸ್ವಾಮಿ, ೧೯೯೯, ಪು.೩೮) ಎನ್ನುತ್ತಾರೆ ವಿದ್ವಾಂಸರೊಬ್ಬರು. ಪಾಶ್ಚಾತ್ಯ ಪರಿಕಲ್ಪನೆಗೆ ಅನುಗುಣವಾಗಿ ಅನುವಾದಿತ ಕೃತಿ ಮೂಲಕ್ಕೆ ನಿಷ್ಠವಾಗಿರಬೇಕು. ಅನುವಾದಕನಿಗೆ ಸ್ವತಂತ್ರ ಅರ್ಥಗಳನ್ನು ಹೊಮ್ಮಿಸುವ ಸಾಮರ್ಥ್ಯವೇ ಇಲ್ಲ. ಇದರ ಪ್ರಕಾರ ವಿಕ್ರಮಾರ್ಜುನ ವಿಜಯಂ, ಸಾಹಸಭೀಮ ವಿಜಯದಂತಹ ಕೃತಿಗಳು ಹೊರಬರಲು ಸಾಧ್ಯವೇ ಇರುತ್ತಿರಲಿಲ್ಲ. ಕ್ರಿ.ಪೂ.ದಿಂದಲೇ ಪಾಶ್ಚಾತ್ಯ ದೇಶಗಳಲ್ಲಿ ಅನುವಾದ ನಡೆಯುತ್ತಲೇ ಇದೆಯಾದರೂ, ಸೈದ್ಧಾಂತಿಕ ಚೌಕಟ್ಟಿನಡಿಯಲ್ಲಿ ಅದು ೧೮ ನೇ ಶತಮಾನದ ಕೊನೆಗೆ ಸೇರ್ಪಡೆಯಾಯಿತು. ಆದರೆ ಕನ್ನಡ ಸಾಹಿತ್ಯ ಸಂದರ್ಭವನ್ನು ನೋಡಿದಾಗ ಅನುವಾದವನ್ನು ಏಕೆ ಮಾಡತ್ತಿರುವೆವೆಂಬ ಕಲ್ಪನೆ ಕವಿಗಳಿಗಿದೆ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. 'ಕಾಳಿದಾಸಂಗೂ ನೂರ್ಮಡಿ' ಎಂದು ಹೇಳಿಕೊಂಡ ಹೊನ್ನನಿಗೆ ''ವ್ಯಾಸಮುನಿಂದ್ರ....'' ಎನ್ನುವ ಪಂಪ, ''ತಿಳಿಯ ಹೇಳುವೆ ಕೃಷ್ಣಕತೆಯನ್ನು'' ಎನ್ನುವ ಕುಮಾರವ್ಯಾಸ, ಹೀಗೆ ಪ್ರತಿಯೊಬ್ಬ ಕವಿಗೂ ತನ್ನ ಅನುಸೃಷ್ಟಿಯ ಕಲ್ಪನಾಸೌದವೊಂದು ಕಣ್ಣೆದುರಿಗಿತ್ತು. ಆಯಾ ಸಾಂಸ್ಕೃತಿಕ ಪರಿಸರಕ್ಕೆ ತಕ್ಕಹಾಗೆ ಕಥಾಸಂವಿಧಾನವನ್ನು ರೂಪಿಸಿದ ಬಗೆಯೂ ಭಾರತೀಯ ಅದರಲ್ಲೂ ಕನ್ನಡದ ನಿಲುವಾಗಿತ್ತು ಎಂಬುದು ಕಣ್ಣಿಗೆ ಗೋಚರಿಸುವಷ್ಟು ಸತ್ಯ. ಯಾವ ಬಗೆಯ ಸಾಂಸ್ಕೃತಿಕ ಚಟುವಟಿಕೆಗಳು ಕನ್ನಡದ ಪ್ರಾಚೀನ ಸಾಹಿತ್ಯವನ್ನು ನಿಯಂತ್ರಿಸಿದ್ದವು ಎಂಬುದನ್ನು ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಈ ಬಗೆಯ ಸಾಂಸ್ಕೃತಿಕ ಅನುವಾದಗಳಿಗಿಂತ ಭಿನ್ನ ಬಗೆಯ ಅನುವಾದಗಳನ್ನು ನಾವು ೧೮-೧೯ ನೇ ಶತಮಾನದಲ್ಲಿ ಕಾಣುತ್ತೇವೆ. ಅನುವಾದದ ಭಿನ್ನಬಗೆಯ ಈ ಅಂಶವು ಆ ಕಾಲದಲ್ಲಿ ಪ್ರಚಲಿತ ರಾಜಕಾರಣದ ನೆಲೆಯಲ್ಲಿಯೇ ಇತ್ತು ಎಂಬುದು ಗಮನೀಯ ಅಂಶ. ಅನುವಾದವು ಅನುಸೃಷ್ಟಿ ಎಂಬ ಕಲ್ಪನೆಯೇ ಮುಂದುವರೆದಿದೆ. ಅನುವಾದ ಎಂಬುದು ಎರಡು ಭಾಷೆಗಳ ನಡುವೆ ನಡೆಯುವ ಸಾಂಸ್ಕೃತಿಕ ವಿನಿಮಯ ಹಾಗಾಗಿಯೇ, ಅನುವಾದದಲ್ಲಿ ಪಠ್ಯಕ್ಕಿಂತ, ಪಠ್ಯೇಂತರ ಚಟುವಟಿಕೆಗಳಾದ ರಾಜಕೀಯ ಹಾಗೂ ಸಾಂಸ್ಕೃತಿಕ ಘಟಕಗಳು ಮುಖ್ಯವಾಗುತ್ತವೆ.

ಅನುವಾದವೆಂಬುದು ಒಂದು ಗ್ರಹಿಕೆಯ ಕ್ರಮ. ಅದು ಒಂದು ಅರ್ಥೈಸುವಿಕೆಯ ರೂಪ. ಈ ಅರ್ಥೈಸುವಿಕೆ ಸಾಂಸ್ಕೃತಿಕ, ರಾಜಕಾರಣದ ಅಂಶವೊಂದನ್ನು ಅವಲಂಬಿಸಿರುತ್ತದೆ. ಅನುವಾದವೂ ಒಂದು ಬಗೆಯ ಓದು. ಆ ಓದಿನ ಮೂಲಕ ನಾವು ಏನನ್ನು ನೋಡುತ್ತೇವೆಯೋ, ಏನನ್ನು ಅರಿಯಲು, ಏನನ್ನು ಗ್ರಹಿಸಲು ಯತ್ನಿಸುತ್ತೇವೆಯೋ ಅದು ಮುಖ್ಯ. ಹಾಗಾಗಿಯೇ ಅನುಸೃಷ್ಟಿ ಎಂಬ ತಾತ್ವಿಕ ಹಿನ್ನೆಲೆಯಲ್ಲಿ ಅನುವಾದ ಸಾಹಿತ್ಯ ಮೂಡಿಬಂದಿದೆ.

ಈಗಾಗಲೇ ಚರ್ಚಿಸಿದಂತೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ, ಸಂಪಾದನಾ ಕಾರ್ಯ ರೂಪದಲ್ಲಿ ಸಂಸ್ಕೃತ ಇಲ್ಲವೇ ಇತರ ಭಾಷೆಗಳಿಂದ ಅನುವಾದದ ಕಾರ್ಯ ಅನೂಚಾನವಾಗಿ ನಡೆದುಕೊಂಡು ಬಂದಿದೆ. ವಸಾಹತುಶಾಹಿ ರಾಜಕಾರಣದಿಂದ ಪ್ರಭಾವಿತಗೊಂಡ ೧೮-೧೯ ನೆಯ ಶತಮಾನದ ಸಾಂಸ್ಕೃತಿಕ ಪರಿಸರವು ಅನುವಾದ ಪ್ರಕ್ರಿಯೆಗೊಂದು ಭದ್ರಬುನಾದಿಯನ್ನೊದಗಿಸಿತು. ಭಾರತದ ಅಖಂಡತೆ ಸಾರುವ ರಾಷ್ಟ್ರೀಯವಾದದ ಮುಂಗೋಳಿಯ ಕೂಗು ಮತ್ತು ಪ್ರಾದೇಶಿಕತೆಯನ್ನು ಸಾರುವ ಕನ್ನಡ ಏಕೀಕರಣದ ಚಿಂತನೆಗಳು ಮುಖಾಮುಖಿಯಾದ ಮಹತ್ವದ ಸಂದರ್ಭ ಇದಾಗಿತ್ತು. ಅನುವಾದಿತವಾಗುವ ಕೃತಿ ತನ್ನನ್ನು ಸಮರ್ಥಿಸಿಕೊಳ್ಳಬೇಕಾದ ಅಗತ್ಯತೆ ಇತ್ತು. ಅಂದಿನ ಸಾಂಸ್ಕೃತಿಕ ಪರಿಸರ ಮತ್ತು ಸಾಹಿತ್ಯಿಕ ಅಧ್ಯಯನಗಳ ನಡುವಿನ ಕೊಂಡಿಯಾಗಿ ಅನುವಾದ ಪ್ರಕ್ರಿಯೆಯನ್ನು ತಂದುಕೊಳ್ಳುವ ಮೂಲಕ ರಾಷ್ಟ್ರೀಯವಾದದ ಏಕತೆ ಮತ್ತು ಕನ್ನಡದ ಪ್ರಾದೇಶಿಕತೆಗಳ ನಡುವೆ ಸೌಹಾರ್ದಯುತವಾದ ಸಂಬಂಧವನ್ನು ಸೃಷ್ಟಿಸಿ ಕೊಂಡಿತು. ಆ ಕಾಲದ ಬಹುಮುಖ್ಯ ಚಟುವಟಿಕೆಯಾಗಿ ಇದು ಮಾನ್ಯತೆ ಪಡೆಯಿತಲ್ಲದೆ, ಅದು ಕನ್ನಡ ಸಾಹಿತ್ಯ ಸಂದರ್ಭದ ಒಂದು ಪ್ರಕಾರವಾಗಿ ರೂಪುಪಡೆಯಿತು. ಆ ಕಾಲದ ಲೇಖಕರು ಅದನ್ನೊಂದು ಶ್ರೇಷ್ಠ ಸಾಹಿತ್ಯಿಕ ಚಟುವಟಿಕೆಯಾಗಿ ಸ್ವೀಕರಿಸುವುದರ ಮೂಲಕ ತಮ್ಮ ಪರಂಪರೆಗಿದ್ದ ಸಾಂಸ್ಕೃತಿಕ ಪರಾವಲಂಬನೆಯನ್ನು ಮತ್ತು ಕನ್ನಡದ ಸ್ವಾವಲಂಬನೆಯನ್ನು ಮುಖಾಮುಖಿಯಾಗಿಸಿದರು. ಆ ಮೂಲಕ ಸಂಸ್ಕೃತ ಮತ್ತು ಕನ್ನಡ ಇವುಗಳ ಸಂಬಂಧವನ್ನು ಅರ್ಥೈಸಲು ತೊಡಗಿದರು. ಈ ಕಾರಣಕ್ಕಾಗಿಯೇ ಅನುವಾದವನ್ನು ಅನುವದಿತ ಸಂಕೇತಗಳ ಮೂಲಕ ಸೋಪಜ್ಞತೆ ಕಾಣುವ ಮಾರ್ಗವಾಗಿ ಕಂಡುಕೊಂಡರೆಂದು ತೋರುತ್ತದೆ.

ಅನುವಾದ ಎಂಬುದು ಅಪ್ಪಟ ಭಾರತೀಯ ಕಲ್ಪನೆ. ಅದು ವಸಾಹತುಶಾಹಿ ರಾಜಕಾರಣದಿಂದ ಪ್ರೇರೀತಗೊಂಡರೂ ಸಹ ಭಾರತೀಯ ತಾತ್ವಿಕ ಚೌಕಟ್ಟಿನಲ್ಲಿ ಮೂಡಿಬಂದ ಕಲಾತ್ಮಕ ಅಭಿವ್ಯಕ್ತಿ. ಇದನ್ನೇ ಪುನರ್ಲೇಖನವೆಂದೂ, ಅವತರಣಿಕೆಯೆಂದೂ ಇನ್ನು ಬಗೆ ಬಗೆಯ ಹೆಸರುಗಳಿಂದ ವಿದ್ವಾಂಸರುಗಳು ಗುರುತಿಸಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಅನುವಾದ ವಿಶಿಷ್ಟ ಬಗೆಯಲ್ಲಿ ಮೂಡಿಬಂದಿದೆ. ಇದು ಕೆಲವೊಮ್ಮೆ ಸಂಸ್ಕೃತ-ಕನ್ನಡ ಭಾಷೆಗಳ ಬಾಂಧವ್ಯವನ್ನು ಪುನರ್ನಿರ್ಮಾಣಿಸಿಕೊಳ್ಳಲು ಬಳಸಿಕೊಂಡ ತಂತ್ರವಾಗಿಯೂ ನಿರೂಪಿತವಾಗಿದೆ. ಸಂಸ್ಕೃತ ಸಾಹಿತ್ಯವನ್ನೇ ಚಂಪೂ, ಷಟ್ಪದಿ, ರಗಳೆ,ಸಾಂಗತ್ಯ ಇನ್ನು ಅನೇಕ ಪ್ರಕಾರಗಳಲ್ಲಿ ತನ್ನದನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದೆ. ಈ ಎಲ್ಲ ಪ್ರಕಾರದ ಸಾಹಿತ್ಯಕ್ಕಿಂತ ವಿಭಿನ್ನ ಮಾದರಿಯ ಸಾಹಿತ್ಯ ೧೮-೧೯ನೆಯ ಶತಮಾನದ ಸಾಹಿತ್ಯ ನಿರ್ಮಿತಿಯಲ್ಲಿ ಕಂಡುಬಂದಿದೆ.

ಅನೇಕ ಆತೋತ್ತರಗಳನ್ನು ಒಡಲಲ್ಲಿರಿಸಿ ಮೂಡಿಬಂದ ಈ ಸಾಹಿತ್ಯ ಪ್ರಕಾರ ಒಂದು ವಿಶಿಷ್ಟ ಬಗೆಯ ವೈಚಾರಿಕತೆಯನ್ನು ಹುಟ್ಟುಹಾಕಿದೆ. ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ, ವಚನ, ದಾಸಸಾಹಿತ್ಯ ಈ ಬಗೆಯಲ್ಲಿ ಹಲವಾರು ಏರಿಳಿತಗಳನ್ನು ಕಂಡ ಕನ್ನಡ ಸಾಹಿತ್ಯ ೧೭೦೦ ರಿಂದ ೧೯೦೦ ರವರೆಗಿನ ಅವಧಿಯಲ್ಲಿ ತನ್ನನ್ನು ಗುರುತಿಸಿಕೊಳ್ಳಲು ಸಾಕಷ್ಟು ಹೋರಾಟ ನಡೆಸಿದೆ. "೧೮-೧೯ನೆಯ ಶತಮಾನಗಳ ಕಡೆಗೆ ನಡೆದಂತೆಲ್ಲಾ-ಮಧ್ಯಯುಗೀನ ಸಂವೇದನೆ ಆಧುನಿಕ ಸಂವೇದನೆಯ ಕಡೆಗೆ ನಡೆಯತೊಡಗಿತು ಎಂದರೆ ಅನೇಕ ಹೊಸ ಸಂಕೀರ್ಣ ಅನುಭವಗಳ ಉಗಮ. ಹಳೆಯ ನಂಬಿಕೆಗಳ ಸಮಾಧಾನ ಸ್ಥಿತಿ ಇಲ್ಲ. ಸಂಪ್ರದಾಯದ ಸಂಕೋಲೆಗಳು ಕಳಚಿ ಬೀಳುವ ಘಟ್ಟ. ಅದು ಸಂದೇಹಗಳು, ಅನುಮಾನಗಳು, ದಂಗೆ, ವೈಚಾರಿಕ ಸ್ಫೋಟ. ಎಲ್ಲವೂ ಒಟ್ಟಿಗೆ ನುಗ್ಗುವ ಯುಗವದು" (ಡಿ. ಆರ್. ನಾಗರಾಜ್, ೧೯೯೦). ಇಡೀ ಸಾಹಿತ್ಯ ಚರಿತ್ರೆಯಲ್ಲಿ ಕಗ್ಗತ್ತಲ ಖಂಡವೆಂದು ಗುರುತಿಸಲ್ಪಡುವ ಈ ಅವಧಿ ಜಿಜ್ಞಾಸೆಯನ್ನು ಮೂಡಿಸುತ್ತದೆ. ಆದರೆ ಇದು ಕಗ್ಗತ್ತಲ ಖಂಡವಂತೂ ಅಲ್ಲ. ಮೈಸೂರು ಒಡೆಯರ ಕಾಲದಿಂದಲೂ ಸಂಪಾದನಾ ಕಾರ್ಯ ನಡೆದು ಟೀಕು-ಟಿಪ್ಪಣಿಗಳು ಸಿದ್ಧವಾದುವು. ಇದು ಹಳೆಗನ್ನಡ ಕೃತಿಗಳ ಸಂಪಾದನೆಗೆ ತೊಡಗಲು ಸಾಕಷ್ಟು ಪ್ರೇರಣೆಯನ್ನು ನೀಡಿತು. ಈ ಕಾರ್ಯಕ್ಕೆ ಇಂಬುಕೊಡುವಂತೆ ಸಂಸ್ಕೃತ ಮತ್ತು ಇತರ ಭಾರತೀಯ ಭಾಷೆಗಳ ಅಧ್ಯಯನ ಪ್ರಾರಂಭಗೊಂಡಿತು. ಈ ಬಗೆಯ ಪ್ರಕ್ರಿಯೆ ಏಕಕಾಲಕ್ಕೆ ಸಂಸ್ಕೃತದ ಅವಲಂಬನೆಯನ್ನು ಕನ್ನಡದ ಸ್ವಾವಲಂಬನೆಯನ್ನು ಮುಖಾಮುಖಿಯಾಗಿಸಿತು. ಈ ಮುಖಾಮುಖಿಗೆ ವಸಾಹತು ರಾಜಕಾರಣದ ಇಂಗ್ಲೀಶ್ ಅಧ್ಯಯನ ಹೊಸ ಹೊಳಪನ್ನು ನೀಡಿತು. ಅನ್ಯಭಾಷೆಯ ವಿಚಾರಧಾರೆಯನ್ನು ತನ್ನದಾಗಿಸುವ ನಿಟ್ಟಿನಲ್ಲಿ ಹೊಸಬಗೆಯ ಚಿಂತನೆಗೆ ಲೇಖಕರನ್ನು ಈಡುಮಾಡಿತು. ಆ ಬಗೆಯ ಚಿಂತನೆ ಅನುವಾದ ಪ್ರಕ್ರಿಯೆಯಲ್ಲಿ ತನ್ನ ನ್ನು ಗುರುತಿಸಿಕೊಂಡಿತು. ಇಲ್ಲವೇ ಸಾಹಿತ್ಯ ಪ್ರಕಾರವಾಗಿ ರೂಪುಗೊಂಡಿತು ಇದು ಕನ್ನಡ ಸಾಹಿತ್ಯ ಚರಿತ್ರೆಯ ಷಟ್ಪದಿ ರಗಳೆಗಳಂತೆಯೇ ಕೆಲವು ಕಾಲ ರಾಜಾಶ್ರಯ, ಇನ್ನು ಕೆಲವು ಕಾಲ ಜನಪರ ಚಿಂತನಾ ನೆಲೆಯಲ್ಲಿ ಮೂಡಿಬಂದಿತು. ಹಾಗಾಗಿ ಈ ಪ್ರಕ್ರಿಯೆ ಕುರಿತಾಗಿಯೇ ಅನುವಾದಯುಗ ಎನ್ನುವದು ದಾಖಲಾಗಿದೆ.

ಭಾಷಾಶಾಸ್ತ್ರದ ಪ್ರಕ್ರಿಯೆಯಾಗಿ ಪ್ರವೇಶ ಪಡೆದ ಅನುವಾದ ಎಲ್ಲ ಶಿಸ್ತುಗಳಿಗೂ ತನ್ನನ್ನು ಒಗ್ಗಿಸಿಕೊಂಡು Transtology ಎಂಬ ಶಾಸ್ತ್ರವಾಗಿ ರೂಪಿತವಾಗಿದೆ. ಭಾರತೀಯರಲ್ಲಿ ಇದು Translation ಎನ್ನುವ ಪದಕ್ಕಿಂತ Transcreation ಎಂಬುದಾಗಿ ನಿರೂಪಿತವಾಗಿದೆ. ಮೂಲಕಥಾವಸ್ತುವಿನ ಆಕರದಿಂದ ಮರುಸೃಷ್ಟಿ ಭಾರತೀಯ ಲೇಖಕನ ಉದ್ದೇಶವಾಗಿದೆ. ಆಕಾರ ಮಹಾಭಾರತ ರಾಮಾಯಣದ್ದೇ ಆದರೂ ಸೃಜನಶೀಲ ಕಾವ್ಯವಾಗಿಯೇ ಓದಲ್ಪಡುವ ಕೃತಿ ಅದಾಗಿರುತಿತ್ತು. ಕನ್ನಡ ಸಂದರ್ಭ ಅನುವಾದವನ್ನು ಎರಡನೆ ದರ್ಜೆಯ ಪ್ರಕ್ರಿಯೆಯಾಗಿಸದೇ ಅದೊಂದು ಅತ್ಯುತ್ತಮ ಶ್ರೇಷ್ಟ ದರ್ಜೆಯ ಕಾರ್ಯವೆಂದು ಪಂಪ ರನ್ನಾದಿಗಳು ಮಂಡಿಸಿದ್ದಾರೆ. ಆದರೂ ಇವರು ವಹಿಸಿರುವ ಸ್ವಾತಂತ್ರ್ಯವನ್ನು 18-19 ನೆಯ ಶತಮಾನದ ಲೇಖಕರು ಬಳಸಿಕೊಂಡಿಲ್ಲ. ಪ್ರಾಚೀನ ಕಾಲಘಟ್ಟದ ರಚನೆಯಿಂದ ಭಿನ್ನವಾದ ಸಂರಚನೆ ಹೊಂದಿರುವದು ವಸಾಹತುಶಾಹಿ

ಕಾಲಘಟ್ಟದಲ್ಲಿ ಮೂಡಿಬಂದ ಅನುವಾದಗಳ ಲಕ್ಷಣವಾಗಿದೆ. ಈ ಕಾರಣಂದಾಗಿಯೇ ಈ ಕಾಲಘಟ್ಟ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅನುವಾದುಯುಗವೆಂದು ದಾಖಲಾಗಿದೆ.

ಅನುವಾದ ಎಂಬ ಪದವನ್ನು ಕನ್ನಡಿಸು ಎಂಬ ಪದದ ಪರ್ಯಾಯವಾಚಿಯಾಗಿ ಬಳಸಿರುವ ನಾಗವರ್ಮ 'ಕರ್ಣಾಟಕ ಕಾದಂಬರಿ' ಕರ್ನಾಟಕ ಎಂಬ ಪದದಿಂದ ಸ್ಪಷ್ಟಗೊಳಿಸಿದ್ದಾನೆ. ಅನುವಾದವನ್ನು ನೈಜನೆಲೆಯಲ್ಲಿ ಮಾಡಬೇಕಾದರೆ ಕವಿತಾಶಕ್ತಿಯೊಂದರ ಅಗತ್ಯವಿದೆ ಎಂದು ನಾಗವರ್ಮ ಹೇಳುತ್ತಾನೆ.

"ಮಳೆಯಿಲ್ಲದೆ ಪೊಯ ನೀರಿಂ।<br>
ಬೆಳಗುಮೆ ಧರೆ ಮರುಗಿ ಕುದಿದು ಶಾಸ್ತ್ರದ ಬಲದಿಂ॥<br>
ದಳುಪಿಂ ಪೇಳ್ದೊಡಮದು ಕೋ।<br>
ಮಳ ಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ॥"

ಹಾಗಾಗಿ ಪ್ರಾಚೀನ ಕವಿಗಳಲ್ಲಿ ಅನುವಾದದ ಪರಿಕಲ್ಪನೆ ಯಾವ ರೀತಿ ಇತ್ತು ಎಂಬುದು ಸ್ಪಷ್ಟಗೊಳ್ಳುತ್ತದೆ. ಬಹುತೇಕ ೧೮-೧೯ನೇ ಶತಮಾನದಲ್ಲಿ ಬಂದ ಅನುವಾದಗಳೆಲ್ಲವೂ ಕರ್ಣಾಟಕ ಎಂಬ ಪದವನ್ನು ಬಳಸಿಕೊಂಡಿವೆ. ಕುಮಾರವ್ಯಾಸನು ಕರ್ನಾಟ ಭಾರತ ಕಥಾಮಂಜರಿ ಎಂದು ಹೇಳಿಕೊಂಡಿದ್ದಾನೆ. ಜೈನ ಕವಿಗಳು ಮೂಲ ವೈದಿಕ ಕಥಾ ವಸ್ತುವನ್ನು ಸೃಜನಶೀಲ ಕಾವ್ಯವಾಗಿಸಲು ಕಥಾ ಸಂವಿಧಾನವನ್ನು ಬದಲಾವಣೆಗೊಳಿಸಿದ್ದಾರೆ. ನಂತರ ಬಂದ ನಾಗವರ್ಮಾದಿಗಳು ಭಾಷಿಕ (ಸಾಹಿತ್ಯಿಕ) ನೆಲೆಯಲ್ಲಿ ಕಾವ್ಯವನ್ನು ಸೃಜನಶೀಲವಾಗಿಸಲು ತೊಡಗಿ, ಕನ್ನಡಕ್ಕಾಗಿ ಈ ಕೃತಿ ಎಂಬುದನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟಿದ್ದಾರೆ. ಕರ್ನಾಟಕ ಎಂಬ ಪದ ಬಳಕೆ ಈ ಕಾರಣಕ್ಕಾಗಿ ತನ್ನ ಸಾರ್ಥಕ್ಯವನ್ನು ಪಡೆದುಕೊಂಡಿದೆ ಎಂದು ಹೇಳಬಹುದು. ಅನುವಾದಿತ ಸಂಜ್ಞೆಗಳಾಗಿ ಕೆಲವು ಅಂಶಗಳು ಅನುವಾದ ಯುಗದಲ್ಲಿ ಮೂಡಿಬಂದಿವೆ. ಹಳೆಯ ಸಾಹಿತ್ಯದ ಮುಖ್ಯಧ್ವನಿ ಧಾರ್ಮಿಕವಾದುದು. ಇದರಲ್ಲಿ ಇಹಕ್ಕಿಂತ ಪರಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ಸಮಷ್ಟಿ ಪ್ರಜ್ಞೆ, ವಸ್ತುನಿಷ್ಠತೆ, ವಿಷಯರೀತಿಗಳಲ್ಲಿ ಸಂಸ್ಕೃತದ ಗಾಢ ಪ್ರಭಾವ, ಸೋಪಜ್ಞತೆಯೊಡನೆ ದಟ್ಟವಾದ ಕವಿ ಸಮಯನಿಷ್ಠೆ ಇವುಗಳು ಪ್ರಾಚೀನ ಸಾಹಿತ್ಯದ ಅನುವಾದ ಪ್ರಕ್ರಿಯೆಗಳಿಗೂ, ನಡುಗನ್ನಡ ಸಾಹಿತ್ಯದ ಅನುವಾದದ ಪ್ರಕ್ರಿಯೆಗಳಿಗೂ ಆಧುನಿಕ ಸಾಹಿತ್ಯದ ಅನುವಾದ ಪ್ರಕ್ರಿಯೆಗೂ ಭಿನ್ನಬಗೆಯ ಸಾಂಸ್ಕೃತಿಕ ಕಾರಣಗಳಿವೆ. ಆಧುನಿಕ ಸಂದರ್ಭದಲ್ಲಿ ಅನುವಾದ ಪ್ರಕ್ರಿಯೆಯ ಸವಾಲುಗಳು ಸಾಂಸ್ಕೃತಿಕವೇ ಆದರೂ ಭಿನ್ನ ನೆಲೆಯಲ್ಲಿ ಮೂಡಿಬಂದಿವೆ. ಇವು ಭಿನ್ನ ನೆಲೆಯ ಸಾಂಸ್ಕೃತಿಕವಾಗಿ ಎನ್ನುವುದಕ್ಕಿಂತ ಸಾಹಿತ್ಯಿಕವಾಗಿವೆ. ಈ ಸವಾಲುಗಳು ಬೇರೆ ಬೇರೆ ಬಗೆಯವುಗಳಾಗಿದ್ದರೂ ಕೂಡ ಆಧುನಿಕ ಅನುವಾದ ಪರಿಕಲ್ಪನೆ ಮೂಡಿ ಬರಲು ಮೂರು ಪ್ರಮುಖ ಅಂಶಗಳು ಕಾರಣೀಭೂತವಾಗಿವೆ.

## ೧. ಕನ್ನಡಾಭಿಮಾನ ಮತ್ತು ಸಾಹಿತ್ಯ ಪ್ರಶ್ನೆ :

ಇದುವರೆಗೆ ವಸಾಹತುಶಾಹಿ ಕಾಲಘಟ್ಟದ ಪೂರ್ವದ ಅನುವಾದಗಳು ಸಾಂಸ್ಕೃತಿಕ ಅನುವಾದಗಳೆಂದು ಚರ್ಚಿಸಲಾಗಿದೆಯಷ್ಟೇ. ಇನ್ನು ವಸಾಹತುಶಾಹಿ ಕಾಲಘಟ್ಟದಲ್ಲಿ ಮೂಡಿಬಂದ ಈ ಅನುವಾದಗಳು ಸಂಸ್ಕೃತದ ಸಂಸರ್ಗದಿಂದ ಹುಟ್ಟಿಬಂದ ಸಾಹಿತ್ಯಿಕ ಅನುವಾದಗಳು ಎನ್ನುವುದು ಔಚಿತ್ಯ ಪೂರ್ಣವಾಗಿ ಕಾಣುತ್ತದೆ. ೧೮-೧೯ನೆಯ ಶತಮಾನ ಅನೇಕ ಬಗೆಯ ಸಾಂಸ್ಕೃತಿಕ ಪಲ್ಲಟಗಳಿಂದ ಸಂಕೀರ್ಣ ಇಲ್ಲವೆ, ಸಂಕ್ರಮಣಾವಸ್ಥೆಯನ್ನು ಎದುರಿಸುತ್ತಿತ್ತು. ಇದಕ್ಕೆ ಸಾಹಿತ್ಯಿಕ ಸಂಸ್ಕೃತಿಯೊಂದು ಆಕ್ರಮಣ ನಡೆಸಿದಾಗ ಸಂಘರ್ಷ ಉಂಟಾಗುವುದು ಸಹಜವಷ್ಟೆ. ಆದರೆ ಒಟ್ಟಾರೆ ಭಾರತೀಯ ಸಾಂಸ್ಕೃತಿಕ ಪರಿಸರವು ಈ ಮುಖಾಮುಖಿಯನ್ನು ಸಮನ್ವಯಗೊಳಿಸುವ ಸಿದ್ಧಾಂತವಾಗಿ ಪರಿವರ್ತಿಸಿಕೊಂಡಿತು. ಈ ಸಂದರ್ಭದಿಂದ ಒದಗಿಬಂದ ಅವಕಾಶವನ್ನು ಬಳಸಿಕೊಳ್ಳುವ ಬಗೆಯಾಗಿ ಸ್ವೀಕರಿಸಿತು. ಆಕ್ರಮಣದ ಹಂತದ ಜೀವನದ ಪ್ರತಿ ಹೆಜ್ಜೆಯಲ್ಲೂ ಕಂಡು ಬಂದಾಗ ಭಾರತೀಯರು ಎಚ್ಚೆತ್ತು ತಮ್ಮತನವನ್ನು ಸಾಧಿಸಲು ಮಾರ್ಗೋಪಾಯಗಳನ್ನು ಸೃಷ್ಟಿಸಿಕೊಂಡರು. ರಾಜಕೀಯ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳಂತೆ ಸಾಹಿತ್ಯಿಕ ಕ್ಷೇತ್ರದಲ್ಲೂ ಈ ಬಗೆಯ ಬದಲಾವಣೆಗಳು ಕಂಡುಬಂದವು.

ವಸಾಹತುಶಾಹಿ ಕಾಲಘಟ್ಟದ ಅನುವಾದ ಪ್ರಕ್ರಿಯೆಯಲ್ಲಿ ಎರಡು ಪರಿಕಲ್ಪನೆಗಳು ಸ್ಪಷ್ಟವಾಗಿವೆ. ೧) ಸಂಸ್ಕೃತ ಇಲ್ಲವೆ ಅನ್ಯ ಭಾಷೆಯ ಕೃತಿಗಳನ್ನು ಕನ್ನಡದಲ್ಲಿ ಅನುವಾದಿಸುವುದು. ೨) ಸಾಹಿತ್ಯ ಚಿಂತನೆ. ನಮ್ಮ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಗಮನಿಸಿದರೆ, ಅನುವಾದ ಎನ್ನುವ ಪ್ರಕ್ರಿಯೆಯ ಸ್ವರೂಪ ಪುನರ್ ಸೃಷ್ಟಿಯ ನೆಲೆಯಲ್ಲಿ ಸ್ವತಂತ್ರವಾಗಿ ರೂಪುಗೊಂಡಿತೆಂದು ಹಾಗೆ ಹೇಳಲಾಯಿತಷ್ಟೆ. ಪಂಪನಿಗೆ ವ್ಯಾಸನ ವಸ್ತು ಮುಖ್ಯವೆನಿಸಿತೇ ವಿನಾಃ ಬರವಣಿಗೆಯ ವಿಧಾನ, ಸ್ವರೂಪ ಅಲ್ಲ. ಒಂದು ಭಾಷೆಯ ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ಕೊಡುವಾಗ ಮೂಲಕೃತಿಗಿಂತ ಮಿಗಿಲೆನಿಸಿದ ಕೃತಿ ರಚನೆ ಮಾಡುವ ಉದ್ದೇಶ ನಮ್ಮ ಪ್ರಾಚೀನ ಕವಿಗಳಲ್ಲಿತ್ತು. ಆದರೆ ವಸಾಹತುಶಾಹಿ ಘಟ್ಟದ ಕೃತಿಗಳಲ್ಲಿ ಇನ್ನೊಂದು ಭಾಷೆಯ ಕೃತಿಗಳ ಆಶಯಗಳನ್ನು ನಮ್ಮ ಓದುಗರಿಗೆ ಯಥಾವತ್ತಾಗಿ ತಲುಪಿಸಬೇಕು ಎಂಬ ಕಾಳಜಿ ಇತ್ತೆಂದು ತೋರುತ್ತದೆ.

ಸಾಹಿತ್ಯಿಕ ಚಳುವಳಿಗಳು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಪರೂಪವೇನಲ್ಲ. ಆದರೂ ೧೮-೧೯ನೆಯ ಶತಮಾನಕ್ಕೆ ಕಾಣಿಸಿಕೊಂಡ ಸಾಂಸ್ಕೃತಿಕ ಪಲ್ಲಟ ಬೇರೆ ರೀತಿಯ ಸಾಹಿತ್ಯ ನಿರ್ಮಿತಿಯೊಂದನ್ನು ಒದಗಿಸಿದೆ. ಪ್ರಾಚೀನ ಸಾಹಿತ್ಯದ ಕಾಲದಲ್ಲೂ ವಿದೇಶಿಯರ ಆಕ್ರಮಣ, ಸಾಂಸ್ಕೃತಿಕ ಸಂಘರ್ಷ ಸರ್ವೇಸಾಮಾನ್ಯವಾಗಿತ್ತು. ಈ ಬಗೆಯ ಸಂಘರ್ಷ ಸಾಹಿತ್ಯಿಕ ಮಟ್ಟದಲ್ಲಿ ಪ್ರಕಟವಾದದ್ದು ತೀರ ಕಡಿಮೆ. ಆದರೆ ವಸಾಹತುಶಾಹಿ ಕಾಲಘಟ್ಟದಲ್ಲಿ ಮೂಡಿಬಂದ ಅನುವಾದಿತ ಸಾಹಿತ್ಯದಲ್ಲಿ ಈ ಬಗೆಯ ಸಂಘರ್ಷ ಸೂಕ್ಷ್ಮವಾಗಿ ಒಡಮೂಡಿದೆ. ಒಂದು ಕೃತಿ ಅನುವಾದಗೊಳ್ಳಬೇಕಾದರೆ ಪ್ರಚೋದನೆ, ವಿಶ್ವಾಸ, ಆಕ್ರಮಣಶೀಲತೆ ಮತ್ತು ಅಳವಡಿಕೆ ಎಂಬ ನಾಲ್ಕು ಹಂತಗಳಿರುತ್ತವೆ. ವಿಶ್ವಾಸ ಮತ್ತು ಅಳವಡಿಕೆಗಳು ಪ್ರಾಚೀನ ಸಾಹಿತ್ಯವನ್ನು ನಿಯಂತ್ರಿಸಿದರೆ

ಪ್ರಚೋದನೆ, ಆಕ್ರಮಣಶೀಲತೆಗಳು ವಸಾಹತುಶಾಹಿ ಕಾಲಘಟ್ಟದ ಅನುವಾದಗಳಲ್ಲಿ ಪ್ರಭಾವಬೀರಿವೆ. ಬೈಬಲ್ ಅನುವಾದ ಇದಕ್ಕೊಂದು ಒಳ್ಳೆಯ ಉದಾಹರಣೆ. ಧರ್ಮ ಪ್ರಚಾರದ ಅಪೇಕ್ಷೆ ಈ ಪ್ರಕ್ರಿಯೆಯ ಹಿನ್ನೆಲೆಯಾಗಿದೆ. ಭಾರತದಲ್ಲಿ ಕ್ರೈಸ್ತಧರ್ಮ ವನ್ನು ಪ್ರಚಾರ ಮಾಡಬೇಕೆಂಬ ಆಕ್ರಮಣಶೀಲ ಸ್ವಭಾವ ಜನರನ್ನು ಮತಾಂತರಗೊಳಿಸಲು ಪ್ರಚೋದಿಸಿ ಬೈಬಲ್ ವೆಂಜನ ಕನ್ನಡಾನುವಾದ ಪ್ರಕಟಿಸಲು ದಾರಿಯಾಯಿತು. ಹೀಗೆ ಕನ್ನಡದ ಲೇಖಕರಿಗೂ, ಭಾರತೀಯ ಭಾಷೆಗಳಲ್ಲಾದ ಪರಿವರ್ತನೆ ಬಹುತೇಕ ಮಾಗದರ್ಶಿಯಾಯಿತು. ಬಂಗಾಳದಲ್ಲಿ ಮೊಟ್ಟ ಮೊದಲು ಈ ಬಗೆಯ ಸಾಹಿತ್ಯಿಕ ಚಟುವಟಿಕೆ ಕಂಡುಬಂದಿತು. ಬ್ರಿಟಿಶ್ ರಾಜಕಾರಣದಿಂದ ಸಿಡಿದೆದ್ದ ವಂಗೀಯರು ಅವರ ಧಾರ್ಮಿಕ ಚಟುವಟಿಕೆಯ ವಿರುದ್ಧವಾಗಿ ಭಾರತದ ಸನಾತನ ಸಂಸ್ಕೃತಿಯನ್ನು ಶೋಧಿಸಿ, ಪರಿಷ್ಕರಿಸಲು ತೊಡಗಿದರು. ಅನುವಾದಿತ ಕೃತಿಯೊಂದು ಯಶಸ್ವಿಯೇ ಅಲ್ಲವೇ ? ಎನ್ನುವ ಚರ್ಚೆಗಿಂತ ಆ ಪ್ರಕ್ರಿಯೆ ಜರುಗುವ ಹಂತದ ಚರ್ಚೆ ಪ್ರಮುಖವಾಗುವ ನಿಟ್ಟಿನಲ್ಲಿ ಸಾಂಸ್ಕೃತಿಕ ಪರಿಸರದ ಚರ್ಚೆ ಮಹತ್ವದ್ದಾಗುತ್ತದೆ.

೧೮-೧೯ನೆ ಶತಮಾನದಲ್ಲಿ ಕರ್ನಾಟಕದ ಭೂಭಾಗವೆಲ್ಲಾ ಬೇರೆ ಬೇರೆ ಪ್ರಾಂತ್ಯಗಳ ಆಡಳಿತಕ್ಕೆ ಒಳಪಟ್ಟಿದ್ದರಿಂದ ಬೇರೆ ಭಾಷೆಗಳ ಪ್ರಭಾವ ಕನ್ನಡ ಭಾಷೆಗೆ ಇತ್ತು. ಇದು ಆತಂಕಕಾರೀ ಬೆಳವಣಿಗೆಯಾಗಿತ್ತು. ಒಂದು ಹಂತದಲ್ಲಿ ಕನ್ನಡ ಎನ್ನುವುದು ಗುಪ್ತಗಾಮಿನಿಯಾಗಿತ್ತು. ಸಾಮ್ರಾಜ್ಯಶಾಹಿಗಳ ಆಸರೆಯೂ ಇಲ್ಲದೆ, ಜನಪರ ಕಾಳಜಿಯೂ ಇಲ್ಲದೆ ಸುಪ್ತಾವಸ್ಥೆಯಲ್ಲಿ ಕನ್ನಡ ಪ್ರಜ್ಞೆ ಇತ್ತು. ಆ ಕಾಲದ ಬುದ್ಧಿಜೀವಿಗಳಲ್ಲಿ ಸ್ವಸ್ವರೂಪ ಜ್ಞಾನವನ್ನು ಮರೆತುದರ ದುರ್ವಿಪಾಕ ಈ ಸ್ಥಿತಿಗೆ ಕಾರಣ ಎಂಬ ಭಾವನೆ ಬಲವಾಗಿತ್ತು. ಮೊದಲಿನಿಂದಲೂ ಒಂದಿಲ್ಲೊಂದು ಬಗೆಯ ಆಕ್ರಮಣ ಸ್ಥಿತಿಯಲ್ಲಿ ಜರ್ಜರಿತವಾಗಿದ್ದ ಭಾರತೀಯರಲ್ಲಿ ಈ ಪ್ರಜ್ಞೆ ಸ್ಫುಟಗೊಂಡದ್ದು ವಸಾಹತುಶಾಹಿ ಕಾಲಘಟ್ಟದಲ್ಲೇ. ಐರೋಪ್ಯ ಸಾಂಸ್ಕೃತಿಕ ಸಂಸರ್ಗ ಆತ್ಮ ಪ್ರತ್ಯಯದ ಚೈತನ್ಯ ಸೆಲೆಯನ್ನು ಪ್ರಾಚೀನ ಬದುಕಿನ ಸಾಂದರ್ಭಿಕ ನೆಲೆಯಲ್ಲಿ ಗುರುತಿಸಿ, ಮೌಲ್ಯ ಪ್ರತಿಪಾದನೆ ಹಕ್ಕನ್ನು ಪಡೆಯುವ ಧೋರಣೆ ಜಾಗೃತಗೊಳಿಸಿತು. ವಾಸ್ತವ ಅನುಭವಗಳನ್ನು ಸಂಕೋಚದಿಂದ ನೋಡುವ ಧಾರ್ಮಿಕ, ಚಾರಿತ್ರಿಕ ಮೌಲ್ಯಗಳನ್ನು ಆರಾಧಿಸುವ ಪ್ರವೃತ್ತಿಯಿಂದಾಗಿ ಸನಾತನ ಸಂಸ್ಕೃತಿಯ ಶೋಧನೆ, ಸಂಗ್ರಹ ಆದ್ಯತೆಯನ್ನು ಪಡೆಯಿತು. ಈ ಬಗೆಯ ಮೌಲ್ಯ ಪ್ರತಿಪಾದನೆಗೆ ಪುರಾತನ ಸನಾತನ ಸಂಸ್ಕೃತಿಯ ಪ್ರತೀಕಗಳೆನಿಸಿದ ವೇದಾಭ್ಯಾಸ ಪೂರಕ ಅಂಶವೆನಿಸಿತು. ಸಂಸ್ಕೃತಾಭ್ಯಾಸ ಆ ಕಾಲದ ಓದುಗನ ಅಪೇಕ್ಷೆ ಮತ್ತು ಅಗತ್ಯತೆ ಎರಡೂ ಆಗಿತ್ತು. ಯು.ಆರ್.ಅನಂತಮೂರ್ತಿಯವರು ಆ ಕಾಲದ ಪರಿಸರವನ್ನು ಕುರಿತು ಹೀಗೆ ಹೇಳುತ್ತಾರೆ. ''ವಿದ್ಯಾವಂತರ ಭಾಷೆ ಹಿಂದೆ ಸಂಸ್ಕೃತವಾಗಿತ್ತು''. ಸಾಹಿತ್ಯಕೃತಿ ಓದುಗನ ಪ್ರಜ್ಞೆಯಲ್ಲಿ ಫಲಿಸಬೇಕಾದ ಕಾರಣ, ಸೃಷ್ಟಿಯ ಸ್ವರೂಪ, ದಿಕ್ಕುಗಳು ಓದುಗನ ಅಪೇಕ್ಷೆಗಳನ್ನು ಕಡೆಗಣಿಸಲಾರವು. ಅರ್ಥಾತ್ ಕೃತಿ ರಚನೆಯ ಸಾಂದರ್ಭಿಕ ಇತಿ-ಮಿತಿಗಳನ್ನು ಅರಿಯುವುದು ಅನನ್ಯತೆಯ ಹುಡುಕಾಟದ ಅಗತ್ಯ ಅಂಶ''. ಈ ಹಿನ್ನೆಲೆಯಲ್ಲಿ ಅಂದಿನ ಕನ್ನಡ ಸಂದರ್ಭ ಸಂಸ್ಕೃತ ಸಾಹಿತ್ಯವನ್ನೇಕೆ ಭೂಮಿಕೆಯಾಗಿ ಮೂಡಿಕೊಂಡು ಅನನ್ಯತೆಯನ್ನು ಕಂಡುಕೊಳ್ಳಲು ಪ್ರಯತ್ನಿಸಿತು ಎಂಬುದು ಮನವರಿಕೆಯಾಗುತ್ತದೆ (ಬಿಡುಗಡೆ ಬಳ್ಳಿ : ಯು. ಆರ್. ಅನಂತಮೂರ್ತಿ, ಪು. ೨೦).

ಅನೇಕ ವಿದ್ವಾಂಸರುಗಳ ಅಭಿಪ್ರಾಯದಂತೆ ಕನ್ನಡದ ಗದ್ದೆಗೆ ಮೊದಲಿನಿಂದಲೂ ನೀರು ಹನಿಸಿದುದು ಸಂಸ್ಕೃತ ಸಾಹಿತ್ಯವೇ. ಕನ್ನಡ ಲೇಖಕರು ಸೃಜನಶೀಲ ಮನಸ್ಸಿದ್ದರೂ ಕೂಡ ಅನ್ಯಭಾಷಾ ವಿಚಾರಧಾರೆಯನ್ನು ತನ್ನದಾಗಿಸಿಕೊಳ್ಳಲು ಪ್ರಯತ್ನಿಸಿದರು. ಆಕಾಲದ ವಿದ್ಯಾಭ್ಯಾಸ ಈ ಬಗೆಯ ಸ್ಫುರಣೆಗೆ ಮೂಲ ಪ್ರೇರಣೆ. '' ಅನೋ ಖು ತವಃ ಯಂತುವಿಶ್ವತಃ'' ಎಂಬಂತೆ ಪಾಶ್ಚಾತ್ಯ ವಿದ್ಯಾಭ್ಯಾಸ ಈ ಬಗೆಯ ಅನುಕರಣ ಸಾಹಿತ್ಯ ಸೃಷ್ಟಿಗೆ ಮೂಲ ಕನ್ನಡದಲ್ಲಿ ಪ್ರೌಢಕಾವ್ಯರಚನೆ ಸುಮಾರು ೧೭೦೦ ರ ವೇಳೆಗೆ ಚಿಕ್ಕದೇವರಾಜ ಒಡೆಯರ ಆಳಿಕೆಯ ಕೊನೆಯ ಹೊತ್ತಿಗೆ ನಿಂತುಹೋಗಿತ್ತು. ಅಲ್ಲಿಂದ ಮುಂದೆ ದೌರ್ಬಲ್ಯ, ಅಸಾರತೆ ಅನ್ಯಾಕ್ರಮಣ ಮೊದಲಾದುವು ರಾಜಕೀಯ ಪ್ರಪಂಚದಲ್ಲಿ ಕಾಣಿಸಿಕೊಂಡಂತೆ ಸಾಹಿತ್ಯ ಪ್ರಪಂಚದಲ್ಲಿಯೂ ಕಾಣಿಸಿಕೊಂಡವು. ಪ್ರಾಚೀನ ಕನ್ನಡ ಸಾಹಿತ್ಯ ಏಕಚಕ್ರಾಧಿಪತ್ಯದ ಅಡಿಯಲ್ಲಿ ರಾಜಭಾಷೆಯಾಗಿ ಮೆರೆದ ಸಂದರ್ಭದಲ್ಲಿ ಮೂಡಿಬಂದುದಾದರೆ ೧೮-೧೯ ನೆಯ ಶತಮಾನದ ಅನುವಾದಗಳು ಆಕ್ರಮಣಕಾಲ, ಸಂದಿಗ್ಧ ಪರಿಸ್ಥಿತಿಯಲ್ಲಿ ಮೂಡಿ ಬಂದವುಗಳು ಕನ್ನಡ ಭಾಷೆ ತನ್ನ ಅಸ್ತಿತ್ವವನ್ನು ಪ್ರತಿಪಾದಿಸುವ ಹಂತದಲ್ಲಿತ್ತು. ಹೈದ್ರಾಬಾದ್ ಕರ್ನಾಟಕ ನಿಜಾಮನ ಆಡಳಿತಕ್ಕೆ ಸೇರಿದ್ದು ಆಳರಸರ ಭಾಷೆಯಾದ ಉರ್ದುವಿನೊಂದಿಗೆ ಮದ್ರಾಸ್ ಕರ್ನಾಟಕ ಭೌಗೋಳಿಕ ಸಾಮಿಪ್ಯದಿಂದ ತೆಲುಗಿನ ಪ್ರಾಬಲ್ಯವನ್ನು ಸಹಿಸಬೇಕಾಯಿತು. ಮತ್ತೊಂದು ಭಾಗ ಮಹಾರಾಷ್ಟ್ರಕ್ಕೆ ಸೇರಿದ್ದು, ಮರಾಠಿ ಆಕ್ರಮಣಕಾರಿ ನೀತಿಯಿಂದಾಗಿ ತನ್ನ ಆಸ್ತಿತ್ವಕ್ಕಾಗಿ ಹೋರಾಡಬೇಕಾದ ಸ್ಥಿತಿಯಿತ್ತು. ಮೈಸೂರು ಪ್ರಾಂತ್ಯದಲ್ಲಿ ಕನ್ನಡಕ್ಕೆ ಪ್ರೋತ್ಸಾಹವಿದ್ದರೂ ಅರಮನೆಯ ಶಿಷ್ಟಾಚಾರವನ್ನು ಬರಹಗಾರರು ಪಾಲಿಸಬೇಕಾಯಿತು.

ಈ ಪರಿಸ್ಥಿತಿಯಲ್ಲಿ ಕಾವ್ಯವಸ್ತು ಮತ್ತು ಭಾಷೆಗಳೆರಡೂ ಒಂದು ಸಂಪ್ರದಾಯಕ್ಕೆ ಬದ್ಧವಾಗುವದು ಅನಿವಾರ್ಯವಾಗಿತ್ತು. ಸಾಮಾನ್ಯವಾಗಿ ಉತ್ತರಭಾರತದಲ್ಲಿ ಪ್ರಾಕೃತಗಳಿಗೆ ಪ್ರಾದೇಶಿಕ ಭಾಷೆ ಸ್ವರೂಪ ಬರತೊಡಗಿದಂತೆ ತಮ್ಮ ಆಸ್ಥಾನಕವಿಗಳಿಂದ ತಮ್ಮ ಹೆಸರಿನಲ್ಲಿ ಸಂಸ್ಕೃತ ನಾಟಕಗಳ ಅನುವಾದವನ್ನು ಬರೆಸುತ್ತಿದ್ದರು. ನಾಟ್ಯಶಾಸ್ತ್ರದ ಪರಂಪರೆಯಲ್ಲಿ ನಾಟಕದ ಉದ್ದೇಶ ಜ್ಞಾನದಾನವಾಗಬೇಕೆಂಬುದು ಆ ವಿಷಯವನ್ನು ರಾಜರುಗಳು ಪಾಲಿಸುತ್ತಿದ್ದರು. ''ಜನ ಸಾಮಾನ್ಯರಿಗಾಗಿ ಶೈವ ಮತ್ತು ವೈಷ್ಣವ ಮಾರ್ಗಗಳಿಗನುಸಾರವಾಗಿ ಶಿವ ಮತ್ತು ವಿಷ್ಣುವಿಗೆ ಸಂಬಂಧಿಸಿದ ವಸ್ತುಗಳ ನಾಟಕವು ಆಯಾ ದೇವಸ್ಥಾನ ಗಳಲ್ಲಿ ನಡೆಯುತ್ತಿದ್ದವು. ರಾಜರಿಗೆ ಸಂಬಂಧಿಸಿದ ವಸ್ತುವುಳ್ಳ ಇಲ್ಲವೆ, ಸಂಸ್ಕೃತ ನಾಟಕಗಳ ಅನುವಾದಗಳು ಅರಮನೆಯ ನಾಟ್ಯಶಾಲೆಯಲ್ಲಿ ನಡೆಯುತ್ತಿದ್ದವು''. ( ಆದ್ಯ ರಂಗಾಚಾರ್ಯ; ಪು.೧೭)

೧೮-೧೯ನೆಯ ಶತಮಾನದಲ್ಲಿ ಅಭಿಜಾತ ಸಾಹಿತ್ಯ ಸಂಸ್ಕೃತಮಯವಾಗಿತ್ತು. ಆದರೂ ಅದು ಮೌಖಿಕ ಪರಂಪರೆಯ ನೆಲೆಯಲ್ಲಿ ಸಾಗಿಬರುತ್ತಿತ್ತು. ಸಂಸ್ಕೃತ ಸಂವೇದನೆಯೊಂದು ಜನರ ಮನದಾಳ ದಲ್ಲಿತ್ತು. ಹೊರಗಿನ ಪ್ರಚೋದನೆ ಆ ಸಂವೇದನೆಯನ್ನು ಜಾಗೃತಗೊಳಿಸಿದಾಗ ಸೂಕ್ಷ್ಮವಾಗಿ ಅದು ನಮ್ಮತನವನ್ನು ಹುಟ್ಟು ಹಾಕುವುದರೊಂದಿಗೆ ಮೌಖಿಕ ಪರಂಪರೆಯನ್ನು ಲಿಖಿತ ಸಂಪ್ರದಾಯವಾಗಿಸಿತು. ಇದೇ ಈ ಕಾಲದ ಪ್ರಮುಖ ಸಾಹಿತ್ಯಿಕ ಅನುವಾದ ಪ್ರಕ್ರಿಯೆ. ಇದಕ್ಕೆ ಕನ್ನಡ ಭಾಷೆಯ ಸ್ಥಿತಿಗಳು

ಪರ್ಯಾಯವಾಗಿ ಕಾರಣವಾಗಿದ್ದವು ಎಂಬುದನ್ನು ಈ ಮಾತಿನಿಂದ ತಿಳಿಯಬಹುದು. 'ಅಭಿನವ ಕಾಳಿದಾಸ ಬಸಪ್ಪಶಾಸ್ತ್ರಿಗಳ ಸಮಗ್ರ ಕೃತಿಗಳು' ಎಂಬ ಪುಸ್ತಕಕ್ಕೆ ಕುವೆಂಪು ಅವರ ಸಂದೇಶ ಈ ರೀತಿಯಾಗಿದೆ. "ಕನ್ನಡ ಸಾಹಿತ್ಯದ ನವೋದಯಕ್ಕೆ ಅಚಿರ ಪೂರ್ವದ ಉಷಃಕಾಲದಲ್ಲಿ ಅಥವಾ ಅರುಣೋದಯದ ಸಮಯದಲ್ಲಿ, ಕನ್ನಡ ಸಾಹಿತ್ಯ ತನ್ನ ಏರುಜವ್ವನದ ವೈಭವದ ಔನ್ನತ್ಯದಿಂದ ಕ್ರಮೇಣ ಇಳಿಗಾಲಕ್ಕಿಳಿದು, ಮರಣೋನ್ಮುಖವಾಗಿ ಏದುತ್ತಾ ಕೊನೆಯುಸಿರೆಳೆಯುತ್ತದೆಯೋ ಎಂಬಂತಿದ್ದ ದುರಂತ ಸಮಯದಲ್ಲಿ ಅದರ ಶ್ವಾಸಕೋಶಕ್ಕೆ ತಮ್ಮ ಆಮ್ಲಜನಕೋಪಮ ಅನಿಲವನ್ನೂದಿ ಪ್ರಾಣ ರಕ್ಷಣೆ ಮಾಡಿದ ಅಲ್ಪಸಂಖ್ಯೆಯ ಹಿರಿಯ ವ್ಯಕ್ತಿಗಳಲ್ಲಿ ಶಾಸ್ತ್ರಿಗಳೂ ಒಬ್ಬ ಅಗ್ರೇಸರ ಪಂಡಿತ ಮಾನ್ಯ ಸಾಹಿತಿಗಳಾಗಿದ್ದರು" ಎಂಬಲ್ಲಿ ಆ ಕಾಲಕ್ಕೆ ಕನ್ನಡ ಸಾಹಿತ್ಯದ ಸ್ಥಿತಿಗತಿಗಳು ಹೇಗಿದ್ದವು ಎಂಬ ಕಲ್ಪನೆ ಮೂಡಿಬರುತ್ತದೆ. ೧೭ನೆಯ ಶತಮಾನದಿಂದಲೇ ಈ ಬಗೆಯ ಅನುವಾದ ಪ್ರಕ್ರಿಯೆ ಕಂಡು ಬಂದರೂ ಸಾಂಸ್ಕೃತಿಕ ವಾತಾವರಣ ಸನಾತನ ಮೌಲ್ಯ ಪ್ರತಿಪಾದಕವಾದ್ದರಿಂದ ಧರ್ಮ ಗ್ರಂಥಗಳು ಕನ್ನಡ ಭಾಷೆಯಲ್ಲಿ ಬರುವಂತಾಯಿತು. ಈ ಬಗೆಯ ರಚನೆಗೆ ಕಾರಣವನ್ನು ಚಿಕ್ಕದೇವರಾಜ ಒಡೆಯರೇ ಹೇಳಿದ್ದಾರೆ. " ಅಕ್ಕರಮನರಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ವಜ್ಞಾನ ಮಪ್ಪುದಂದೆಂದು ಭಾವಿಸಿ ಎಲ್ಲರುಮರಿದಂತೆ ಕನ್ನಡ ಮಾತಿನೊಳ್ ಮೆಲ್ನುಡಿಗಳಿಂದ ಅಖಿಲತತ್ವಾರ್ಥಂಗಳಿಂ" ಸಂಗತಿಗೊಳಿಸಬೇಕೆಂದು ಭಾರತೀಯ ತಾತ್ವಿಕಚರ್ಚೆ ಅನುವಾದ ಪ್ರಕ್ರಿಯೆಯಲ್ಲಿ ತುಂಬಾ ಭಿನ್ನ ಬಗೆಯದು ಎಂಬುದನ್ನು ಹೀಗೂ ಹೇಳಬಹುದು. ಯಾವುದೇ ದೇಶದ ಸಾಹಿತ್ಯೇತಿಹಾಸದಲ್ಲಿ ಏನು ಹೇಳಬೇಕು, ಹೇಗೆ ಹೇಳಬೇಕು ಎಂಬ ಶೈಲಿಗಳ ವಿಷಯವಾಗಿ ಚಳುವಳಿಗಳು ಉದ್ಭವವಾಗುವುದು ಸಹಜ. ಆದರೆ ಸಂಸ್ಕೃತ ಭಾಷೆಯ ಸಮನ್ವಯ ಮತ್ತು ಸಮನ್ವಯತೆಯೊಡನೆ ಜೀವ ತಳಿಯುತ್ತಿದ್ದ ಕಾವ್ಯ ಶೈಲಿ ಪ್ರಮುಖ ಅಂಶವಾಗಿ ಕಾರ್ಯನಿರ್ವಹಿಸಿತು. ಹಾಗೂ ವಸ್ತು ವಿಷಯಕ ಚರ್ಚೆ ಪ್ರಾಮುಖ್ಯತೆಯನ್ನು ಪಡೆಯಲಿಲ್ಲ.

ಇಂಗ್ಲೀಶ್ ನಂತಹ ವಸಾಹತುಶಾಹಿ ಭಾಷೆ, ಸಾಹಿತ್ಯಗಳೇ ರೂಪಾಂತರ, ಭಾವಾಂತರ ಮೊದಲಾದ ರೂಪಗಳಿಂದ ಮರುಹುಟ್ಟು ಪಡೆಯುವಾಗ ಶಾಕುಂತಲ ಇತ್ಯಾದಿಗಳು ಯಾವ ವಿರೂಪವೂ ಇಲ್ಲದೆ, ಅನುವಾದಗೊಳ್ಳುವ ಸಾಧ್ಯತೆ ಹೆಚ್ಚು ಎಂದು ವ್ಯಕ್ತವಾಗಿದೆ. ಈ ಕಾರಣದಿಂದಾಗಿ ನೇರಾನುವಾದದ ಸಾಧ್ಯತೆ ಆ ಕಾಲಕ್ಕೆ ಕಂಡುಬಂದಿದೆ. ಸಂಸ್ಕೃತದ ಭಾಷೆ ಈ ನಿಟ್ಟಿನಲ್ಲಿ ಹೆಚ್ಚು ಸ್ಪಂದಿಸಿದೆ ಎನ್ನಬಹುದು. ಪ್ರಿಯಂವದ, ಶಾಕುಂತಲ, ಮಾಢವ್ಯ, ವಿದೂಷಕ ಈ ಪದಗಳ ವ್ಯುತ್ಪತ್ತಿ ಬಹುತೇಕ ವಿದಿತ ವಿಷಯವಾಗಿರು ವುದರಿಂದ ಸಂಸ್ಕೃತದಿಂದ ಕನ್ನಡಕ್ಕೆ ಸಲೀಸಾಗಿ ಬಂದವು ಎನ್ನಬಹುದು. ಬೇರೆ ದೇಶದ ಭಾಷಿಕರಿಗೆ ಪ್ರಿಯಂವದ, ದುಷ್ಯಂತ ಇವೇ ಮೊದಲಾದ ಶಬ್ದಗಳು ಸಾಂಸ್ಕೃತಿಕ ಅಂತರ್ಯದಿಂದಾಗಿ ಆಭಾಸದಂತೆ ಕಂಡು ಬಂದರೂ ಕನ್ನಡಿಗರಿಗೆ ತೀರಾ ಮನೆಮಾತಿನಂತೆ ತೋರಿರುವದು ಆಶ್ಚರ್ಯವೇನಿಲ್ಲ. ಅದೇ ಇಂಗ್ಲೀಶ್‌ನಿಂದ ಅನುವಾದಗೊಂಡ ನಾಟಕಗಳ ಪಾತ್ರವರ್ಗವನ್ನು, ಪರಿಸರವನ್ನು ತಮ್ಮದಾಗಿ ಬದಲಾಯಿಸಿಕೊಂಡಿ ದ್ದಾರೆ. Taming of the shrew – ಚಂಡಿ ಮದ ಮರ್ಧನ, Dusent ದುಷ್ಯಂತ,Abraham - ಏಕಪಿಂಗ, As you like it ಮನೋರಂಜಿನಿ, Merchant of Venice -ಪಾಂಚಾಳಿ

ಪರಿಣಯ. ಕೆಲವೊಮ್ಮೆ ಆಭಾಸವೆನಿಸಿದರೂ ಇನ್ನೂ ಕೆಲವೊಮ್ಮೆ ಸಾಂಸ್ಕೃತಿಕ ಅಗತ್ಯವೆನಿಸುತ್ತದೆ. ೧೮-೧೯ನೆಯ ಶತಮಾನದಲ್ಲಿ ಯುರೋಪಿನಲ್ಲಿ ರಮ್ಯವಾದ ತುಂಬಾ ಪ್ರಚಲಿತವಾಗಿತ್ತು. ಈ ಹಿನ್ನೆಲೆಯಲ್ಲಿ ಶೃಂಗಾರಭರಿತ ಕಾವ್ಯ; ನಾಟಕಗಳ ಅನುವಾದ ನಡೆದಿದೆ. ಲೋಹಿಯಾ ಭಾರತೀಯರಲ್ಲಿ ಮೂರು ಬಗೆಯ ಜನರನ್ನು ಗುರುತಿಸಿದ್ದಾರೆ. ಹಿಂದೆ ನೋಡುವವರು, ಅಕ್ಕಪಕ್ಕ ನೋಡುವವರು ಮತ್ತು ಮುಂದೆ ನೋಡುವವರು. ಹಿಂದೆ ನೋಡುವವರಿಗೆ ನಮ್ಮ ಪ್ರಾಚೀನ ಸಂಸ್ಕೃತಿಯ ಪುನರುಜ್ಜೀವನದಲ್ಲಿ ನಮ್ಮ ಸಮಸ್ಯೆಗಳೆಲ್ಲದರ ಪರಿಹಾರವಿದೆಯೆಂಬ ಭ್ರಮೆ ಇರುತ್ತದೆ. ಆ ಭ್ರಮೆ ವಸಾಹತುಶಾಹಿ ಸಂದರ್ಭದಲ್ಲೂ ಕಾಣಿಸಿಕೊಂಡಿದೆ.

ಶಾಂತಕವಿಗಳ ಪದ್ಯವನ್ನು ಓದಿದಾಗ ಕನ್ನಡದ ಅಂದಿನ ಸ್ಥಿತಿಗತಿ ಹಾಗೂ ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಗಳು ಬರಲು ಕಾರಣ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಎಲ್ಲಿರುವುದಭಿಮಾನ ? ಕನ್ನಡಿಗರೇ ! ಪೇಳಿ
ಸುಳ್ಳೆ ಬಡಬಡಿಸುವಿರಿ ಸಭೆಗಳಲ್ಲಿ ॥ಪ॥

ಗುರು ಪರಿಶ್ರಮವಿನಾಂಗ್ಲೇಯ ಭಾಷೆಯ ಕಲಿತು
ಧರಿಸಿ ಪದವಿಗಳನುಪಜೀವಿಸುವಿರೇ
ಹೊರತು ತದ್ಭಾಷೆಯುದ್ಗ್ರಂಥಗಳ ಕನ್ನಡದಿ
ಪರಿವರ್ತನೆಂಗೊಳಿಸಲಿಲ್ಲವಲ್ಲಾ.

ಯಾವುದೇ ಸಾಹಿತ್ಯದ ಪ್ರಾರಂಭ ಸ್ಥಿತಿಯಲ್ಲಿ ಎಂತೋ ಅಂತೆಯೇ ಪ್ರಬುದ್ಧ ಸ್ಥಿತಿಯಲ್ಲೂ ಭಾಷಾಂತರಗಳು ಅಗತ್ಯ ಆಗಿರುತ್ತವೆ. ಭಾಷೆ, ಸಾಹಿತ್ಯಗಳು ಭಾಷಾಂತರಗಳ ಮೂಲಕ ಶ್ರೀಮಂತವಾಗುತ್ತವೆ. ಅದರಲ್ಲೂ ಮರಾಠಿಗರ ಪ್ರಾಬಲ್ಯದಿಂದ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಒದಗಿದ ಅವಸ್ಥೆ ಈ ಮಾತಿಗೆ ಸಾಕ್ಷಿಯೆನಿಸುತ್ತದೆ.

ಎಲ್ಲಿ ನೋಡಲು ಮರಾಠಿಯರ ನಾಟಕಕೀರ್ತಿ
ಎಲ್ಲಿ ನೋಡಲು ಮರಾಠಿಯರ ನಾಟಕದರ್ಥಿ
ಯೆಲ್ಲಿ ನೋಡಲು ಮರಾಠಿಯರ ನಾಟಕ ನಟರ ಮೂರ್ತಿಗಳ ಸಂಚಾರವು

ಎಲ್ಲಿ ನೋಡಲು ಮರಾಠಿಯರ ನಾಟಕದಾಟ
ಎಲ್ಲಿ ನೋಡಲು ಮರಾಠಿಯರ ನಾಟಕದೂಟ
ಎಲ್ಲಿ ನೋಡಲು ಮರಾಠಿಯರ ನಾಟಕಮಯಂ ತಾನಾಯ್ತುಂ ಕರ್ನಾಟಕಂ.

ಈ ಹಂತದಲ್ಲೂ ಮುಂಬೈ ಕರ್ನಾಟಕದಲ್ಲಿ ಅನುವಾದಗಳು ಬರಲು ಕಾರಣವಾಯಿತು. ಶಾಂತಕವಿಗಳು ಅಂದಿನ ಮರಾಠಿ ಪ್ರಾಬಲ್ಯ, ಕನ್ನಡ ನಾಟಕಗಳಿಲ್ಲದಿರುವುದು ಇವುಗಳನ್ನೆಲ್ಲಾ ನೋಡಿದಾಗ ರಂಗಭೂಮಿಯು ಅನುವಾದದ ಅಧ್ಯತೆಯನ್ನು ಸೃಷ್ಟಿಸಿದೆ. ಅನುವಾದವನ್ನು ವಸಾಹತುಶಾಹಿ ಕಾಲಘಟ್ಟದಲ್ಲಿ ಗ್ರಹಿಸಿದ ಬಗೆಯೆಂದರೆ, ಮೂಲ ಪಠ್ಯವನ್ನು ಅನುಸರಿಸುವ ಸಂವಾದ. ಇಲ್ಲಿ ಭಾಷಾಂತರಕಾರನು ಮೂಲಪಠ್ಯವನ್ನು ಸಾಧ್ಯವಾದಷ್ಟು ನಿಕಟವಾಗಿ ಪುನರ್‌ರೂಪಿಸುತ್ತಾನಾದರೂ ಅವನು ರೂಪಿಸುವ ಪಠ್ಯಅವನ ಭಾಷೆಗೆ ಸಹಜವಾಗಿದ್ದು, ಸ್ವತಂತ್ರ ಅಸ್ತಿತ್ವಕ್ಕೆ ಅರ್ಹವಾಗಿರುತ್ತವೆ. ಇದು ಮೂಲಪಠ್ಯದ ಅನುಕರಣೆ, ಪರಿವರ್ತನೆ ಮತ್ತು ವಿಶ್ಲೇಷಣಾತ್ಮಕ ಮರುಸೃಷ್ಟಿಯಾಗಿರುತ್ತದೆ.

ಕನ್ನಡದಲ್ಲಿ ಅಭಿಜಾತ ಕಾವ್ಯ ಆರಂಭವಾಗುವ ಹೊತ್ತಿಗೆ ಸಂಸ್ಕೃತ ಕಾವ್ಯ ಪರಂಪರೆ ಅವನತಿಗೆ ಈಡಾಗುತ್ತಾ ಬಂದಿತ್ತು. ಶ್ರೀಮಂತಿಕೆಯ ಶಿಖರ ತಲುಪಿ ಇಳಿಮುಖವಾಗಿತ್ತು. ಭಾರತೀಯ ಭಾಷೆಗಳಲ್ಲಿ ಈ ಪರಂಪರೆ ಜೀವ ಪಡೆಯತೊಡಗಿತ್ತು. ಅಥವಾ ಆಧುನಿಕ ಕನ್ನಡ ಸಾಹಿತ್ಯ ಸಂಸ್ಕೃತ ಪ್ರಭಾವದಿಂದ ಪುಷ್ಟವಾಗಿದೆ ಎಂಬ ಮಾತು ಸತ್ಯವೋ ಎಂಬ ಚರ್ಚೆಗೆ ಅನುಗುಣವಾಗಿ ಅನುವಾದದ ಪರಿಕಲ್ಪನೆ ಸ್ಫುಟವಾಗುತ್ತಿತ್ತು. ಯಾವ ಅಂಶಗಳು ಈ ಬಗೆಯ ಚರ್ಚೆಗೆ ಇಂಬುಕೊಟ್ಟವು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಆಲೂರು ವೆಂಕಟರಾಯರು ಕನ್ನಡದ ಅಂದಿನ ಸ್ಥಿತಿಗಳ ಕುರಿತು ಹೀಗೆ ಹೇಳುತ್ತಾರೆ;

ಕಾರ್ಪಣ್ಯ ದೋಷೋಪಹತಃ ಸ್ವಭಾವಃ।
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಂ॥

"ಪ್ರತಿಯೊಂದು ಭಾಷೆಯವರೂ ತಮ್ಮ ತಮ್ಮ ಪ್ರಾಂತಗಳ ಇತಿಹಾಸವನ್ನು ಅಭಿಮಾನಪೂರ್ವಕವಾಗಿ ಅಭ್ಯಾಸಮಾಡಿ, ತಮ್ಮ ಜನರನ್ನು ಚೇತನಗೊಳಿಸುತ್ತಿರಲು, ನಮ್ಮ ಕರ್ನಾಟಕದವರೋ !, ಛೇ ಕರ್ನಾಟಕವೆಲ್ಲಿದೆ ? ಕರ್ನಾಟಕವು ಜಗತ್ತಿನ ನಾಟ್ಯರಂಗದಿಂದ ಎಂದೋ ನಾಮಶೇಷವಾಗಿ ಹೋಗಿದೆ ! ಇನ್ನು ಎಲ್ಲಿಯ ಕರ್ನಾಟಕ ? ನಾಲ್ಕಾರು ಕಡೆಗೆ ಹರಿದು ಹಂಚಿ ಹೋದ ಕರ್ನಾಟಕವನ್ನು ಹೊಲಿದು ಅಖಂಡವಾಗಿ ಮಾಡುವವರಾರು ! ಅಷ್ಟೊಂದು ಅಭಿಮಾನವು ನಮ್ಮಲ್ಲಿ ಎಲ್ಲುಂಟು ?". ( ಆಲೂರು ವೆಂಕಟರಾಯ ೧೯೬೭; ಪು.೨೨)

ಕನ್ನಡದ ವಿಪನ್ನಾವಸ್ಥೆಯನ್ನು ಕಂಡು ಹಲವು ಜನರಲ್ಲಿ ಸ್ವಭಾಷೆ, ಸಂಸ್ಕೃತಿಗಳ ಪ್ರಜ್ಞೆ ಸ್ಫುರಣಗೊಂಡಿತು. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಶ್ರೇಯೋಭಿವೃದ್ಧಿಗಾಗಿ ಪ್ರಯತ್ನಿಸಿದ ಮಹನೀಯರ ಉದ್ದೇಶ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಬಗೆಗೆ ಇದ್ದ ಅವಜ್ಞೆಯನ್ನು ತೊಲಗಿಸಿ, ಸೂಕ್ತ ಅಭಿವ್ಯಕ್ತಿ ಸಾಮರ್ಥ್ಯವನ್ನು ಒದಗಿಸಿಕೊಡುವುದು. ಪುಸ್ತಕ ಈ ನಿಟ್ಟಿನಲ್ಲಿ ನಡೆದ ಅವರ ಸಾಹಿತ್ಯದ

ಧ್ಯೇಯ-ಧೋರಣೆ, ಸಾಧನೆ ಸಿದ್ಧಿಗಳನ್ನು ಅರಿತುಕೊಳ್ಳಬೇಕಾಗಿರುವುದು ಹಾಗೂ ಈ ಪ್ರಯತ್ನಗಳು ಅನುವಾದದ ಪರಿಕಲ್ಪನೆಗೆ ಯಾವ ರೀತಿ ಪೂರಕ ಅಂಶಗಳಾದವು ಎನ್ನುವುದು ಚರ್ಚೆಯ ವಿಷಯವಾಗಿದೆ. ಇಬ್ಬರು ವಿದ್ವಾಂಸರ ಹೇಳಿಕೆಗಳು ಹೀಗಿವೆ :

" ಈ ಕಾಲದ ಲೇಖಕರಲ್ಲಿ ಕನ್ನಡದ ಏಳ್ಗೆಯ ಬಗೆಗೆ ತೀವ್ರ ಆಕಾಂಕ್ಷೆ ವ್ಯಕ್ತವಾಯಿತು. ಅವರು ಕನ್ನಡ ಭಾಷೆ ಸಾಹಿತ್ಯಗಳ ವಿಕಾಸಕ್ಕಾಗಿ ಸಂಸ್ಕೃತ, ಇಂಗ್ಲೀಷ್ ಭಾಷೆಗಳಲ್ಲದೆ, ಮರಾಠಿ ಹಾಗೂ ಬಂಗಾಲಿ ಭಾಷೆಯ ಉತ್ತಮೋತ್ತಮ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿ, ಇಲ್ಲವೆ ಪರಿವರ್ತಿಸಿ, ಕನ್ನಡದ ಕಣಜವನ್ನು ತುಂಬುವ ಎತ್ತುಗಡೆ ನಡೆಸಿದ್ದಾರೆ. ಹೊಸಗನ್ನಡದ ಅರುಣೋದಯದ ಈ ಅವಧಿಯಲ್ಲಿ ನಡೆದ ಭಾಷಾಂತರ ಕ್ರಿಯೆಯೇ ಮುಂದಿನ ಸ್ವೋಪಜ್ಞ ಸಾಹಿತ್ಯ ಸೃಷ್ಟಿಗೆ ಸ್ಫೂರ್ತಿ, ಪ್ರೇರಣೆಗಳನ್ನೊದಗಿಸಿತು. ಸಾಹಿತ್ಯದ ಸತ್ವ ಹಾಗೂ ಮೊತ್ತಗಳ ದೃಷ್ಟಿಯಿಂದ ಭಾಷಾಂತರ ಕೃತಿಯು ಗಮನಾರ್ಹವಾಗಿರುವುದರಿಂದ ಸಾಹಿತ್ಯ ಚರಿತ್ರೆಯಲ್ಲಿ ಈ ಕಾಲಖಂಡವನ್ನು ಭಾಷಾಂತರ ಯುಗವೆಂದು ಕರೆಯುವುದು ಔಚಿತ್ಯಪೂರ್ಣ" (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಬೆಂಗಳೂರು ವಿ.ವಿ. ೧೯೯೧, ಪು. ೩೬).

"ಪ್ರಾಚೀನ ಕಾಲದಿಂದಲೂ ಸಂಸ್ಕೃತವು ಭಾರತೀಯ ಭಾಷೆಗಳಿಗೆಲ್ಲಾ ಪ್ರೇರಕವಾಗಿದೆ. ಬೆಳವಣಿಗೆಯ ವಿವಿಧ ಘಟ್ಟಗಳಲ್ಲಿ ಅದಕ್ಕೆ ಪೋಷಣೆಯನ್ನಿತ್ತಿದೆ. ಅವುಗಳ ವಿಕಾಸಕ್ಕೆ ನಿರಂತರ ಸಹಾಯಕವಾಗಿದೆ. ಭಾರತೀಯ ಸಾಮುದಾಯಿಕ ವಿಚಾರಧಾರೆಗೆ ಪ್ರಭಾವಿಯಾದ ಅಭಿವ್ಯಕ್ತಿಯನ್ನಿತ್ತುದು ಸಂಸ್ಕೃತವೇ ಆಗಿದೆ. ಭಾರತೀಯ ಸಂಸ್ಕೃತಿಯ ಉದಾತ್ತ ಮೌಲ್ಯಗಳನ್ನು ಪ್ರೇರಿಸುವ ದಾರ್ಶನಿಕ ವೈಭವವನ್ನು ನಿರೂಪಿಸುವ ಉತ್ತಮೋತ್ತಮ ಕೃತಿಗಳಿಗೆ ಸಂಸ್ಕೃತ ಭಾಷೆ ಜನ್ಮ ಕೊಟ್ಟಿದೆ. ಹೀಗಾಗಿ ಆಧುನಿಕ ಭಾರತದ ಆರ್ಯಭಾಷಾ ವರ್ಗದ ಸಾಹಿತ್ಯಗಳಷ್ಟೇ ಅಲ್ಲ ಕನ್ನಡ, ತೆಲುಗುಗಳಂತಹ ದ್ರಾವಿಡ ವರ್ಗದ ಭಾಷೆಗಳು ಕೂಡ ಸಂಸ್ಕೃತದ ಮಹಾಕೃತಿಗಳನ್ನು ಅನುವಾದದ ಮೂಲಕ ತಮ್ಮಲ್ಲಿಗೆ ಬರಮಾಡಿಕೊಳ್ಳುವ ಪರಿಪಾಠವನ್ನು ಇಟ್ಟುಕೊಂಡಿವೆ". (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ೧೯೯೧; ಪು.೩೬)

ಸ್ವತಂತ್ರ ಕೃಷಿಗೆ ಮುನ್ನ ನಡೆಯಬೇಕಾದ ಉಳುಮೆಯ ಕೆಲಸ ಅನುವಾದ ಎಂಬುದಾಗಿ ಡಿ.ವಿ.ಜಿ. ಒಂದೆಡೆ ಹೇಳುತ್ತಾರೆ. ಅನುವಾದವೇ ಈ ಯುಗದ ವಿಪುಲ ಬೆಳೆ. ಈ ಯುಗವನ್ನು ಮೂರು ಘಟ್ಟಗಳಾಗಿ ಕಾಣಬಹುದಾಗಿದೆ. ಸುಮಾರು ೧೮೨೦-೧೮೫೦ರವರೆಗಿನ ಅವಧಿಯಲ್ಲಿ ಕ್ರೈಸ್ತ ಮಿಷನರಿಗಳು ಮಾತ್ರ ಗ್ರಂಥರಚನೆಯಲ್ಲಿ ತೊಡಗಿದ್ದು, ದೇಶಿಯರು ಆ ಬಗ್ಗೆ ತಟಸ್ಥರಾಗಿದ್ದರು. ಸುಮಾರು ೧೮೫೧--೧೮೮೦ರ ವರೆಗಿನ ಅವಧಿಯಲ್ಲಿ ದೇಶಿಯರು ಗ್ರಂಥ ರಚನೆಯತ್ತ ಮನಸ್ಸು ಹರಿಸಿ, ಅನುವಾದ ಕಾರ್ಯದಲ್ಲಿ ಮತ್ತು ಹಳೆಯ ಗ್ರಂಥಗಳ ಪರಿಷ್ಕರಣದಲ್ಲಿ ತೊಡಗಿದರು. ಸುಮಾರು ೧೮೮೧-೧೯೦೦ ಅವಧಿಯಲ್ಲಿ ಮತ್ತು ಅನಂತರ ಅನುವಾದ ಕೃತಿಗಳ ಜೊತೆಗೆ ಸ್ವತಂತ್ರ ಕೃತಿಗಳೂ ಕಾಣಿಸಿಕೊಂಡವು. (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ೧೯೯೧; ಪು.೫೬)

ಹೈದ್ರಾಬಾದ್ ಕರ್ನಾಟಕದಲ್ಲಿ ನಿಜಾಮರ ಆಳ್ವಿಕೆಯಿತ್ತು. ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಈ ಪ್ರಾಂತ್ಯ ಇನ್ನು ನಿಜಾಂ ಆಡಳಿತದಲ್ಲೇ ಇತ್ತು. ಈ ಪ್ರಾಂತ್ಯದ ಕೆಲವು ಆಯಕಟ್ಟಿನ ಪ್ರದೇಶಗಳಿಗಾಗಿ ಸಂಘರ್ಷಗಳು ಸಂಭವಿಸುತ್ತಲೇ ಇದ್ದವು. ರಜಾಕಾರರ ದಾಳಿಗೆ ಒಳಗಾಗುತ್ತಿದ್ದುದರಿಂದ ಜನರಿಗೆ ಭದ್ರತೆಯಿರಲಿಲ್ಲ. ರಾಜ್ಯ ಭಾಷೆಯಾಗಿ ಫಾರಸಿ, ಉರ್ದು ಮುನ್ನೆಡೆಗೆ ಬಂದವು. ಮರಾಠಿ ವ್ಯಾವಹಾರಿಕ ಭಾಷೆಯಾಯಿತು. ಬಹುಭಾಷಿಕರಿರುವ ಈ ಪ್ರದೇಶದಲ್ಲಿ (ಫಾರಸಿ, ಉರ್ದು, ಮರಾಠಿ, ಕನ್ನಡ, ತೆಲುಗು) ಭಿನ್ನ ಸಾಂಸ್ಕೃತಿಕತೆ ಎದ್ದು ತೋರುತ್ತಿತ್ತು. ನಿಜಾಂ ಆಳ್ವಿಕೆಯಿಂದಾಗಿ ಕನ್ನಡದಲ್ಲಿ ಅಕ್ಷರಾಭ್ಯಾಸ ಮಾಡಲು ಮುಕ್ತ ಅವಕಾಶಗಳಿರಲಿಲ್ಲ. ಶಿಕ್ಷಣ ಮತ್ತು ಆಡಳಿತ ಉರ್ದುಮಯವಾಗಿತ್ತು. ಲಿಖಿತ ಪರಂಪರೆಗಿಂತ ತತ್ವಪದಕಾರರೇ ಮೊದಲಾದವರಿಂದ ಮೌಖಿಕ ಪರಂಪರೆ ಉನ್ನತಿಯನ್ನು ಹೊಂದಿತ್ತು.

ಸಾಮಾಜಿಕ ಮತ್ತು ರಾಜಕೀಯ ಸ್ಥಿತ್ಯಂತರಗಳ ಕಾಲದಲ್ಲಿ ಭಾವನಾತ್ಮಕತೆ ಮತ್ತು ಆಧ್ಯಾತ್ಮಪರತೆ ಸಂಸ್ಕೃತಿಯನ್ನು ಜೀವಂತವಾಗಿ ಕಾಯ್ದುಕೊಳ್ಳುವ ಒಂದು ಉಪಾಯವಾಗಿ ಒದಗಿತೆಂಬುದು ನಿಜವೇ. ಭಾರತದಲ್ಲಿ ಆಗ ಎರಡು ಸ್ತರಗಳ ರಚನೆಯನ್ನು ನಾವು ನೋಡುತ್ತೇವೆ. ಒಂದು, ಸಾಮಾಜಿಕ-ಚಾರಿತ್ರಿಕ ಸಂದರ್ಭಕ್ಕೆ ಪ್ರತಿಕ್ರಿಯಿಸುವ ಸಾಹಿತ್ಯ. ಇನ್ನೊಂದು ಮನಸ್ಸಿನ ಸಾರ್ವಕಾಲೀನ ಸೂಕ್ಷ್ಮಸ್ತರತೆ ಎನ್ನಬಹುದು. ಜೀವದ ಅಭೀಪ್ಸೆಗೆ ನುಡಿ ಕೊಡುವ ಸಾಹಿತ್ಯ ಎರಡನೆಯ ಬಗೆಯ ಸಾಹಿತ್ಯದಲ್ಲಿ ಪರಂಪರೆಯಿಂದ ಬಂದ ಅಧ್ಯಾತ್ಮಿಕ ತುಡಿತಗಳು ತೀರ ಹೊಸದೊಂದು ಸ್ವರೂಪದಲ್ಲಿ ಅಭಿವ್ಯಕ್ತವಾದವು. ಕಥೆ ದೀರ್ಘವಾದ ಲಾವಣಿಯ ಶೈಲಿಗೆ ಹೊಂದುವಂಥ ಕಾವ್ಯರೂಪ. ಮುಂದೆ ಲಾವಣಿ ರೂಪವೇ ಯಾತ್ರ, ಯಕ್ಷಗಾನ, ಭಾಗವತ ಮೇಲ, ನೌಟಂಕಿ ಖಯಾಲ್, ಬಂಧ್ ಜಶನ್ ಮೊದಲಾದ ನಾನಾ ಬಗೆಯ ನಾಟ್ಯ ರೂಪಗಳಿಗೆ ದಾರಿ ಮಾಡಿಕೊಟ್ಟಿತು. ಇನ್ನೊಂದು ಕಡೆ ಕಥಾಕಾಲಕ್ಷೇಪ, ಹರಿಕಥೆಯಂತಹ ಮಾಧ್ಯಮಗಳನ್ನು ಸೃಷ್ಟಿಸಿತು. ಭಾವೈ, ನೌಟಂಕಿ, ಖಯಾಲ್, ನಾಚಮಚ ಮೊದಲಾದ ಮಾಧ್ಯಮಗಳ ಸೃಷ್ಟಿಯ ಹಿಂದೆ ಈ ರೀತಿಯ ಬೋಧನೋದ್ದೇಶವುಳ್ಳ ಕೃತಿಗಳ ಸ್ಫೂರ್ತಿಯಿದೆ. ಯಕ್ಷಗಾನ-ಭಾಗವತ ಮೇಳ, ಓರಿಸ್ಸಾದ ಸಹಿಜಾತ್ರಾ, ಬಂಗಾಳದ ಯಾತ್ರ ಮತ್ತು ಕೇರಳದ ಕಥಕ್ಕಳಿಯ ಹಿಂದೆ ಚಾರಿತ್ರಿಕ ಮತ್ತು ಪೌರಾಣಿಕ ನೆಲೆಯ ಕಥಾವಸ್ತುಗಳ ಪ್ರೇರಣೆಯಿದೆ. ಭಾರತೀಯ ಕಾವ್ಯ ಮೇಲ್ವರ್ಗದಲ್ಲಿ ತನ್ನ ಕಾವ್ಯದ ಚಳುಕು ಕಳೆದುಕೊಂಡಾಗ ಅದು ಜೀವ ಹಿಡಿದುದು ಈ ಜನಪ್ರಿಯ ನಾಟಕ ಮಾಧ್ಯಮಗಳಲ್ಲಿ, ಈ ಜನಪ್ರಿಯ ನಾಟಕ ಮಾಧ್ಯಮಗಳನ್ನು ಜಾನಪದೀಯವೆಂದು ಹೇಳಲಾಗುವುದಿಲ್ಲ. ಸೂಕ್ಷ್ಮವಾಗಿ ನೋಡಿದರೆ ಅವು ಮಧ್ಯಕಾಲೀನ ಕಾವ್ಯದೊಂದಿಗೆ ಆಂತರಿಕ ಸಂಬಂಧಹೊಂದಿರುವುದು ಸ್ಪಷ್ಟವಾಗುತ್ತದೆ. ವಸ್ತುವಿನ್ಯಾಸದಲ್ಲಿ, ತಾಂತ್ರಿಕ ಸಂಕೀರ್ಣತೆಯಲ್ಲಿ ಅವುಗಳ ಮೇಲೆ ಮಧ್ಯಕಾಲೀನ ಕಾವ್ಯ ಕೃತಿಗಳ ನಿಚ್ಚಳ ಪ್ರಭಾವ ಕಂಡು ಬರುತ್ತದೆ. ವಾಸ್ತವವಾಗಿ ಈ ರಂಗ ಮಾಧ್ಯಮಗಳು ಕಾವ್ಯಕೃತಿಗಳ ನಾಟಕೀಯ ಮತ್ತು ಗೀತಾತ್ಮಕ ಅಭಿವ್ಯಕ್ತಿಗಳೇ ಆಗಿವೆ. ಈ ಹಿನ್ನೆಲೆಯ ನೆಲೆಯಲ್ಲಿ ಹೇಳುವುದಾದರೆ ಬಸವಪ್ಪಶಾಸ್ತ್ರಿಗಳು ಹರಿಕಥೆಗಾರರಾಗಿರುವುದರಿಂದ ನಾಟಕ ರಚನೆಗೆ ಗೇಯತೆಗೆ ದೃಷ್ಟಿ ಕೇಂದ್ರಿಕೃತವಾಗಲು ಸಾಧ್ಯವಾಯಿತು.

ಹಾಗಾಗಿಯೇ ಸಂಸ್ಕೃತದ ನಾಟಕಗಳು ಅನುವಾದದಲ್ಲೂ ಈ ಅಂಶ ವ್ಯಕ್ತವಾಯಿತು. ಈ ಕೆಳಗಿನ ಮೂವರು ವಿದ್ವಾಂಸರ ಮಾತುಗಳನ್ನು ನಮ್ಮ ಚರ್ಚೆಗೆ ಪೂರಕವಾಗಿ ಬಳಸಿಕೊಳ್ಳಬಹುದಾಗಿದೆ.

'' ಆಧುನಿಕ ಕನ್ನಡ ಸಾಹಿತ್ಯದ ಸಾಂಸ್ಕೃತಿಕ ಬೆಳವಣಿಗೆಯ ಸಂದರ್ಭದಲ್ಲಿ ಒಂದು ಅಂಶವೆಂದರೆ; ವಸ್ತುನಿಷ್ಠ ಸಂಸ್ಕೃತಿ ಮತ್ತು ವಿಷಯ ನಿಷ್ಠ ಸಂಸ್ಕೃತಿಗಳ ಸಂಘರ್ಷ. ವಸ್ತುನಿಷ್ಠ ಸಂಸ್ಕೃತಿಯು ಆಧುನಿಕ ತಂತ್ರಜ್ಞಾನಗಳ ಪ್ರಣಾಳಿಕೆ ಹೊಂದಿರುತ್ತದೆ. ಇದೇ ಪ್ರಧಾನ ಸಂಸ್ಕೃತಿಯೂ ಆಗಿರುತ್ತದೆ''. ಈ ಪ್ರಧಾನ ಸಂಸ್ಕೃತಿಯೆದುರು ಭಾರತೀಯ ದೇಶೀವಾದದ ಮುಖ್ಯ ಅಭಿವ್ಯಕ್ತಿಯಾದ ಸಾಂಸ್ಕೃತಿಕ ಪುನರುಜ್ಜೀವನ ಎಲ್ಲಾ ಪ್ರಾದೇಶಿಕ ಸಂಸ್ಕೃತಿಗಳಲ್ಲಿ ಒಂದೇ ಬಗೆಯದಾಗಿರಲಿಲ್ಲ. ರಾಷ್ಟ್ರೀಯ ಸಂಸ್ಕೃತಿಯ ಬಗ್ಗೆ ಭಾವುಕವಾದ ಮನೋಭಾವನೆ, ಪಶ್ಚಿಮದ ಮಾನವತಾವಾದಿ ಧೋರಣೆಗಳ ಪ್ರಭಾವದಿಂದಾಗಿ ಉಂಟಾದ ಸಮಾಜ ಸುಧಾರಕ ಪ್ರವೃತ್ತಿ, ಆದರ್ಶವಾದ ಇವುಗಳು ವಸಾಹತುಶಾಹಿ ಅನುಭವದ ಎದುರಿನಲ್ಲಿ ಭಾರತೀಯ ಮನಸ್ಸು ಸೃಷ್ಟಿಸಿಕೊಂಡ ಸ್ಥೂಲವಾದ ಒಲವುಗಳಾಗಿದ್ದರಿಂದ ಅವುಗಳ ಪ್ರಭಾವವನ್ನು ಕನ್ನಡದಂತಹ ಪ್ರಾದೇಶಿಕ ಸಂಸ್ಕೃತಿಗಳ ಮೇಲೂ ಕಾಣುತ್ತೇವೆ. '' ಇದರ ಜೊತೆಗೆ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ; ಪಶ್ಚಿಮ ಶೈಲಿಯ ಶಿಕ್ಷಣ ಕ್ರಮದಲ್ಲಿ ' ಇಂಗ್ಲೀಷ್ ಭಾಷಿಕ ಮಾಧ್ಯಮವಾಯಿತು. ಒಂದು ಭಾಷಿಕ ವಲಯದಿಂದ ಇನ್ನೊಂದು ಭಾಷಿಕ ವಲಯದ ಕಡೆಗೆ ಜಿಗಿದು ವೈಚಾರಿಕ ಚೌಕಟ್ಟನ್ನು ರೂಪಿಸುವ ಈ ಪ್ರಯತ್ನದ ಹಿಂದೆ ಆ ಹೊತ್ತಿಗೆ ಬಂದ ಶಿಕ್ಷಣ ಸಂಸ್ಕೃತಿಯ ಪರಿಕಲ್ಪನೆಯೂ ಮುಖ್ಯ ಪ್ರೇರಣೆಯಾಗಿದೆ''(ಕನ್ನಡ ಸಾಹಿತ್ಯ ಅಕಾಡಮಿ ೧೯೯೩; ಪು.೧೨೦)

''ಪ್ರಗತಿ ಮತ್ತು ವೈಜ್ಞಾನಿಕ ಬೆಳವಣಿಗೆಗಳನ್ನು ದೇಶಿಯ ಸಂಸ್ಕೃತಿಗಳ ಮುಖಾಂತರ ಪರಿಭಾವಿಸಬೇಕು. ವಸಾಹತುಶಾಹಿ ಸಂಸ್ಕೃತಿಯ ವಿರೋಧಕ್ಕೆ ಪರ್ಯಾಯವಾಗಿ 'ದೇಸೀ ಸಂಸ್ಕೃತಿ' ಎನ್ನುವ ಪರಿಕಲ್ಪನೆಗಳು ಬಂದವು. ಈ ಹಟವೇ ನಮ್ಮನ್ನು ಹಿಂದಕ್ಕೆ ಕೊಂಡೊಯ್ಯಿತು. ಮರಳಿ ದೇಶೀಯ ಸಂಸ್ಕೃತಿಗೆ ತೆರಳುವ ಈ ಪ್ರಕ್ರಿಯೆಯಲ್ಲಿ ವೈಜ್ಞಾನಿಕ ಸ್ವೀಕಾರಕ್ಕಿಂತ ಸಾಂಸ್ಕೃತಿಕ ಮರುಪಲ್ಲಟದ ಸ್ವೀಕಾರವೇ ಮುಖ್ಯವಾಯಿತು'' (ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ).

ಮಾರ್ಗಕಾವ್ಯದ ಕಾಲವೊಂದು ಮುಗಿದುಹೋಯಿತು ಎನ್ನುವ ಹಂತದಲ್ಲೇ ಮುದ್ದಣ್ಣನ ಪ್ರವೇಶವಾಗುತ್ತದೆ. ಹಳೆಗನ್ನಡ, ಹೊಸಗನ್ನಡ, ಪರಂಪರೆಯ ಕೊಂಡಿಯಾಗಿ ಈತನ ಪ್ರಯೋಗ ಕಂಡು ಬರುತ್ತದೆ. ಕನ್ನಡ ಯಾರಿಗೂ ಬೇಡದ ವಸ್ತುವಾಗಿದ್ದಾಗ ಇಬ್ಬಣದವರ ದೃಷ್ಟಿಯನ್ನು ಏಕಕಾಲದಲ್ಲಿ ಆಕರ್ಷಿಸಿರುವ ' ಉಳಿದೊಡಂ ಅಳಿದೊಡಂ ಬಟ್ಟೆದೋರಿಪ' ಪುರಾಣ ಕಥನಗಳು ಈ ಕಥನಗಳು ಆ ಕಾಲದವರ ಎದುರಿಗಿದ್ದವು. ಹಳೆ-ಹೊಸ ಪರಂಪರೆಗಳೆರಡನ್ನು ಜೋಡಿಸುವ ಹೊಸ ಮಾರ್ಗವೊಂದು ಬೇಕಾಗಿತ್ತು. ಈ ಸಂದಿಗ್ಧ ಕಾಲಘಟ್ಟದಲ್ಲಿ ಮುದ್ದಣನು ಅನುವಾದಕರಲ್ಲಿ ಶೈಲಿಯ ಆಯ್ಕೆಯ ಧೋರಣೆ ಜೋಡಿಸುವ ಹೊಸ ಮಾರ್ಗವೊಂದು ಬೇಕಾಗಿತ್ತು. ಮುದ್ದಣನು ಅನುವಾದಕರಲ್ಲಿ ಶೈಲಿಯ ಆಯ್ಕೆಯ ಧೋರಣೆಯನ್ನು ಪಡಿಮೂಡಿಸಿರುತ್ತಾನೆ ಎನ್ನಬಹುದು.

"೧೯ನೆಯ ಶತಮಾನದಲ್ಲಿ ಸ್ವತಂತ್ರ ಸೃಜನಾತ್ಮಕ ರಚನೆಗಳಿಗಿಂತಲೂ, ಸ್ವತಂತ್ರ ರಚನೆ ಎಂಬಷ್ಟೇ ಮಹತ್ವಪೂರ್ಣವಾಗಿ ಮೂಡಿಬಂದದ್ದು, ಅನುವಾದ ಸಾಹಿತ್ಯ ಅದು ಕಾದಂಬರಿಯಾಗಿರಬಹುದು. ಅಥವಾ ನಾಟಕವಾಗಿರಬಹುದು. ಇದು ಕನ್ನಡ ಸಾಹಿತ್ಯದ ಅರುಣೋದಯ ಕಾಲವಾಗಿತ್ತು. ಇಂಗ್ಲೀಷ್ ಶಿಕ್ಷನ ಪ್ರಸಾರ, ಹೊಸ ವಿಚಾರಸರಣಿಯ ಪ್ರಭಾವದಿಮದ ಕನ್ನಡ ಜನತೆಯಲ್ಲು ಒಂದು ಬಗೆಯ ಜಾಗೃತಿ ಉಂಟಾಗಿತ್ತಾದರೂ ಕನ್ನಡ ಜನತೆಯ ವಾಚನ ಪ್ರೀತಿಯನ್ನು ತಣಿಸುವುದಕ್ಕೆ ಕನ್ನಡದಲ್ಲಿ ಸಾಕಷ್ಟು ಕೃತಿಗಳು ಲಭ್ಯವಾಗುತ್ತಿರಲಿಲ್ಲ. ಕಾವ್ಯವಾಚನ ಪರಂಪರೆ ಎಂದೋ ನಿಲುಗಡೆಗೆ ಬಂದಿತ್ತು. ಗದ್ಯಕೃತಿಗಳಂತೂ ಅಪರೂಪವಾಗಿದ್ದವು. ಇದಕ್ಕೆ ಕಾರಣ ದೇಶಭಾಷೆಗಳಲ್ಲಿ ಒಂದಾದ ಕನ್ನಡದ ಬೆಳವಣಿಗೆಗೆ ಪೂರಕವಾದ ಪರಿಸರ, ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆಯ ವ್ಯಾಮೋಹ ಕನ್ನಡ ನಾಡಿನ ವಿದ್ಯಾವಂತ ಜನರನ್ನು ತಟ್ಟದಿರಲಿಲ್ಲ. ಹೀಗಾಗಿ ಪಾರತಂತ್ರ್ಯ, ಹೊರಗಿನ ವ್ಯಾಮೋಹ ತಮ್ಮರಿವಿನ ಅಭಾವ ಇತ್ಯಾದಿಗಳು ನಾಡನ್ನು ಕವಿದಿದ್ದಾಗ, ಕನ್ನಡ ಜನ ಜಾಗೃತಿ ಅವಶ್ಯಕವಾಗಿದ್ದ ಸಂದರ್ಭದಲ್ಲಿ, ಜನರಲ್ಲಿ ಕನ್ನಡ ಸಾಹಿತ್ಯಾಭಿರುಚಿಯನ್ನು ಕೆರಳಿಸುವಂತಹ ಸಾಹಿತ್ಯ ಕೃತಿಗಳು ಅಗತ್ಯವೆನಿಸಿದವು. ಪುನರುಜ್ಜೀವನದ ಹಾದಿಯಲ್ಲಿ ಕಾಣುತ್ತಿದ್ದ ಕನ್ನಡ ನಾಡು ನುಡಿಗಳಿಗೆ ಅನುವಾದ ಪ್ರಕ್ರಿಯೆ ಹೊಸ ಚೈತನ್ಯವನ್ನು ತುಂಬಿದೆ" (ಸಾಲುದೀಪಗಳು, ಲೇ: ಬಿ. ವೆಂಕಟಾಚಾರ್ಯ - ವಿಜಯಾಸುಬ್ಬರಾಜ್, ಕ.ಸಾ.ಅ).

ಪಾಶ್ಚಾತ್ಯರಿಗಿದ್ದ ಮೂಲಧ್ಯೇಯ, ಅವರ ಸಾಹಿತ್ಯದಲ್ಲಿಲ್ಲದ ಸುಖಾಂತ ರೀತಿಯ ನಂಬಿಕೆ. ಏಕೆಂದರೆ ದುಃಖ ಮತ್ತು ವಿನೋದದ ನಡುವೆ ಸುಖಾಂತ ಎಂಬ ಆಧ್ಯಾತ್ಮಿಕ ನಿಲುವಿನ ಪಠ್ಯಗಳ ತಿಳುವಳಿಕೆ ತುಂಬಾ ಕಡಿಮೆ ಇತ್ತು. ನಮ್ಮ ಭಾಷೆಯೊಳಗಿನ ರಾಮಾಯಣ, ಮಹಾಭಾರತಾದಿಗಳನ್ನು ತಮ್ಮ ಸಾಹಿತ್ಯದಲ್ಲಿ ಪ್ರಚಾರವಿದ್ದ ರಮ್ಯವಾದಕ್ಕೆ ತಕ್ಕುದಾಗಿ ಪರಿವರ್ತಿಸಿಕೊಂಡರು. ಅವರ ಸಾಂಸ್ಕೃತಿಕ ಅಪೇಕ್ಷೆಗಳು ಈ ಅನುವಾದಕ್ಕೆ ಮೂಲಪ್ರೇರಣೆ ಆಗಿರುವುದು. ಈ ಬಗೆಯ ಸಾಂಸ್ಕೃತಿಕ ಅಪೇಕ್ಷೆ ಭಾರತೀಯ ವಿದ್ವಾಂಸರಿಗೂ ಇತ್ತು. ಸಂಸ್ಕೃತ ಭಾಷೆಯಲ್ಲಿ ಓದಿ, ಸಂಸ್ಕೃತ ಭಾಷೆಯಲ್ಲಿ ವ್ಯಾಖ್ಯಾನ ಮಾಡಿಕೊಳ್ಳುವ ಒಂದು ಪರಂಪರೆ ಆ ಕಾಲಕ್ಕೆ ಇತ್ತು. ವ್ಯಾಖ್ಯಾನ ಅಥವಾ ಟೀಕು ಪರಂಪರೆ ತುಂಬಾ ಪ್ರಚಲಿತವಾಗಿತ್ತು. ಇದರ ಮುಂದುವರಿಕೆಯಾಗಿ ಅನುವಾದ ಪ್ರಕ್ರಿಯೆ ಬಂದಿದೆಯೆಂದರೆ ತಪ್ಪೇನಿಲ್ಲ. ನಾಟಕಗಳು ಬಹುಪಾಲು ಈ ಪ್ರಕ್ರಿಯೆಯಲ್ಲಿ ಹೆಚ್ಚು ಭಾಗವಹಿಸಿದರು. ಅಂದಿನ ಕಾಲಕ್ಕೆ ಎಲ್ಲಾ ವಿದ್ವಾಂಸರಿಗೂ ಸವಾಲಾದ ಒಂದು ಪ್ರಮುಖಶಕ್ತಿ ನಾಟಕಾನುವಾದ. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಉಕ್ತಿ ೧೮ನೆಯ ಶತಮಾನವನ್ನು ಆಳಿತು ಎಂದರೆ ಅತಿಶಯೋಕ್ತಿಯಲ್ಲ. ಕಾವೇಷು ಎನ್ನುವಲ್ಲಿ ದೃಶ್ಯ, ಶ್ರಾವ್ಯ ಎರಡೂ ಲಕ್ಷ್ಯದಲ್ಲಿದ್ದವು. ಕವಿಕೃತವಾದುದೆಲ್ಲಾ ಕಾವ್ಯವೇ.

"ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯಾ ದೇಶದ ದಕ್ಷಿಣಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ಅದನ್ನು ನೀವು ಅಲಕ್ಷ್ಯ ಮಾಡಿದರೆ, ಮಿಕ್ಕ ಯಾವ ದೇಶದ ಜನರೂ ಅದನ್ನು ಎತ್ತಿ ಹಿಡಿಯಲಾರರು" ಎಂದು ಎ. ಆರ್. ಕೃಷ್ಣಶಾಸ್ತ್ರಿಗಳು ಹೇಳುತ್ತಾರೆ (ಕಿರಿಯರ ವಿಶ್ವಕೋಶ, ಸಂಪುಟ ೫, ಕಲೆ, ಸಾಹಿತ್ಯ). ಮೈಸೂರು ಸಂಸ್ಥಾನದಲ್ಲಿ ಚಿಕ್ಕದೇವರಾಜ

ಒಡೆಯರ ಕಾಲದಲ್ಲಿಯೇ ಸಾಹಿತ್ಯ ಚಟುವಟಿಕೆ ಮೊದಲಾಯಿತು. ಚಿಕ್ಕದೇವರಾಜರ ಪ್ರೇರಣೆಯಿಂದ ತಿರುಮಲಾರ್ಯರು ಹಳಗನ್ನಡ ಗ್ರಂಥಗಳನ್ನು ಸಂಗ್ರಹಿಸಿ, ಪ್ರತಿಗಳನ್ನು ಮಾಡಿದರು. ಸನಾತನ ಧರ್ಮದ ತಿರುಳನ್ನೂ, ಶ್ರೀ ವೈಷ್ಣವ ಮತದ ಸಾರವನ್ನು, ಆಳ್ವಾರ್ ಅವರ ವಾದ್ಯ ಚರಿತ್ರೆಗಳನ್ನೂ ಕನ್ನಡದಲ್ಲಿ ತಿಳಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸಂಸ್ಕೃತ ಸಾಹಿತ್ಯ ಸಮುದ್ರದ ಭಾರತ, ರಾಮಾಯಣ, ಪುರಾಣ ಕಾವ್ಯಗಳನ್ನು ಆಯ್ದು ಕನ್ನಡ ವಚನದಲ್ಲಿ ಕನ್ನಡಿಗರಿಗೆ ಕೊಡುವ ಕಾರ್ಯ ನಡೆಯಿತು. ಚಾಮರಾಜ ಒಡೆಯರ ಕಾಲದಲ್ಲಿ ಸಂಸ್ಕೃತ ಸಾಹಿತ್ಯದ ಸಂಪಾದನೆಯ ಜೊತೆಗೆ ಇಂಗ್ಲೀಶ್ ವಿದ್ಯಾಭ್ಯಾಸದ ಸಂಪರ್ಕ ಉಂಟಾಗಿ ಲೌಕಿಕ ಸಾಹಿತ್ಯ ಕೃತಿಗಳು ಅನುವಾದಿತವಾದವು. ಈ ರೀತಿಯಾಗಿ ಕಾಲದಿಂದ ಕಾಲಕ್ಕೆ ಸಾಹಿತ್ಯ ಪ್ರವಾಹ ತನ್ನ ದಿಕ್ಕನ್ನು ಬದಲಾಯಿಸುತ್ತಲೇ ಇರುತ್ತದೆ. ಈ ಬದಲಾವಣೆ ಹೊಸ ಮಾರ್ಗವೊಂದನ್ನು ಗುರುತಿಸುತ್ತದೆ. ಆ ಬಗೆಯ ಹೊಸ ಹುಟ್ಟಿಗೆ, ಕಾರಣವನ್ನು ಈ ರೀತಿ ಹೇಳಲಾಗಿದೆ.

''ಯಾವುದೇ ಸಾಹಿತ್ಯದ ಇತಿಹಾಸದಲ್ಲಿಯೂ ಕಾಲಕಾಲಕ್ಕೆ ಬರವಣಿಗೆಯ ಸಂಪ್ರದಾಯಗಳು ಬದಲಾಗುವುದು ಒಂದು ಸಾಮಾನ್ಯ ಸಂಗತಿ. ಪ್ರತಿಯೊಂದು ಹೊಸ ಸಂಪ್ರದಾಯವೂ ತನ್ನ ಹಿಂದಿನ ಸಂಪ್ರದಾಯದಲ್ಲಿಯ ಕೆಲವೊಂದು ಗುಣಧರ್ಮಗಳ ಬಗೆಗೆ ಭಿನ್ನಾಭಿಪ್ರಾಯ ತಳೆದು, ಅದಕ್ಕೆ ಪ್ರತಿಯಾಗಿ ಪ್ರತಿಭಟನೆಯಾಗಿ ಆರಂಭವಾಗುತ್ತದೆ. ಚಳುವಳಿಯಾಗಿ ಬೆಳೆಯುತ್ತದೆ. ಕೊನೆಗೆ ತಾನೂ ಒಂದು ಸಂಪ್ರದಾಯವಾಗಿ ಸ್ಥಾಪಿತವಾಗಿ ಅದರಲ್ಲಿ ಸಾಕಷ್ಟು ಪ್ರಮಾಣದ ಕೃತಿ ರಚನೆ ನಡೆದ ಮೇಲೆ ಅದರದೇ ಆದ ಒಂದು ಸಿದ್ಧ ಮಾರ್ಗ ನಿರ್ಮಾಣವಾಗುತ್ತದೆ. ಅದಕ್ಕೆ ವಿಶಿಷ್ಟವಾದ ವಸ್ತುಗಳು, ಶೈಲಿ, ಧೋರಣೆಗಳು ಹುಟ್ಟಿಕೊಳ್ಳುತ್ತವೆ. ಇಷ್ಟಾದ ಮೇಲೆ ವ್ಯಾಪಕವಾದ ಅನುಕರಣೆ ನಡೆದು ಸಾಹಿತ್ಯ ಜಾಡುಬಿದ್ದ ಹಾದಿಯಾಗುತ್ತದೆ. ಆ ಸಂಪ್ರದಾಯ ಹುಟ್ಟಿಕೊಳ್ಳುವಾಗ ಹೊಸದಾಗಿ ಗೋಚರಿಸಿದ್ದ ಬದುಕಿನ ಹಾಗೂ ಅಭಿವ್ಯಕ್ತಿಯ ಹೊಸ ಅವಕಾಶಗಳು ಮುಗಿದುಹೋಗಿ ಚರ್ವಿತಚರ್ವಣಕ್ಕೆ ಆರಂಭವಾಗುತ್ತದೆ. ಆಗ ಈ ಸಂಪ್ರದಾಯದ ದೌರ್ಬಲ್ಯಗಳೂ ಕೂಡ ಬಯಲಿಗೆ ಬೀಳುತ್ತವೆ. ಇಂತಹ ದೌರ್ಬಲ್ಯಗಳ ವಿರುದ್ಧ ಮತ್ತೆ ಅಸಮಾಧಾನ, ಪ್ರತಿಭಟನೆ ಆರಂಭವಾಗಿ ಇನ್ನೊಂದು ಹೊಸ ಮಾರ್ಗದ ಅನ್ವೇಷಣೆ ಆರಂಭವಾಗುತ್ತದೆ'' ( ಗಿರಡ್ಡಿ ಗೋವಿಂದ ರಾಜ ೧೯೮೧; ಪು.೯)

ಈ ಎಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ಕಾವ್ಯ ತನ್ನ ವೈಚಾರಿಕತೆಯನ್ನು ಬೆಳೆಸಿಕೊಳ್ಳುತ್ತದೆ. ಜೊತೆಗೆ ನೀತಿನಿಷ್ಠವಾಗಿರುತ್ತದೆ. ಅರ್ಥಾತ್ ಜೀವನ ಮೌಲ್ಯಗಳ ಪ್ರಜ್ಞೆ ಮತ್ತು ಪ್ರಶ್ನೆ, ಸಾಮಾಜಿಕ ಹೊಣೆಗಾರಿಕೆಯ ಪ್ರಸಕ್ತಿಯೆಡೆಯಲ್ಲಿ ಕಾವ್ಯ ನಿರೂಪಿತವಾಗಿರುತ್ತದೆ. ಪ್ರಸ್ತುತ ಅನುವಾದ ಪ್ರಕ್ರಿಯೆಯೂ ಕೂಡ ವಸಾಹತುಶಾಹಿ ರಾಜಕಾರಣದಲ್ಲಿಯೂ ಕೂಡ ಒಂದು ಸ್ಪಷ್ಟಸಾಹಿತ್ಯವಾಗಿಮೂಡಿಬಂದಿದೆ. ಜೀವನಮೌಲ್ಯಗಳ ಪ್ರಜ್ಞೆ ಮತ್ತು ಪ್ರಶ್ನೆಯನ್ನು ಸಾಹಿತ್ಯಿಕವಾಗಿ ಎತ್ತಿಕೊಂಡು ಸಾಮಾಜಿಕ ಹೊಣೆಗಾರಿಕೆಯಡಿಯಲ್ಲಿ ರಂಗನಾಟಕ ಸಂಪ್ರದಾಯವನ್ನು ಹುಟ್ಟುಹಾಕಿದೆ. ಈ ಅನುವಾದ ಪ್ರಜ್ಞೆಯು ವಸಾಹತುಶಾಹಿ ಆಡಳಿತವನ್ನು ತನ್ನ ವ್ಯಾಪ್ತಿಯಲ್ಲಿ ತೊಡಗಿಸಿಕೊಂಡ ಅದ್ಭುತ ಪರಿಕಲ್ಪನೆಯಾಗಿ ಮೂಡಿಬಂದಿದೆ.

## ೨. ವಸಾಹತುಶಾಹಿ ಸಂದರ್ಭ :

ವಸಾಹತುಶಾಹಿ ಕಾಲಘಟ್ಟವೆಂದರೆ ಸಂಕ್ರಮಣಕಾಲ. ಪ್ರತಿಯೊಂದು ಕ್ಷೇತ್ರ ಸವಾಲನ್ನು ಎದುರಿಸುತ್ತಿದ್ದು, ಆ ಸವಾಲನ್ನು ಸ್ವೀಕರಿಸುವ ಜೊತೆಗೆ ಪಾಟಿ ಸವಾಲನ್ನು ಒಡ್ಡುವ ಮನೋಭಾವ ಎದ್ದು ತೋರುತ್ತಿತ್ತು. ಪ್ರತಿಯೊಂದು ಕ್ಷೇತ್ರದಲ್ಲಿ ಉಂಟಾದ ಈ ಪಲ್ಲಟಗಳು ಅನುವಾದದ ಪರಿಕಲ್ಪನೆಗೆ ಹೇಗೆ ಇಂಬುಕೊಟ್ಟವು ಎಂಬುದು ಚರ್ಚೆಯ ವಿಷಯವಾಗಿದೆ. ವಸಾಹತುಶಾಹಿ ಸಂದರ್ಭದ ಫ್ರೆಂಚ್, ಡಚ್ ಮತ್ತು ವಸಾಹತುಶಾಹಿಗಳ ಆಕ್ರಮಣ ಉಂಟುಮಾಡಿದ ಪರಿಣಾಮಗಳಿಂದಾಗಿ ಜನರ ದೃಷ್ಟಿಕೋನದಲ್ಲಿ ಬದಲಾವಣೆ ಕಂಡುಬಂದಿತು. ರಾಜಕಾರಣದ ಏಳ್ಗೆ ಮತ್ತು ಅನುಕೂಲಕ್ಕೆ ತಕ್ಕಂತೆ ಹೊಸ ಅಗತ್ಯಗಳನ್ನು ಸೃಷ್ಟಿಸಲಾಯಿತು ಮತ್ತು ಹಳೆಯ ಅಗತ್ಯಗಳನ್ನು ಅಪ್ರಸ್ತುತಗೊಳಿಸಲಾಯಿತು. ಮುದ್ರಣ, ಶಿಕ್ಷಣ, ವೃತ್ತ ಪತ್ರಿಕೆ ಇವುಗಳಿಂದಾದ ಕ್ರಾಂತಿಯೂ ಅಪೂರ್ವ ಸಾಹಿತ್ಯ ಬದಲಾವಣೆಗೆ ನಾಂದಿಯಾಯಿತು. ವಿದೇಶಿ ಸಂಸ್ಕೃತಿ ಮೋಡಿಗೆ ಸಿಲುಕಿದ ಸಾಮಾನ್ಯ ಭಾರತೀಯನಿಗೆ ಪಾಶ್ಚಾತ್ಯ ವಿಚಾರಧಾರೆಯ ಮೂಲಕ ಹೊಸ ಬಗೆಯ ಚಿಂತನೆಗಳು ಎದುರಾದವು. ಕ್ರಿಸ್ತಮತವನ್ನು ಜಗತ್ತಿನಾದ್ಯಂತ ಹರಡುವ ಸನ್ನಾಹದಲ್ಲಿ ಅನೇಕ ಮಿಷನರಿಗಳು ಭಾರತಕ್ಕೆ ಬಂದವು. ಕರ್ನಾಟಕದಲ್ಲಿಯೂ 'ಜೆಸುಯಿಟ್ ಸೊಸೈಟಿ', 'ಲಂಡನ್ ಮಿಷನ್', 'ವೆಸ್ಲೆಯನ್ ಮೆಥಾಡಿಸ್ಟ್ ಮಿಷನ್' ಹಾಗೂ 'ಜರ್ಮನ್ ಇವ್ಯಾಂಜೆಲಿಕಲ್' (ಬಾಸೆಲ್) ಮಿಷನ್ ಮೊದಲಾದ ಮಿಷನರಿಗಳು ಕಾರ್ಯ ಪ್ರವೃತ್ತವಾದವು. ಕ್ರೈಸ್ತ ಮತದ ಪ್ರಚಾರ ಹಾಗೂ ಮತಾಂತರಗಳು ಅನೇಕ ಬಗೆಯ ಹೊಸ ಚಿಂತನೆಗೆ ಭಾರತೀಯರನ್ನು ಈಡುಮಾಡಿದವು. ಮತತತ್ವದ ಪ್ರಸಾರಕ್ಕಾಗಿ ಪ್ರಾರಂಭವಾದ ಶಾಲೆಗಳಲ್ಲಿ ಭಾರತೀಯರಿಗೆ ಶಿಕ್ಷಣ ದೊರೆಯಿತು. ಹಳ್ಳಿಗಳಲ್ಲೂ ಈ ಬಗೆಯ ಆಧುನಿಕ ಶಿಕ್ಷಣ ದೊರೆಯಿತು. ಈ ಬಗೆಯ ಶಿಕ್ಷಣದ ವ್ಯವಸ್ಥೆ ಧಾರ್ಮಿಕ ,ಸಾಮಾಜಿಕ ವಲಯಗಳಲ್ಲಿ ಉದ್ವಿಗ್ನತೆಯನ್ನು ಸೃಷ್ಟಿಸಿತು. ಈ ಉದ್ವಿಗ್ನತೆ ಭಾರತೀಯರಲ್ಲಿ ಹಿಂದೂ ಧರ್ಮದ ಪ್ರಸ್ತುತತೆಯನ್ನು ಪ್ರಶ್ನಿಸುವಂತೆ ಮಾಡಿತು. ಒಂದೆಡೆ ಪಾಶ್ಚಾತ್ಯ ವಿಷಯಗಳ ಹೊಸ ಬೆಳಕು ಇನ್ನೊಂದೆಡೆ ಸ್ವಮತ ಪ್ರಚಾರದ ರಭಸದಲ್ಲಿ ಮಿಷನರಿಗಳಿಂದ ಹಿಂದೂ ಧರ್ಮದ ಮೇಲಾದ ಆಘಾತ ಮತ್ತು ಸ್ವಧರ್ಮ, ಸ್ವದೇಶ ಕುರಿತು ಜನ್ಮ ಜಾತ ಅಭಿಮಾನ ಈ ಮೂರು ಸೆಳೆತಗಳಲ್ಲಿ ಭಾರತೀಯರು ತೊಳಲಾಡುತ್ತಿದ್ದರು.

ಔದ್ಯೋಗೀಕರಣದ ತಂತ್ರದಿಂದಾಗಿ ಸಂಪರ್ಕಜಾಲ ಒದಗಿಬಂದಿತು. ಈ ಸನ್ನಿವೇಶದಲ್ಲಿ ಮುದ್ರಣ ಯಂತ್ರವು ಪ್ರಚಾರಗೊಳಿಸಲ್ಪಟ್ಟಿತು. ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಪಾಶ್ಚಾತ್ಯ ವೈಚಾರಿಕತೆಗೆ ಭಾರತೀಯರು ಮಾರುಹೋದರು. ಮೊದಲಿನ ಶತಮಾನಗಳಂತೆಯೇ ಏಕಚಕ್ರಾಧಿಪತ್ಯದಡಿಯಲ್ಲಿ ಒಂದು ರಾಜ್ಯವಿರಲಿಲ್ಲ. ಅಳಿದುಳಿದ ರಾಜಮನೆತನಗಳು, ಬ್ರಿಟಿಶ್ ಆಳ್ವಿಕೆ ಅಡಿಯಲ್ಲಿ ಆಡಳಿತ ನಡೆಸುವುದು ಸರ್ವೇಸಾಮಾನ್ಯ ದೃಶ್ಯವಾಗಿತ್ತು. ರಾಜಾಶ್ರಯದ ನೆರಳಿನಲ್ಲಿಯೇ ಬೆಳೆದುಕೊಂಡು ಬಂದ ಆ ಕಾಲದ ಜನರಿಗೆ ಮೈಸೂರು ಸಂಸ್ಥಾನವೊಂದು ಮಾರ್ಗವಾಗಿ ತೋರಿತು. ಕ್ರಿ.ಶ. ೧೮೧೮ರಲ್ಲಿ ಬ್ರಿಟಿಶರು ಮಹಾರಾಷ್ಟ್ರ, ತಂಜಾವೂರುಗಳನ್ನು ಆಕ್ರಮಿಸಿಕೊಂಡಾಗ ವಿದ್ವಾಂಸರುಗಳು ಮೈಸೂರಿಗೆ ವಲಸೆ ಬಂದರು. ವಿದ್ವಾಂಸರಿಗೆ ಆಶ್ರಯ ನೀಡುವುದು ಆಸ್ಥಾನದ ಹೆಮ್ಮೆಯ ವಿಷಯವಾಗಿತ್ತು. ಹಾಗಾಗಿ

ಮೈಸೂರು ಸಂಸ್ಥಾನದಲ್ಲಿ ಪಂಡಿತ ವರ್ಗವೊಂದು ನಿರ್ಮಾಣವಾಗಿತ್ತು. ಮೂಲತಃ ಸಂಸ್ಕೃತ ಪಾಂಡಿತ್ಯ ಈ ವರ್ಗದ ಶಿಕ್ಷಣವಾದ್ದರಿಂದ ಸಂಸ್ಕೃತ ಗ್ರಂಥಗಳ ಸಂಪಾದನಾ ಕಾರ್ಯ, ಅನುವಾದ ಕಾರ್ಯ ನಡೆಯಿತು. ಆ ಕಾಲದಲ್ಲಿ ಧಾರ್ಮಿಕ ಶಿಕ್ಷಣವೇ ಪ್ರಮುಖ ಅಧ್ಯಯನ ವಸ್ತುವಾಗಿತ್ತು. ಚಾಮರಾಜ ಒಡೆಯರು ಕ್ರಿ.ಶ. ೧೮೮೧ರಲ್ಲಿ ಅಧಿಕಾರ ಸ್ವೀಕರಿಸಿದಾಗಿನಿಂದ ಮೈಸೂರು ಸಂಸ್ಥಾನದ ಶೈಕ್ಷಣಿಕ ಪ್ರಗತಿ ಉಚ್ಛ ಸ್ಥರದ್ದಾಯಿತು. ವಸಾಹತುಶಾಹಿ ಮತ್ತು ಮೈಸೂರು ಸಂಸ್ಥಾನಗಳೆರಡರಿಂದಲೂ ಶೈಕ್ಷಣಿಕವಾಗಿ ಪ್ರೋತ್ಸಾಹ ದೊರೆತುದರಿಂದ ಮೈಸೂರು ಪ್ರಾಂತ್ಯದಲ್ಲಿ ಬಹುಬಗೆಯಾದ ಅನುವಾದಗಳು ಬಂದಿವೆ. ಇದರಿಂದ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಶಿಕ್ಷಣಕ್ಕೆ ಹೆಚ್ಚಿನ ಆಸ್ಪದ ದೊರೆಯಿತು. ಸಂಸ್ಕೃತ , ಕನ್ನಡ ಭಾಷೆಗಳ ಅಭಿವೃದ್ಧಿಗಾಗಿ ೧೮೮೬ರಲ್ಲಿ 'ಕರ್ನಾಟಕ ಭಾಷೋಜ್ಜೀವಿನಿ ಸಭಾ' ಮತ್ತು ೧೮೯೮ರಲ್ಲಿ ಬೆಂಗಳೂರಿನಲ್ಲಿ ಸಂಸ್ಕೃತ ವಿದ್ಯಾಲಯ ಪ್ರಾರಂಭವಾದವು. ಕ್ರಿ.ಶ. ೧೮೭೬ರಿಂದ ಮೈಸೂರಿನಲ್ಲಿ ಕಾವ್ಯ ಹಾಗೂ ಮತಧರ್ಮಗಳ ಶಾಸ್ತ್ರಾಭ್ಯಾಸ ಜಾರಿಯಲ್ಲಿತ್ತು. ಕ್ರಿ.ಶ. ೧೮೮೨ರಲ್ಲಿ ಓರಿಯೆಂಟಲ್ ಲೈಬ್ರರಿ ಮತ್ತು ೧೮೪೪ರಲ್ಲಿ ಪ್ರಾಚ್ಯವಸ್ತು ಸಂಶೋಧನಾ ಕಾರ್ಯಾಲಯಗಳು ಸ್ಥಾಪನೆಯಾದವು. ಇವುಗಳಿಂದ ಆ ಕಾಲಕ್ಕೆ ಸಂಸ್ಕೃತ ಶಿಕ್ಷಣದ ಅಗತ್ಯತೆ ಹಾಗೂ ಅದಕ್ಕೆ ದೊರೆತ ಪ್ರೋತ್ಸಾಹಗಳು ಗಮನಕ್ಕೆ ಬರುತ್ತವೆ. ೧೮೪೨ರಲ್ಲಿ ಬೆಂಗಳೂರಿನಲ್ಲಿ ಸರ್ಕಾರದ ವತಿಯಿಂದ ಕಲ್ಲಚ್ಚಿನ ಮುದ್ರಣಾಲಯ ಆರಂಭಗೊಂಡಿತು. ಮೈಸೂರಿನಲ್ಲೂ ಅದರ ಒಂದು ಶಾಖೆ ಮುಂದುವರೆಯಿತು. ಜೊತೆಗೆ ಮೈಸೂರಿನಲ್ಲಿ ಖಾಸಗಿಯವರು ಮುದ್ರಣಾಲಯಗಳನ್ನು ಸ್ಥಾಪಿಸಿದರು. ವಿದೇಶಿಯರಿಗಿಂತ ಮೊದಲೇ ಬಣ್ಣದ ಮುದ್ರಣವನ್ನು ಅಭಿವೃದ್ಧಿಪಡಿಸಿ, ಸಂಸ್ಕೃತ ಕೃತಿಗಳು ಕನ್ನಡ ರೂಪ ಪಡೆಯಲು ಕಾರಣೀಭೂತರಾದರು. ಸಾಹಿತ್ಯ ಪ್ರವಾಹಕ್ಕೆ ಪತ್ರಿಕೆಯ ಅವಶ್ಯಕತೆಯನ್ನು ಕಂಡುಕೊಂಡರು. ಅಷ್ಟು ಮಾತ್ರವಲ್ಲದೆ ಕಾವ್ಯಗಳನ್ನು ಧಾರಾವಾಹಿಯಾಗಿ ಕೊಡಬಹುದು ಎಂಬುದನ್ನು ಅರಿತು ಪತ್ರಿಕೆಗಳನ್ನು ಪ್ರಾರಂಭಿಸಿದರು. ಕರ್ನಾಟಕ ಕಾವ್ಯ ಮಂಜರಿಯನ್ನು ೧೮೯೨ರಲ್ಲಿ ಈ ಉದ್ದೇಶಕ್ಕಾಗಿ ತರಲಾಯಿತು. '' ಕರ್ನಾಟಕ ಗ್ರಂಥ ಮಾಲಾ''ವನ್ನು ಇಂಗ್ಲೀಶ್, ಬಂಗಾಲಿ, ಸಂಸ್ಕೃತ ಗ್ರಂಥಗಳ, ಅನುವಾದಗಳ ಪ್ರಕಟಣೆಗಾಗಿ ತರಲಾಯಿತು. ಮೈಸೂರು ಸಂಸ್ಥಾನದ ಹಿರಿಯ ಅಧಿಕಾರಿಗಳಾಗಿದ್ದ ಎಂ. ಶಾಮರಾಯ್ 'ವಿದ್ಯಾದಾಯಿನಿ' ಪತ್ರಿಕೆಯನ್ನು ಸಾಹಿತ್ಯಿಕ ಸೇವೆಗಾಗಿಯೇ ಪ್ರಾರಂಭಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯುರು ಆಡಳಿತದ ಜವಾಬ್ದಾರಿಯಿಲ್ಲದಿರುವುದರಿಂದ ಸಾಹಿತ್ಯ ಕಲೆಗಳ ಅಭಿವೃದ್ಧಿಗೆ ಹೆಚ್ಚಿನ ಗಮನ ನೀಡುವಂತಾಯಿತು.

ಮುಂಬೈ ಕರ್ನಾಟಕದ ಪ್ರದೇಶವಂತೂ ಮರಾಠ ಪ್ರದೇಶವಾಗಿತ್ತು. ಕ್ರಿ.ಶ. ೧೮೨೫ರಲ್ಲಿ ಮುಂಬೈ ನಗರದಲ್ಲಿ ಶಿಕ್ಷಣ ಇಲಾಖೆ ಪ್ರಾರಂಭವಾಯಿತು. ಶೈಕ್ಷಣಿಕ ಕಾರ್ಯಕ್ಕಾಗಿ ಮುಂಬೈ, ಪೂಣೆಗೆ ಹೋಗಬೇಕಾಗಿತ್ತು. ೧೮೫೬ರಲ್ಲಿ ಬೆಳಗಾವಿಯಲ್ಲಿ ಸ್ಥಾಪಿತವಾದ ನಾರ್ಮಲ್ ಸ್ಕೂಲ್ ೧೮೬೧ರಲ್ಲಿ ಧಾರವಾಡದಲ್ಲಿ ಸ್ಥಾಪನೆಗೊಂಡ ಟ್ರೈನಿಂಗ್ ಕಾಲೇಜಿನಿಂದಾಗಿ ಕನ್ನಡಮಯ ಪರಿಸರವೊಂದು ಕಂಡು ಬಂದಿತು. ರಸೆಲ್, ಜೆ.ಪಿ. ಫ್ಲೀಟ್, ರೆವರೆಂಡ್ ಎಫ್. ಕಿಟಲ್, ಫಾದರ್ ಸಿವೆಲ್, ಮೋಗ್ಲಿಂಗ್, ಬಿ.ಎಲ್. ರೈಸ್ ಮೊದಲಾದವರು ಕನ್ನಡ ಪರ ಚಳುವಳಿಯಲ್ಲಿ ಪಾಲ್ಗೊಂಡರು. ಮುಂಬೈ ಗೌವರನರ್ ಆಗಿದ್ದ

ಎಲ್ಫಿನ್‌ಸ್ಟೆನ್ ಬಾಂಬೆ ಎಜ್ಯುಕೇಷನ್ ಸೊಸೈಟಿ ಮತ್ತು ನೇಟಿವ್ ಸ್ಕೂಲ್ ಎಂಡ್ ಬುಕ್ ಸೊಸೈಟಿಗಳ ಮೂಲಕ ಪಠ್ಯಪುಸ್ತಕಗಳನ್ನು ಮುದ್ರಿಸುವ ಕಾರ್ಯ ಪ್ರಾರಂಭವಾಯಿತು. ಧುಂಡೋ ನರಸಿಂಹ ಮುಳಬಾಗಲ ಮೊದಲಾದವರು ಈ ಕಾರ್ಯಕ್ಕಾಗಿಯೇ ಸಂಸ್ಕೃತ ಕೃತಿಗಳ ಅನುವಾದವನ್ನು ಹುಟ್ಟುಹಾಕಿದರು. ಅಂದಿನ ಕನ್ನಡ ಭಾಷೆಯ, ಅದರಲ್ಲೂ ಶಾಲೆಗಳಲ್ಲಿರುವ ಹದಗೆಟ್ಟ ವಾತಾವರಣವನ್ನು ಕುರಿತು ದ.ರಾ.ಬೇಂದ್ರೆಯವರು ಈ ರೀತಿ ಹೇಳಿದ್ದಾರೆ '' ಇದ್ದ ಕನ್ನಡ ಪುಸ್ತಕಗಳು ಹರುಕು ಮುರುಕು ಕನ್ನಡದಲ್ಲಿದ್ದವು. ಹೊಸದಾಗಿ ಕನ್ನಡದಲ್ಲಿ ಪುಸ್ತಕಗಳು ಭಾಷಾಂತರವಾಗಬೇಕೆಂದು ಒಬ್ಬ ಕನ್ನಡ ಮನುಷ್ಯನನ್ನೇ ನೇಮಿಸಲಾಯಿತು. ಆದರೂ ರಸೆಲ್‌ರ ಪ್ರಯತ್ನದಿಂದ ಕನ್ನಡ ಜನರೂ ಸಿಕ್ಕರು. ಕನ್ನಡದಲ್ಲಿ ಪುಸ್ತಕಗಳನ್ನು ಬರೆಸಿದುದು ಆಯಿತು. ಮುದ್ರಣಕ್ಕಾಗಿ ೧೮೮೫ರಲ್ಲಿ ಕನ್ನಡ ಮುದ್ರಣಾಲಯವೊಂದು ಸ್ಥಾಪಿತವಾಯಿತು. ೧೮೮೦ ರವರೆಗೆ ಪ್ರತಿಯೊಂದು ಹಳ್ಳಿಯಲ್ಲಿಯೂ ವೀರಶೈವರದೊಂದು ಶಾಲೆಯು ಕಣ್ಣಿಗೆ ಬೀಳುತಿತ್ತು, ಅದಕ್ಕೂ ಮೊದಲು ಅಂದರೆ ೧೮೬೦ ರವರೆಗೆ ಪ್ರತಿಯೊಂದು ವೀರಶೈವ ಮಠವು ಶಾಲೆಯೇ ಆಗಿರುತ್ತಿತ್ತು.

ಕ್ರಿ.ಶ. ೧೮೬೧ರಲ್ಲಿ ಸ್ಥಾಪನೆಗೊಂಡ ಟ್ರೈನಿಂಗ್ ಕಾಲೇಜಿನಲ್ಲಿ ಅಧ್ಯಯನ ಕೈಗೊಂಡ ಕೆಲ ಕನ್ನಡ ಚಿಂತಕರು ಕ್ರಿ.ಶ. ೧೮೯೦ರಲ್ಲಿ ಕನ್ನಡ ನಾಡು-ನುಡಿ ಸಂಸ್ಕೃತಿಗಳನ್ನು ಪ್ರತೀಕವಾಗಿ ವಿದ್ಯಾವರ್ಧಕ ಸಂಘವನ್ನು ಅಸ್ತಿತ್ವಕ್ಕೆ ತಂದರು. ಅದರ ಧೇಯೋದ್ದೇಶಗಳು ಈ ರೀತಿಯಾಗಿದ್ದವು;

೧) ಕನ್ನಡವನ್ನು ಸಾರ್ವಜನಿಕ ಸಭೆಗಳಲ್ಲಿ ಮಾತನಾಡುವುದಕ್ಕೆ ಉತ್ತೇಜನವನ್ನು ಕೊಡುವುದು.
೨) ಕನ್ನಡದಲ್ಲಿ ಗ್ರಂಥಗಳನ್ನು ಹೊಸದಾಗಿ ಬರೆದು, ಬೇರೆ ಭಾಷೆಯಿಂದ ಪರಿವರ್ತಿಸಿ, ಪ್ರಾಚೀನ ಗ್ರಂಥಗಳನ್ನು ಪರಿಶೋಧಿಸಿ ಪ್ರಕಟಿಸುವುದು.
೩) ಈ ಕೆಲಸವನ್ನು ಮಾಡುವಂತಹ ವಿದ್ವಾಂಸರಿಗೆ ಸಹಾಯ ಮಾಡುವುದು.
೪) ಇವೆಲ್ಲಾ ಕಾರ್ಯಗಳಿಗೆ ಸಹಾಯಕವಾಗುವಂತೆ ಸಂಘದಿಂದ ಒಂದು ನಿಯತಕಾಲಿಕೆಯನ್ನು ಪ್ರಕಟಿಸುವುದು.

ಸಂಘವು ೧೮೯೬ರಲ್ಲಿ 'ವಾಗ್ಭೂಷಣ ' ಪತ್ರಿಕೆ ಪ್ರಾರಂಭಿಸಿತು, ಅನೇಕ ಜನ ಲೇಖಕರನ್ನು ತಯಾರುಮಾಡಿತು. ಲೇಖಕರ ಕೃತಿಗಳನ್ನು ಧಾರಾವಾಹಿಯಾಗಿ ಪ್ರಕಟಿಸುವುದಲ್ಲದೇ, ಸ್ವತಂತ್ರವಾಗಿಯೂ ಪುಸ್ತಕ ಪ್ರಕಟಣೆ ಕೈಗೆತ್ತಿಕೊಂಡಿತು. ಅನೇಕ ಜನ ಲೇಖಕರು ಆ ಕಾಲದ ಒಂದು ಟ್ರೆಂಡ್ ಎನ್ನುವಂತೆ ಅನುವಾದದ ಕಾರ್ಯವನ್ನು ಕೈಗೆತ್ತಿಕೊಂಡರು. ಪಠ್ಯ ಪುಸ್ತಕಕ್ಕಾಗಿ ಪತ್ರಿಕೆಯ ಲೇಖನಕ್ಕಾಗಿ ಈ ಕ್ರಿಯೆ ಚುರುಕುಗೊಂಡಿತು. ಹೀಗೆ ಆ ಕಾಲದ ಸಾಂಸ್ಕೃತಿಕ ಪರಿಸರ, ಅನುವಾದ ಪ್ರಕ್ರಿಯೆಯನ್ನು ಹುಟ್ಟು ಹಾಕುವುದರೊಂದಿಗೆ ಪೋಷಿಸಿಕೊಂಡು ಬಂದಿತು.

ವಸಾಹತುರಾಜಕಾರಣದಿಂದ ಮುಂಬೈ, ಕಲ್ಕತ್ತಾ, ಮದ್ರಾಸ್‌ಗಳಲ್ಲಿ ಕ್ರಿ.ಶ. ೧೮೫೭ರಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿತವಾದವು. ಪೌರ್ವಾತ್ಯ ವಿದ್ಯೆ ಕಲಿಯುವುದಕ್ಕಾಗಿರುವ ಕೇಂದ್ರಗಳಲ್ಲಿನ ಪಾರಂಪರಿಕ ಶಿಕ್ಷಣಕ್ಕೆ ಪೂರಕ ಹಾಗೂ ಪ್ರೇರಕ ವಿಷಯವಾಯಿತು. ಇದರಿಂದಾಗಿ ಅಂದು ಸಂಸ್ಕೃತ

ಭಾಷಾ ಶಿಕ್ಷಣ ಕಡ್ಡಾಯವೆಂಬ ರೀತಿಯಲ್ಲಿ ಕಾಣಬರುತ್ತದೆ. ಕನ್ನಡಕ್ಕೆ ಕೃತಿಯೊಂದನ್ನು ತರುವುದು ಸಾಹಿತ್ಯ ಸೇವೆ ಎಂಬ ಭಾವದಿಂದ ಅನೇಕ ಅನುವಾದಗಳು ಬಂದಿವೆ. ಸರ್ಕಾರವೇ ಶಿಕ್ಷಣದ ಹೊರೆ ವಹಿಸಿಕೊಂಡಿರುವುದರಿಂದ ಪಠ್ಯ ಪುಸ್ತಕಗಳಿಗಾಗಿ ಅನುವಾದಗಳನ್ನು ಲೇಖಕರಿಂದ ಬರೆಯಿಸಿ ಕೊಳ್ಳಲಾಗುತ್ತಿತ್ತು. 'ಕನ್ನಡ ಟ್ರಾನ್ಸ್‌ಲೇಟರ್ ಎಕ್ಸಿಬಿಶನರ್' ಕಛೇರಿಯು ಅಸ್ಥಿತ್ವಕ್ಕೆ ಬಂದಿತ್ತು. ಒಂದು ಸುಭದ್ರ ಕೋಟೆಯೊಳಗಡೆಯ ಆಸ್ಥಾನ ಪಂಡಿತರ ವಾಗ್ವೈಖರಿಯ ಪ್ರದರ್ಶನದ ಅಖಾಡಕ್ಕೂ, ಹೊರನಾಡಿನ ಜನರಿಂದ ಆಕ್ರಮಣಕ್ಕೊಳಗಾಗಿ ಹೀನಾಯ ಪರಿಸ್ಥಿತಿ ಎದುರಿಸುವ ಹಾಗೂ ಆ ಕಿಚ್ಚಿನಿಂದ ಕಾರ್ಯ ಪ್ರವೃತ್ತರಾದ ಚಳುವಳಿಕಾರರಿಗೂ ಭಿನ್ನ ಸಾಂಸ್ಕೃತಿಕ ಪರಿಸರವಿದೆ. ಇಂತಹ ಭಿನ್ನ ಪರಿಸರದಲ್ಲಿ ರೂಪುಗೊಂಡ ಅನುವಾದ ಪ್ರಕ್ರಿಯೆಯು ಅವರದೇ ಆದ ಸಾಂಸ್ಕೃತಿಕ ಪರಿಸರದೊಡನೆ ತಾದಾತ್ಮ್ಯವನ್ನಿಟ್ಟುಕೊಂಡಿತ್ತು. ಮಂಗಳೂರು ಈ ಬಗೆಯ ಚಟುವಟಿಕೆಯಿಂದ ದೂರ ಉಳಿಯಿತು. ಈ ಪ್ರದೇಶದ ಜನತೆಯು ಯಕ್ಷಗಾನವನ್ನು ಅಭಿವ್ಯಕ್ತಿಯ ಮಾಧ್ಯಮವಾಗಿ ಮಾಡಿಕೊಂಡಿತು. ಈ ವೇಳೆಗಾಗಲೇ ಯಕ್ಷಗಾನದ ಸ್ವರೂಪವೊಂದು ನಿರ್ಧಾರವಾಗಿತ್ತು. ಪೌರಾಣಿಕ, ಐತಿಹಾಸಿಕ, ಕಥಾನಕಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಯಕ್ಷಗಾನ ರಚನೆಯಾಯಿತೇ ವಿನಃ ಸಾಹಿತ್ಯ ಕೃತಿಯೊಂದು ರಚನೆಯಾಗದಿರುವುದೊಂದು ವಿಶೇಷ.ಒಟ್ಟಿನಲ್ಲಿ ವಸಾಹತುಶಾಹಿ ಆಡಳಿತವು ಕನ್ನಡ ಸಾಹಿತ್ಯಕ್ಕೆ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯದ ತ್ರಿವೇಣಿ ಸಂಗಮಕ್ಕೆ ಕ್ರೈಸ್ತ ಧರ್ಮವನ್ನು ಸೇರಿಸಿತು. ಪಾಶ್ಚಾತ್ಯ ರೋಮಾಂಟಿಕ್ ವಾದವನ್ನು ಓದಿದ ಜನ ಕಾಳಿದಾಸನನ್ನು ಮರುಚಿಂತನೆಗೆ ತೊಡಗಿಸುವುದು ಆಶ್ಚರ್ಯವೇನಲ್ಲ. ಮತ-ಧರ್ಮದ ಆವರಣದಲ್ಲಿ ಬೆಳೆದುಬಂದಿದ್ದ ಭಾರತೀಯನ ಸಮಷ್ಟಿ ಪ್ರಜ್ಞೆ ಲೌಕಿಕವಾದ ವ್ಯಷ್ಟಿ ಪ್ರಜ್ಞೆಯಾಗಿ ಸಂಕ್ರಮಣಗೊಂಡಿತು.

ಫ್ರೆಂಚ್, ಡಚ್‌ರಿಂದಲೇ ಆರಂಭಗೊಂಡ ಅನುವಾದ ಪ್ರಕ್ರಿಯೆ ಬ್ರಿಟೀಶ್ ವಸಾಹತು ಕಾಲಘಟ್ಟದಲ್ಲಿ ಚುರುಕುಗೊಂಡಿತು. ರಾಜಕಾರಣದ ನಿರ್ವಹಣೆಗೆ ಭಾರತೀಯ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳುವುದು ಅನಿವಾರ್ಯವಾಗಿತ್ತು. ಅರ್ಥೈಸುವಿಕೆಯನ್ನು ಹಲವಾರು ವಿದಥ ಯೋಜನೆಗಳಿಗೆ ಅನುಗುಣವಾಗಿ ನಡೆಸಿಕೊಂಡು ಬಂದ ಬ್ರಿಟೀಶ್ ಸರ್ಕಾರ ಶಿಕ್ಷಣ ಮಾಧ್ಯಮವನ್ನು ಈ ಕಾರ್ಯಕ್ಕೆ ಅತ್ಯುತ್ತಮವಾದ ಮಾಧ್ಯಮವನ್ನಾಗಿಮಾಡಿಕೊಂಡಿತು. ಭಾರತೀಯ ಸಾಹಿತ್ಯ ಸಂಸ್ಕೃತಿಗಳನ್ನು ತಿಳಿಯುವುದಕ್ಕಾಗಿ ಸಂಸ್ಕೃತ ಸಾಹಿತ್ಯದ ಅಧ್ಯಯನವನ್ನು ಕೈಗೊಂಡರು. ಪ್ರಾಚ್ಯವಸ್ತು ಹಾಗೂ ಗ್ರಂಥಗಳ ಅನ್ವೇಷಣೆ ಪರಿಷ್ಕರಣೆ ಕಾರ್ಯಗಳು ತ್ವರಿತಗತಿಯಲ್ಲಿ ಜರುಗಿದವು. ೧೭೮೫ರಲ್ಲಿ ಚಾರ್ಲ್ಸ್ ವಿಲ್ಕಿನ್ಸ್ ಭಗವದ್ಗೀತೆಯನ್ನು ಮೊಟ್ಟಮೊದಲು ಇಂಗ್ಲೀಶ್ ಭಾಷೆಗೆ ಭಾಷಾಂತರಿಸಿದನು. ವಿಲಿಯಂ ಜೋನ್ಸ್ ೧೭೮೨ರಲ್ಲಿ ಕಲ್ಕತ್ತೆಯಲ್ಲೂ, ೧೭೯೧ರಲ್ಲಿ ಕಾಶಿಯಲ್ಲೂ ಉಚ್ಚಮಟ್ಟದ ಸಂಸ್ಕೃತ ಶಾಲೆಗಳನ್ನು ತೆರೆದನು. ಪ್ರಾಚೀನ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಶೋಧಿಸಿ Asiatic Research ಪತ್ರಿಕೆಯಲ್ಲಿ ಲೇಖನಗಳನ್ನು ಬರೆದನು. "The treasure of Sanskrit, we may now hope, to see unlocked" ಎಂದು ಅವನು ೧೭೮೫ರಲ್ಲಿ ಯುರೋಪಿಯನ್ ವಿದ್ವಾಂಸರನ್ನೊಳಗೊಂಡ Royal Asiatic Society of Bengal ಎಂಬ ಸಂಸ್ಥೆಯನ್ನು ಸ್ಥಾಪಿಸಿದನು. ಸಂಸ್ಕೃತ ಭಾಷೆ ಹಾಗೂ ಸಾಹಿತ್ಯವನ್ನು

ಕುರಿತು ಈ ರೀತಿ ಹೇಳಿದ್ದಾನೆ. "The Sanksrit language, whatever be its antiguity, is of a wonderful structure, more perfect than the Greek, more copius than the Latin and more exquisticly refined than either, yet bearing to both of them a stronger affinity, both in the roots of verbs and in the form of a grammer".

ಅಂದಿನ ಈಸ್ಟ್ ಇಂಡಿಯಾ ಕಂಪನಿ ಸರ್ಕಾರವು ಏಷ್ಯಾಟಿಕ್ ಸೊಸೈಟಿಗೆ ವಿಶೇಷ ಸಹಾಯವಿತ್ತು, ಪುರಾತನ ಕೃತಿಗಳ ಭಾಷಾಂತರ, ಪ್ರಕಟಣೆಗಳಿಗೆಲ್ಲಾ ಅವಕಾಶ ಕಲ್ಪಿಸಿದರು. ೧೮೪೭ರಲ್ಲಿ ವೇದಗಳ ಭಾಷಾಂತರಗಳನ್ನು Bibliotheca India ಗ್ರಂಥ ಮಾಲೆಯಲ್ಲಿ ಪ್ರಕಟಿಸಲು Max Muller ನನ್ನು ನೇಮಿಸಿತು. ಜರ್ಮನ್ನಿನ ಬೌನ್ ನಗರ ಸಂಸ್ಕೃತದ ಕೇಂದ್ರವಾಗಿತ್ತು. ಫ್ರಾನ್ಸಿನ ಸಾರ್ಬೋರ್ನ್‌ನಲ್ಲಿ ಸಂಸ್ಕೃತ ವ್ಯಾಸಂಗದ ಅನುಕೂಲತೆ ಇತ್ತು. ಕ್ರಿ.ಶ. ೧೮೪೫ರಲ್ಲಿ ಗಿಟಿಸ್ಪನ್, ಟುಬಿನ್ಹಾನ್, ಲೈಪಸ್ಟಿಗ್, ಬಾನ್, ಬರ್ಲಿನ್, ಕೂಪನ್‌ಹೆಗನ್, ರೋಮ್, ವಿಯೆನ್ನಾ, ಲಿಸ್ಬನ್, ಪ್ಯಾರಿಸ್, ಆಕ್ಸಫರ್ಡ್ ಈ ಎಲ್ಲಾ ವಿಶ್ವ ವಿದ್ಯಾಲಯಗಳಲ್ಲಿ ಸಂಸ್ಕೃತ ಭಾಷೆಯನ್ನು ಕಲಿಸುತ್ತಿದ್ದರು. ಭಾಷಾಂತರ ಸಮಿತಿಯ ರಚನೆಯ ನಂತರ ವಿವಿಧ ಭಾಷೆಗಳ ಕೃತಿಗಳು ಭಾಷಾಂತರವಾದವು. ಬ್ರಿಟೀಷ್ ದೊರೆ ಜಾರ್ಜ್-4 ಉತ್ತಮ ಭಾಷಾಂತರ ಕೃತಿಗೆ ಎರಡು ಚಿನ್ನದ ಪದಕ ಕೊಡುತ್ತಿದ್ದನು. ಸಂಸ್ಕೃತ ಭಾಷಾ ಪ್ರಚಾರಕ್ಕೆ Irish Academy ಕೂಪನ್ ಹೆಗನ್ ಮತ್ತು ಪೀಟರ್ ಬರೋ Oriental Club ಇನ್ನೂ ಅನೇಕ ಸಂಸ್ಥೆಗಳು ನೆರವಾದವು. ಅಲ್ಲದೆ ಅನೇಕ ಸಾಹಿತ್ಯ ಸಂಸ್ಥೆಗಳು ಭಾಷಾಂತರ ಯೋಜನೆಗೆ ಆರ್ಥಿಕ ಸಹಾಯ ನೀಡಿದರು. ವಿದೇಶಿಯರನ್ನು ಸೆರೆ ಹಿಡಿದ ಮಹತ್ತರ ಅಂಶವೆಂದರೆ; ಸಾಂಸ್ಕೃತಿಕ ಮತ್ತು ಪಾರಮಾರ್ಥಿಕ ವಿಚಾರಗಳು. ಈ ವಿಚಾರಕ್ಕೆ ಮೂಲಭೂತವಾದದ್ದು ಸಂಸ್ಕೃತ ಭಾಷೆ. ಕ್ರಿ.ಶ. ೧೮೯೦ರಲ್ಲಿ ಕೂಪನ್ ಹೆಗನ್ ವಿಶ್ವವಿದ್ಯಾಲಯವು ಜಗತ್ತಿನ ಸಾಹಿತ್ಯದಲ್ಲಿ ಸಂಸ್ಕೃತ ಸಾಹಿತ್ಯವು ಪಡೆದ ಸ್ಥಾನವನ್ನು ಕುರಿತ ವಿಚಾರ ಗರ್ಭಿತ ಲೇಖನಗಳನ್ನು ಆಹ್ವಾನಿಸಿತ್ತು. ಲಾರ್ಡ್ ಥಾಮಸ್ ಮೆಕಾಲೆ ಭಾರತೀಯ ಶಿಕ್ಷಣ ಕುರಿತಂತೆ ವಿದ್ಯಾ ಮಸೂದೆಯನ್ನು ಜಾರಿಗೆ ತಂದನು. ಆ ಕಾಲಕ್ಕೆ ಬಂಗಾಳದ ಜಗನ್ನಾಥ, ಪಂಚಾನನ, ಈಶ್ವರ ಚಂದ್ರ, ದ್ವಾರಕನಾಥ ಮೊದಲಾದವರು "The Sanskrit System of education world best be calculated to keep this country in darkness" ಕ್ರಿ.ಶ. ೧೮೪೭ರಲ್ಲಿ 'ಇಂಡಿಯನ್ ಇವಿಲ್ ಸರ್ವೀಸ್' ಪರೀಕ್ಷೆಯಲ್ಲಿ ಸಂಸ್ಕೃತ ಐಚ್ಛಿಕ ವಿಷಯವಾಗಿ ತೆಗೆದುಕೊಳ್ಳಬೇಕಾಗಿತ್ತು. ಸಂಸ್ಕೃತ ಕಡ್ಡಾಯವಾಗಿ ಕಲಿಯಲೇಬೇಕಾದ ಅವಶ್ಯಕತೆ ಇತ್ತೆಂದು ಗೊತ್ತಾಗುತ್ತದೆ. ಸಂಸ್ಕೃತ ಆ ಕಾಲಕ್ಕೆ ಭಾರತೀಯರ ಭಾಷೆಯಷ್ಟೇ ಆಗದೆ ಜಾಗತಿಕ ಭಾಷೆಯಾಗಿ ವಿಶ್ವವಿದ್ಯಾಲಯಗಳ ಮಟ್ಟಗಳಲ್ಲಿ ಒಂದು ಪ್ರಮುಖ ಭಾಷೆಯಾಗಿ ಕಲಿಸಲ್ಪಡುತ್ತಿತ್ತು. ಅನುವಾದ ಒಂದು ವಿಷಯವಾಗಿರುವುದು ಕಂಡುಬರುವುದು. ಕುವೆಂಪುರವರ ಒಂದು ಮಾತನ್ನಿಲ್ಲಿ ಸ್ಮರಿಸಿಕೊಳ್ಳಬಹುದು.''ಪಾಶ್ಚಾತ್ಯ ಸಂಸರ್ಗ ಕರ್ನಾಟಕಕ್ಕೆ ಆಡಳಿತ ವ್ಯವಹಾರ ಮುದ್ರಣ ಯಂತ್ರ, ಕ್ರೈಸ್ತ ಮತ ಪ್ರಚಾರ, ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ, ಪಾಶ್ಚಾತ್ಯ ಸಂಸ್ಕೃತಿ, ನಾಗರೀಕತೆಗಳ ಪ್ರಭಾವದಿಂದ ಭಾರತೀಯರ ಜೀವನ ದೃಷ್ಟಿ ಹಾಗೂ ಮೌಲ್ಯಗಳು ಬದಲಾದವು. ಪಾಶ್ಚಾತ್ಯರ ವೈಚಾರಿಕ, ವೈಜ್ಞಾನಿಕ ಪ್ರವೃತ್ತಿ, ವ್ಯವಹಾರಿಕ, ಲೌಕಿಕ ಮನೋಧರ್ಮಗಳು ಭಾರತೀಯರಲ್ಲಿ ಹರಡತೊಡಗಿದವು. ಬ್ರಿಟೀಷರು ಜಾರಿಗೆ ತಂದ ಹೊಸ ಶಿಕ್ಷಣ ವ್ಯವಸ್ಥೆ ದೊಡ್ಡ ಕ್ರಾಂತಿಯನ್ನೇ ಉಂಟು ಮಾಡಿತು. ಅದರಿಂದ

ಭಾರತೀಯರ ಪಾಲಿಗೆ ನಾಡ ದಿಗಂತಗಳು ತೆರೆದುಕೊಂಡವು. ನೂತನ ಜಗತ್ತೊಂದರ ಪರಿಚಯವಾಯಿತು. ವಿಜ್ಞಾನ, ಇಂಗ್ಲೀಷ್ ಅಪೂರ್ವ ಸಂವೇದನೆಗಳನ್ನು ತಂದುಕೊಟ್ಟವು. ಬದುಕಿನ ರೀತಿನೀತಿಗಳನ್ನು ಮಾರ್ಪಡಿಸಿದವು''.ಮತ-ಧರ್ಮದ ಕೇಂದ್ರಿತ ನೆಲೆಯಲ್ಲಿದ್ದ ಭಾರತೀಯನ ಸಮಷ್ಟೀ ಪ್ರಜ್ಞೆ ಲೌಕಿಕವಾದ ವ್ಯಷ್ಟಿ ಪ್ರಜ್ಞೆಯಾಯಿತು. ಸುಶೀಕ್ಷಿತ ಉನ್ನತ ವರ್ಗದ ಶಿಕ್ಷಕ ವೃತ್ತಿಯ ತಂಡವೊಂದು ಈ ಪ್ರಜ್ಞೆಯ ಹಿನ್ನೆಲಯಲ್ಲಿ ರೂಪುಗೊಂಡಿತು (ಪುಷ್ಠಿಲೇಖ ೧೯೯೯; ಪು. ೨೪೨).

ಈ ಬಗೆಯ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಕ್ರೈಸ್ತ ಮಿಷನರಿಗಳು ಭದ್ರ ಬುನಾದಿಯನ್ನು ಹಾಕಿದರು. ಈ ಮಿಷನರಿಗಳು ಕನ್ನಡ ಲಿಪಿಯನ್ನು ರೂಪಿಸಿದರಲ್ಲದೆ, ಕನ್ನಡ ವ್ಯಾಕರಣ ನಿಘಂಟು, ಛಂದಸ್ಸುಗಳನ್ನು ಕ್ರೈಸ್ತ ಸಾಹಿತ್ಯವನ್ನು ಕನ್ನಡಕ್ಕೆ ತಂದರು. ಬೈಬಲ್ಲಿನ ಹೊಸ ಒಡಂಬಡಿಕೆಯ ಸುವಾರ್ತೆಗಳನ್ನು ೧೮೨೦ರಲ್ಲಿ ಸಮಗ್ರವಾಗಿ ಕನ್ನಡಿಸಿದ್ದ ಅವನಿಗಿಂತಲೂ ಮೊದಲೇ ವಿಲಿಯಂ ಕೇರಿ ೧೮೦೯ರಲ್ಲಿ ಬೈಬಲ್ ಅನುವಾದಿಸಿದ ಸ್ಯಾಂಡರ್ಸನ್ 'ಕಂ ಟು ಜೀಸಸ್' ಎಂಬ ಹಾಲ್‌ನ ಕೃತಿಯನ್ನು ೧೮೬೨ರಲ್ಲಿ ಅನುವಾದಿಸಿದ. ಹೀಗೆ ಚಾರ್ಬೋನ ೧೮೬೩ರಲ್ಲಿ 'ದೈವ ಪರೀಕ್ಷೆ', ೧೮೫೨ರಲ್ಲಿ 'ಸತ್ಯ ವೇದ' ಪರೀಕ್ಷೆಗಳನ್ನು ಅನುವಾದಿಸಿದ ೧೮೩೮ರಲ್ಲಿ ''ಲಿಟ್ಲಲ್ ವಿಲಿಯಂ'' ಎಂಬ ಕ್ರೈಸ್ತ ಕಥನದ ಅನುವಾದ ಪ್ರಕಟವಾಗಿತ್ತು. ಭಾರತದ ಪ್ರದೇಶಗಳು ಈಸ್ಟ್ ಇಂಡಿಯಾ ಕಂಪನಿ ವಶವಾಗುತ್ತಿದ್ದ ಅವಧಿ ಇದಾಗಿತ್ತು. ಭಾರತವು ನೇರವಾಗಿ ಇಂಗ್ಲೆಂಡ್ ಆಡಳಿತಕ್ಕೆ ಒಳಪಟ್ಟಿತ್ತು. ಇದರಿಂದುಂಟಾದ ಪರಿಣಾಮಗಳಲ್ಲಿ ಮೊದಲನೆಯದು ಇಲ್ಲಿನ ಶಿಕ್ಷಣ ಪದ್ಧತಿಯಲ್ಲಿ ಅಮೂಲಾಗ್ರ ಬದಲಾವಣೆ, ಎರಡನೆಯದು ವೈಜ್ಞಾನಿಕ ದೃಷ್ಟಿಕೋನ ಇಂಗ್ಲೀಶ್ ಸಾಹಿತ್ಯಾಭ್ಯಾಸದಿಂದ ಬಹುಭಿನ್ನ ಸಾಹಿತ್ಯ ಪ್ರಜ್ಞೆಯೊಂದು ದೊರೆಯಿತು.

**೩. ರಂಗಭೂಮಿ:**

ವಾಸ್ತವವಾಗಿ ಕನ್ನಡ ಜನಪದ ರಂಗಭೂಮಿಗೆ ಸಾವಿರಾರು ವರ್ಷಗಳ ಪ್ರಾಚೀನತೆಯಿರಬಹುದಾದರೂ ನಾಟಕವೆನ್ನುವ ಸಾಹಿತ್ಯ ರೂಪ ಮೊದಲು ಕಾಣಿಸಿಕೊಂಡಿದ್ದು ಸಂಸ್ಕೃತ ನಾಟಕಗಳ ಅನುವಾದಗಳ ಮೂಲಕವೇ. ನಾಟಕವೆಂದರೆ ತ್ರೈಲೋಕ್ಯದ ಭಾವಾನುಕೀರ್ತನ. ಅದೊಂದು ಅನುವ್ಯವಸಾಯ ಎಂದು ನಾಟ್ಯಶಾಸ್ತ್ರ ಹೇಳುತ್ತದೆ. ಈ ಅನುಕೀರ್ತನವೆಂದರೆ ಅನುಕರಣವಲ್ಲ ಎಂದು ಅಭಿನವ ಗುಪ್ತ ತನ್ನ ಭಾಷ್ಯದಲ್ಲಿ ಹೇಳುತ್ತಾನೆ. ಅನುಕರಣದಿಂದ ಹುಟ್ಟುವುದು ಹಾಸ್ಯವೇ ಹೊರತು ನಾಟಕವಲ್ಲ ಎಂದು ಅವನ ಅಭಿಪ್ರಾಯವಾಗಿದೆ. ಅನುಕೀರ್ತನ ಅಥವಾ ಅನುವ್ಯವಸಾಯ ಎಂದರೆ ಅದು 'ನಂತರದ ವ್ಯಾಪಾರ' ಎಂದು ಅರ್ಥವಾಗಿದೆ. ಮೊದಲು ಈ ಜಗತ್ತಿನ ಜೀವನವಾಗಿದ್ದರೆ ನಾಟಕ ಅದಾದ ಮೇಲೆ ಹುಟ್ಟುವ ಒಂದು ಕಲೆ. ಸಂಸ್ಕೃತ ನಾಟಕ ಆದಷ್ಟು ಮಟ್ಟಿಗೆ ಅನುಕರಣವನ್ನು ನಿರಾಕರಿಸಿತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು''. ಈ ಮಾತು ಅನುವಾದ ಎಂಬ ಪದ ಪ್ರಸ್ತುತ ಅಧ್ಯಯನಕ್ಕೆ ಹೇಗೆ ಪೂರವಾಗಿದೆ ಎಂಬುದಕ್ಕೆ ಸಾಕ್ಷಿಯಾಗಿದೆ. ಕಾಲಘಟ್ಟದಲ್ಲಿ ಮೂಡಿ ಬಂದ ಅನುವಾದಗಳಲ್ಲಿ ಲೇಖಕರು ಬಳಸಿದ ಪದ ಪರಿವರ್ತನೆ, ಕನ್ನಡಿಸು ಇಲ್ಲವೆ ಅನುವಾದ. ಅನುವಾದ ಎನ್ನುವುದು ಬಹಳ ವಿಶಾಲಾರ್ಥದಲ್ಲಿ ಬಳಕೆಯಾಗುತ್ತದೆ. ಅನುಸರಿಸಿ, ಹೇಳಿದ್ದೆಲ್ಲಾ ಅನುವಾದ. ಭಾಷಾಂತರ ಎನ್ನುವುದು ನಿಷ್ಕೃಷ್ಟವಾದ ಅರ್ಥವಿದೆ. 'ಕಾವೇಷ ನಾಟಕಂ ರಮ್ಯಂ' ಎಂಬ ಉಕ್ತಿಯಂತೆ ನಾಟಕವೆನ್ನುವುದು ಕಾವ್ಯವೇ. ಅದು ಅನುವ್ಯವಸಾಯ 'ನಂತರ ವ್ಯಾಪಾರ' ಕ್ರಿಯೆಯ ನಂತರ ಹುಟ್ಟುವ ಕಲೆ. ಪ್ರಸಕ್ತ ಈ ಕಾಲಕ್ಕೆ ನಡೆದುದು ಒಂದು ಸೃಷ್ಟಿಯ ನಂತರದ ವ್ಯಾಪಾರವಾದ್ದರಿಂದ ಅದಕ್ಕೆ ಅನುವಾದ ಎಂಬ ಪದ ಹೆಚ್ಚು ಉಚಿತವೂ, ವ್ಯಾಪ್ತವೂ ಆಗಿದೆ. ಹಾಗಾಗಿ ಈ ಪದ ರಂಗಕಲ್ಪನೆಯನ್ನು ಅನುಸರಿಸಿ, ಅನುವಾದ ಎಂಬ ಪದ ಅರ್ಥಸ್ಪಷ್ಟತೆ ಗೋಚರಿಸುತ್ತದೆ.

ನಾಟಕ ದೃಶ್ಯ, ಶ್ರವ್ಯ ಮಾಧ್ಯಮವಾಗಿ ತನ್ನ ಅಸ್ತಿತ್ವವನ್ನು ಸ್ಥಿರಪಡಿಸಿದ್ದರೂ, ಅದರ ವೈವಿಧ್ಯ, ವೈಶಿಷ್ಟ್ಯಗಳನ್ನಾಗಲಿ, ಕುರುಹನ್ನಾಗಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾಣದಂತಾಗಿರುವುದು ಒಂದು ಅದ್ಭುತ ಸಮಸ್ಯೆ. ಯಕ್ಷಗಾನ, ಬಯಲಾಟ, ದೊಡ್ಡಾಟ ಮುಂತಾದ ಪ್ರದರ್ಶನಗಳು ಕಂಡು ಬರುತ್ತವೆಯೇ ವಿನಾ ನಾಟಕ ಸಾಹಿತ್ಯವೆಂಬುದು ಇರಲಿಲ್ಲ. ಮೈಸೂರು ಸಂಸ್ಥಾನದ ಮಹಾರಾಜನಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಆಸ್ಥಾನದಲ್ಲಿ ಸಂಸ್ಕೃತ ನಾಟಕಗಳನ್ನು ಕನ್ನಡಿಸಿ ರಂಗದ ಮೇಲೆ ತರುವ ಮೊದಲ ವ್ಯವಸ್ಥಿತ ಪ್ರಯತ್ನ ನಡೆಯಿತೆನ್ನುವುದು ಐತಿಹಾಸಿಕ ಸಂಗತಿ. ''ರಾಜಸ್ಥಾನಗಳಲ್ಲಿ ಸಂಸ್ಕೃತ ನಾಟಕಗಳನ್ನಾಡುವ ಸಂಭ್ರಮ ಯಾವಾಗಲೂ ಇರುತ್ತಿತ್ತು. ಈ ಸಂಸ್ಕೃತ ನಾಟಕಗಳ ಕನ್ನಡ ರೂಪಗಳಾದರೂ ರಾಜಸ್ಥಾನದಲ್ಲಿ ಪ್ರದರ್ಶನ ಯಾವಾಗಲೂ ಇರುತ್ತಿತ್ತು. ಈ ಸಂಸ್ಕೃತ ನಾಟಕಗಳ ಕನ್ನಡ ರೂಪಗಳಾದರೂ ರಾಜಸ್ಥಾನದ್ಲಲಿ ಪ್ರದರ್ಶನಗೊಳ್ಳುತ್ತಿದ್ದಿರಬೇಕು. ಕ್ರಿ.ಶ. ೧೨೬೦ 'ಶಬ್ದಮಣಿದರ್ಪಣ' ಮತ್ತು ಕ್ರಿ.ಶ. ೧೧೪೫ರ ಎರಡನೆಯ ನಾಗಮರ್ಮನ 'ಕಾವ್ಯಾವಲೋಕನ'ದಲ್ಲಿ ಕನ್ನಡ ಅನುವಾದಿತ ನಾಟಕಗಳ ಬಗ್ಗೆ ಉಲ್ಲೇಖವಿದೆ'' (ಸಾಹಿತ್ಯವಾಹಿನಿ, ತುಷಾರ, ಸುವಿದ್ಯಾ ಪ್ರಕಾಶನ, ಪು.೧೦೬) ಜಾನಪದ ಕಲೆಯ ರಂಗಭೂಮಿಯನ್ನು ಅವಲಂಬಿಸಿರಲಿಲ್ಲ. ರೈತನೋರ್ವ/

ಸಾಮಾನ್ಯನೋರ್ವ ಪ್ರವೃತ್ತಿಯಲ್ಲಿ ನಾಟಕವನ್ನವಲಂಬಿಸಿದ್ದನು. ಆದರೆ ವಸಾಹತುಶಾಹಿ ಘಟ್ಟದಲ್ಲಿ ವೃತ್ತಿರಂಗಭೂಮಿಗಾಗಿ ಬಣ್ಣವನ್ನು ಬದುಕನ್ನಾಗಿಸಿಕೊಂಡವರು ಕಂಡುಬಂದರು. ಅದಕ್ಕೋಸ್ಕರ ಸಾಹಿತ್ಯ ಸೃಷ್ಟಿಯಾಯಿತು. ಉತ್ತರ ಕರ್ನಾಟಕದಲ್ಲಿ ಮರಾಠಿ ರಂಗಭೂಮಿ, ದಕ್ಷಿಣ ಕರ್ನಾಟಕದಲ್ಲಿ ಪಾರ್ಸಿ ನಾಟಕ ಕಂಪನಿಗಳ ಪ್ರಭಾವಬೀರಿದವು.

ಸಾಹಿತ್ಯದ ಉಳಿದ ಪ್ರಕಾರಗಳಿಗಿಂತ ನಾಟಕ ವಿಶಿಷ್ಟ ಪ್ರಕಾರವಾಗಿದೆ. ಲಿಖಿತ ರೂಪದಿಂದ ಸಾಹಿತ್ಯ ಮಾಧ್ಯಮಕ್ಕೂ, ರಂಗಕೃತಿಯಾಗಿ ರಂಗ ಮಾಧ್ಯಮಕ್ಕೂ ಅಳವಡುತ್ತದೆ. ಹಾಗಾಗಿ ನಾಟಕ ಪ್ರಕಾರಕ್ಕೆ ರಂಗ ಪ್ರಯೋಗ ಸಾಧ್ಯತೆಬೇಕೋ ಅಥವಾ ಸಂವೇದನಾಶೀಲ ಬರಹವೋ ಎಂಬುದು ಜಿಜ್ಞಾಸೆಯಾಗಿ ಪರಿಣಮಿಸಿದೆ. ರಂಗಪಠ್ಯ ಮತ್ತು ಓದು ಪಠ್ಯಗಳು ಸ್ವಯಂ ಪೂರ್ಣವಾದವು. ಯಾವುದೂ ಒಂದಕ್ಕೊಂದು ಅವಲಂಬಿತವಾಗಿಲ್ಲ. ಒಂದರ ಮೌಲ್ಯ ನಿಷ್ಕರ್ಷೆಯಲ್ಲಿ ಇನ್ನೊಂದನ್ನು ಎಳೆದು ತರುವ ಅವಶ್ಯಕತೆ ಇಲ್ಲ. ಇವರೆಡರ ವಿಮರ್ಶಾ ಮಾನದಂಡಗಳು ಬೇರೆ ಬೇರೆ ಎಂದು ಅಲಾರ್ಡೈಸ್ ನಿಕೋಲ್ ಹೇಳುತ್ತಾನೆ. "ಲಿಖಿತ ಕೃತಿಯನ್ನು ನಾಟಕಕಾರ ತನ್ನ ಭಾಷಾ ಪ್ರಭುತ್ವದಿಂದ ರೂಪಿಸುತ್ತಾನೆ. ಇಲ್ಲಿ ಭಾಷೆಗೆ ಅವನು ನಿಷ್ಠನಾಗಿರುತ್ತಾನೆ. ಹಾಗೆಂದರೆ ರಂಗ ಪ್ರಯೋಗದ ಬಗ್ಗೆ ಅವನು ಕುರುಡನಾಗಿರುತ್ತಾನೆ ಎಂದು ಅರ್ಥವಲ್ಲ. "ಪ್ರಯೋಗ ಪ್ರಧಾನಂ ಹಿ ನಾಟ್ಯಂ" ಎಂದು ಕಾಳಿದಾಸ ಒಂದೆಡೆ ಹೇಳಿದ್ದಾನೆ. ಒಳ್ಳೆಯ ನಾಟಕಕಾರ ರಂಗದ ಮೇಲೆ ಸಂಭವಿಸುವ ಮೂರ್ತ ಕ್ರಿಯೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡಿರುವುದಿಲ್ಲವೆಂದರೆ ಸರಿಯಲ್ಲ. ಇದರ ಜೊತೆಗೆ ಅವನು ರಂಗದ ಮೇಲೆ ಕಾಣಿಸಬೇಕಾದ ವಿಷಯಗಳನ್ನು ಅಭಿನೀತವಾಗುವ ಜೆಶ್ಚರ್‌ಗಳನ್ನು ಸಾದು ಗಮನದಲ್ಲಿಟ್ಟುಕೊಂಡು ನಾಟಕ ರಚಿಸುತ್ತಾನೆ. ಇಲ್ಲಿ ಏಳುವ ಒಂದು ಸಹಜವಾದ ಪ್ರಶ್ನೆ ಎಂದರೆ, ಕ್ರಿಯೆಯನ್ನು ನಾಟಕಕಾರ ಬರಹದಲ್ಲಿ ಹೇಗೆ ಸಾಧಿಸುತ್ತಾನೆ ? ಎಂಬುದು ಅವನು ಬಳಸುವ ಭಾಷೆಗೆ ಧ್ವನಿ ಶಕ್ತಿ ಇದ್ದಾಗ ಇದು ಸಾಧ್ಯವಾಗುತ್ತದೆ, ಸಾಧಿತವಾಗುತ್ತದೆ. ಆದರೆ ಭಾಷೆಯೇ ಕ್ರಿಯೆಯನ್ನು ಕಟ್ಟುತ್ತದೆ. ಭಾಷೆ ಕ್ರಿಯೆಗಳನ್ನು ಪ್ರತ್ಯೇಕವಾಗಿ ಪರಿಗಣಿಸುವ ಎಲಿಯೆಟ್ ಗ್ರೀಕ್ ನಾಟಕಗಳ ಸಂಭಾಷಣೆಯ ಹಿಂದೆ ಕ್ರಿಯೆಯ ನಾಟಕವೂ ಇರುತ್ತದೆ ಎನ್ನುತ್ತಾನೆ. ಇವನು ಯಾವುದನ್ನೂ ಕ್ರಿಯೆ ಎನ್ನುತ್ತಾನೋ ಅದನ್ನು ನಾಟಕಕಾರ ಭಾಷೆಯಲ್ಲೇ ಸಾಕಾರಗೊಳಿಸುತ್ತಾನೆ . ಇದು ಗ್ರೀಕ್ ನಾಟಕಗಳಲ್ಲಿ ಮಾತ್ರವಲ್ಲ, ಇನ್ನಾವುದೇ ಒಳ್ಳೆಯ ನಾಟಕದಲ್ಲಿ ಸಹ ಕಾಣುವ ಗುಣ ರೇಮಂಡ್ ವಿಲಿಯಮ್ಸ್ ಹೀಗೆ ಹೇಳುತ್ತಾನೆ.

' ನಾಟಕ ಸಾಹಿತ್ಯವೂ ಹೌದು, ರಂಗಕಲೆಯೂ ಹೌದು.
ಇನ್ನೊಂದಕ್ಕೆ ಪೂರಕವೇ ಹೊರತು ತೊಡಕಲ್ಲ"( ಎ.ಆರ್. ನಾಗಭೂಷಣ್, ೧೯೯೮).

ಒಂದು ನಾಟಕ ರಂಗ ಪಠ್ಯವಾಗಿರಬಹುದು ಅಥವಾ ಓದುಪಠ್ಯವಾಗಿರಬಹುದು. ಅಂದಿನ ಅನುವಾದ ಪ್ರಕ್ರಿಯೆ ಓದು ಪಠ್ಯ ಅಥವಾ ರಂಗಪಠ್ಯವನ್ನಾಗಿಸದೇ ಅದರ ಒಟ್ಟಾರೆ ನಿಲುವನ್ನು ಸದೃಢಗೊಳಿಸಲು ಪ್ರಯತ್ನಿಸಿದೆ. 'ನಾಟ್ಯ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ' ಎಂಬ ವ್ಯಾಖ್ಯೆಯನ್ನು ಅನುಸರಿಸಿ ನೋಡಿದರೆ ಅಂದಿನ ಸಾಂಸ್ಕೃತಿಕ ಪರಿಸರ ಎಂತಹ ಒಳ್ಳೆಯ ಸಾಧನವನ್ನಾಗಿ

ಮಾಡಿಕೊಂಡಿತ್ತು ಎಂಬುದು ಗೊತ್ತಾಗುತ್ತದೆ. ರಂಗ ಪ್ರದರ್ಶನ ಮನೋರಂಜನೆಯ ಅವಿಭಾಜ್ಯ ಅಂಗವಾಗಿತ್ತು. ಇದನ್ನು ಸನ್ನಿವೇಶವನ್ನು ನೈತಿಕ ಸಾಧನೆಗಾಗಿ ಬಳಸಿಕೊಳ್ಳಲಾಗುತ್ತಿತ್ತು. ಅರ್ಥಾತ್ ಜನಮನರಂಜನೆಯ ಜೊತೆಗೆ ಸಂದೇಶವೊಂದು ಇರುವುದು ಇದಕ್ಕೆ ಸಾಕ್ಷಿ. ವಸಾಹತುಶಾಹಿ ಶಕ್ತಿಯ ಎದುರು ಜನರನ್ನು ಒಂದೆಡೆಗೆ ತರುವ ಪ್ರಯತ್ನ ಅನಿವಾರ್ಯವಾಗಿತ್ತು. ನಮ್ಮ ಪರಂಪರೆಯೊಂದನ್ನು ಅಂದಿನ ಸಂಘರ್ಷಾತ್ಮಕ ಸನ್ನಿವೇಶದಲ್ಲಿ ಎತ್ತಿ ತೋರಿಸುವುದು ಅನಿವಾರ್ಯವಾಗಿತ್ತು. ಈ ಹಂತದಲ್ಲಿ ನಾಟಕಾನುವಾದ ಸಾಹಿತ್ಯಿಕ ಹಾಗೂ ಕಲಾತ್ಮಕ ಚಟುವಟಿಕೆಯ ಸಂಕೇತವಾಗಿ ಕಂಡುಬಂದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಬಹುತೇಕ ರಂಗಕಲೆಯಾಗಿಯೇ ಅಂದಿನ ಸಂಸ್ಕೃತ ನಾಟಕಗಳು ಅನುವಾದಗೊಂಡವು ಎಂದರೆ ಮೇಲಿನ ಮಾತಿಗೆ ಪೂರಕವೆನಿಸುತ್ತದೆ.

ಪ್ರಾಚೀನ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ನಾಟಕಗಳೇಕೆ ಕಾಣಿಸಿಕೊಳ್ಳಲಿಲ್ಲ ಎಂಬ ಪ್ರಶ್ನೆ ಎದುರಾಗುತ್ತದೆ. ಸಾವಿರಾರು ವರ್ಷಗಳ ಸುದೀರ್ಘ ಇತಿಹಾಸದ ಕನ್ನಡೇತಿಹಾಸದಲ್ಲಿ ಹದಿನೇಳನೆಯ ಶತಮಾನದವರೆಗೆ ಸಿಂಗರಾರ್ಯನ ಮಿತ್ರವಿಂದಾಗೋವಿಂದವರೆಗೆ ಯಾವದೇ ಸುಳಿವು ಸಿಗುವುದಿಲ್ಲ. ಪ್ರತಿಯೊಂದು ವಿಷಯದಲ್ಲೂ ಸಂಸ್ಕೃತವನ್ನು ಅನುಸರಿಸಿದ ಕನ್ನಡ ಕವಿಗಳು ನಾಟಕವನ್ನೇಕೆ ರಚಿಸಲಿಲ್ಲ ಎಂಬುದೊಂದು ಯಕ್ಷ ಪ್ರಶ್ನೆ. ರತ್ನಾಕರ ವರ್ಣಿಯು ತನ್ನ ಭರತೇಶ ವೈಭವದ ಪೂರ್ವ ನಾಟಕ, ಉತ್ತರ ನಾಟಕ ಎಂಬಲ್ಲಿ ನಾಟಕದ ವರ್ಣನೆ ನೀಡುತ್ತಾನೆ. ನಿಜಗುಣ ಶಿವಯೋಗಿಯು ವಿವೇಕ ಚೂಡಾಮಣಿಯಲ್ಲಿ ನಾಟಕ ಲಕ್ಷಣವನ್ನು ತಿಳಿಸಿದ್ದಾನೆ. ಆದರೂ 'ಶಾಂತಂ ಕ್ರತುಂ ಚಾಕ್ಷುಷಂ' ಎಂಬಂತೆ ನಾಟಕ ಕನ್ನಡದಲ್ಲಿ ಇರಲಿಲ್ಲ ಏಕೆ ? ಎನ್ನುವುದು ಪ್ರಶ್ನೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕೀಯ ಸನ್ನಿವೇಶಗಳಿವೆ. ರನ್ನ ಕವಿ ಗದಾಯುದ್ಧ, ರಾಘವಾಂಕನ ಹರಿಶ್ಚಂದ್ರ ಕಾವ್ಯ ಭಟ್ಟಾಕಳಂಕನು ಶಬ್ದಾನುಶಾಸನದಲ್ಲಿ ಕನ್ನಡದಲ್ಲಿ ನಾಟಕಗಳಿದ್ದುವೆಂದು ಹೇಳಿದ್ದಾನೆ. ಗೋವಿಂದ ವೈದ್ಯನು 'ತನ್ನ ಕಂಠೀರವ ವಿಜಯ'ದಲ್ಲಿ ನಾಟ್ಯ ಶಾಲೆಯನ್ನು ಕುರಿತು ಹೇಳಿದ್ದಾನೆ. 'ಕಳದಿ ನೃಪ ವಿಜಯ'ದಲ್ಲಿ ಹಿರಿಯ ವೆಂಕಪ್ಪ ನಾಯಕನು 'ಇಕ್ಕೇರಿಯಮನೆಯೊಳ್ ವಿಚಿತ್ರತರ ರಚನಾ ಕೌಶಲದಿಂ ನಾಟಕಶಾಲೆಯಂ ನಿರ್ಮಾಣಗೈಸಿ'ದ್ದನೆಂದು ಹೇಳಿವೆ. 'ಚಾಮರಾಜೇಂದ್ರ ವಂಶರತ್ನಾಕರ'ದಲ್ಲಿ ಇಮ್ಮಡಿ ರಾಜ ಒಡೆಯರು ವಸಂತೋತ್ಸವ, ನಾಟಕ ಶಾಲೆಗಳೆಲ್ಲ ವೈಭವಗಳಿಂದ ಪಡೆದರೆಂದು ಹೇಳಲಾಗಿದೆ. ವಿಜಯನಗರದ ಅರಸರು ಈ ಕಲೆಗೆ ಪ್ರೋತ್ಸಾಹ ಕೊಟ್ಟಿದ್ದರು. ನಮ್ಮ ಜನಕ್ಕೆ ಸಂಸ್ಕೃತ ನಾಟಕದ ಪ್ರಕ್ರಿಯೆ ಒಗ್ಗಲಿಲ್ಲವೇ ಅಥವಾ ಕಾವ್ಯ ಹಾಗೂ ಶಾಸನಗಳಲ್ಲಿ ಪ್ರತಿಪಾದಿತವಾಗಿರುವಂತೆ ಭಿನ್ನ ನಾಟಕ ಪ್ರಕಾರವೊಂದಿರಬಹುದಾದ ಸಾಧ್ಯತೆಯಿದೆ. ಅದಕ್ಕಾಗಿ ತ.ಸು. ಶಾಮರಾಯರು ಈ ರೀತಿ ಹೇಳುತ್ತಾರೆ. ''ನಮ್ಮ ಜನ ಸಂಗೀತಪ್ರಿಯರು. ಕನ್ನಡ ಸಾಹಿತ್ಯ ಬೆಳೆದ ಹೊತ್ತಿಗೆ ಸಂಸ್ಕೃತ ನಾಟಕಗಳಲ್ಲಿ ಸಂಗೀತ ನರ್ತನಗಳೆರಡೂ ಲೋಪವಾಗಿದ್ದವು. ಆದ್ದರಿಂದ ಜನರಿಗೆ ಅವುಗಳಲ್ಲಿ ಅನುರಕ್ತಿ ಹುಟ್ಟಲಿಲ್ಲ ವೆಂದು ತೋರುತ್ತದೆ. ನಾಟಕದ ಆಸ್ತಿತ್ವ ಸಾರ್ಥಕವಾಗಬೇಕಾದರೆ ಅದು ಪ್ರದರ್ಶಿತವಾಗಬೇಕು. ಪ್ರದರ್ಶನಕ್ಕೆ ಅವಕಾಶವಿಲ್ಲದುದು ಭಾಷಾಂತರವಾಗಿಯೂ ಏತಕ್ಕೆ ಬೇಕು ? ಆದ್ದರಿಂದಲೇ ಸಂಸ್ಕೃತ ನಾಟಕಗಳು

ಕನ್ನಡಕ್ಕೆ ಇಳಿದು ಬರಲಿಲ್ಲವೆಂದು ಕಾಣುತ್ತದೆ. ರಾಜರೂ, ನಗರ ನಾಗರಿಕರೂ ರಾಜ ಮಹಾರಾಜರ ಆಸ್ಥಾನದಲ್ಲಿ ನಡೆಯುತ್ತಿದ್ದ ಸಂಸ್ಕೃತ ನಾಟಕಗಳನ್ನು ನೋಡಿಯೇ ಗೌರವಾನ್ವಿತರಾಗುತ್ತಿದ್ದರು. ಹಳ್ಳಿಯ ಶ್ರೀಸಾಮಾನ್ಯರು ಅನಾದಿಕಾಲದಿಂದಲೂ ತಮ್ಮಲ್ಲಿ ನೆಲಸಿದ್ದ ವಿನೋದಗಳಿಂದ ತೃಪ್ತರಾಗುತ್ತಿದ್ದರು. ಮಾನವ ಸಹಜವಾದ ಅನುಕರಣಲೀಲೆ ಅದರಲ್ಲಿ ಯಕ್ಷಗಾನಗಳು ಸೂತ್ರದ ಬೊಂಬೆಯಾಟ ಇತ್ಯಾದಿ ವಿವಿಧ ರೂಪಗಳಲ್ಲಿ ನೆಲೆಸಿತ್ತು. ಇವುಗಳಿಗೆ ಸಾಹಿತ್ಯದ ಪಟ್ಟಿ ದೊರೆಯದಿದ್ದರೂ ಜನ ಮನೋರಂಜನೆಯ ಪವಿತ್ರ ಕಾರ್ಯವನ್ನು ನಿರಾತಂಕವಾಗಿ ನಡೆಸಿಕೊಂಡು ಹೋಗುತ್ತಿದ್ದವು'' ಎಂದು ವಿಶ್ಲೇಷಿಸಿದ್ದಾರೆ ( ತ.ಸು. ಶಾಮರಾಯ; ಪು. ೧೨೫).

ಪ್ರಾಚೀನ ಕವಿಗಳಿಗೆ ರಂಗಭೂಮಿಯ ಕಲ್ಪನೆ ಇರಲಿಲ್ಲವೆಂತಲ್ಲ. ಸಂಸ್ಕೃತ ನಾಟಕಗಳು ಅಭಿನೀತವಾಗುತ್ತಿದ್ದ ರಂಗ ಸಜ್ಜಿಕೆಗಳು ರಾಜಸ್ಥಾನದಲ್ಲಿವು. ಆದರೂ ನಾಟಕಗಳು ಬಾರದಿರುವುದಕ್ಕೆ ಅವರ ಛಂದೋವಿಧಾನಗಳು ಕಾರಣ. ''ನಮ್ಮ ಕವಿಗಳ ಎದುರಿಗಿದ್ದ ಸಂಸ್ಕೃತ ನಾಟಕಗಳಲ್ಲಿ ಬಳಕೆಯಾಗುತ್ತಿದ್ದ ಶೈಲಿ ಗದ್ಯ-ಪದ್ಯ ಮಿಶ್ರಿತವಾಗಿತ್ತು. ಇವರು ತಮ್ಮ ಕಾವ್ಯಗಳಿಗೆ ಬಳಸುತ್ತಿದ್ದ ಛಂದಸ್ಸು ಈ ಚಂಪುವೇ ಆಗಿತ್ತು. ಸಂಸ್ಕೃತ ನಾಟಕಗಳೂ ಪ್ರಧಾನವಾಗಿ ಓದುವ ನಾಟಕಗಳಾಗಿದ್ದವೇ ಹೊರತು, ಆಡುವ ನಾಟಕಗಳಾಗಿರಲಿಲ್ಲ. ಯಾಕೆಂದರೆ, ಇವುಗಳನ್ನು ಆಡಲೂ, ನೋಡಲೂ ಬೇಕಾದ ಯೋಗ್ಯತೆ ತೀರ ದುಬಾರಿಯದು. ಹೀಗೆಲ್ಲ ವಾದಿಸಿದಾಗ ಅದು ತರ್ಕಬದ್ಧವೂ ಆಗಬಹುದು. (ಹಳಗನ್ನಡದಲ್ಲಿ ನಾಟಕದ ಸಮಸ್ಯೆ, ಕಬ್ಬಿನಹಾಲು, ಪು. ೧೩೦).

ಸಂಸ್ಕೃತ ನಾಟಕಗಳ ಪ್ರಧಾನ ರಸ ಶೃಂಗಾರ. ಈ ರಸದೃಷ್ಟಿಯಲ್ಲಿರುವ ಪ್ರಮುಖ ವ್ಯತ್ಯಾಸದಿಂದಾಗಿ ನಾಟಕಗಳ ಮಹತ್ವ ಅಷ್ಟಾಗಿರಲಿಲ್ಲ. ಉದಾತ್ತ ನೀತಿ ಪ್ರತಿಪಾದಕಗಳಾದರೂ ಧರ್ಮ ಪ್ರಸಾರಕ್ಕಾಗಲಿ, ಮತ ಪ್ರಚಾರಕ್ಕಾಗಲಿ ಅವು ಬಳಕೆಯಾಗಿಲ್ಲವಾದ್ದರಿಂದ ಆ ಕಾಲಕ್ಕೆ ನಾಟಕಗಳು ಪ್ರಚಲಿತ ವಾಗಲಿಲ್ಲ. ಸಂಸ್ಕೃತ ನಾಟಕಗಳಿಗೆ ರಾಜಾಶ್ರಯವಿರುತ್ತಿತ್ತು. ವಿಲಾಸಮುಖಿ ರಸದೃಷ್ಟಿ ಪ್ರತಿಪಾದನೆ ಅಲ್ಲಿ ಮುಖ್ಯವಾಗಿತ್ತೇ ವಿನ ಗಂಭೀರ ರಸದೃಷ್ಟಿಯಿರಲಿಲ್ಲ. ಅಂತಃಪುರ ರಾಜಾಡಳಿತ ವರ್ಗದವರಿಗೆ ಮಾತ್ರ ಸೀಮಿತವಾದ ರಂಗಪ್ರದರ್ಶನ ಅಭಿಜಾತತೆಗೆ ಪ್ರಚಲಿತ ಭಾಷೆಯಾದ ಕನ್ನಡದಲ್ಲಿ ಪಡಿಮೂಡಲು ಸಾಧ್ಯವಾಗಿರಲಿಕ್ಕಿಲ್ಲ.

ಕ್ರಿ.ಶ. ೧೬೭೨ ರಿಂದ ೧೭೦೪ರೊಳಗೆ ಚಿಕ್ಕದೇವರಾಜನ ಆಸ್ಥಾನಕವಿ ಸಿಂಗರಾರ್ಯನು ಮಿತ್ರವಿಂದಾ ಗೋವಿಂದವನ್ನು ಕನ್ನಡದಲ್ಲಿ ರಚಿಸಿದ. ಇದು ಸಂಸ್ಕೃತ ರತ್ನಾವಳಿಯ ಅನುವಾದ. ಇಲ್ಲಿಂದ ಅನುವಾದಗಳು ಹೇರಳವಾಗಿ ಬಂದಿವೆ. ಈ ಹಂತದಲ್ಲೂ ಸಂಸ್ಕೃತ ನಾಟಕಗಳ ಪ್ರಭಾವ ಕನ್ನಡ ಸಾಹಿತ್ಯದ ಮೇಲೆ ಇದ್ದೇ ಇದೆ. ಈ ಪ್ರಭಾವವನ್ನು ಮೂರು ಹಂತಗಳಲ್ಲಿ ಕಾಣಬಹುದು. ''ಸಂಸ್ಕೃತ ನಾಟಕದ ಮತ್ತು ಕನ್ನಡ ಕಾವ್ಯದ ವಸ್ತು ಒಂದೇ ಆಗಿದ್ದಲ್ಲಿ ಕಥಾ ಸಂವಿಧಾನದ ಮೇಲೆ ಪಾತ್ರ ಚಿತ್ರಣದ ಮೇಲೆ ಮೂಲದ ನೆರಳು ಅನಿವಾರ್ಯವಾಗಿ ಬಿದ್ದಿರುತ್ತದೆ. ಮೂಲದ ಕೆಲಭಾಗಗಳ ಯಥಾವತ್ತಾದ ಅನುವಾದವೋ, ಭಾವಾನುವಾದವೋ ಕಂಡು ಬರುವುದು ಉಂಟು. ಎರಡರ ವಸ್ತುಗಳು

ಸಂಪೂರ್ಣವಾಗಿ ಬೇರೆಬೇರೆಯಾಗಿದ್ದಾಗ, ಮೂಲದ ವರ್ಣನಾತ್ಮಕವಾದ ಅಥವಾ ಕಥಾ ಪ್ರಸಕ್ತಿಯಿಲ್ಲದ ಬಿಡಿ ಪದ್ಯಗಳ ಭಾವವನ್ನು ಕನ್ನಡ ಕವಿ ಸ್ವೀಕರಿಸಿರಬಹುದು. ಇಂಥ ಕಡೆಗಳಲ್ಲೆಲ್ಲಾ ಸ್ವೀಕರಣ ಪ್ರಜ್ಞಾ ಪೂರ್ವಕವಾಗಿ ನಡೆದಿರುತ್ತದೆಂದು ಹೇಳುವುದು ಕಷ್ಟ. ಸಂಸ್ಕೃತ ಕೃತಿಗಳ ಪ್ರಭಾವ ಅಪ್ರಜ್ಞಾ ಪೂರ್ವಕವಾಗಿ ಕೆಲಸ ಮೂಡಿರಲೂಬಹುದು'' (ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ ನಾಟಕಗಳ ಪ್ರಭಾವ, ಕಬ್ಬಿನಹಾಲು; ೧೫೫-೧೫೬). ಮೊದಲು ಆದಿ ಕವಿಯಾದ ಪಂಪನ ಕಾವ್ಯಗಳನ್ನೇ ನೋಡಿದರೆ ಭಾಸನ ಊರುಭಂಗ ಹಾಗೂ ಭಟ್ಟನಾರಾಯಣನ ವೇಣಿ ಸಂಹಾರ ಪ್ರಭಾವ ಬೀರಿದೆ. ಭಾಸನ ದುರ್ಯೋಧನನ್ನು ಪಂಪ ಈ ರೀತಿ ಚಿತ್ರಿಸಿದ್ದಾನೆ.

ವೀರ್‍ಯಕಾಲಯನಿವನು, ವಿವಿಧ ರತ್ನ ವಿಚಿತ್ರ
ಮೌಲಿಯುತನಭಿಮಾನಿ, ತೇಜಸ್ವಿ, ಸಾಹಸಿಯು
ವಿನಯವಂತನು.......

ಭಟ್ಟನಾರಾಯಣನ ವೇಣಿ ಸಂಹಾರದ ಯಥಾವತ್ತಾದ ಶ್ಲೋಕವೊಂದನ್ನು ತೆಗೆದುಕೊಂಡು ಅನುವಾದಿಸಿದ್ದಾನೆ.

ಮಹಾಪ್ರಲಯ ಮಾರುತ ಕ್ಷುಭಿತ ಪುಷ್ಕಲಾವರ್ತಕ
ಪ್ರಚಂಡ ಘನಗರ್ಜಿತ ಪ್ರತಿರವಾನುಕಾರಿ ಮುಹುಃ
ರವಃ ಶ್ರವಣ ಭೈರವಃ ಸ್ಥಗಿತ ರೋದಸೀ ಕಂದರಃ
ಕುತೋದ್ಯ ಸಮರೋದಧೇರ ಯಮಭೂತ ಪೂರ್ವೋದಯಃ.

ಮಹಾಪ್ರಳಯ ಭೈರವ ಕ್ಷುಭಿತ ಷುಷ್ಕಳಾವರ್ತಮಾ
ಮಹೋಗ್ರರಿಪು ಭೂಭುಜ ಶ್ರವಣ ಭೈರವಾಡಂಬರಂ
ಗುಹಾಗಹನ ಗಹ್ವರೋದರ ವಿಕೀರ್ಣಮಾದುದದೇಂ
ಮುಹುಃ ಪ್ರಕಟಮಾದುದು ರವಿತಾನೂಭವಚ್ಛಾರವರ.

ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ದ ಅಭಿಪ್ರಾಯವನ್ನು ಸ್ವೀಕರಿಸಿದ್ದಾನೆ.

ಅಸ್ಮಾನ್ಸಾಧುಃ ವಿಚಿಂತ್ಯ ಸಂಯಮ ಧನಾನುಚ್ಚೈಃ ಕುಲಂ ಚಾತ್ಮನ
ಸ್ತ್ವಯಸ್ಯಾಃ ಕಥಮಪ್ಯಬಾಂಧವಕೃತಾಂ ಸ್ನೇಹ ಪ್ರವೃತ್ತಿಂ ಚ ತಾಂ
ಸಾಮಾನ್ಯ ಪ್ರತಿಪತ್ತಿ ಪೂರ್ವಕವಿಯಂ ದಾರೇಷು ದೃಶ್ಯಾತ್ವಯಾ
ಭಾಗ್ಯಾಯತ್ತಮತಃ ಪರಂನ ಬಲು ತದ್ವಾಚ್ಯಂ ವಧೂಬಂಧುಭಿಃ.

ಬಗೆದುಂ ನಿನ್ನನ್ವಯಾಯೋನ್ನತಿಯನಿವಳತಿ ಸ್ನೇಹ ಸಂಬಂಧಮಂ ನೀಂ
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮ ರೆಯದೇನಾನುಮೆಂದಾಗಳುಂ ಮೆ
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗೆಡದಂತಾಗೆ ಪಾಲಿಪ್ಪುದಿಂತೀ
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ.

ರಾಜಶೇಖರನ ಕರ್ಪೂರಮಂಜರಿ ಎಂಬ ಪ್ರಾಕೃತ ಸಟ್ಟಕದ ಮೂಲವನ್ನು ನೇಮಿಚಂದ್ರನು ಹೀಗೆ ಬಳಸಿಕೊಂಡಿದ್ದಾನೆ.

ಅವತಾರಿಸಿಂದುವುದುನಿರ್ವಿಗೆ ತೋರಲಪ್ಪೆಂ
ದಿನಮಧ್ಯದೊಳ್ ರಥಮುಮಂ ರವಿಯಾ ನಿಲಿಪ್ಪೆಂ
ದಿವಿಜಾತ ಯಕ್ಷಗಣಸಿದ್ಧರ ಪೆಣ್ಗಳಂ ಸಾ
ರ್ಚುವೆನಪ್ಪುದಿಲ್ಲಮಿಳೆಯೋಳೆನಗೊಂದಸಾಧ್ಯಂ.

ಉರಿಪುವುದೋ ಪೊದ ರಿಗಳಿಂ ಜಳಮಂ ತಿಮಿರಗಳಿಂದಿವಾ
ಕರನನಡುರ್ತು ಬೆಂಕೊಳಿಪುದೋ ಮಣಿದರ್ಪಣಮಾಗೆ ಮಾಳ್ಪುದೋ
ಪರಿಣತ ಚಂದ್ರನಂ ನಿನಗೆ ತಾರಗೆಯಂ ತಳದಿಂದ ಕೋದಳಂ
ಕರಿಪುದೋ ದೇವ ನಿನ್ನ ವನಿತಾಜನಪೀನ ಪಯೋಧರಂಗಳಿಂ.

ಶ್ರೀಹರ್ಷನ ರತ್ನಾವಳಿಯನ್ನು ಸಿಂಗರಾರ್ಯನು ಕೃಷ್ಣಕತೆಯಾಗುವಂತೆ ಹೀಗೆ ಅನುವಾದಿಸಿಕೊಂಡಿದ್ದಾನೆ.

ಶ್ರೀಹರ್ಷೋ ನಿಪುಣ ಕವಿಃ ಪರಿಷದಪ್ಯೇಷಾ ಗುಣಗ್ರಾಹಿಣೀ
ಲೋಕೇ ಹಾರಿ ಚ ವತ್ಸರಾಜಚರಿತಂ ನಾಟ್ಯೇ ಚ ದಕ್ಷಾ ವಯಂ
ವಸ್ತ್ವೇಕೈಕಮಪೀಹ ವಾಂಛಿತ ಫಲಪ್ರಾಪ್ತೇಃ ಪದಂಕಿ ಪುನ -
ರ್ಮದ್ಭಾಗ್ಯೋ ಪಚಯಾದಯಂ ಸಮುದಿತಃ ಸರ್ವೋ ಗುಣಾನಾಂ ಗಣಃ.

ಸರಸಂ ಶ್ರೀ ಸಿಂಗರಾರ್ಯಂ ಕವಿ ಸಭೆಯನಿತುಂ ಸದ್ಗುಣಗ್ರಾಹಿ ಕಟ್ಟ
ಚ್ಚರಿವೆತ್ತೀ ವಾಸುದೇವಂ ಕೃತಿಗಮರ್ದೊಡೆಯಂ ನಾಟ್ಯದೊಳ್ದಕ್ಷರಾಮುಂ
ಬೆರೆದಿಲ್ಲೀ ವಸ್ತುವೊಂದೊಂದೆಳಿಸಿದ ಪುರುಳಿಂ ಬೀ ವೊಳ್ದಾಣಮಿನ್ನೇ
ನೊರೆವೆಂ ಭಾಪೆನ್ನ ಪುಣ್ಯೋದಯದೆ ಶುಭಗುಣಗ್ರಾಮವೇ ಪೊಣ್ಮಿತೆಲ್ಲಂ.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಾಟಕಗಳ ಸುಳಿವನ್ನು ತಿರುಮಲಾರ್ಯನು ತನ್ನ ಕಾವ್ಯದಲ್ಲಿ ತಿಳಿಸಿದ್ದಾನೆ (ಚಿಕ್ಕದೇವರಾಜ ವಿಜಯದಲ್ಲಿ).

ಕಿವಿಗಿನಿದಪ್ಪ ದಿಬ್ಬ ಸವಿರಬ್ಬಮನೋದಿಸುತೋರ್ಮೆ ಕಣ್ಣಳೊಳ್
ಕವಿಸೆ ರಸಂಗಳಂ ನಟಿಪ ನಾಟಕಮುಂ ನೆರೆನೋಡುತೊರ್ಮೆ ನು
ಣ್ಬವಣೊಳೆ ಪಾಡುತೋರ್ಮೆ ಜತಿಗೂಡಿರೆ ಬಾಜಿಸುತೊರ್ಮೆ ಬೀಣೆಯಂ
ವಿವಿಧ ವಿನೋದದಿಂ ಕೆಳೆಗುಮಪ್ರತಿಮಂ ಸೊಗದಿಂದೆ ಕಾಲಮಂ.

ಸಿಂಗರಾರ್ಯನ ಮಿತ್ರವಿಂದಾಗೋವಿಂದ ರತ್ನಾವಳಿ ಅನುವಾದವೆಂದು ಕವಿ ಹೇಳಿಕೊಂಡಿಲ್ಲ. ಕನ್ನಡದ ಪ್ರಥಮ ನಾಟಕ ಕೃತಿ ಎಂಬ ದಾಖಲೆ ಬಿಟ್ಟರೆ ಬೇರೇನೂ ಇಲ್ಲ.

ಇದಾದ ನಂತರ ಕನ್ನಡ ಸಾಹಿತ್ಯದಲ್ಲಿ ನಾಟಕದ ಅನುವಾದವಾಗಲಿ, ನಾಟಕದ ರಚನೆಯಾಗಲಿ ಕಂಡುಬರುವುದಿಲ್ಲ. ಇಂಗ್ಲೀಷ್ ನಾಟಕಗಳ ಅನುಕುರಣೆಯಿಂದ ಹುಟ್ಟಿದ ಮುಂಬಯಿಯ 'ಬಾಲಿವಾಲಾ' ಎಂಬ ಪಾರ್ಸಿ ನಾಟಕ ಸಂಸ್ಥೆ ೧೮೮೦ರಲ್ಲಿ ಮೈಸೂರು, ಬೆಂಗಳೂರುಗಳಿಗೆ ಭೇಟಿಯಿತ್ತಿತು. ಕಲೆ ಮತ್ತು ಸಾಹಿತ್ಯಗಳಿಗೆ ಅಪಾರ ಆಸಕ್ತಿ ಇದ್ದ ಮೈಸೂರು ಸಂಸ್ಥಾನದವರು ನಾಟಕ ಸಂಸ್ಥೆಯ ಪ್ರದರ್ಶನಕ್ಕೆ ಅವಕಾಶವಿತ್ತರು. ಚಾಮರಾಜ ಒಡೆಯರವರು ಯಕ್ಷಗಾನ ತಂಡಗಳನ್ನು ಕರೆಯಿಸಿ ಪ್ರದರ್ಶನವನ್ನು ಏರ್ಪಡಿಸುತ್ತಿದ್ದರು. ಬಾಲಿವಾಲಾ ಕಂಪನಿ ನಾಟಕಗಳಿಂದ ಆಕರ್ಷಿತರಾದ ಮಹಾರಾಜರು ೧೮೮೨ರಲ್ಲಿ ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾವನ್ನು ಸ್ಥಾಪಿಸಿದರು. ರಂಗ ಮಂಟಪದ ವಿವರಗಳನ್ನು ತಿಳಿಯುವುದಕ್ಕಾಗಿ ಬೊಂಬಾಯಿಗೆ ಕಲಾವಿದರನ್ನು ಕಳುಹಿಸಿದರು. ಮೊಟ್ಟ ಮೊಟ್ಟಮೊದಲು ಇದಕ್ಕೆ ಬೇಕಾಗುವ ನಾಟಕವನ್ನು ಮಂಡ್ಯ ರಂಗಾಚಾರನೆಂಬುವನು ಉಷಾಹರಿಣವೆಂಬ ನಾಟಕವನ್ನು, ಮರಾಠಿ ಮೂಲದ ನಾಟಕವನ್ನು ಬರೆದುಕೊಟ್ಟನು. ಆ ಕಾಲಕ್ಕೆ ಈ ಸಭೆಯಿಂದಾಗಿ ನಾಟಕಗಳ ಕೊರತೆಯುಂಟಾಯಿತು. ಆ ಕೊರತೆ ನೀಗಿಸಲು ದಿವಾನ್ ರಂಗಾಚಾರ್ಯ ಅವರ ಪ್ರೋತ್ಸಾಹದ ಪರಿಣಾಮವಾಗಿ ಬಸವಪ್ಪಶಾಸ್ತ್ರಿಗಳು ನಾಟಕ ರಚನೆಗೆ ಕೈಹಾಕಿದರು. ಈ ರೀತಿಯಾಗಿ ಅರಮನೆಯಲ್ಲಿ ನಾಟಕ ರಂಗಕ್ಕಾಗಿ ಅನೇಕ ನಾಟಕಗಳು ಅನುವಾದವಾಗುತ್ತಿದ್ದವು. ಅರಮನೆಯ ಈ ಶಿಷ್ಟ ಸಂಸ್ಕೃತಿಯನ್ನು ವಿರೋಧಿಸಿ ಬೀದಿ ಬೀದಿಗಳಲ್ಲೂ ರಂಗಸ್ಥಳಗಳು ಕಾರ್ಯಪ್ರವೃತ್ತವಾಗಿ ಒಂದೊಮ್ಮೆ ಅದಕ್ಕಾಗಿಯೇ ಅನುವಾದಿಸುವ ಯಾಂತ್ರಿಕ ಕ್ರಿಯೆಯೂ ನಡೆದಿದ್ದಿದೆ. ಈ ರೀತಿಯಾಗಿ ಅಂದು ಮೈಸೂರು ಪ್ರಾಂತ್ಯದಲ್ಲಿ ರಂಗಭೂಮಿ ಅನುವಾದವನ್ನು ಹುಟ್ಟುಹಾಕಿದೆ. ಬಸವಪ್ಪಶಾಸ್ತ್ರಿಗಳು, ನರಹರಿ ಜಯಾಚಾರ್ಯ, ಸೋಸಲೆ ಅಯ್ಯಾಶಾಸ್ತ್ರಿಗಳು, ನಂಜನಗೂಡು ಸುಬ್ಬಾಶಾಸ್ತ್ರಿಗಳಖು, ಶ್ರೀಕಂಠ ಶಾಸ್ತ್ರಿ, ಅನಂತನಾರಾಯಣಶಾಸ್ತ್ರಿ,ಹೀಗೆ ಅನುವಾದಕರ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇಂಗ್ಲೀಷ್ ಅನುವಾದಗಳು ಕಂಡು ಬಂದರೂ ಸಂಸ್ಕೃತ ಭಾಷೆಯು ಅಂತಸ್ತವಾಗಿರುವ ಪರಿಸರದಿಂದ ಬಂದಿರುವುದು. ಅಭಿಜಾತ ಪರಂಪರೆಗೆ ಅನುಗುಣವಾಗಿ ನಾಟಕಗಳು ಬೇಕಾಗಿರುವುದರಿಂದ ಸಂಸ್ಕೃತ ನಾಟಕಗಳು ವಿಪುಲ ವಾಗಿ ಬಂದಿವೆ. ಈ ಎಲ್ಲ ಕಾರಣಗಳಿಂದ ರಂಗಭೂಮಿ ಅನುವಾದ ಪರಿಕಲ್ಪನೆಯನ್ನು ಹೊಟ್ಟು ಹಾಕಿದೆ. ಇದೇ ರೀತಿ ಉತ್ತರ ಕರ್ನಾಟಕದಲ್ಲೂ ಈ ರಂಗಪರಂಪರೆ ಉತ್ತರ ಕರ್ನಾಟಕದಲ್ಲಿ ೧೨ನೆಯ ಶತಮಾನದಿಂದಲೇ ಜಾನಪದೀಯ ಸ್ವರೂಪದಲ್ಲಿ ನಾಟಕ ಇತ್ತು. ಜಾತಿಗರ ಕುಣಿತ, ಯಕ್ಷಗಾನ, ದೊಡ್ಡಾಟ, ಸಣ್ಣಾಟ, ಬಯಲಾಟ, ಭಾಗವತರಾಟ, ದಾಸರಾಟ, ರಾಧನಾಟ ಹೀಗೆ ಬಹುವಿಧ ಜಾನಪದ ಪ್ರಯೋಗಗಳು ಬಹು ಬಗೆಯ ನಾಟಕದ ಗದ್ಯ, ಪದ್ಯ ಸಾಹಿತ್ಯಕ್ಕೆಕ ಹುಟ್ಟು ಹಾಕಿ ಸಾಹಿತ್ಯವನ್ನು ನುಡಿಸಿದ ನಾಟಕ ಪರಂಪರೆಯಲ್ಲಿ ತನ್ನ ಬೇರುಗಳನ್ನು ಉತ್ತರ ಕರ್ನಾಟಕದ ಊರೂರುಗಳಲ್ಲಿ ಊರುತ್ತಾ ಬಂದಿದೆ. ಆದರೂ 'ದಾಸರಾಟ' ಆಟದಲ್ಲಿ, ದೋಸೆಯ ಊಟ ಊಟವಲ್ಲ ಎಂಬ ಗಾದೆ ಹುಟ್ಟಿಕೊಂಡು

ಸಾಹಿತ್ಯ ಬದ್ಧ ಜಾನಪದ ನಾಟಕ ಗ್ರಂಥಸ್ಥವಾಗಿ ಬೆಳೆಯದಿರುವುದಕ್ಕೆ ಕಾರಣವಾಯಿತೇನೋ (ಕನ್ನಡ ನಾಟಕ ಸಾಹಿತ್ಯ ಭಾಗ ೨, ಲೇ: ಉತ್ತರ ಕರ್ನಾಟಕದಲ್ಲಿ ನಾಟಕ ಸಾಹಿತ್ಯದ ಉತ್ತರೋತ್ತರ - ಎಸ್ಕೆ).

ಶೃಂಗಾರದ ಉದಾತ್ತ ಗೀತಕೃತಿ 'ಶ್ರೀ ಕೃಷ್ಣ ಪಾರಿಜಾತ', 'ಕಡ್ಲಿಮಡ್ಲಿ', 'ಸಂಗ್ಯಾ-ಬಾಳ್ಯ'ದಂತಹ ಐತಿಹಾಸಿಕ ದಾಖಲೆಯ ನಾಟಕಗಳು ಉತ್ತರ ಕರ್ನಾಟಕದಲ್ಲಿವೆ. ಶಾಂತಕವಿಗಳು ಮರಾಠಿ ನಾಟಕಗಳು ಉತ್ತರ ಕರ್ನಾಟಕದ ಮೇಲೆ ನಡೆಸಿದ ದಾಳಿಯನ್ನು ತಮ್ಮ ನಾಟಕಗಳಿಂದ ಹಿಮ್ಮೆಟ್ಟಿಸಿದರು. ಈ ಕಾಲಘಟ್ಟದಲ್ಲಿ ಉತ್ತರ ಕರ್ನಾಟಕದಲ್ಲಿ ವೃತ್ತಿರಂಗ ನಾಟಕಗಳ ಒಂದು ವೈಭವವೂ ಇತ್ತು. ಕೊಣ್ಣೂರು ಕಂಪನಿ, ಶಿರಹಟ್ಟಿ ಕಂಪನಿ ಇತ್ಯಾದಿ ಕಂಪನಿಗಳು ಪ್ರಯೋಗಿಸುತ್ತಿದ್ದ ನಾಟಕಗಳು ಮರಾಠಿ ನಾಟಕಗಳ ಅನುವಾದಗಳಾಗಿದ್ದವು. ಇವು ಕನ್ನಡದ ನಾಟಕ ಸಾಹಿತ್ಯದ ಬೆಳವಣಿಗೆಗೂ ಅವಕಾಶ ಕಲ್ಪಿಸಿದವು. ಮೊದಲು ನಾಟಕಗಳ ಅನುವಾದಗಳಾಗಿ ನಂತರ ಸೃಜನಶೀಲ ನಾಟಕಗಳು ಬಂದವು. ಈ ರೀತಿ ದೇಸಿ ನಾಟಕಗಳ ಪ್ರದರ್ಶನದ ಜೊತೆಯಲ್ಲಿ ಶೇಕ್ಸಪಿಯರ್ ನಾಟಕಗಳನ್ನು ಅನುವಾದಿಸಿ ಅವುಗಳನ್ನು ರಂಗಕ್ಕೆ ಅಳವಡಿಸುವ ಪ್ರಕ್ರಿಯೆಯೊಂದು ತೋರಿಬರುತ್ತದೆ. ಐರೋಪ್ಯ ರಂಗಭೂಮಿಯ ಪ್ರಾಯೋಗಿಕತೆ ಆ ಕಾಲಕ್ಕೆ ನಡೆಯುತ್ತಿತ್ತು. ಈ ಹಂತದಲ್ಲಿ ರಂಗನಾಟಕಗಳಾಗಿ ಸಂಸ್ಕೃತಾನುವಾದಗಳನ್ನು ಬೆಳೆಸುವ ಪ್ರಕ್ರಿಯೆ ಚುರುಕಿನಿಂದ ನಡೆಯಿತು.

ಈ ಸಂಸ್ಕೃತ ನಾಟಕಗಳೇ ಏಕೆ ಅನುವಾದಗೊಂಡವು ಎಂಬುದನ್ನು ಕುರ್ತುಕೋಟಿಯವರು ಈ ರೀತಿ ಹೇಳಿದ್ದಾರೆ. ''ನಾಟಕದಲ್ಲಿ ಲೋಕಧರ್ಮಿ ಮತ್ತು ನಾಟ್ಯಧರ್ಮಿಗಳೆಂಬ ಎರಡು ವೃತ್ತಿಗಳು ಇವುಗಳಲ್ಲಿ ಒಂದರ ಲಕ್ಷಣ ಅನುಕರಣವಾದರೆ ಇನ್ನೊಂದರದು ನಿರ್ಮಾಣವೆನ್ನಬಹುದು. ಸಂಸ್ಕೃತ ನಾಟಕ ಇವುಗಳಲ್ಲಿ ಎರಡನೆಯದನ್ನು ಅವಲಂಬಿಸಿತೆಂದು ಕಾಣುತ್ತದೆ. ಅದೇನೇ ಇದ್ದರೂ ನಿರ್ಮಾಣ ಕೌಶಲಕ್ಕೆ ಮಹತ್ವವಿದ್ದಾಗ ಕಾವ್ಯಾನುಭವ ಸಹಜವಾಗಿಯೇ ವ್ಯಕ್ತಿ ನಿರಪೇಕ್ಷವಾಗುತ್ತದೆ. ರಸಾನುಭಾವ ಹೀಗೆ ವ್ಯಕ್ತಿ ನಿರಪೇಕ್ಷಾಗುವುದರಿಂದ ಅನುಭವದೊಡನೆ ಅದರ ಬಗ್ಗೆ ತಿಳಿವಳಿಕೆಯೂ ಸಾಧ್ಯವಾಗುತ್ತದೆ. ರಸಗಳನ್ನು ಮತ್ತಷ್ಟು ಸವಿಗೊಳಿಸುವ ವ್ಯಾಪಾರದಲ್ಲಿ ತೊಡಗಿರುವ ಕವಿ ಪ್ರತಿಭೆಯೇ ಆಗಿರಲಿ, ವಿಷಯಗಳನ್ನು ಅವು ಇರುವ ರೀತಿಯಲ್ಲಿಯೇ ತೆರೆದು ತೋರಿಸುವ ಪಂಡಿತರ ನಿಶ್ಚಲ ಪ್ರಜ್ಞೆಯೇ ಆಗಿರಲಿ ಗುರಿ ಒಂದೇ. ಈ ಬೆಳಕಿನಲ್ಲಿ ಸಂಸ್ಕೃತ ಸಾಹಿತ್ಯವನ್ನು ಪರೀಕ್ಷಿಸಿದಾಗ ಈ ಗುರಿಯನ್ನು ಸಾಧಿಸುವುದರಲ್ಲಿ ಕಾವ್ಯಕ್ಕಿಂತ ಸಂಸ್ಕೃತ ನಾಟಕದ ಸಿದ್ಧಿ ಮಹತ್ತರವಾಗಿದೆಯೆಂದು ಅನಿಸದಿರದು. ಇಂಥ ಸಿದ್ಧಿಯ ಪ್ರಯತ್ನವಿಲ್ಲದ ಅನುಭವದ ಸಂಯೋಜನೆ ಎಷ್ಟೇ ಕುಶಲವಾಗಿದ್ದರೂ ರಂಗದಲ್ಲಿಯ ಚಿತ್ರದಂತಾಗಬಹುದು. ಆದ್ದರಿಂದ ಸಂಸ್ಕೃತ ನಾಟಕದಲ್ಲಿ ಅನುಭವದ ವಿತರಣದಷ್ಟೇ ಅನುಭವದ ಮೌಲ್ಯಮಾಪನವು ಮಹತ್ವದ್ದಾಗಿದೆ. ಬಹುಶಃ ನಾಟಕದ ಶ್ರೇಷ್ಠತೆಯ ಮಟ್ಟವನ್ನು ಅಳೆಯಲು ಇದು ಪ್ರಮಾಣವೂ ಆಗುತ್ತದೆ. ಕಾಳಿದಾಸನ ಶಾಕುಂತಲ, ಭವಭೂತಿಯ ಉತ್ತರ ರಾಮಚರಿತೆ ಶೂದ್ರಕನ ಮೃಚ್ಛಕಟಿಕ ಈ ನಾಟಕಗಳ ಉತ್ತರಕ್ಕೆ ಇತರ ನಾಟಕಗಳು ಬರಲಾರವು. ಬಹುಶಃ ಈ ಕಾರಣಕ್ಕಾಗಿಯೇ ಈ ನಾಟಕಗಳು ಬೇರೆ ಬೇರೆಯಾದ ಅನುವಾದಗಳನ್ನು ಕಂಡವು''(ಸಂಪಾದಕರು ಜಿ. ಎಸ್. ಶಿವರುದ್ರಪ್ಪ ಕನ್ನಡ ನಾಟಕ ಪರಂಪರೆ ಮತ್ತು ಪ್ರಯೋಗ).

ಕೆ.ವಿ. ಸುಬ್ಬಣ್ಣನವರು ಕನ್ನಡ ನಾಟಕಗಳ ಕುರಿತು ಮಾತನಾಡುತ್ತಾ ಹೀಗೆ ಹೇಳುತ್ತಾರೆ. ಕನ್ನಡದಲ್ಲಿ ನಾಟಕ ಕೃತಿ ಇರಲಿಲ್ಲ; ಪ್ರಯೋಗವಿತ್ತು. ಈ ವಿಷಯಕ್ಕೆ ಹೆಚ್ಚು ಒತ್ತುಕೊಟ್ಟು ಹೇಳಬೇಕೆಂದರೆ, ಸಂಸ್ಕೃತ ನಾಟಕಕ್ಕೂ ರಂಗಭೂಮಿ ಪ್ರಕ್ರಿಯೆಗೂ ಒಂದು ಬಗೆಯ ಸಂಬಂಧವಿದೆ. ಈ ಬಗೆಯ ಸಂಬಂಧ ಹೇಗೆ ಉಂಟಾಯಿತು ಮತ್ತು ಹೇಗೆ ಮುಂದುವರೆಯಿತು ಎಂಬುದರ ಬಗ್ಗೆ ಸುಬ್ಬಣನವರ ಮಾತನ್ನು ಅನ್ವಯಿಸಿಕೊಳ್ಳಬಹುದು. ''ಕನ್ನಡದಲ್ಲಿ ನಾಟಕವೆಂಬ ಸಾಹಿತ್ಯ ಪ್ರಕಾರ ಹುಟ್ಟಿದ್ದು ಮುಖ್ಯವಾಗಿ ಸಂಸ್ಕೃತದ ಪ್ರಭಾವದಿಂದ ಎನ್ನುವುದು ಸ್ಪಷ್ಟವಾಗುತ್ತದೆ. ಸಂಸ್ಕೃತದ ಪ್ರಭಾವ ದಿಂದ ಬೆಳೆದು ಬಂದ ಶಿಷ್ಟ ನಾಟಕ ಸಾಹಿತ್ಯ ಮತ್ತು ಜೊತೆಜೊತೆಗೆ ಬೆಳೆದು ಬಂದ ಜನಪ್ರಿಯ ರಂಗಭೂಮಿ. ಇವುಗಳ ಆಶ್ಚರ್ಯವನ್ನು ನಾವು ಇಂದಿಗೂ ನೋಡುತ್ತೇವೆ. ಇವತ್ತಿಗೂ ನಮ್ಮ ನಿಜವಾದ ರಂಗಭೂಮಿಯೆಂದರೆ ಜಾನಪದ ರಂಗಭೂಮಿಯೇ ಕಂಪನಿ ನಾಟಕಗಳೇ. ಈ ಪ್ರಯೋಗಗಳಿಗೆ ಹಸ್ತಪ್ರತಿ ಇರುತ್ತವೆಯೇ ಹೊರತು ನಾಟಕವೆಂಬ ಸಾಹಿತ್ಯ ಕೃತಿ ಅಲ್ಲ. ಮುಖ್ಯವಾಗಿ ಸಂಸ್ಕೃತ ನಾಟಕದ ಪ್ರಭಾವದಿಂದ ನಮ್ಮಲ್ಲಿಯ ಶಿಷ್ಟ ವರ್ಗಕ್ಕೆ ಮೀಸಲಾದ ರಂಗಭೂಮಿ ಸಾಹಿತ್ಯ ಪ್ರಕಾರ ಒಂದು ತಯಾರಾಯಿತು. ಇದು ಇವತ್ತಿನವರೆಗೂ ಬೆಳೆದುಕೊಂಡು ಬಂದಿದೆ ಎನ್ನುವುದು ಆಶ್ಚರ್ಯಕರ. ನಾವು ನಾಟಕದ ಬಗ್ಗೆ ಮಾತಾಡುವಾಗೆಲ್ಲಾ ಈ ಶಿಷ್ಟ ನಾಟಕದ ಅಂದರೆ ಸಾಹಿತ್ಯಿಕ ನಾಟಕದ ಬಗ್ಗೆಯೇ ಸಾಹಿತ್ಯವೇ ಇಲ್ಲದ ಜನಪ್ರಿಯ ಕಂಪನಿ ನಾಟಕಗಳ ಬಗೆಗೆ ಅಲ್ಲ. ಹೀಗೆ ಶಿಷ್ಟ ವರ್ಗಕ್ಕಾಗಿಯೇ ಬೆಳೆದು ಬಂದ ಈ ಕನ್ನಡ ನಾಟಕ, ಪ್ರಾರಂಭದ ಸಂಸ್ಕೃತ ನಾಟಕಗಳ ಭಾಷಾಂತರದಿಂದ ಹಿಡಿದು ಈ ಶತಮಾನದ ಮೊದಲಿನ ಇಂಗ್ಲೀಷ್ ನಾಟಕಗಳ ರೂಪಾಂತರದವರೆಗೆ ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡೇ ಬಂದಿದೆ''. ಈ ಮಾತು ನಮ್ಮ ಚರ್ಚೆಯ ಪ್ರಧಾನ ಭಾಗಕ್ಕೆ ವಿಶೇಷ ಒತ್ತನ್ನು ನೀಡುತ್ತದೆ. ಅಂತು ಅನುವಾದ ಎಂಬುದು ಕೇವಲ ಒಂದು ಉದ್ದಿಷ್ಟ ಭಾಷೆಯಿಂದ ಇನ್ನೊಂದು ಉದ್ದಿಷ್ಟ ಭಾಷೆಗೆ ಪ್ರಕ್ರಿಯೆ ಗೊಳ್ಳುವುದಲ್ಲ. ಇದು ಭಾಷೆ, ಚರ್ಯೆ, ಪ್ರಕಾರಗಳು ಹೀಗೆ ಹಲವು ಬಗೆಗಳು ಒಟ್ಟಾಗಿ ಒಂದಾಗಿ ರೂಪಗೊಳ್ಳುವ ಸಂಗತಿಗಳೇ ಆಗಿವೆ. ಅನುವಾದ ಎಂಬುದು ಕೊನೆಗೂ ಒಂದು ಬಗೆಯ ಸಾಮೂಹಿಕ ಸೃಷ್ಟಿಯೇ. ಅನುವಾದಕಾರ ಒಬ್ಬ ನಿರೂಪಕ ಮಾತ್ರನಾಗಿ ಇಲ್ಲಿ ಉಳಿದು ಬಿಡುತ್ತಾನೆ.

ಜನಪದ ರಂಗಭೂಮಿ, ರಾಜಾಶ್ರಯದಲ್ಲಿ ಬೆಳೆದುಬಂದ ಕರ್ನಾಟಕ ರಂಗಭೂಮಿ ಕಾಲಾನು ಕ್ರಮದಲ್ಲಿ ವೃತ್ತಿರಂಗಭೂಮಿಯಾಗಿ ಪರಿವರ್ತನೆಯಾಯಿತು. ಉತ್ತರ ಕರ್ನಾಟಕ ವೃತ್ತಿರಂಗ ಭೂಮಿಯ ಕ್ಷೇತ್ರಕ್ಕೆ ಒಳ್ಳೆಯ ಕೊಡುಗೆಯನ್ನು ನೀಡಿದೆ. ಮರಾಠಿ ವೃತ್ತಿರಂಗಭೂಮಿಯ ಸಂಪರ್ಕಕ್ಕೆ ಬರುವ ಮೊದಲೇ ಕರ್ನಾಟಕದಲ್ಲಿ ಕೆಲವು ಹವ್ಯಾಸಿ ತಂಡಗಳಿದ್ದವು. ಶಾಂತಕವಿಗಳು ವೃತ್ತಿರಂಗಭೂಮಿ ಯನ್ನು ಅಸ್ತಿತ್ವಕ್ಕೆ ತಂದರು. ಮೊದಲು ಹವ್ಯಾಸಿ ತಂಡಗಳಿದ್ದವು. ಮರಾಠಿ ವೃತ್ತಿ ರಂಗಭೂಮಿಯ ಮುಂದೆ ಹವ್ಯಾಸಿ ತಂಡಗಳು ಸೋತವು. ಜನ ಮರಾಠಿ ನಾಟಕಗಳಿಗೆ ಮುಗಿಬೀಳುವಂತಾಯಿತು. ಮರಾಠಿ ರಂಗಭೂಮಿಯ ಈ ಆಕ್ರಮಣವನ್ನು ಶಾಂತಕವಿಗಳು ವಿರೋಧಿಸಿದರು. ಕರ್ಕಿಯ ಭಾಗವತರಾಟ ಮತ್ತು ಸಂಸ್ಕೃತ ನಾಟಕಗಳೆರಡರ ಸಮನ್ವಯತೆಯನ್ನು ಸಾಧಿಸಿ ೧೮೭೩ರಲ್ಲಿ ನಾಟಕ ಮಂಡಳಿಯೊಂದನ್ನು ಸ್ಥಾಪಿಸಿದರು. ೧೮೭೭-೭೮ರಲ್ಲಿ ಉತ್ತರ ಕರ್ನಾಟಕದಿಂದ, ಮೈಸೂರಿಗೆ ತನ್ನ

ಕಾರ್ಯಕ್ಷೇತ್ರವನ್ನು ಮರಾಠಿ ರಂಗಭೂಮಿ ವಿಸ್ತರಿಸಿಕೊಂಡಿತು. ಜಯಚಾಮರಾಜೇಂದ್ರ ಒಡೆಯರ ಸಮ್ಮುಖದಲ್ಲಿ ಸೌಭದ್ರ ಹಾಗೂ ಶಾಕುಂತಲ ನಾಟಕಗಳು ಭಾಷೆಯಲ್ಲಿ ವ್ಯತ್ಯಾಸವಿದ್ದರೂ, ಜನತೆಯನ್ನು ಆಕರ್ಷಿಸಿದವು. ೧೯೭೮ರಲ್ಲಿ ಮೂಸ್ ನೇತೃತ್ವದ ಬೊಂಬಾಯಿಯ 'ವಿಕ್ಟೋರಿಯಾ ಪಾರ್ಸಿ ನಾಟಕ ಕಂಪನಿ' ಬಾಲಿವಾರು ನಾಟಕ ಮಂಡಳಿಯ ರಂಗಪ್ರಯೋಗಗಳು ಕನ್ನಡಿಗರನ್ನು ಅಮೋಘವಾಗಿ ಆಕರ್ಷಿಸಿದವು. ಹೀಗೆ ಮರಾಠಿ ಹಾಗೂ ಪಾರ್ಸಿ ನಾಟಕ ಮಂಡಳಿಗಳ ಪ್ರಭಾವ, ಪರಿಣಾಮಗಳು ಕರ್ನಾಟಕ ರಂಗಭೂಮಿಯ ಹೊಸ ಆವಿಷ್ಕಾರಕ್ಕೆ ದಾರಿಯಾದವು. ಈ ಹಿನ್ನೆಯಲ್ಲಿ ೧೮೮೮ರಲ್ಲಿ ಶ್ರೀ ಚಾಮರಾಜೇಮದ್ರ ಕರ್ನಾಟಕ ಸಭಾ ಹಾಗೂ ಮಂಡ್ಯಂ ರಂಗಾಚಾರ್ಯರ 'ರಾಜಧಾನಿ ನಾಟಕ ಮಂಡಳಿ'ಗಳ ಅಸ್ತಿತ್ವಕ್ಕೆ ಬಂದವು. ಇದರಿಂದಾಗಿ ಮೈಸೂರು ಭಾಗದಲ್ಲಿ ಸಂಸ್ಕೃತ/ ಇಂಗ್ಲಿಶ್ ಭಾಷಾ ನಾಟಕಗಳು ಅನುವಾದಿತವಾಗಲು ಪ್ರಾರಂಭವಾದವು. ೧೮೮೩ರಲ್ಲಿ ಶ್ರೀ ಚಾಮುಂಡೇಶ್ವರಿ ನಾಟಕ ಸಭಾ, ಗೊಲ್ಲರ ಪೇಟೆ ನಾಟಕ ಸಭೆ, ೧೮೯೫ರಲ್ಲಿ ಶ್ರೀಕಂಠೇಶ್ವರ ಕರ್ನಾಟಕ ನಾಟಕ ಸಭೆ, ೧೮೯೦ರಲ್ಲಿ ಬುಳ್ಳಪ್ಪನವರ ಕಂಪನಿಗಳು ಅಸ್ತಿತ್ವಕ್ಕೆ ಬಂದವು. ಹೀಗೆ ಮೈಸೂರು ಪ್ರಾಂತ್ಯದಲ್ಲಿ ರಾಜಾಶ್ರಯದಿಂದ ರಂಗಭೂಮಿ ಅಭಿವೃದ್ಧಿ ಹೊಂದಿತು. ಉತ್ತರ ಕರ್ನಾಟಕದಲ್ಲಿ ಅದು ಜನಪದ ರಂಗಭೂಮಿಯ ಸ್ಫೂರ್ತಿಯ ಹಿನ್ನೆಲೆಯಲ್ಲಿ ಹುಟ್ಟಿ ಮರಾಠಿ ವೃತ್ತಿ ನಾಟಕ ಮಂಡಳಿಗಳ ಪ್ರೇರಣೆ ಪಡೆದು ಜನಾಶ್ರಯದಲ್ಲಿ ಬೆಳೆಯಿತು.

೧೮ ಮತ್ತು ೧೯ನೆಯ ಶತಮಾನಗಳಲ್ಲಿ ಸಂಸ್ಕೃತ ನಾಟಕ ಮತ್ತು ರಂಗಭೂಮಿ ಸಂಪ್ರದಾಯಗಳು ಪುನಾರಚಿತವಾದವು. ಇಂಡಾಲಜಿ ವಿದ್ವಾಂಸರುಗಳಲ್ಲಿ ಈ ಬಗೆಯ ಚರ್ಚೆ ಕಂಡು ಬರುತ್ತದೆ. ೧೭೯೦ ರಲ್ಲಿ ಸರ್ ವಿಲಿಯಂ ಜೋನ್ಸ ಶಾಕುಂತಲವನ್ನು ಅನುವಾದಿಸಿದಾಗಿನಿಂದ ಈ ಬಗೆಯ ಜಿಜ್ಞಾಸೆ ಆರಂಭಗೊಂಡಿತು. ಈ ಪ್ರತಿಕ್ರಿಯೆ ಎರಡು ಬಗೆಯ ವಿಚಾರಧಾರೆಗಳಲ್ಲಿ ಹರಿದುಬಂದಿದೆ. ಗೆಯಟೆ ಮೊದಲಾದವರು ಸಾಹಿತ್ಯಕ್ಕೆ ವೈಯಕ್ತಿಕ ನೆಲೆಯಲ್ಲಿ ಪ್ರತಿಕ್ರಿಯಿಸಿದ ರೊಮ್ಯಾಂಟಿಕ್ ಅನಿಸಿಕೆಗಳನ್ನು ಕೊಟ್ಟರು. ಕೀತ್ ಆ ಕಾಲದ ಧರ್ಮ, ಇತಿಹಾಸ, ಪುರಾಣಗಳಲ್ಲಿ ಅಲ್ಲದೆ ಸಾಂಸ್ಕೃತಿಕ ವಿವರಗಳೊದಿಂಗೆ ನಾಟಕವನ್ನು ವಿಶ್ಲೇಷಿಸಿದ. ಆದರೆ ಈ ಎರಡು ವಾದಗಳ ಪ್ರಮುಖ ಸಮಸ್ಯೆ ಎಂದರೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳನ್ನು ವಿಮರ್ಶೆಯ ಉಪಕರಣವಾಗಿ ಸ್ವೀಕರಿಸದೇ ಇರುವುದು. ಈ ಅವಜ್ಞೆಯ ಹಿಂದೆ ಗೆಯಟೆನ ರೂಮ್ಯಾಂಟಿಕ್ ಕಾವ್ಯ ಮಿಮಾಂಸೆ ಕೀತ್‌ನ್ ಓರಿಯೆಂಟಲಿಸ್ಟ್ ಒಲವು ಪ್ರಮುಖ ಕಾರಣ.

ಈಗಾಗಲೇ ಚರ್ಚಿಸಿರುವಂತೆ ವಸಾಹತು ಪೂರ್ವ ಅನುವಾದಗಳು ಸಾಂಸ್ಕೃತಿಕ ಅನುವಾದಗಳು ಎಂದು ನಿಖರವಾಗಿ ಹೇಳಲಾಗಿದೆ. ಆದರೆ ವಸಾಹತುಶಾಹಿ ಕಾಲಘಟ್ಟದ ಅನುವಾದ ಸಾಹಿತ್ಯಿಕ ಅನುವಾದಗಳು ಎನ್ನಬಹುದು. ಸಾಂಸ್ಕೃತಿಕ ಪಲ್ಲಟಗಳು ಸಂಭವಿಸಿದ್ದು ಸಾಹಿತ್ಯಕ್ಷೇತ್ರದ ಹೊರಗೆ. ಅದು ಸಾಹಿತ್ಯ ಕ್ಷೇತ್ರ ಪ್ರವೇಶಿಸಿದುದು ತುಂಬ ಕಾಲಾವಕಾಶದ ನಂತರ ಹಾಗಾಗಿಯೇ ಈ ಮಾತು ಅರ್ಥಪೂರ್ಣ ವೆನಿಸಿದೆ. ಎನೆಂದರೆ'' ಪಾಶ್ಚಾತ್ಯ ವಿಮರ್ಶಾ ಪಂಥದವರ ಅವಜ್ಞೆಯ ಈ ದುಷ್ಪರಿಣಾಮ ಕಂಡುಬರುವದು ಸಂಸ್ಕೃತ ನಾಟಕಗಳ ಅನುವಾದದಲ್ಲಿ. ೧೯ ನೆಯ ಶತಮಾನದಿಂದೀಚೆಗೆ ಕನ್ನಡದಲ್ಲಿ

ಬಂದ ಬಹುತೇಕ ಸಂಸ್ಕೃತ ನಾಟಕಗಳ ಅನುವಾದವನ್ನು ಇದಕ್ಕೆ ಉದಾಹರಣೆಗಾಗಿ ನೋಡಬಹುದು. ಈ ಎಲ್ಲ ಅನುವಾದಗಳೂ ಸಂಸ್ಕೃತ ನಾಟಕಗಳ ಸಾಮಾಜಿಕ- ಸಾಂಸ್ಕೃತಿಕ ಹಿನ್ನೆಲೆಯನ್ನು ನಿರ್ಲಕ್ಷಿಸುವ ಮೂಲಕ ಅವನ್ನು ಕಿನ್ನರ ಕಥೆಗಳು ಎಂಬಂತೆ ಗ್ರಹಿಸಿದೆ. ಮೂಲತ : ಈ ನಾಟಕಗಳು ಪಂಡಿತವರ್ಗದ ಆಸ್ವಾದನೆಗಾಗಿ ಸೃಷ್ಟಿಯಾದ ಕೃತಕ ಸಂರಚನೆಗಳು ಎಂದು ಭಾವಿಸಿಕೊಂಡಿವೆ. ಆದ್ದರಿಂಕಲೇ ಈ ಅನುವಾದಗಳಲ್ಲಿ ಸಂವಹನೆಯ ಗುಣವೂ ಇಲ್ಲ. ಬಹುತೇಕ ಅನುವಾದಗಳು ಪುಸ್ತಕದ ಭಾಷೆಯನ್ನು ಬಳಸುತ್ತವೆ. ಸಂಸ್ಕೃತ ಛಂದಸ್ಸುಗಳ ವೈವಿಧ್ಯವನ್ನಾಗಲೀ, ಸಂಸ್ಕೃತ-ಪ್ರಾಕೃತಗಳ ಮಿಶ್ರಣಗಳನ್ನಾಗಲೀ, ಗಂಭೀರಚಿಂತನೆ- ಒರಟು ಹಾಸ್ಯಗಳ ನಡುವಿನ ಭಿನ್ನತೆಯನ್ನಾಗಲೀ ಅನುವಾದದಲ್ಲಿ ಹಿಡಿಯಲು ಪ್ರಯತ್ನಿಸಿಲ್ಲ. ಒಂದು ಚಿಕ್ಕ ಉದಾಹರಣೆ ಕೊಡುವದಾದರೆ ಕಾಳಿದಾಸನ 'ಮಾಲವಿಕಾಗ್ನಿಮಿತ್ರ'ದಲ್ಲಿ ಕುಡಿದು ಅಮಲಿನಲ್ಲಿ ಅಡ್ಡಾದಿಡ್ಡಿಯಾಗಿ ಹೆಜ್ಜೆಯಿಡುತ್ತ ಪ್ರವೇಶಿಸುವ ಒಬ್ಬ ರಾಣಿಯನ್ನು ಒಂದು ಅನುವಾದದಲ್ಲಿ ಪ್ರಮತ್ತಳದ ರಾಣಿಯ ಪ್ರವೇಶ ಎಂದು ಸಂಸ್ಕೃತೀಕರಣ ಗೊಳಿಸಲಾಗಿದೆ. ಹೀಗೆ ಸಣ್ಣ ಸಣ್ಣ ವಿವರಗಳಲ್ಲೂ ಈ ಅನುವಾದಗಳು ಸಂಸ್ಕೃತೀಕರಣಗೊಂಡ ಭಾಷೆಯಲ್ಲಿ ನಿರ್ಜೀವದಾಗಿದಿಟ್ಟಿವೆ'' (ಪು.೮೨ ಸಿರಿಗನ್ನಡ೧, ಭಾರತದ ರಂಗ ಸಂಪ್ರದಾಯಗಳು ; ಪುನರಾವಲೋಕನದ ಒಂದು ಪ್ರಯತ್ನ )

ಈ ಅಂಶವನ್ನು ಗಮನಿಸಿದಾಗ ೧೯ ನೆಯ ಶತಮಾನಕ್ಕೆ ಬಂದ ಅನುವಾದಗಳು ಸಾಹಿತ್ಯಿದ ಅನುವಾದಗಳು ಎಂಬುದು ಗೊತ್ತಾಗುತ್ತದೆ. ಸಾಂಸ್ಕೃತಿಕತೆ ಪ್ರೇರಕ ಅಂಶವಾದರೂ, ಆ ಬಗೆಯಲ್ಲಿ ಪರಿವರ್ತನೆಗಳು ಸಾಧ್ಯವಾಗಿಲ್ಲ ಭಾಷಾತ್ಮಕ ಅಭಿವ್ಯಕ್ತಿ ಈ ಮಾಧ್ಯಮವನ್ನು ಹಿಡಿತಗೊಳಿಸಿದೆ.

ವಸಾಹತು ಪೂರ್ವ ಮತ್ತು ವಸಾಹತುಶಾಹಿ ಕಾಲಘಟ್ಟವನ್ನು ಅನುವಾದದ ದೃಷ್ಟಿಯಿಂದ ಅಧ್ಯಯನಕ್ಕೆ ತೆಗೆದುಕೊಂಡಾಗ ಹಲವಾರು ವೈಶಿಷ್ಟ್ಯಗಳು ನಮ್ಮ ಕಣ್ಣಿಗೆ ಕಾಣಿಸುತ್ತವೆ. ವಸಾಹತು ಪೂರ್ವಕಾಲದಲ್ಲಿ ಬಂದಂಥ ಪಂಪ, ರನ್ನ, ಕುಮಾರವ್ಯಾಸಾದಿ ಕೃತಿಗಳನ್ನು ಅವಲೋಕಿಸಿದಾಗ ಈ ಕವಿಗಳು ರಾಮಾಯಣ, ಮಹಾಭಾರತಾದಿ ಮಹಾಕಾವ್ಯಗಳಿಂದ ಪ್ರೇರಿತರಾಗಿರುವುದು ಕಂಡುಬರುತ್ತದೆ. ಆದರೆ ಈ ಎಲ್ಲ ಅನುವಾದಗಳಲ್ಲಿ ಸಮಕಾಲೀನ ಜನಜೀವನದ ಪ್ರತಿಬಿಂಬ ಅಲ್ಲಲ್ಲಿ ಕಂಡುಬಂದರೂ, ಸಮಾಜದ ವಿಶಿಷ್ಟ ಅಗತ್ಯಗಳಿಗಾಗಿಯೇ ರಚಿತದಂತೆ ಕಾಣವುದಿಲ್ಲ. ಈ ಕವಿಗಳಿಗೆ ಮೂಲ ಕೃತಿಯನ್ನು ತನ್ನದನ್ನಾಗಿ ಮಾಡಿಕೊಳ್ಳುವ ಹಂಬಲವಿದ್ದರೂ ಮೂಲ ಕೃತಿಯಷ್ಟೆ ದೊಡ್ಡ ಪ್ರಮಾಣದ ಸಾಹಿತ್ಯಿಕ ಮೌಲ್ಯದ ಅನುವಾದ ಕೃತಿಯನ್ನು ರಚಿಸುವ ಮಹತ್ವಾಕಾಂಕ್ಷೆ ಹೊಂದಿರುವುದು ಕಾಣುತ್ತದೆ. ಈ ಕೃತಿಗಳು ಸಾಮಾನ್ಯ ಜನರಿಗೆ ಮತ್ತು ಸಾಮಾನ್ಯ ವರ್ಗವನ್ನು ಪ್ರತಿನಿಧಿಸಿ ಬರೆದವು ಸಮಾಜ ಕೇಂದ್ರಿತ ಮತ್ತು ರಾಜಪ್ರೇರಿತ ವ್ಯವಸ್ಥೆಯನ್ನು ವೈಭವಿಕರಿಸಿ ಮೈತಳೆದಿರುವಂತೆ ತೋರುತ್ತದೆ. ಆದ್ದರಿಂದಲೇ ಕೃತಿಕಾರ ತನಗೆ ಬೇಕಾದಂತೆ ಕಥಾ ಸಂವಿಧಾನವನ್ನು ಬದಲಾಯಿಸುವ ಸ್ವಾತಂತ್ರ್ಯವನ್ನು ತೆಗೆದುಕೊಂಡಿದ್ದಾನೆ. ಮೂಲ ಕಥಾನಕದಲ್ಲಿನ ಹಲವಾರು ಉಪೇಕ್ಷಿತ ಪಾತ್ರಗಳನ್ನು ತಮ್ಮ ಕೃತಿಯಲ್ಲಿ ಬೆಳಗುವಂತೆ ಮಾಡಲಾಗಿದೆ. ಮೂಲ ಕೃತಿಯಲ್ಲಿನ ಕೆಲವು ಪಾತ್ರಗಳಿಗೆ ಕವಿ ಎಸಗಿದ್ದಾನೆಂದೆನಿಸಿದರೆ, ಅದನ್ನು ಸರಿಪಡಿಸುವ ಪ್ರಯತ್ನ ಮಾಡಿರುವುದು ಕಾಣುತ್ತದೆ. ಅಷ್ಟೇಅಲ್ಲ ಮೂಲಕೃತಿಯನ್ನಲ್ಲದೆ ಇತರ

ಬಂದ ಬಹುತೇಕ ಸಂಸ್ಕೃತ ನಾಟಕಗಳ ಅನುವಾದವನ್ನು ಇದಕ್ಕೆ ಉದಾಹರಣೆಗಾಗಿ ನೋಡಬಹುದು. ಈ ಎಲ್ಲ ಅನುವಾದಗಳೂ ಸಂಸ್ಕೃತ ನಾಟಕಗಳ ಸಾಮಾಜಿಕ- ಸಾಂಸ್ಕೃತಿಕ ಹಿನ್ನೆಲೆಯನ್ನು ನಿರ್ಲಕ್ಷಿಸುವ ಮೂಲಕ ಅವನ್ನು ಕಿನ್ನರ ಕಥೆಗಳು ಎಂಬಂತೆ ಗ್ರಹಿಸಿದೆ. ಮೂಲತ : ಈ ನಾಟಕಗಳು ಪಂಡಿತವರ್ಗದ ಆಸ್ವಾದನೆಗಾಗಿ ಸೃಷ್ಟಿಯಾದ ಕೃತಕ ಸಂರಚನೆಗಳು ಎಂದು ಭಾವಿಸಿಕೊಂಡಿವೆ. ಆದ್ದರಿಂಕಲೇ ಈ ಅನುವಾದಗಳಲ್ಲಿ ಸಂವಹನೆಯ ಗುಣವೂ ಇಲ್ಲ. ಬಹುತೇಕ ಅನುವಾದಗಳು ಪುಸ್ತಕದ ಭಾಷೆಯನ್ನು ಬಳಸುತ್ತವೆ. ಸಂಸ್ಕೃತ ಛಂದಸ್ಸುಗಳ ವೈವಿಧ್ಯವನ್ನಾಗಲೀ, ಸಂಸ್ಕೃತ-ಪ್ರಾಕೃತಗಳ ಮಿಶ್ರಣಗಳನ್ನಾಗಲೀ, ಗಂಭೀರಚಿಂತನೆ- ಒರಟು ಹಾಸ್ಯಗಳ ನಡುವಿನ ಭಿನ್ನತೆಯನ್ನಾಗಲೀ ಅನುವಾದದಲ್ಲಿ ಹಿಡಿಯಲು ಪ್ರಯತ್ನಿಸಿಲ್ಲ. ಒಂದು ಚಿಕ್ಕ ಉದಾಹರಣೆ ಕೊಡುವದಾದರೆ ಕಾಳಿದಾಸನ 'ಮಾಲವಿಕಾಗ್ನಿಮಿತ್ರ'ದಲ್ಲಿ ಕುಡಿದು ಅಮಲಿನಲ್ಲಿ ಅಡ್ಡಾದಿಡ್ಡಿಯಾಗಿ ಹೆಜ್ಜೆಯಿಡುತ್ತ ಪ್ರವೇಶಿಸುವ ಒಬ್ಬ ರಾಣಿಯನ್ನು ಒಂದು ಅನುವಾದದಲ್ಲಿ ಪ್ರಮತ್ತಳದ ರಾಣಿಯ ಪ್ರವೇಶ ಎಂದು ಸಂಸ್ಕೃತೀಕರಣ ಗೊಳಿಸಲಾಗಿದೆ. ಹೀಗೆ ಸಣ್ಣ ಸಣ್ಣ ವಿವರಗಳಲ್ಲೂ ಈ ಅನುವಾದಗಳು ಸಂಸ್ಕೃತೀಕರಣಗೊಂಡ ಭಾಷೆಯಲ್ಲಿ ನಿರ್ಜೀವದಾಗಿದಿಟ್ಟಿವೆ'' (ಪು.೮೨ ಸಿರಿಗನ್ನಡ ೧, ಭಾರತದ ರಂಗ ಸಂಪ್ರದಾಯಗಳು ; ಪುನರಾವಲೋಕನದ ಒಂದು ಪ್ರಯತ್ನ )

ಈ ಅಂಶವನ್ನು ಗಮನಿಸಿದಾಗ ೧೯ ನೆಯ ಶತಮಾನಕ್ಕೆ ಬಂದ ಅನುವಾದಗಳು ಸಾಹಿತ್ಯಿದ ಅನುವಾದಗಳು ಎಂಬುದು ಗೊತ್ತಾಗುತ್ತದೆ. ಸಾಂಸ್ಕೃತಿಕತೆ ಪ್ರೇರಕ ಅಂಶವಾದರೂ, ಆ ಬಗೆಯಲ್ಲಿ ಪರಿವರ್ತನೆಗಳು ಸಾಧ್ಯವಾಗಿಲ್ಲ ಭಾಷಾತ್ಮಕ ಅಭಿವ್ಯಕ್ತಿ ಈ ಮಾಧ್ಯಮವನ್ನು ಹಿಡಿತಗೊಳಿಸಿದೆ.

ವಸಾಹತು ಪೂರ್ವ ಮತ್ತು ವಸಾಹತುಶಾಹಿ ಕಾಲಘಟ್ಟವನ್ನು ಅನುವಾದದ ದೃಷ್ಟಿಯಿಂದ ಅಧ್ಯಯನಕ್ಕೆ ತೆಗೆದುಕೊಂಡಾಗ ಹಲವಾರು ವೈಶಿಷ್ಟ್ಯಗಳು ನಮ್ಮ ಕಣ್ಣಿಗೆ ಕಾಣಿಸುತ್ತವೆ. ವಸಾಹತು ಪೂರ್ವಕಾಲದಲ್ಲಿ ಬಂದಂಥ ಪಂಪ, ರನ್ನ, ಕುಮಾರವ್ಯಾಸಾದಿ ಕೃತಿಗಳನ್ನು ಅವಲೋಕಿಸಿದಾಗ ಈ ಕವಿಗಳು ರಾಮಾಯಣ, ಮಹಾಭಾರತಾದಿ ಮಹಾಕಾವ್ಯಗಳಿಂದ ಪ್ರೇರಿತರಾಗಿರುವುದು ಕಂಡುಬರುತ್ತದೆ. ಆದರೆ ಈ ಎಲ್ಲ ಅನುವಾದಗಳಲ್ಲಿ ಸಮಕಾಲೀನ ಜನಜೀವನದ ಪ್ರತಿಬಿಂಬ ಅಲ್ಲಲ್ಲಿ ಕಂಡುಬಂದರೂ, ಸಮಾಜದ ವಿಶಿಷ್ಟ ಅಗತ್ಯಗಳಿಗಾಗಿಯೇ ರಚಿತದಂತೆ ಕಾಣವುದಿಲ್ಲ. ಈ ಕವಿಗಳಿಗೆ ಮೂಲ ಕೃತಿಯನ್ನು ತನ್ನದನ್ನಾಗಿ ಮಾಡಿಕೊಳ್ಳುವ ಹಂಬಲವಿದ್ದರೂ ಮೂಲ ಕೃತಿಯಷ್ಟೆ ದೊಡ್ಡ ಪ್ರಮಾಣದ ಸಾಹಿತ್ಯಿಕ ಮೌಲ್ಯದ ಅನುವಾದ ಕೃತಿಯನ್ನು ರಚಿಸುವ ಮಹತ್ವಾಕಾಂಕ್ಷೆ ಹೊಂದಿರುವುದು ಕಾಣುತ್ತದೆ. ಈ ಕೃತಿಗಳು ಸಾಮಾನ್ಯ ಜನರಿಗೆ ಮತ್ತು ಸಾಮಾನ್ಯ ವರ್ಗವನ್ನು ಪ್ರತಿನಿಧಿಸಿ ಬರೆದವು ಸಮಾಜ ಕೇಂದ್ರಿತ ಮತ್ತು ರಾಜಪ್ರೇರಿತ ವ್ಯವಸ್ಥೆಯನ್ನು ವೈಭವಿಕರಿಸಿ ಮೈತಳೆದಿರುವಂತೆ ತೋರುತ್ತದೆ. ಆದ್ದರಿಂದಲೇ ಕೃತಿಕಾರ ತನಗೆ ಬೇಕಾದಂತೆ ಕಥಾ ಸಂವಿಧಾನವನ್ನು ಬದಲಾಯಿಸುವ ಸ್ವಾತಂತ್ರ್ಯವನ್ನು ತೆಗೆದುಕೊಂಡಿದ್ದಾನೆ. ಮೂಲ ಕಥಾನಕದಲ್ಲಿನ ಹಲವಾರು ಉಪೇಕ್ಷಿತ ಪಾತ್ರಗಳನ್ನು ತಮ್ಮ ಕೃತಿಯಲ್ಲಿ ಬೆಳಗುವಂತೆ ಮಾಡಲಾಗಿದೆ. ಮೂಲ ಕೃತಿಯಲ್ಲಿನ ಕೆಲವು ಪಾತ್ರಗಳಿಗೆ ಕವಿ ಎಸಗಿದ್ದಾನೆಂದೆನಿಸಿದರೆ, ಅದನ್ನು ಸರಿಪಡಿಸುವ ಪ್ರಯತ್ನ ಮಾಡಿರುವುದು ಕಾಣುತ್ತದೆ. ಅಷ್ಟೇಅಲ್ಲ ಮೂಲಕೃತಿಯನ್ನಲ್ಲದೆ ಇತರ

ಕೃತಿಗಳಿಂದಲೂ ಪ್ರೇರಣೆ ಪಡೆದು, ಎಷ್ಟೋ ಪ್ರಸಂಗಗಳನ್ನು ಮೂಲಕ್ಕಿಂತ ಭಿನ್ನವಾಗಿ ಸುಂದರವಾಗಿ ಮೂಡಿಸುವ ಪ್ರಯತ್ನ ಮಾಡಿರುವುದು ಕಾಣುತ್ತದೆ. ಇವೆಲ್ಲವನ್ನು ನೋಡಿದರೆ, ಕವಿಗೆ ತನ್ನ ಕೃತಿ ಅನುವಾದವಾದರೂ ಅದು ಸ್ವತಂತ್ರ ಕೃತಿ ಎಂದೆನ್ನಿಸಿಕೊಳ್ಳಲು ಮತ್ತು ಉನ್ನತ ಸಾಹಿತ್ಯಿಕ ಮೌಲ್ಯದ ಕೃತಿಯಾಗಲು ಹಂಬಲ ಹೊಂದಿರುವುದು ಸಾಮಾನ್ಯವಾಗಿರುವಂತೆ ತೋರುತ್ತದೆ. ಆದ್ದರಿಂದಲೇ ಈ ಕಾಲದಲ್ಲಿ ಬಂದಂಥ ಅನುವಾದಗಳನ್ನು ಲೋಕೋತ್ತರ ಕೃತಿಗಳಂತೆ ಮೈದಳಿದಿವೆ.

ಈ ಕಾಲಘಟ್ಟದಲ್ಲಿ ಬಂದಂಥ ಅನುವಾದಗಳನ್ನು ನಾವು ನೋಡಿದಾಗ ಅನುವಾದಕರ ಉದ್ದೇಶಗಳಲ್ಲಿ ಕೆಲವು ಬದಲಾವಣೆಯನ್ನು ಕಾಣಬಹುದು. ಸಾಹಿತ್ಯ ಜಗತ್ತಿನ ಶೂನ್ಯವನ್ನು ತುಂಬುವ ಕಳಕಳಿ ಅವರಿಗಿದ್ದಂತೆ ತೋರುತ್ತದೆ. ಅನುವಾದಕರು ತಮ್ಮ ಸಂಪೂರ್ಣ ಪ್ರತಿಭೆಯನ್ನು ಧಾರೆ ಎರೆದು ಉತ್ತಮ ಗುಣಮಟ್ಟದ ಕೃತಿಗಳನ್ನು ಕೊಡಲು ಮರೆಯುವಂತಿಲ್ಲ. ಆದರೆ ಅವರ ಗುರಿ ಕನ್ನಡದಲ್ಲಿ ಆವರಿಸಿದಂಥ ಶೂನ್ಯವನ್ನು ತೊಡೆದುಹಾಕುವುದಾಗಿತ್ತೆಂದು ಕಾಣುತ್ತದೆ. ಕನ್ನಡದಲ್ಲಿನ ನಾಟಕಗಳ ಕೊರತೆಯನ್ನು ನೀಗಿಸುವ ಪ್ರಯತ್ನ ಇದಾಗಿತ್ತು. ಇದು ಜನರ ಆಸಕ್ತಿಯನ್ನು ಉಳಿಸುವುದಕ್ಕಾಗಿ ಅಭಿಜಾತವಾದದ್ದನ್ನೇ ನೀಡುವ ಅವಕಾಶ ಪಡೆಯಲಾಯಿತು. ಅದೇ ವೇಳೆಗೆ ರಂಗಭೂಮಿಯ ಅಗತ್ಯಗಳು ಅವರನ್ನು ನಾಟಕಗಳನ್ನು ಅನುವಾದ ಮಾಡಲು ಪ್ರೇರೇಪಿಸಿರಬಹುದು. ಸಹಜವಾಗಿಯೇ ಸಾಂಸ್ಕೃತಿಕವಾಗಿ ಒಂದೇ ಪರಿಸರ ಸಂಸ್ಕೃತ ನಾಟಕಗಳು ಅನುವಾದವಾಗೊಳ್ಳಲು ಅರ್ಹವೆನಿಸಿದವು. ಅನುವಾದಕರ ಸಂಸ್ಕೃತ ಹಿನ್ನೆಲೆ ಮತ್ತು ಸಂಸ್ಕೃತದ ಬಗ್ಗೆ ಆದರಾಭಿಮಾನಗಳು ಇವುಗಳಿಗೆ ಪೂರಕವಾದವು. ವಸಾಹತುಶಾಹಿಯಿಂದ ಭಾರತೀಯ ಸಂಸ್ಕೃತಿಯ ಮೇಲೆ ಪ್ರಹಾರಗಳನ್ನು ಧನಾತ್ಮಕವಾಗಿ ಸ್ವೀಕರಿಸಿದ ಅನುವಾದಕರಲ್ಲಿ ಕಂಡು ಬರುತ್ತದೆ. ಆದ್ದರಿಂದಲೇ ಈ ಕಾಲಘಟ್ಟದಲ್ಲಿ ಬಂದಂಥ ಅನುವಾದಗಳು ಲೋಕಾಭಿಮುಖವಾದವು ಎಂಬುದಾಗಿ ಹೇಳಲು ಅವಕಾಶವಿದೆ.

ಇನ್ನೊಂದು ದೃಷ್ಟಿಯಿಂದ ಅವಲೋಕಿಸಿದಾಗ ವಸಾಹತುಶಾಹಿ ಕಾಲಘಟ್ಟದಲ್ಲಿ ಮೂಡಿ ಬಂದಂಥ ಕೃತಿಗಳು ''ನಾಟ್ಯಧರ್ಮಿ'' ಪರಿಕಲ್ಪನೆಗೆ ಸಮೀಪವಾಗಿರುವಂತೆ ಕಾಣುತ್ತವೆ. ನಾಟ್ಯಧರ್ಮಿ ಕೃತಿಗಳೂ ನಿರ್ಮಾಣ ಕೌಶಲ್ಯಕ್ಕೆ ಮಹತ್ವವನ್ನು ಒದಗಿಸುತ್ತವೆ. ಆದ್ದರಿಂದಲೇ ಕಾವ್ಯನುಭವ ವ್ಯಕ್ತಿ ನಿರಪೇಕ್ಷವಾಗಿ ಘಟನಾಸಾಪೇಕ್ಷವಾಗುತ್ತದೆ. ಅನುಭವವನ್ನು ಕವಿಯ ಮಧ್ಯಸ್ಥಿಕೆ ಇಲ್ಲದೆಯೇ ಜನರನ್ನು ತಲುಪಿಸಲು ಸಾಧ್ಯವಾಗುತ್ತದೆ. ನಾಟಕದ ಶ್ರೇಷ್ಠತೆ ಅದರ ನಾಟ್ಯಧರ್ಮಿಗುಣವನ್ನು ಅನುಸರಿಸುತ್ತದೆ. ಆದ್ದರಿಂದಲೇ ನಾಟ್ಯಧರ್ಮಿ ಕೃತಿಗಳಾದ ಶಾಕುಂತಲ ಉತ್ತರ ರಾಮಚರಿತೆ, ಮೃಚ್ಛಕಟಿಕದಂಥ ಕೃತಿಗಳು ಅನುವಾದಕರ ಪ್ರಥಮ ಪ್ರಾಶಸ್ತ್ಯ ಪಡೆದು ಹೆಚ್ಚು ಅನುವಾದಗಳು ಕಂಡಿವೆ.

ಈ ಬಗೆಯ ಅನುವಾದಗಳನ್ನು ಅವಲೋಕಿಸಿದಾಗ ಅನುವಾದಗಳು, ಅಳವಡಿಕೆಗಳು, ಪರಿವರ್ತನೆಗಳು, ಕನ್ನಡೀಕರಣ ಮುಂತಾದ ಪ್ರಕ್ರಿಯೆಗಳು 'ಭಾಷ್ಯಾಂತರ' ಎಂಬ ಪ್ರಕ್ರಿಯೆಗೆ ಪರ್ಯಾಯವೆನಿಸಿವೆ. ಕಾರಣ ಟೀಕು, ಟಿಪ್ಪಣಿ, ಭಾಷ್ಯಗಳನ್ನು ಬರೆಯುತ್ತಿದ್ದ ಕಾಲ ಅದಾಗಿತ್ತು. ಸಂಸ್ಕೃತ ಕನ್ನಡ ಪಂಡಿತರಿಬ್ಬರೂ ಈ ಬಗೆಯಲ್ಲಿ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳಿಂದ

ಬರಮಾಡಿಕೊಳ್ಳುತ್ತಿದ್ದುದು, ಸರ್ವೇಸಾಮಾನ್ಯವಾಗಿತ್ತು. ಉದಾಹರಣಾರ್ಥವಾಗಿ ಹೇಳಬೇಕೆಂದರೆ ಶಾಕುಂತಲ ನಾಟಕವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಶಾಕುಂತಲ ನಾಟಕದ ನವೀನ ಟೀಕೆಯನ್ನಾಗಿ ಬರೆದರು. ಹೀಗೆ ಟೀಕು, ಟಿಪ್ಪಣಿ, ಭಾಷ್ಯಗಳಿದ್ದ ಸಾಮಾನ್ಯಯುಗ ಈ ಕಾಲವಾಗಿದ್ದುದು ಒಂದು ಗಮನೀಯ ಅಂಶ. ಈ ಹಿನ್ನೆಲೆಯಲ್ಲಿ ಆ ಕಾಲಕ್ಕೆ ಬಂದ ಬಸವಪ್ಪ ಶಾಸ್ತ್ರಿಗಳ ಕೃತಿಯಾಗಲಿ, ಜಯರಾಯಾಚಾರ್ಯರ ಕೃತಿಯಾಗಲೀ ಒಂದು ರೀತಿಯ ಅರ್ಥೈಸುವಿಕೆಯಂತೆ ತೋರಿ ಬರುತ್ತವೆ. ಸಾಹಿತ್ಯ ಪ್ರಜ್ಞೆ, ರಂಗಭೂಮಿಯನ್ನು ದೃಷ್ಟಿಯಲ್ಲಿರಿಸಿಕೊಂಡು ತಂತ್ರವಾಗಿ ಮೂಡಿಬಂದಿದೆ. ಹೀಗಾಗಿ ಸೃಜನತೆಯೆನ್ನುವದು ಸೂಕ್ಷ್ಮ ತಂತ್ರಾಂಶವಾಗಿ ನೇರ/ನಿಕಟ ಅನುವಾದದ ಕೃತಿಗಳಲ್ಲಿ ಮೈತಳೆದಿರುತ್ತದೆ. ಈ ಬಗೆಯ ಅನುವಾದವನ್ನು ಮೂಲಕೃತಿ ಕುರಿತು ಶಾಸ್ತ್ರಜ್ಞರೊಬ್ಬರು ಅರ್ಥೈಸುವಿಕೆಯ ಭಾಗವಾಗಿ ಭಾಷ್ಯವನ್ನು ರಚಿಸಿದ ಯುಕ್ತಿ ಇಲ್ಲಿ ಚೆನ್ನಾಗಿ ಕೆಲಸಮಾಡಲು ತೊಡಗುತ್ತದೆ. ಈ ಸೂತ್ರ ೧೯೦೦ ರ ನಂತರ ಸ್ವಲ್ಪ ಸಡಿಲಗೊಂಡಂತೆ ಕಂಡು ಬಂದಿದೆ. ಮೇಲ್ವರ್ಗದ ಶೈಕ್ಷಣಿಕ ಫಲಾನುಭವಿಗಳು ಇಲ್ಲವೇ ಪರಂಪರಾಗತ ಚಿಂತಕರಾದ ಶೇಕ್ಸಪಿಯರ್ ಮುಂತಾದ ಪಾಶ್ಚಾತ್ಯ ನಾಟಕಕಾರರು ಪಾರ್ಸಿಕಂಪನಿಯಿಂದ ಭಾರತವನ್ನು ಪ್ರವೇಶಿಸಿದ ಹೊತ್ತಿನಲ್ಲಿ ನಡೆದ ಈ ಪ್ರಕ್ರಿಯೆಯನ್ನು ಭಾಷ್ಯಾಂತರ ಎಂಬುದು ಭಾಷ್ಯಂತರ ಎಂಬುದು ಸಮುಚಿತ ಹಾಗೂ ವೈಶಿಷ್ಟಪೂರ್ಣ ಎನಿಸುತ್ತದೆ.

# ಅಧ್ಯಾಯ - ೪
# ತೌಲನಿಕ ಸಮೀಕ್ಷೆ

**ಪೀಠಿಕೆ :**

ವಸಾಹತುಶಾಹಿ ಕಾಲಘಟ್ಟದಲ್ಲಿ ಮೂಡಿಬಂದ ಅನುವಾದಗಳು ವಿಶಿಷ್ಟಪೂರ್ಣವಾದವುಗಳು. ಬೇರೆ ಬೇರೆ ಭಾಷೆಗಳ ಕೃತಿಗಳು ಕನ್ನಡಕ್ಕೆ ಅನುವಾದಿತಗೊಂಡವು. ಆದರೂ ಕೂಡ ಸಂಸ್ಕೃತ ಸಾಹಿತ್ಯದ ಅನುವಾದ ಅದರಲ್ಲೂ ನಾಟಕ ಸಾಹಿತ್ಯದ ಅನುವಾದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅನುವಾದ ಸಾಹಿತ್ಯವೆಂದು ದಾಖಲಾಗಿದೆ. ಅನುವಾದ ಯುಗವೆಂದು ದಾಖಲಾದ ಈ ಕಾಲಘಟ್ಟದಲ್ಲಿ ಒದಗಿಬಂದ ಸಾಂಸ್ಕೃತಿಕ ಸಂಘರ್ಷ ಅದನ್ನೊಂದು ತಿರುವು ನೀಡಿದ ಘಟ್ಟವನ್ನಾಗಿಸಿತು. ಹಾಗಾಗಿಯೇ ಈ ಯುಗದ ಬಗ್ಗೆ ಜಿಜ್ಞಾಸೆ ಉಂಟಾಗುತ್ತದೆ. ಭಾರತೀಯತೆಗೆ ಒಂದು ಬಗೆಯ ವಸಾಹತುಶಾಹಿ ಕೊಡುಗೆ ಎನಿಸಿದ ವಿಚಿತ್ರ ತಿರುವು ಅದು ನಮ್ಮತನವನ್ನು ಸಾಧಿಸಲು ಬೇಕಾದ ಪ್ರಮೇಯವನ್ನುಂಟು ಮಾಡಿತು. ಅದರಂತೆಯೇ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಒಂದಾದ ಸಾಹಿತ್ಯಿಕ ವಲಯದ ಬೆಳವಣಿಗೆಯ ರೂಪುರೇಶೆಯನ್ನು ವಸಾಹತುಶಾಹಿ ರಾಜಕಾರಣ ನಿಯಂತ್ರಿಸುತ್ತಿತ್ತು. ಈ ಹಿನ್ನೆಲೆಯಲ್ಲಿ ಸಾಹಿತಿಗಳು, ಕವಿಗಳು, ರಂಗಕರ್ಮಿಗಳು ಮುಂತಾದವರೆಲ್ಲರೂ ಏಕಸೂತ್ರ ಒಂದನ್ನು ತರಲು ಪ್ರಯತ್ನಿಸಿದರು. ಇದರ ಒಂದು ಪ್ರಯತ್ನ ಅನುವಾದ ಸಾಹಿತ್ಯ ಮೂಡಿಬಂದಿತು. ಈ ಅನುವಾದ ಪ್ರಕ್ರಿಯೆಯನ್ನು ಎರಡು ವಿಧಗಳಲ್ಲಿ ನೋಡಬಹುದು.

೧) ಅನುವಾದಕನೊಬ್ಬ ಹಲವು ಸಂಸ್ಕೃತ ನಾಟಕಗಳನ್ನು ಅನುವಾದಿಸುವಲ್ಲಿ ಇದ್ದ ಆಶಯಗಳು.
೨) ಅನುವಾದಕರು ಹಲವು ಕೃತಿಯನ್ನು ಅನುವಾದಿಸುವಲ್ಲಿ ಇದ್ದ ಆಶಯಗಳು.

ಈ ಎರಡೂ ನೆಲೆಗಳಲ್ಲಿ ಮೂಲದ ಸೂಕ್ಷ್ಮತೆಯ ಬಗೆಗೆ ಚಿಂತಿಸಬಹುದಾಗಿದೆ. ಅನುವಾದಕನೊಬ್ಬನು ಸಂಸ್ಕೃತ ನಾಟಕಗಳನ್ನು ಅನುವಾದಿಸುವಲ್ಲಿ ತಳೆದ ನಿಲುವುಗಳು. ಉದಾ: ಬಸವಪ್ಪಶಾಸ್ತ್ರಿಗಳು ಕಾಳಿದಾಸನ ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶೀಯ; ಶ್ರೀಹರ್ಷನ ರತ್ನಾವಳೀ ನಾಟಕ; ಭವಭೂತಿಯ ಉತ್ತರರಾಮ ಚರಿತೆ, ಮಾಲತೀ ಮಾಧವ; ಕ್ಷೇಮೀಶ್ವರನ ಚಂಡಕೌಶಿಕ ನಾಟಕಗಳನ್ನು ಅನುವಾದಿಸಿದ್ದಾರೆ. ಧೊಂಡೋ ನರಸಿಂಹ ಮುಳಬಾಗಲರು ಭವಭೂತಿಯ ಉತ್ತರರಾಮಚರಿತೆ ಶೂದ್ರಕನ ಮೃಚ್ಛಕಟಿಕ, ಭಟ್ಟನಾರಾಯಣ ವೇಣೀ ಸಂಹಾರ, ಕಾಳಿದಾಸನ ಮಾಲವಿಕಾಗ್ನಿಮಿತ್ರ. ಹೀಗೆ ಸಂಸ್ಕೃತ ನಾಟಕಗಳನ್ನು ಅನುವಾದಿಸಿದ್ದಾರೆ. ಒಬ್ಬ ಅನುವಾದಕ ಹಲವು ಕೃತಿಕಾರರ ನಾಟಕಗಳನ್ನು ಅನುವಾದಿಸುವಾಗ ತಳೆದ ನಿಲುವುಗಳು ಭಿನ್ನವಾಗಿವೆ. ಬಸವಪ್ಪಶಾಸ್ತ್ರಿಗಳ ಉತ್ತರರಾಮ ಚರಿತ್ರೆ ಅನುವಾದಕ್ಕೂ ಶಾಕುಂತಲದ ಅನುವಾದಕ್ಕೂ ಭಿನ್ನ ಪರಿಸರವಿದೆ. ಭಿನ್ನ ಪರಿಪ್ರೇಕ್ಷ್ಯಗಳಲ್ಲಿ ಒಬ್ಬನೇ ಅನುವಾದಕ ತಳೆಯುವ ನಿಲುವುಗಳು ಚರ್ಚೆಯ ವಿಷಯವಾಗಿರುತ್ತವೆ. ಧೊಂಡೋ ನರಸಿಂಹ ಮುಳಬಾಗಲರು ವೇಣೀ ಸಂಹಾರ ನಾಟಕ ಅನುವಾದಿಸುವಲ್ಲಿ ಮತ್ತು ಜಯ

ರಾಯಾಚಾರ್ಯರು ವೇಣಿಸಂಹಾರವನ್ನು ಅನುಸರಿಸುವಲ್ಲಿ ತಳೆದ ಧೋರಣೆಗಳು ತಾತ್ವಿಕ ಚೌಕಟ್ಟೊಂದನ್ನು ನಿರ್ಮಿಸಿಕೊಡುತ್ತವೆ. ಆ ಸೈದ್ಧಾಂತಿಕ ಚರ್ಚೆ ಯಾವುದು ಫಲಶ್ರುತಿ ಏನು ಎಂಬುದು ಅಧ್ಯಯನದ ವಸ್ತು ವಿಷಯವಾಗಿರುತ್ತದೆ.

ಇನ್ನು ಎರಡನೆಯ ಬಗೆಯಲ್ಲಿ ಪ್ರಮುಖ ವಿಚಾರ ಕಂಡುಬರುತ್ತದೆ. ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ನಾಟಕಕಾರರನ್ನು ಹೆಸರಿಸಬಹುದಾದರೂ ಆ ನಾಟಕಕಾರರಲ್ಲಿ ಭಾಸ, ಭವಭೂತಿ, ಕಾಳಿದಾಸ, ಶ್ರೀಹರ್ಷ, ಶೂದ್ರಕ ಇವರುಗಳು ಪ್ರಮುಖ ರಚನಾಕಾರರಾಗಿರುತ್ತಾರೆ. ಈ ಐವರು ರಚನಾಕಾರರ ಕೃತಿಗಳು ಪದೇ ಪದೇ ಅನುವಾದಗೊಂಡಿವೆ. ಹೀಗೆ ಮತ್ತೆ ಮತ್ತೆ, ಇದೇ ಕವಿಗಳು ಕೃತಿಗಳು ಅನುವಾದಗೊಳ್ಳಲು ಇರುವ ಸಾಂಸ್ಕೃತಿಕ ಕಾರಣ ಎನ್ನುವುದು ಯಾವುದೋ ಬಗೆಯ ಏಕ ಸೂತ್ರವೊಂದು ಈ ಪ್ರಕ್ರಿಯೆಯಲ್ಲಿ ಕೆಲಸ ಮಾಡಿದೆ. ಆ ಸೂತ್ರಯಾವುದು ? ಎನ್ನುವ ವಿಷಯಗಳ ಮೇಲೆ ಅನುವಾದಿತ ಕೃತಿ ಸಮೀಕ್ಷೆಯ ಚರ್ಚೆ ತನ್ನ ವ್ಯಾಪ್ತಿಯನ್ನು ಇರಿಸಿಕೊಂಡಿದೆ. ಸಮೀಕ್ಷೆ ಎನ್ನುವುದು ಕೃತಿ, ಕರ್ತೃಗಳ ವಿವರಣೆಯಾಗಿದೆ. ಕೃತಿ, ಕರ್ತೃಗಳಿಂದ ಆ ಕಾಲಕ್ಕೆ ಜರುಗಿದ ಪ್ರಕ್ರಿಯೆಯನ್ನು ಸೂಚಿಸುತ್ತವೆ.

ತೌಲನಿಕ ಅಧ್ಯಯನ, ಆ ಕಾಲಕ್ಕೆ ಬಂದ ಪ್ರಮುಖ ನಾಟಕಕಾರರ ಅನುವಾದಗಳ ತುಲನಾತ್ಮಕ ಅಧ್ಯಯನವನ್ನು ಒಳಗೊಳ್ಳುತ್ತದೆ. ಒಂದು ಬಗೆಯಲ್ಲಿ ಅನುವಾದಿತ ಸಂಕೇತಗಳ ನಿರ್ದಿಷ್ಟ ಧೋರಣೆಗಳ ವಿವರಣಾತ್ಮಕ ನೋಟವನ್ನು ಇಲ್ಲಿ ನಿರೂಪಿಸುತ್ತಾ, ಆ ನೋಟದ ಮಾಹಿತಿಯನ್ನು ಒದಗಿಸುತ್ತದೆ.

ಈ ಎರಡು ಪ್ರಮುಖ ಘಟ್ಟಗಳ ನಂತರ ಇನ್ನೊಂದು ವಿಚಾರ, ಇನ್ನೊಂದು ವಿಭಾಗವನ್ನಾಗಿಸುವಷ್ಟು ವ್ಯಾಪಕವಾಗಿದೆ. ಅದೆಂದರೆ ಹೆಚ್ಚು ಚರ್ಚೆಗೆ ಬರದೇ, ಅಲಕ್ಷಿತ ನಾಟಕಗಳಾಗಿ ತೆರೆಯಲ್ಲಿ ಸೇರಿರುವ ಆದರೆ ಅದರದೇ ಆದ ಮಹತ್ವ ಹೊಂದಿರುವ ನಾಟಕಗಳು. ಇವುಗಳು ಈ ನಾಟಕಗಳನ್ನು ಒಬ್ಬೊಬ್ಬರೇ ಅನುವಾದಕರುಗಳು ಅನುವಾದಿಸಿದ್ದಾರೆ. ಆದರೆ ಇವುಗಳು ಕೂಡ ಆ ಕಾಲಘಟ್ಟದ ಸಾಹಿತ್ಯಿಕ ನಿಲುವುಗಳನ್ನು ಅಳವಡಿಸಿಕೊಂಡಿವೆ. ಹೀಗೆ ಒಬ್ಬ ಅನುವಾದಕ ಮತ್ತು ಒಂದು ಕೃತಿ ಲಭ್ಯವಾಗಿರುವದಂಥವು. ನಂತರ ಈ ಕೃತಿಗಳಿಗೆ ಅನುವಾದಗಳು ಬಂದಿರಬಹುದಾಗಿದೆ. ಆದರೆ ಆ ಕಾಲಘಟ್ಟದಲ್ಲಿ ಲಭ್ಯವಿರುವ ಕೃತಿಗಳನ್ನು ಗಮನಿಸಿ ಹೇಳುವುದಾದರೆ ಒಬ್ಬ ಅನುವಾದಕ/ ಒಂದು ಕೃತಿ ಇದೆ. ಈ ಬಗೆಯನ್ನು ಪರಿಚಯಾತ್ಮಕ ರೂಪದಲ್ಲಿ ಸಮೀಕ್ಷಿಸಲಾಗಿದೆ.

ವಸಾಹತುಶಾಹಿ ಕಾಲಘಟ್ಟ ಅನುವಾದದ ಯುಗ. ಈ ಯುಗಕ್ಕೆ ಕಾರಣವಾದ ಸಾಂಸ್ಕೃತಿಕ ಸಾಹಿತ್ಯಿಕವಾದ ಸಮಕಾಲೀನ ಸಂದರ್ಭವನ್ನು ಈಗಾಗಲೇ ಚರ್ಚಿಸಲಾಗಿದೆ. ಅನುವಾದಿತ ಕೃತಿಗಳ ಸಮೀಕ್ಷೆ ಸಾಂಸ್ಕೃತಿಕ, ಸಾಹಿತ್ಯಿಕ ಸಂದರ್ಭದ ಈ ಕಾಲಘಟ್ಟದಲ್ಲಿ ನಡೆದುದಾಗಿದೆ. ಶುದ್ಧ ಸಾಹಿತ್ಯಿಕ ಅನುವಾದ ಸಾಂಸ್ಕೃತಿಕ ಎನ್ನುವುದನ್ನು ಎರಡು ಹಂತಗಳಲ್ಲಿ ಸ್ಪಷ್ಟಪಡಿಸಬಹುದು. ೧) ಸಾಹಿತ್ಯಿಕ ಅಭಿಮಾನ ಮತ್ತು ಜಾಗೃತವಾದ ಪ್ರಜ್ಞೆಯಾಗಿ ಅನುವಾದಗಳು ಮೂಡಿ ಬಂದಿರುವುದು. ೨) ಭಾಷಿಕ ಮಾರ್ಪಾಡು. ಆದರೆ ಮಾರ್ಪಾಡುಗಳಾಗಿದ್ದ ಭಾಷಿಕಗಳಾಗಿರದ ವಲಯ ಛಂದಸ್ಸು, ವೃತ್ತಗಳ ಮರು ಹೊಂದಾಣಿಕೆ ಕಥಾ ಸಂವಿಧಾನಗಳಿಗೆ ಸೀಮಿತಗೊಳ್ಳದ ಅನುವಾದಗಳು.

ಮೊದಲನೆಯದಾಗಿ ಸಂಸ್ಕೃತ ನಾಟಕಗಳನ್ನು ಒಬ್ಬ ಅನುವಾದಕ ಅನುವಾದಿಸುವಾಗ ತಳೆದ ಧೋರಣೆಗಳು : ಪ್ರತಿಯೊಬ್ಬ ಅನುವಾದಕನಿಗೂ ಯಾವುದೊಂದು ಕೃತಿಯ ಅನುವಾದದಲ್ಲಿ ಕೆ ತಾತ್ವಿಕ ನಿಲುವುಗಳಿರುತ್ತವೆ. ಅಥವಾ ಒಪ್ಪಂದಗಳಿರುತ್ತವೆ. ಇದು ತಾತ್ವಿಕತೆಯ ಪ್ರಶ್ನೆಗಿಂತ, ಆಕೃತಿ ತಾತ್ವಿಕತೆಗೆ ಎಷ್ಟು ಹತ್ತಿರವಿದೆ ಎಂದು ನೋಡುವ ದೃಷ್ಟಿಕೋನದಿಂದ ಪ್ರೇರಿತವಾಗಿರುತ್ತದೆ. ತಾತ್ವಿಕ/ಸೈದ್ಧಾಂತಿಕತೆಯಿಂದ ಕೃತಿ ರಚನೆಯೊಂದು ಸಾಧಿಸದೇ ಹೋದರೂ ಒಂದು ಸ್ಥಿಮಿತ ಪರಿಧಿ ಆ ತಾತ್ವಿಕತೆಯನ್ನು ಪರೋಕ್ಷವಾಗಿ ಹೇಳುತ್ತಿರುತ್ತದೆ. ಆ ಚರ್ಚೆ ಯಾವುದು ಎಂಬುದಿಲ್ಲಿ ಗಮನೀಯ ಸಂಗತಿ. ನಾಟಕವು ಸಾಹಿತ್ಯದ ಪಠ್ಯವಾಗಿ ಯಾವುದೇ ಕಾಲಘಟ್ಟದ ಕತೆಯನ್ನು ನಾಟ್ಯೀಕರಿಸಿದ್ದರೂ, ಅದು ರಂಗಪಠ್ಯವಾಗಿ ರಂಗ ಪ್ರಯೋಗದ ಮೂಲಕ ತನ್ನ ಮಾಧ್ಯಮವನ್ನು ಕಂಡುಕೊಳ್ಳುತ್ತದೆ. ಇದರಿಂದಾಗಿ ನಾಟಕವು ರಂಗ ಪ್ರಯೋಗವಾಗುವ ಕಾಲದ ಪ್ರೇಕ್ಷಕರೊಂದಿಗೆ ಸಂವಾದಿಸುವ ಗುಣವನ್ನು ಹೊಂದಿರಬೇಕಾದುದು ಅಗತ್ಯವಾಗಿರುತ್ತದೆ. ನಾಟಕದಲ್ಲಿ ಪಾತ್ರಗಳು ಆಡುವ ಭಾಷೆ ಪ್ರೇಕ್ಷಕರು ಆಡುವ ಭಾಷೆಯಾಗಿರಬೇಕಾದುದು ಅನಿವಾರ್ಯವಾಗುತ್ತದೆ. ಆಧುನಿಕ ಕಾಲದ ಸಾಮಾನ್ಯ ಪ್ರೇಕ್ಷಕರ ಮುಂದೆ ಸಂಸ್ಕೃತ ಭೂಯಿಷ್ಠವಾದ ಪ್ರಾಚೀನ ಕನ್ನಡವನ್ನು ಆಡುವುದರಿಂದ ಆ ನಾಟಕವು ಸಂವಹನದ ತೊಡಕನ್ನು ಎದುರಿಸುತ್ತವೆ. ಇದು ತುಂಬಾ ಗಂಭೀರವಾದ ಸಮಸ್ಯೆ. ಆದರೆ ನಾಟಕ ಪ್ರಕಾರದಲ್ಲಿ ಪ್ರೇಕ್ಷಕರ ಭಾಷೆ ಮತ್ತು ರಂಗ ಪಠ್ಯದ ಭಾಷೆ ಸಮಾನ ಇರಬೇಕಾದುದು ಸಂವಹನದ ದೃಷ್ಟಿಯಿಂದ ಅವಶ್ಯ. ಇದು ತುಂಬಾ ಪ್ರಮುಖವಾದ ಅಂಶವೂ ಹೌದು. ಯಾಕೆಂದರೆ ನಾಟಕವು ತನ್ನ ರಂಗಪ್ರಯೋಗದಿಂದ ತನ್ನ ಸಮಕಾಲೀನ ಸಮಾಜದೊಂದಿಗೆ, ಸಮಕಾಲೀನ ಸಮಸ್ಯೆ ಕುರಿತು ಮಾತ್ರ ಸಂವಾದ ನಡೆಸಲು ಸಾಧ್ಯ. ಇಲ್ಲದಿದ್ದಲ್ಲಿ ಪ್ರೇಕ್ಷಕರ ಜೊತೆಗೆ ಸಂವಾದ ನಡೆಸಲು ಸಾಧ್ಯವಾಗುವುದಿಲ್ಲ. ಆಗ ಪ್ರೇಕ್ಷಕರು ರಂಗಮಂದಿರದಲ್ಲಿ ಉಳಿಯಲು ಸಾಧ್ಯವಿರುವುದಿಲ್ಲ. ಪ್ರೇಕ್ಷಕ ತನಗೆ ತನ್ನ ಸಮಾಜಕ್ಕೆ ಸಂಬಂಧ ಪಡೆದ ಸಮಸ್ಯೆ ಬಗ್ಗೆ ತಲೆಕೆಡಿಸಿಕೊಳ್ಳುವಷ್ಟು ಉದಾರತೆ ತೋರುವಷ್ಟು ನಿರಂಬಳನಾಗಿರುವುದಿಲ್ಲ. ಆದುದರಿಂದ ಯಾವುದೇ ಕಾಲಘಟ್ಟಕ್ಕೆ ಸೇರಿದ ಕಥೆಯನ್ನು ನಾಟ್ಯೀಕರಿಸಿದ ನಾಟಕವೂ ಆಧುನಿಕ ನಾಟಕವಾಗಿರುತ್ತದೆ. ಹಾಗೂ ಆಧುನಿಕ ಸಮಸ್ಯೆಗೆ ಸ್ಪಂದಿಸುತ್ತಿರುತ್ತದೆ. ಆಧುನಿಕ ಭಾಷೆಯಲ್ಲಿ ನಾಟಕದ ಭಾಷೆ ಗ್ರಾಂಥಿಕವಾಗಿದ್ದರೆ, ಜಡವಾಗಿದ್ದರೆ, ಆಡುಭಾಷೆಯ ಲಯ ಪಡೆಯದಿದ್ದರೆ ಪ್ರೇಕ್ಷಕರೊಂದಿಗೆ ಸಂವಹನ ನಡೆಸಲು ವಿಫಲವಾಗುತ್ತದೆ.

ಈ ರೀತಿಯಾಗಿ ಯೋಚಿಸುವುದಾದಲ್ಲಿ ಆ ಕಾಲಕ್ಕೆ ಒಂದು ಅನುವಾದಗಳನ್ನು ಮೂರು ಬಗೆಯಲ್ಲಿ ಚರ್ಚಿಸಬಹುದು. ೧) ಒಬ್ಬ ಅನುವಾದಕ ಅನುವಾದಿಸಿದ ಭಿನ್ನ ಬಗೆಯ ಕೃತಿಗಳು, ೨)ಒಂದೇ ಕೃತಿಯಲ್ಲಿ ಅನುವಾದಿಸಿದ ಇಬ್ಬರು ಲೇಖಕರು. ೩) ಬೇರೆ ಬೇರೆ ಅಂದರೆ ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಆಧ್ಯಾತ್ಮಿಕ ಅಂಶಗಳನ್ನು ಪ್ರಧಾನವಾಗಿ ಉಳ್ಳ ನಾಟಕಾನುವಾದಗಳು ಇವು ಪ್ರಸಿದ್ಧ ಕವಿಗಳ ಹೊರತಾಗಿಯೂ ರಚಿತವಾದ ಕೃತಿಗಳು.

ಅನುವಾದಯುಗದ ಈ ಅನುವಾದಗಳು ಮೂಲಕ್ಕೆ ನಿಷ್ಠವಾಗಿ ಎನ್ನುವುದಕ್ಕಿಂತ, ಮೂಲಕ್ಕೆ ನಿಕಟವಾಗಿ ಬಂದ ಅನುವಾದಗಳು. ಬಸವಪ್ಪಶಾಸ್ತ್ರಿಗಳು ಕಾಳಿದಾಸನನ್ನಾಗಲಿ ಅಥವಾ ಸಂಸ್ಕೃತ ನಾಟಕ ಅನುವಾದಗಳು ಮೂಲಕ್ಕೆ ನಿಕಟವಾಗಿ ಮೂಡಿಬಂದಿವೆಯೇ ಹೊರತು ಶಬ್ದಶಃ ಅಲ್ಲ. ವಸಾಹತೀಕರಣ ಪ್ರಕ್ರಿಯೆಯ ಸಂದರ್ಭದಲ್ಲಿ ಮೂಡಿಬಂದ ಈ ಅನುವಾದಗಳು ವಸಾಹತುಶಾಹಿ ಪೂರ್ವಘಟ್ಟದ ಸಾಂಸ್ಕೃತಿಕ ಒತ್ತಾಸೆಯ ಸ್ವಾತಂತ್ರ್ಯವನ್ನಾಗಲೀ, ಇಂಗ್ಲೀಷ್ ಅನುವಾದದ ನಿಯಮದಂತೆ ನೇರ ಶಬ್ದಶಃ ಅನುವಾದವನ್ನಾಗಲೀ ಮೈಗೂಡಿಸಿಕೊಂಡವುಗಳಲ್ಲ. ಆ ಕಾಲದ ಅನುವಾದಕರು ಅನೇಕ ಆಶೋತ್ತರಗಳನ್ನು ಒಡಲಲ್ಲಿರಿಸಿಕೊಂಡು ಒಂದು ಬಗೆಯ ಅನುಸಂಧಾನವನ್ನು ಹುಟ್ಟುಹಾಕಿದ.

## ೧. ಸಂಕಲ್ಪ ಸೂರ್ಯೋದಯ :

ಸಂಸ್ಕೃತ ನಾಟಕಗಳ ಕನ್ನಡೀಕರಣ ಪ್ರಕ್ರಿಯೆಯೊಂದಿಗೆ ಲೋಕಜ್ಞಾನಾರ್ಥವಾಗಿ, ಅಲೌಕಿಕ, ಆಧ್ಯಾತ್ಮಿಕ ಅಂಶಗಳಿಂದೊಡಗೂಡಿದ ಸಂಸ್ಕೃತ ನಾಟಕಗಳು ಕನ್ನಡಿಸಲ್ಪಟ್ಟವು. ಸಂಕಲ್ಪ ಸೂರ್ಯೋದಯ ವೆಂಬ ಸಂಸ್ಕೃತ ನಾಟಕದ ಕನ್ನಡ ಭಾಷಾನುವಾದವನ್ನು ಮೈಸೂರು ಶ್ರೀ ಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯ ಪಂಡಿತರಾದ ವ್ಯಾಕರಣ ವಿದ್ವಾನ್ ಎಂ.ಕೆ. ಶ್ರೀನಿವಾಸ ರಾಘವಾಚಾರ್ಯರಿಂದ ಕನ್ನಡಿಸಲ್ಪಟ್ಟು, ಪ್ರಚುರಗೊಳಿಸಲ್ಪಟ್ಟಿತು ಎಂದು ಕೃತಿಯಲ್ಲಿದೆ. ಈ ಸಂಕಲ್ಪ ಸೂರ್ಯೋದಯವನ್ನು ಕನ್ನಡ ಭಾಷೆಯಲ್ಲಿ ಅನುವಾದ ಮಾಡಿ ಸಕಲರಿಗೂ ತಿಳಿಯುವಂತೆ ಮಾಡಬೇಕೆಂಬ ಕುತೂಹಲದಿಂದ ಈ ಮಹಾಕಾರ್ಯಕ್ಕೆ ಪ್ರಯತನ್ನ ಪಟ್ಟೆನು. ಆಚಾರ್ಯಾನುಗ್ರಹದಿಂದ ಪೂರ್ತಿಯಾಗಿರುವುದು ಎಂದು ಪೀಠಿಕೆಯಲ್ಲಿ ಅನುವಾದಕರು ಹೇಳಿಕೊಂಡಿದ್ದಾರೆ.

ಎಲ್ಲ ಆಧ್ಯಾತ್ಮಿಕ ನಾಟಕಗಳಂತೆ, ಈ ನಾಟಕವೂ ಕೂಡ ಪ್ರಧಾನವಾಗಿ ಶೃಂಗಾರ ರಸದ ಮೇಲೆ, ಶಾಂತಿ ರಸದ ವಿಜಯವಿನ್ನೂ ಸಾರುವ ಉದ್ದೇಶ ಹೊಂದಿದೆ. ''ಶಾಂತಿರಸವೇ ಶ್ರೇಷ್ಠವಾದ ರಸವು. ಶೃಂಗಾರ ಅಸಭ್ಯರ ಮಾರ್ಗವನ್ನು ಆಶ್ರಯಿಸುತ್ತದೆ. ವೀರ ರಸವು ತಿರಸ್ಕಾರವನ್ನು ಸೃಷ್ಟಿಸುತ್ತದೆ. ಅದ್ಭುತ ರಸವು ಅನುಪಪಾದ ಅರ್ಥವನ್ನು ತೋರಿಸುವುದರಿಂದ ವಿರುದ್ಧಗತಿಯುಳ್ಳದ್ದಾಗಿವೆ. ಉಳಿದ ರಸಗಳು ಅಷ್ಟೊಂದು ಪ್ರಮುಖವಾದವುಗಳಲ್ಲ ಎಂಬರ್ಥದ ಸೂತ್ರಧಾನ ಮಾತುಗಳು ಗ್ರಂಥದ ಉದ್ದೇಶ ಬಹಿರಂಗಪಡಿಸಿವೆ.

ನಾಟಕಕ್ಕೆ ಸಂಕಲ್ಪ ಸೂರ್ಯೋದಯವೆಂದು ಹೆಸರಿಸಲಾಗಿದೆ. ಸೂರ್ಯನಿಗೆ ಸೂರ್ಯ ನಾರಾಯಣವೆಂಬ ನಾಮವು ಇದೆ. ಕೇವಲ ನಾರಾಯಣನ ಸಂಕಲ್ಪಮಾತ್ರದಿಂದ ಜೀವಾತ್ಮಗಳಲ್ಲಿ ಸೂರ್ಯೋದಯ ಮೂಡಿ, ಅಂಧಃಕಾರ ಮರೆಯಾಗುವುದು. ಬೇರೆ ಭಾಷೆಯಲ್ಲಿ ಹೇಳುವುದಾದರೆ ಯಾವ ಜೀವಾತ್ಮನಲ್ಲಿ ನಾರಾಯಣನನ್ನು ಸಾಕ್ಷಾತ್ಕರಿಕೊಳ್ಳಬೇಕೆಂಬ ಸಂಕಲ್ಪವಿರುವುದೋ ಮತ್ತು ಅಂತರಂಗದ ಬೆಳಕನ್ನು ಯಾರು ಅಪೇಕ್ಷಿಸುವರೋ ಅವರಿಗೆ ಮಾತ್ರ ಆ ಸಂಕಲ್ಪದ ಬಲದಿಂದಲೇ ಜ್ಞಾನದ ಸೂರ್ಯೋದಯ ನಿಶ್ಚಿತ. ಅಥವಾ ಆ ಸಂಕಲ್ಪವೇ ಒಂದು ಸೂರ್ಯೋದಯ. ಅನ್ಯ ದೇವರ ಉಪಾಸನೆ ಮನುಷ್ಯನನ್ನು ಸಂಸಾರದಿಂದ ನಿವೃತ್ತಿ ಮಾಡಲಾಗದು ಎಂದು ಅನುವಾದಕನ ಸ್ಪಷ್ಟ ಅಭಿಪ್ರಾಯವಾಗಿದೆ. ಅಂತೆಯೇ ಈ ಕೆಳಗಿನ ಮಾತುಗಳು ಇದಕ್ಕೆ ಸಾಕ್ಷಿಯಾಗಿವೆ.

"ರಾಜ-ನಾರಾಯಣನ ಮಹಿಮೆಯು ಅಸಾಧಾರಣವಾದದ್ದು. ಆ ಬ್ರಹ್ಮತೇಜಸ್ಸೆಂಬ ಪರ್ಯಂತವಾಗಿ ಸೃಷ್ಟಿ, ಸ್ಥಿತಿಲಯಗಳಿಗೆ ಕಾರಣೀಭೂತನಾದ ನಾರಾಯಣನಲ್ಲಿ ನೆಲೆಗೊಳಿಸಿದ ಭಕ್ತಿಯು ಸಂಸಾರ ನಿವೃತ್ತಿಯನ್ನು ಮಾಡಲಾರದು. ಮೋಕ್ಷವನ್ನು ಅಪೇಕ್ಷಿಸಿ, ಇತರ ದೇವತೆಗಳನ್ನು ಪೂಜಿಸತಕ್ಕವನಿಗೂ, ಬಾಯಾರಿಕೆಯಿಂದ ಬಳಲಿ, ಹಿಮದ ಹನಿಗಳನ್ನು ಕುಡಿಯಲಪೇಕ್ಷಿಸುವವನಿಗು ಭೇದವಿಲ್ಲ. ಚಿತ್ರದಲ್ಲಿ ಬರೆದಿರುವ ಸಾವಿರ ಸೂರ್ಯರುಗಳು ಕತ್ತಲೆಯನ್ನು ಹೋಗಲಾಡಿಸಲಾರರು. ಜೀವಾತ್ಮನಿಗೂ ಶಾಂತಿಯೇ ಇಲ್ಲದ ಹಾಗೆ, ಅಸಾಧ್ಯಜ್ಞಾನ ರೂಪವಾದ ನಿದ್ರೆಯುಂಟು ಮಾಡುವ ತ್ರಿಗುಣ ಶಕ್ತಿಯುಳ್ಳ ಪ್ರಕೃತಿಯೆಂಬ ರಾತ್ರಿಯು ನರಕಾಂತಕನಾದ ನಾರಾಯಣನ ಸಂಕಲ್ಪವೆಂಬ ಸೂರ್ಯನ ಮಹಿಮೆಯಿಂದಲೇ ಮುಗಿಯಬೇಕು".

ಪ್ರಥಮಾಂಕದ ಆರಂಭದಲ್ಲಿ ಪ್ರಾರ್ಥನೆಯಲ್ಲಿ ವಿಷ್ಣುವನ್ನೇ ಸ್ತುತಿಸಿದ್ದಾರೆ. "ಶ್ರೀಮನ್ನಾರಾಯಣನು ಸಮಸ್ತ ವಿಪತ್ತುಗಳನ್ನು ಪರಿಹರಿಸಲಿ ನಾರಾಯಣನಲ್ಲಿ ಭಕ್ತಿಯು ವೃದ್ಧಿಯೆಂದರೆ, ಅವನ ಸಂಕಲ್ಪವು ಉದಯ ಪ್ರಾತಃ ಕಾಲದಲ್ಲಿ ಸೂರ್ಯನು ದೃಷ್ಟಿಗೋಚರನಾಗುವಂತೆ ಜೀವಾತ್ಮ ಜ್ಞಾನಕ್ಕೆ ಗೋಚರವಾಗಿ, ಸಂಸಾರವೆಂಬ ರಾತ್ರಿಯನ್ನು ಪ್ರಾರಬ್ಧ ಕರ್ಮಾವಸಾನದಲ್ಲಿಯೇ ಹೋಗಲಾಡಿಸುವುದು. ಆ ನಾರಾಯಣನಿಗೆ ಪಂಚವಿಂಶತಿ ತತ್ವಗಳು ಆಯುಧಗಳಾಗಿಯೂ, ಭೂಷಣಗಳಾಗಿಯೂ ಇರುವುವು. ಆ ನಾರಾಯಣನು ಜ್ಞಾನಶಕ್ತ್ಯಾದಿ ಸಕಲ ಕಲ್ಯಾಣ ಗುಣಗಳಿಂದ ಪ್ರಕಾಶಿಸುತ್ತಿರುವನು.

ನಾಟಕವು ಬಹಳ ಕ್ಲಿಷ್ಟ ತಾತ್ವಿಕ ಚರ್ಚೆಯನ್ನು ಒಳಗೊಂಡಿದೆ. ಆಧ್ಯಾತ್ಮದ ಪ್ರತಿಮೆಗಳು ಈ ನಾಟಕದಲ್ಲಿ ಬರುವುದು ಅನಿವಾರ್ಯವಾಗಿವೆ. ಈ ಅಳುಕು ಅನುವಾದಕನಿಗೆ ಇದೆ. ಆದ್ದರಿಂದಲೇ ಸೂತ್ರದಾರನ ಬಾಯಿಂದ ಈ ಕೆಳಗಿನ ಮಾತುಗಳನ್ನು ಆಡಿಸಿ, ಯಾರ ಮುಂದೆ ನಾಟಕವನ್ನು ಆಡಿದರೆ ಅದು ಅರ್ಥಪೂರ್ಣವಾಗುವುದು ಎಂಬುದನ್ನು ಸೂಚ್ಯವಾಗಿಸಿದ್ದಾನೆ. ಸೂತ್ರಧಾರ - ಗೀತಾಚಾರ್ಯನಾದ ಭಗವಾನ್ ಶ್ರೀಕೃಷ್ಣನು ಅನೇಕ ವೇಳೆ ಪ್ರತಿಪಾದನೆ ಮಾಡಿರುವ ಫಲ ಸಂಬಂಧವನ್ನು ಬಿಟ್ಟು ಕರ್ಮವನ್ನು ಮಾಡಬೇಕೆಂಬ ತಾತ್ವಿಕ ತ್ಯಾಗದಿಂದ ಕೂಡಿ, ನಿವೃತ್ತಿ ಧರ್ಮವನ್ನು ಅನುಷ್ಠಾನದಲ್ಲಿಟ್ಟುಕೊಂಡಿರುವ ನಾನಾ ವಿಧವಾದ ಅಭಿಗಮನ, ಉಪಾದಾನ, ಸಮಾರ್ಜನ, ಏಕಲೇಪನ, ಮಾಲಾ ಬಂಧನ,

ದೀಪಾರೋಹಣ ಮೊದಲಾದ ವ್ಯಾಪಾರಗಳುಳ್ಳ ಭಾಗವತೋತ್ತಮರುಗಳು ಇರುವರಲ್ಲವೇ ? ಅವರಲ್ಲಿ ಇದನ್ನು ಅಭಿನಯಿಸುವುದರಿಂದ, ನರ್ತಕರುಗಳಿಗೆ ಅವಕಾಶವಿರುವುದು. ಮತ್ತು ನಾಟಕದಲ್ಲಿ ತೋರಿಸುವದಕ್ಕೆ ಆಗದಿರುವ ಶಾಸ್ತ್ರವು ಶಾಸ್ತ್ರವಲ್ಲ. ವಿದ್ಯೆಯು ವಿದ್ಯೆಯಲ್ಲ. ಶಿಲ್ಪವು ಶಿಲ್ಪವಲ್ಲ, ಕಲೆಯು ಕಲೆಯಲ್ಲ, ಯೋಗವು ಯೋಗವಲ್ಲ, ಜ್ಞಾನವು ಜ್ಞಾನವಲ್ಲ.

ಅಂತಹ ಭಗವಂತನನ್ನು ಹೊಂದುವುದಕ್ಕೆ ಭಕ್ತಿಯು ಉಪಾಯವಾಗಿರುವುದಲ್ಲದೆ, ಪ್ರಪತ್ತಿಯೂ ಸಹ ಉಪಾಯವಾಗಿರುವುದು. ಸಾತ್ವಿಕರಿಂದ ಪ್ರಣವವೆಂಬ ಧನಸ್ಸಿನಲ್ಲಿ ಆತ್ಮನೆಂಬ ಬಾಣವನ್ನು ಹೂಡಿ, ಎದೆಗೆ ಗುರಿಯಿಟ್ಟು, ಪ್ರಯೋಗಿಸಿದಂತೆ ಕೌಸ್ತುಭಮಣಿಯು ಶ್ರೀಮನ್ನಾರಾಯಣನ ವಕ್ಷಸ್ಥಳದಲ್ಲಿ ಪ್ರಕಾಶಿಸುತ್ತಲಿರುವುದು. ಅಂದರೆ ತದೇಕ ಧ್ಯಾನದಿಂದ ಭಗವಂತ ನಲ್ಲಿ ಜೀವಾತ್ಮಕನನ್ನು ಪ್ರಣವೋಚ್ಚಾರಣ ಪುರಸ್ಕಾರವಾಗಿ ಸಮರ್ಪಿಸುವುದೇ ಪ್ರಪತ್ತಿಯು. ಇಂತಹ ಪ್ರಪತ್ತಿಗೆ ವಿಷಯ ಭೂತನಾದ ಲಕ್ಷ್ಮೀಪತಿಯಾದ ನಾರಾಯಣನು ಸಂಪತ್ತನ್ನುಂಟುಮಾಡಲಿ (ಪ್ರಥಮಾಂಕ, ಪು. ೧)

ಸೂತ್ರಧಾರ :- ಆರ್ಯಳೇ, ವಿವೇಕನೇ ಕಥಾನಾಯಕನಾಗಿವುಳ್ಳ ಸಂಕಲ್ಪ ಸೂರ್ಯೋದಯವೆಂಬ ಅಭಿನವ ನಾಟಕವನ್ನರಿಯೆಯಾ ? ಈ ನಾಟಕದಲ್ಲಿ ಜೀವಾತ್ಮರುಗಳ ಲಕ್ಷಣವನ್ನು ಅರಿತಿರುವ ಜ್ಞಾನಿಗಳು ಅಪೂರ್ವ ನಿರ್ಮಾಣ ಚಾತುರ್ಯವುಳ್ಳ ಭಾವವನ್ನು ತಿಳಿಯುತ್ತಾರೆ. ಜೀವಾತ್ಮನ ಸದ್ಗುಣ ದುರ್ಗಣಗಳಾದ ವಿವೇಕ ಮೋಹಾದಿಗಳು ತಮ್ಮ ಅಧಿದೇವತೆಗಳೊಂದಿಗೆ ಪಾತ್ರಗಳಾಗಿವೆ. ಮತ್ತು ಈ ನಾಟಕವು ಆಶ್ಚರ್ಯಕರವಾಗಿರುವುದು. ವಿವೇಕನ ಪಾಗಲ್ಭ್ಯದಿಂದ ಧೀರೋದಾತ್ತ ನಾಯಕನ ಸಂಬಂಧವೂ, ಪರಮಾತ್ಮನಾದ ಶ್ರೀಮನ್ನಾನಾರಯಣನ ಸಂಕಲ್ಪದಿಂದ ಜೀವಾತ್ಮರುಗಳಿಗೆ ಮೋಕ್ಷ ಸಂಪಾದನೆ ಪ್ರವೃತ್ತಿಯು ಪ್ರಕಟಿತವಾಗುವುದರಿಂದ ಧೀರೋದ್ಧತನಾಯಕನ ಸ ಂಬಂಧವೂ, ಪರಮಾತ್ಮನಾದ ಶ್ರೀಮನ್ನಾರಾಯಣನ ಸಂಕಲ್ಪದಿಂದ ಜೀವಾತ್ಮರುಗಳಿಗೆ ಮೋಕ್ಷ ಸಂಪಾದನೆ ಪ್ರವೃತ್ತಿಯು ಪ್ರಕಟಿತವಾಗುವುದರಿಂದ ಧೀರೋದ್ಧತನಾಯಕನ ಸಂಬಂಧವೂ ಪ್ರಬುದ್ಧನಾದ ಜೀವಾತ್ಮನ ಸ್ಥಿತಿ ವರ್ಣನದಿಂದ ಧೀರಶಾಂತ ನಾಯಕನ ಸಂಬಂಧವೂ ತೋರುವುದರಿಂದ ಸಂಸಾರಿಗಳಿಗೂ ಕೂಡ ಅಭಿಮತವಾದ ವಿಚಿತ್ರ ಪ್ರಯೋಗವಾಗಿರುವುದು. ಈ ಪ್ರಯೋಗದ ಅತಿಶಯಕ್ಕೆ ಅವಧಿಯೇ ಇಲ್ಲವು. ಸಮುದ್ರದಲ್ಲಿ ಎಷ್ಟೋ ಶಂಖಗಳು ಇವೆ. ಅವುಗಳೆಲ್ಲವೂ ಪುರುಷೋತ್ತಮನ ಪಾಣಿ ಪದ್ಮವನ್ನು ಅಲಂಕರಿಸುವ ಪಾಂಚಜನ್ಯವಾಗುವುದೇ ? ಲೋಕದಲ್ಲಿ ಥಳಿಥಳಿಸುವ ಅನೇಕ ರತ್ನಗಳು ಜನಗಳನ್ನು ಮೋಹಗೊಳಿಸುವಂತೆ ಇದ್ದಾಗ್ಯೂ, ಶ್ರೀವತ್ಸದ ಸಮೀಪದಲ್ಲಿ ದೀಪದ ಕಾಂತಿಯಂತೆ ಹೊಳೆಯುವ ಲಕ್ಷ್ಮೀಮೀಸದರ್ಪಣವಾದ ಕೌಸ್ತುಭಮಣಿಯ ಮಹಿಮೆಯನ್ನು ಹೊಂದುವುವೇ ? ಈ ಪ್ರಯೋಗವನ್ನು ಕರುಣಾಶಾಲಿಯಾದ ವೇದಾಂತ ನಿಷ್ಣಾತನಾದ ಕವಿಯು ಹಿತಾಹಿತಗಳನ್ನು ವಿಭಾಗಿಸಿ, ಯಾವುದೋ ಒಂದನ್ನು ವ್ಯಾಜವಾಗಿದ್ದು, ಸಮಸ್ತ ಜನ ಸಂರಕ್ಷಣಾರ್ಥ ವಾಗಿ ಕಲ್ಪಿಸಿರುವನು.

**ಸೂತ್ರಧಾರ:** ಆರ್ಯಳೇ, ನೀನು ಕೇಳಲಿಲ್ಲವೋ ? ಈ ಕವಿಯು ಜಗತ್ಪೂಜ್ಯರಾದ ವಿಶ್ವಾಮಿತ್ರ ಗೋತ್ರಕ್ಕೆ ಅಲಂಕಾರಪ್ರಾಯರಾದ ವಿಶುದ್ಧ ವಿದ್ಯಾ ಸಂಪನ್ನರಾದ ಪುಂಡಲೀಕಾಕ್ಷ ಸೋಮಯಾಜಿಗಳ ಮಕ್ಕಳಾದ ಅನಂತ ಸೂರಿಗಳ ಪುತ್ರನು. ಶ್ರೀರಂಗನಾಥಸ್ವಾಮಿಯ ದಿವ್ಯಾಜ್ಞೆಯಿಂದ ವೇದಾಂತಾಚಾರ್ಯನೆಂಬ ಹೆಸರನ್ನು ಪಡೆದಿರುವನು. ಇವನಿಗೆ ಕವಿತಾರ್ಕಿಕ ಸಿಂಹನೆಂದು ಪ್ರಸಿದ್ಧವಾದ ಬಿರುದುಂಟು. ಇವನ ಶಿಷ್ಯರೂಗಳು ಸಮಸ್ತ ದಿಕ್ಕುಗಳಲ್ಲಿಯೂ ಈತನ ಜಯಧ್ವಜವನ್ನು ಇತ್ತಿ ಕಟ್ಟಿರುವರು. ಸರ್ವತಂತ್ರಗಳ ಕ್ಷೋಭವನ್ನು ಶಮನ ಮಾಡುವುದರಲ್ಲಿ ಮಹಾಮತಿಯುಳ್ಳವನು. ಈ ಕವಿಗೆ ಶ್ರೀವೆಂಕಟನಾಥನೆಂದು ಹೆಸರು ಮತ್ತು ಕವಿತಾ ಸೌರಭವನ್ನು ಅರಿತಿರುವ ಸತ್ಪುರುಷರುಗಳು ಕಠಿಣ ಸಂದರ್ಭಗಳಿಂದ ಕೂಡಿದ ಗೌಡ ರೀತಿಯಿಂದಲೂ, ಅತಿ ಕೋಮಲ ಶಬ್ದ ಸಂದರ್ಭಗಳಿಂದ ಕೂಡಿದ ವೈದರ್ಭೀ ರೀತಿಯಿಂದಲೂ, ಸುಂದರವಾಗಿರುವ ಈ ಕವಿಯ ಕವನಗಳನ್ನು ನಿತ್ಯವೂ ಪ್ರಶಂಸಿಸುತ್ತಲಿರುವರು. ಈ ಕವಿಯು ದ್ವಿಜತ್ವ ಸಂಪಾದಕವಾದ ಗಾಯಿತ್ರಿಗೆ ಋಷಿಯಾದ, ಲೋಕಕ್ಕೆ ಇನ್ನೊಂದು ಇಂದ್ರನನ್ನು ಸೃಷ್ಟಿ ಮಾಡುವುದರಲ್ಲಿಯೂ, ಲೋಕದಲ್ಲಿ ಇಂದ್ರನೇ ಇಲ್ಲದಂತೆ ಮಾಡುವುದರಲ್ಲಿಯೂ ಸಮರ್ಥನಾದ ವಿಶ್ವಾಮಿತ್ರನ ವಂಶದಲ್ಲಿ ಅವತರಿಸಿರುವನು. ಮತ್ತು ಚತುರ್ಮುಖ ಬ್ರಹ್ಮನಿಂದ ಪೂಜಾರ್ಥವಾಗಿ ನಿರ್ಮಿಸಲ್ಪಟ್ಟ ರಾಕ್ಷಸರನ್ನು ನಾದದಿಂದ ಮಿತ್ರಾಸನ ಮಾಡುವ ವಿಷ್ಣುವಿನ ಗಂಟೆಯೇ ಈ ಕವಿಯ ರೂಪದಿಂದ ಅವತರಿಸಿರುವುದೆಂದು ವಿದ್ವಾಂಸರುಗಳು ಅನೇಕ ಉಪಪತ್ತಿಗಳಿಂದ ಸ್ಥಿರಪಡಿಸಿರುವರು. ಆ ವೆಂಕಟನಾಥ ಕವಿಯು ಮೂವತ್ತಾವರ್ತಿ ಶ್ರೀ ಭಾಷ್ಯವನ್ನು ಶಿಷ್ಯರುಗಳಿಗೆ ಉಪದೇಶಿಸಿ, ಜ್ಞಾನ, ಭಕ್ತಿ, ವೈರಾಗ್ಯ, ವಿದ್ಯಾ, ಸದಾಚಾರ ಸಂಪನ್ನನಾಗಿ ಶ್ರೀರಂಗನಾಥ ಸ್ವಾಮಿಯ ಪ್ರೀತಿಗೋಸ್ಕರ ಶ್ರುತಿಹಿತವಾದ ಈ ಸಂಕಲ್ಪ ಸೂರ್ಯೋದಯವೆಂಬ ನಾಟಕವನ್ನು ನಿರ್ಮಿಸಿದನು ಎಂದಾಕೆ ಪ್ರಸ್ತಾವನೆಯಲ್ಲಿ ಸೂತ್ರಧಾರನಿಂದ ಕವಿಯ ಕರಿಚಯವನ್ನು ನಾಟಕದ ವಸ್ತು ವಿಷಯವನ್ನು ಸವಿಸ್ತಾರವಾಗಿ ತಿಳಿಸಿದ್ದಾನೆ. ಆಧ್ಯಾತ್ಮಕ್ಕೆ ಸಂಬಂಧಿಸಿದ ವಿಷಯವು ಆ ಕಾಲಕ್ಕೆ ಚರ್ಚಿತ ವಾಗುತ್ತಿರುವುದರಿಂದ ಆಧ್ಯಾತ್ಮಕ್ಕೆ ಸಂಬಂಧಪಟ್ಟ ಕೃತಿಗಳ ಅನುವಾದವೂ ನಡೆದಿದೆ. ನಾಟಕ ರೂಪದಲ್ಲಿ ರಚಿತವಾಗಿರುವುದರಿಂದ ನಾಟಕಗಳೇ ಅನುವಾದಕ್ಕೆ ಆಯ್ಕೆ ಆಗುತ್ತಿರುವ ಆ ಕಾಲಕ್ಕೆ ಇದು ಒಂದು ಪ್ರಯೋಗವಾಗಿ ಪರಿಣಮಿಸಿತು. ಲೇಖಕರು ಮಹಾರಾಜರ ಸಂಸ್ಕೃತ ಪಾಠಶಾಲೆಯ ವಿದ್ವಾಂಸ ರಾಗಿರುವುದರಿಂದ ಇದು ಪಠ್ಯವಾಗಿ ಓದಲ್ಪಡುವ ಸಾಧ್ಯತೆಯೂ ಇಲ್ಲದಿಲ್ಲ. ಜನತೆಯನ್ನು ಭಾರತೀಯ ಸನಾತನ ಸಂಸ್ಕೃತಿಯತ್ತ ತಿರುಗಿಸುವ ಪ್ರಜ್ಞೆಯೂ ಇದರಲ್ಲಿದೆ. ವಸಾಹತೀಕರಣದಿಂದ ಉಂಟಾದ ಮತಾಂತರ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಈ ನಾಟಕ ಅನುವಾದಿತವಾಗಿರುವ ಸಾಧ್ಯತೆ ಇದೆ. ಆ ಕಾಲಕ್ಕೆ ಅನುವಾದಗೊಂಡಿರುವ ನಾಟಕಗಳಲ್ಲಿ ಪೌರಾಣಿಕ ಹಿನ್ನೆಲೆಯಿರುವ ಸಂಸ್ಕೃತ ನಾಟಕಗಳೇ ಕನ್ನಡಕ್ಕೆ ಹೆಚ್ಚು ಆತ್ಮೀಯವಾಗಿರುವವುಗಳೇ ಹೆಚ್ಚಾಗಿವೆ. ಸನಾತನ ಸಂಸ್ಕೃತಿಯ ಕವಿಕೃತಿ ಪರಿಚಯವೂ ಚೆನ್ನಾಗಿ ಆಗುತ್ತದೆ. ಅಲ್ಲದೇ ಕವಿಕಾವ್ಯ ಶೈಲಿಯ ಸ್ಥೂಲ ಪರಿಚಯವೂ ರಾಜ ಮತ್ತು ಸುಮತಿಯರ ಸಂವಾದವು ಒಂದು ಜಿಜ್ಞಾಸಾ ಸಂಭಾಷಣೆಯಾಗಿ ಮೂಡಿಬಂದಿದೆ.

ಸುಮತಿಯ ಪ್ರಶ್ನೆಗಳು ತಾತ್ವಿಕ ಮನುಷ್ಯನಲ್ಲಿ ಅಥವಾ ಭಗವದ್ ಭಕ್ತರಲ್ಲಿ ಹುಟ್ಟುವ ಸಂದೇಹಗ ಳಾಗಿವೆ. 'ಸುಮತಿ'ಯೆಂಬ ಹೆಸರೇ ಹೇಳುವಂತೆ ಯಾವುದು ಅಂತಿಮವಾಗಿ ಕಲ್ಯಾಣಕಾರಿಯಾ ಗುವುದೋ ಅದರಲ್ಲಿ ಮಾತ್ರ ಆಸಕ್ತಿ ಇಟ್ಟುಕೊಂಡವಳು. ಕಾಮ ರತಿ ಮತ್ತು ವಸಂತ ಇವರ ಸಂಭಾಷಣೆ ಕಾಮನ ಪ್ರಾಬಲ್ಯವನ್ನು ಎತ್ತಿ ಹೇಳಿದರೆ, ಅದೇ ಕಾಲಕ್ಕೆ ಕಾಮ ತನ್ನ ನಿವಾರಣಾ ಉಪಾಯವನ್ನು ಮತ್ತು ಅಪ್ರತ್ಯಕ್ಷವಾಗಿ ತಾನು ಯಾರಿಗೆ ಹೆದರುತ್ತೇನೆ ಎಂದು ಹೇಳುವುದರ ಮುಖಾಂತರ ಬಹಿರಂಗಪಡಿಸುತ್ತಾನೆ.

**ಕಾಮು -** (ರಾಜ ಮತ್ತು ಸುಮತಿಯರನ್ನು ನೋಡಿ ) ಇವನು ಖ್ಯಾತಿ, ಲಾಭ,ಪೂಜೆ ಇವುಗಳ ವಿಷಯದಲ್ಲಿ ಅಪೇಕ್ಷಯಿಲ್ಲದೇ ಇರುವುದನ್ನು ಮೋಹಧ್ವಂಸವನು ಅಪೇಕ್ಷಿಸುತ್ತಾ, ವೇದಾಂತಗಳನ್ನು ವಿಚಾರ ಮಾಡುತ್ತಿರುವನು. ಮೋಕ್ಷಧರ್ಮಗಳನ್ನು ಯೋಚಚಿಸುತ್ತಿರುವನು. ಅನನ್ಯ ಭಕ್ತಿಯಿಂದ ನೀತಿಯನ್ನು ನಿತ್ಯವೂ ಕೇಳುತ್ತಿರುವನು. ಶಮದಮಾದಿ ಗುಣಗಳನ್ನು ಗ್ರಹಿಸಿರುವನು. ಮಂತ್ರಗೋಪನ ವನನು ಮಾಡಿಕೊಂಡಿರುವನು. ಈ ವಿವೇಕವು ಸೂರ್ಯನಂತೆ ಪ್ರತಙ್ಮುಖವಾದ ಅಂದರೆ ಪರಾವರ ತತ್ವಾಭಿಮುಖವಾದ ಮತ್ತು ಪಶ್ಚಿಮಾಭಿಮುಖವಾದ ಸುಮತಿಯ ಕಾಂತಿಯನ್ನು ಈ ಸಂಸಾರದಲ್ಲಿ ಹರಡುವಂತಾಗಿ ಉದಯವನ್ನು ಹೊಂದಿ, ಅಂದರೆ ಆತ್ಮಪ್ರಕಾಶವನ್ನು ಹೊಂದಿ ಅಪರಿಮಿತವಾದ ರಾಗ ಬಲದಿಂದ ಕೂಡಿದವನಾಗಿ, ಅಹಂಕಾರವನ್ನು ಶಮನ ಮಾಡುವಂಥವನಾಗಿ, ವಿಷ್ಣುಪದವನ್ನು ಅಂದರೆ, ಆಕಾಶವನ್ನು ಭಗವಂತನ ಚರಣವನ್ನು ಹೊಂದುತ್ತಾನೆ. ಆದ್ದರಿಂದ ಸಹಾಯವೂ ಇಲ್ಲದೆ, ಆ ಸಮಯದಲ್ಲಿ ಶತ್ರುವಿಗೆ ಕಾಣಿಸಿಕೊಳ್ಳುವುದು ಉಚಿತವಲ್ಲ''.

ಅನ್ಯಮತದವರು ಜನರ ಸ್ವಧರ್ಮದಲ್ಲಿ ಶಂಕೆಗಳನ್ನುಮೂಡಿಸಿ ಮತಾಂತರ ಮಾಡುವ ಪ್ರಕ್ರಿಯೆ ಯನ್ನು ನಾಟಕಕಾರ ಪರೋಕ್ಷವಾಗಿ ಪ್ರಸ್ತಾಪಿಸಿ, ಅದನ್ನು ಎದುರಿಸುವ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ವಿಚಾರಣೆ - ನಮ್ಮ ವಿವೇಕ ಮಹಾರಾಜನಿಗೆ ವ್ಯವಸಾಯವೆಂಬ ಸೇನಾಪತಿಯಿರುವನಷ್ಟೇ. ಆ ಸೇನಾಪತಿಯ ಸಹಾಯದಿಂದ ನಮ್ಮ ಮಹಾರಾಜನು ಮಾಡುವ ಸನ್ನಾಹವನ್ನು ಕೇಳಿ,ಮಹಾ ಮೋಹನ ಕುಪಿತನಾಗಿ, ಬುದ್ಧ ಜಿನ ಪ್ರಮುಕ ಮತಾಂತರಗಳ ಸಿದ್ಧಾಂತವನ್ನು ಸ್ಥಾಪನೆ ಮಾಡುವುದರಲ್ಲಿ ಪ್ರವೀಣವಾದ ಕುಟಿಲಮತಿಗಳೊಂದಿಗೆ ನಾರಾಯಣನ ಚರಣಾರವಿಂದದಲ್ಲಿ ನೆಟ್ಟ ಮನಸ್ಸುಳ್ಳ ಜೀವಾತ್ಮನನ್ನು ರೈತನು ನರಿಯನ್ನು ನೋಡಿ ಉಳುವುದನ್ನು ಬಿಟ್ಟು, ನರಿಯನ್ನನುಸರಿಸಿ ಓಡುವಂತೆ ಅರ್ಥಾಂತರ ಪ್ರಸಮಗದಿಂದ ವಂಚಿಸುವುದಕ್ಕೆ ಮಾರ್ವಾಡಿಗಳನ್ನು ನೇಮಿಸಿರುವನು.

ವೈದಿಕ ಧರ್ಮವನ್ನು ಪುನರ್ ಸ್ಥಾಪಿಸುವ ವಿಚಾರ ಗುರುವಿನ ಮುಖದಿಂದ ಹೊರಡಿಸಲಾಗಿದೆ. ಗುರು-(ಶಿಷ್ಯನಿಗೆ)- ಆಯುಷಂತನೇ, ವೇದಾಂತ ಸಿದ್ಧಾಂತವನ್ನು ಸ್ಥಿರಗೊಳಿಸಿ ಬಾಹ್ಯ ಸಿದ್ಧಾಂತಗಳನ್ನು ನರಸನ ಮಾಡಿ, ವೈದಿಕರುಗಳಿಗೆ ಮಾನ್ಯವಾಗಿ, ಅನಂತ ಮಂಗಳಗಳಿಗೆ ಪಾತ್ರನಾಗು. ಇಡೀ ನಾಟಕ ಪ್ರತಿಕಾತ್ಮಕವಾಗಿದೆ. ಆಧ್ಯಾತ್ಮಿಕ ಮೌಲ್ಯಗಳಿಗೆ ಹಾಗೂ ಅವರ ವಿರುದ್ಧವಿರುವ ತತ್ವಗಳಿಗೆ ಮಾನವೀಯ ರೂಪಕೊಟ್ಟು, ಸಂಭಾಷಣೆಗೆ ಅಳವಡಿಸಲಾಗಿದೆ. ಅದು ಆ ಕಾಲದ ಪದ್ಧತಿ ಯಾಗರಲಿಕ್ಕೂ ಸಾಕು.

ನಾಟಕವು ತೀವ್ರ ತತ್ವಾನೇಷಣೆಗೆ ತೊಡಗುವುದರಿಂದ ಸಂವಾದಗಳು, ತತ್ವಗಳ ಭಾರದಿಂದ ಬಾಗಿವೆ. ಸಂಸ್ಕೃತ ಭೂಯಿಷ್ಠ ಸಂಭಾಷಣೆ ಇಂಥ ನಾಟಕಗಳಿಗೆ ಅನಿವಾರ್ಯವಾಗಿದ್ದರೂ, ಉದ್ದುದ್ದ ವಾಕ್ಯಗಳು ಅದರ ಸೌಂದರ್ಯವನ್ನು ಕುಗ್ಗಿಸಿವೆ. ಕ್ಲಿಷ್ಟವಾದಂಥ ಸಂಭಾಷಣೆ ನಾಟಕದ ಆಶಯವವನ್ನು ಜನಸಾಮಾನ್ಯರಿಗೆ ತಲುಪುವ ದಾರಿಯಲ್ಲಿ ಅಡಚಣೆ ಎನಿಸಿವೆ. ರೂಪಕ ಅಲಂಕಾರವನ್ನು ಚೆನ್ನಾಗಿ ಬಳಸಿಕೊಳ್ಳಲಾಗಿದೆ. ಅನುವಾದಕನ ಸಂಸ್ಕೃತ ಭಾಷೆಯಲ್ಲಿನ ಪಾಂಡಿತ್ಯ ಸ್ಪಷ್ಟವಾಗಿದೆ. ಅನುವಾದಕನು ಆಯ್ದ ಪ್ರೇಕ್ಷಕರನ್ನು ಮಾತ್ರ ಗಮನದಲ್ಲಿಟ್ಟಕೊಂಡಿದ್ದಾನೆ.

## ೨. ಅನುತಾಪಿಕ ಪ್ರೇಕ್ಷಣಿಕಂ:

ಇದೇರೀತಿಯಲ್ಲಿ ಆಧ್ಯಾತ್ಮಿಕ ಅಭಿವ್ಯಕ್ತಿಯನ್ನೇ ಉದ್ದೇಶವಾಗಿರಿಸಿದ ನಾಟಕವೊಂದು ೧೮೮೭ರಲ್ಲಿ ಕನ್ನಡಿಸಲ್ಪಟ್ಟಿತು. ''ಧರ್ಮೋರ್ವರ್ಧತಾಮ್ ॥ ದುಃಖ ನಿವೃತ್ತಿರಸು'' ಎಂಬ ಧ್ಯೇಯ ವಾಕ್ಯದಡಿ ಮೂಡಿಬಂದ ಈ ಕೃತಿ ''ಲೋಕಾನುಭವ ನೀತಿ ಬೋಧಕಮಾಗಿಯೂ, ಸುಲಭಮಾಗಿಯೂ ಇರುವಂತೆ ಬ್ರಹ್ಮಶ್ರೀ ಬೆಂಗಳೂರು ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳಿಂದ ವಿರಚಿಸಲ್ಪಟ್ಟ ಸ್ವಕೀಯ ಚರಿತ್ರವರ್ಣನ ರೂಪಮೆನಿಪ

ಅನುತಾಪಿಕ ಪ್ರೇಕ್ಷಣಿಕಂ
ಬಹುದಿನಗಳಿಂದ ಸಂಸ್ಕೃತ ಭಾಷೆಯಲ್ಲಿ ಪ್ರಖ್ಯಾತವಾಗಿರ್ಪ
ನೂತನವಾಗಿ ಕನ್ನಡಿಸಲ್ಪಟ್ಟ
ಉನ್ಮತ್ತರಾಘವ ಪ್ರೇಕ್ಷಣಿಕಮುಂ
ಪಂಡಿತ ಪರಿಷ್ಕೃತಮಾಗಿ ಎಂಬುದಾಗಿ ಮೂಡಿಬಂದಿದೆ.

ಪೀಠಿಕೆಯಲ್ಲಿ ಅನುವಾದಕರು ಈ ರೀತಿ ಹೇಳಿದ್ದಾರೆ.

''ವಿಚಾರಪರರಾದ ಗುಣಗ್ರಾಹಿಗಳಿಗೆ ವಿಜ್ಞಾಪನೆಯೆಂತೆನೆ,

ಅಲ್ಪ ವಯಸ್ಸಿನಲ್ಲಿಯೇ ಅನೇಕೋಪದ್ರವಂಗಳಿಂದ ಅತಿ ಪೀಡಿತನಾದ ನಾನು ದುಃಖ ವಿಶ್ರಾಂತಿ ಭೂಮಿಕೆಯಾಗಿರುವಂತೆ ನನ್ನ ಚರಿತ್ರದ ಏಕದೇಶವಾದ, ೧೮೮೬ನೆಯ ಡಿಸೆಂಬರ್ ೨ನೆಯ ತಾರೀಖಿಗೆ ಸರಿಯಾದ ವ್ಯಯ ಸಂವತ್ಸರ ಪುಷ್ಯ ಶುಕ್ಲ ೬ ದಿನಗಳಲಿ ಮದರಾಸ್ (ಪಿಪಲ್ಸಪಾರ್ಕು) ಎಂಬ ರಾಣಿಯ ತೋಟದ ಸಂಣಪ್ರಳಯ ರೂಪವಾದ ಆಕಸ್ಮಿಕಾಗ್ನಿ ಬಾಧೆಯಿಂದ ನನಗೆ ಸಂಭವಿಸಿದ ವಿಪತ್ತನ್ನು ತಿಳಿಯಪಡಿಸುವ ಲೋಕಾನುಭವಕ್ಕೂ, ನೀತಿಗೂ ವ್ಯಂಜಕವಾದ, "ಅನುತಾಪಿಕ ಪ್ರೇಕ್ಷಣಿಕ" ಎಂಬ ಹೆಸರುಳ್ಳ ಈ ಕೃತಿಯನ್ನು ಭಾಸ್ಕರ ಕವಿರಚಿತ ಸಂಸ್ಕೃತೋನ್ಮತ್ತ ರಾಘವ ನಾಟಕವನ್ನು ಕನ್ನಡಿಸಿ ಅದಕ್ಕೆ ಪೂರ್ವರಂಗವಾಗಿರುವಂತೆ ಅದರೊಡನೆಯೇ ಮುದ್ರಿಸಿ ಪ್ರಕಟಿಸಿರುವೆನು.

ಆದರೆ ಅನುತಾಪ-ದಯೆ-ಅನುರಾಗ ಇತ್ಯಾದಿ ಅಂತರಂಗ ಗತಗುಣಗಳನ್ನೇ ರಾಜಾಧಿಗಳನ್ನಾಗಿಟ್ಟುಕೊಂಡು ಆಟವಾಡುವುದಕ್ಕೆ ತಕ್ಕಂತೆ ರಚಿಸಲ್ಪಟ್ಟಿದೆ. ಅನುತಾಪರಾಜ ಸಂಬಂಧಿಯಾದ್ದರಿಂದ ಅನುತಾಪಕ ಪ್ರೇಕ್ಷಣಿಕವೆಂದು ಹೆಸರಾಯಿತು. ಆಡುವವರಿಗೆ ತಕ್ಕಂತೆ ಅಲ್ಲಲ್ಲಿ ಕೆಳಗಡೆ ಗೀಟುಗಳು ಹಾಕಿ ಹಾಡುಗಳು ಬರೆಯಲ್ಪಟ್ಟಿವೆ. ಅವುಗಳನ್ನು ಸಂಖ್ಯೆಗಳ ಪ್ರಕಾರ ಉಪಯೋಗಿಸಿಕೊಳ್ಳತಕ್ಕದ್ದಾಗಿದೆ. ವಿಶೇಷವೇನೆಂದರೆ, ತಕ್ಕಮಟ್ಟಿಗೆ ಭಾಷೆಯು ಶುದ್ಧವಾಗಿಯೂ, ಸುಲಭವಾಗಿಯೂ, ಲಲಿತವಾಗಿಯೂ ಬರೆಲ್ಪಟ್ಟಿದೆ. ಅಲ್ಲದೆ, ಸಂಸ್ಕೃತ ರೂಪಕಗಳಲ್ಲಿ ತತ್ತತ್ಪಾತ್ರಂಗಳಿಗೆ ತಕ್ಕಂತೆ ಸಂಸ್ಕೃತ, ಪ್ರಾಕೃತಗಳನ್ನು ಪ್ರಯೋಗಿಸುವ ಮರ್ಯಾದೆಗೆ ಅನುಸಾರಿಯಾಗಿರುವಂತೆ, ಈ ಕರ್ಣಾಟಕ ಪ್ರೇಕ್ಷಣಿಕಗಳಲ್ಲಿ ಸಂಸ್ಕೃತ ಸ್ಥಾನದಲ್ಲಿ ಶುದ್ಧವಾದ ಕನ್ನಡವು, ಪ್ರಾಕೃತ ಸ್ಥಾನದಲ್ಲಿ ಹೊಸಗನ್ನಡವೂ ಉಪಯೋಗಿಸಲ್ಪಟ್ಟಿದೆ (ಪು.೧-೨).

ಇದೊಂದು ಬಗೆಯ ವಿಚಿತ್ರ ಶೈಲಿಯಲ್ಲಿ ಮೂಡಿಬಂದ ಅನುವಾದವಾಗಿದೆ. ಅನುವಾದಕ ಒಂದು ಕೃತಿಯನ್ನು ಅನುವಾದಿಸುವಾಗ ಅವನದೇ ಆದ ಕೆಲವು ಅಗತ್ಯಗಳಿರುತ್ತವೆ ಎಂಬುದನ್ನು ಈ ಅನುವಾದ ದೃಢಪಡಿಸುತ್ತದೆ.

ಪ್ರಸ್ತಾವನೆಯಲ್ಲಿ ಕವಿ ಇಡೀ ನಾಟಕದ ಮರ್ಮವನ್ನು ಹೇಳಿಸುತ್ತಾನೆ.

"ಆವಂಸಂಸಾರಮಂಹೇಯಮೆನಿಸಿದನೊದಾಕ್ಷಾಯಣೀ ದುಃಖಿಯಾಗು ।
ತ್ತಾವಂ ವೈರಾಗ್ಯಮಂ ನಿರ್ಭಯ ಮೆನಿಸಿದನೋ ದಕ್ಷಿಣಾಮೂರ್ತಿಯಾಗು ॥
ತ್ತಾವಂ ಶೃಂಗಾರಮಂ ಶ್ರೇಷ್ಠಮೆನಿಸಿದನೋ ಶೈಲಾತ್ಮಜೋದ್ವಾಹಿಯಾಗು ।
ತ್ತಾ ವಿಶ್ವೇಶಂಶಿವಂತಾಂ ಕುಡುಗೆಮಗೆ ಸದಾನಮದಮಂಚಿತ್ತಕಾಶಂ ॥

ಈ ನಾಟಕವು ಅನುತಾಪವನ್ನು ಆಧಾರವಾಗಿಟ್ಟುಕೊಂಡು ಬರೆಯಲಾಗಿದೆ. ರಾಜ ಮತ್ತು ರಾಣಿಯರಿಗೆ ಗಗನದಲ್ಲಿ ರೋದನಧ್ವನಿ ಕೇಳಿಸುತ್ತದೆ. ಮಂತ್ರಿಗೆ ಅದು 'ಪತ್ರೀದಹನಕಾಲದೊಳರೆವ' ನುಡಿಯಾಗಿ ಕೇಳಿಸುತ್ತದೆ.

ಉ ॥ ಪಾರ್ವತಿಯೆಂಬ ಪುತ್ರಿಸಲೆ ಪುಟ್ಟಲುಮೇತಕೆ ಸಾಯ್ಯುದೇತಕಾ ॥ ಪರ್ವತದಂತೆ ಧೈರ್ಯ ಕಲೆಗುಂಟಾದೆ ನಿಂದೆ ನಿವೇ.......॥

॥ಕ॥ ಹಾ ಯೆನ್ನ ಮದುಗಿಣಿ ಹಾ
ಹಾ ಯೆನ್ನಯ ಭಾಗ್ಯ ಗೃಹದ ತೇಜೋಮಣಿ ಹಾ
ಹಾ ಯೆನ್ನೊಲವಿನಕಣಿ ಹಾ
ಹಾ ಯೆನ್ನಯ ಪುತ್ರಿ ಮಿಸುನಿಗೊಂಬೆಯ ಕಂದಾ ।೮॥

ಆಕೆಯ ಗಂಡ ಸಾಂತ್ವನ ಹೇಳುತ್ತಾನೆ.

ಉ ॥ ಅಯ್ಯಯಾಕಾಂತೆಯೇ ಕಳಲ್ಪಮಾಣೆಸು ಮಾಣಿಸು ಯೆಮ್ಮ ದುಃಖ
ನೊಯ್ಯನೆ ಪೋವುದೀಪೂರಣೆ ಯಿರ್ರ್ಯರನೀಪರಿಸುಟ್ಟುದಲ್ಲದೇ ।
ಮೆಯ್ಯೊಳು ಮಾಯ್ತುಪುತ್ರಿ, ಮಡಿದಾರ್ತಿಯು ಮಿಂತಿಯಕರ ಸಂಚಯ
ಪೊಯ್ಯದೆಪೋಕುವೇವಿಧಿ, ನಿಜಾತ್ಮವ ಕೂಲ್ಲ ದೇಶಾಂತಳಾಗತಾ ।೯॥
ಮತ್ತುಂ
ಕ॥ ಅರ್ಮಿರ್ವ ರ್ಬ ಮರೆದೊಕಡೆ
ಯಿಾಮಹಿಯೊಳ್ಪಳಿಸಿ ಸೊಗಮನೋ ದುಃಖಮನೋ
ಪ್ರೇಮದಿನೋ ಚಿಂತೆಯಿನೊ
ನೇಮಿದೊಳನುಭವಿಪೆವದಿರಿ ನಳಲೇಪ ಸತೀ ।೧೦॥

ಹಾ, ಎನ್ನನಾಥನೇ, ಸುಖದಿಂದಿರ್ಪ ಸುಕುಮಾರಿಯನ್ನು ಮಾರಿಗಿತ್ತು ಮರುಗುವೆನೋ ಅಥವಾ ಸಾಂಬಯಿಸಲು, ನನ್ನ ಮನಸ್ಸನ್ನು ನೋಯಿಸಬಾರದೆಂಬ ಅನುರಾಗದಿಂ ಬಂದಪತಿಗೂ ಮೀಗತಿಯಾಗಿಯೇ,ನಿರ್ಭಾಗ್ಯಳಾದ ನಾನೂ ಸಾಯಲಿಲ್ಲವಲ್ಲಾ, ಈವುಪ್ಪು ಕಾಲುವೆಯಲ್ಲಿ ಬೀಳುವೆನು.

ರಾಜನು ಆ ದುಃಖವನ್ನು ಸಹಿಸಿಕೊಳ್ಳಲು ಅಮರ್ಥನಾಗಿದ್ದಾನೆ. ರಾಜನು ಆ ದುಃಖಕ್ಕೆ ಅನುತಾಪವನ್ನು ತೋರುತಿದ್ದಾನೆ.

ರಾಜಂ ॥ ಸಂದಿಯ ಮೇತಕಿನ್ನು ಬನ್ನದ ಮುನ್ನೀರಿನೊಳು ಮುಳುಂಗಿದಂ,
ಅಯ್ಯೋ, ಅನುರೂಪ ದಾಂಪತ್ಯಂ ಅಳಿಯದೇ ॥೧೮॥

ಮತ್ತೊಬ್ಬರ ದುಃಖವನ್ನು ಸಹಿಸುವ ಶಕ್ತಿ ರಾಜನಿಗಿಲ್ಲ. ಅನುವಾದಕರು ತನ್ನ ವೈಯಕ್ತಿಕ ಜೀವನದಲ್ಲಿ ಆದಂತಹ ಅಘಾತದ ಪ್ರತಿಬಿಂಬವನ್ನು ಈ ನಾಟಕದಲ್ಲಿ ಕಂಡಿದ್ದಾನೆ. ಅದರಿಂದಾಗಿಯೇ ಅವನು. ಈ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ನಾಟಕದ ಪ್ರಸ್ತಾವನೆಯಲ್ಲಿ ಈ ಮಾತು ಬಂದಿದೆ.

ಪತ್ನಿದುಃಖದಿಂದ ಗಗನದಲ್ಲಿ ಕೇಳಿಬಂದ ವಿಧವಿಧವಾದ ರೋದನವು ರಾಜನನ್ನು ಅನುತಾಪ ಮಡುವಿಗೆ ಹಾಕಿವೆ. ರಾಜ ಆತನನ್ನೇ ಕೊಂಡು, ಅವನ ದುಃಖವನ್ನು ಕಡಿಮೆ ಮಾಡುವ ವಿಚಿತ್ರ ಉಪಾಯ ಮಾಡುತ್ತಾನೆ. ಅಂತೆಯೇ ; ರಾಜಂ ॥ ಅಯ್ಯೋ ಆ ಪ್ರಾಣಿಯು ಅಪಾರ ಸಂಕಟಕ್ಕೆ ಸಿಕ್ಕಿದ್ದು, ಇನ್ನು ಸಮ್ಮನಿರಲಾಗದು (ಅನುಕಂಪಿಯಂ ನೋಡಿ) ದೇವಿಯೇ ಧನುರ್ಬಾಣಂಗಳೆಲ್ಲ ದೇವ - (ಮನದೊಳು) ಈತನು ತಾಪಸಾಂಶ ಸಂಭೂಪನು. ಆ ಪ್ರಾಣಿಯ ದುಃಖವನ್ನು ಸಹಿಸಲಾರದೆ...ಸದ್ಗತಿಕೊಟ್ಟರೆ, ದುಃಖಶಾಂತಿ ಯಾಗುವುದೆಂದೆಣಿಸಿರುನೋ ಏನೋ, ಇದಲ್ಲದೆ, ಈತಂಗೆ ಲಕ್ಷವಲ್ಲಿದ್ದರೂ ಬಾಣಪ್ರಯೋಗ ಚಾರ್ಯವು ಮಹಾತ್ಮರಿಂದನುಗ್ರಹಿತವಾಗಿದೆ.

ಅಲ್ಲಲ್ಲಿ ಈ ನಾಟಕದಲ್ಲಿ ದುಃಖದ ವಿವೇಚನೆ ನಡೆದಿದೆ. ಹೆಚ್ಚಾಗಿ ಇದು ಮಂತ್ರಿಯ ಮಾತಿನಿಂದ ಒದಗಿಬಂದಿದೆ.

ಕ॥ ಮಮತಾಮೂಲಂ ಜಗಮಿದು ।
ಸಮನಿಸುಗಂ ಮಮತೆಯಿಂದೆ ಸುಖದುಃಖಂಗಳ್ ।
ಶ್ರಮದಿಂ ಗೃಹಪಶ್ವಾರಾ ।

ಮಮುಖ್ಯಮಿದು ಬಿಡೆ ಬಿಡುವುದು ಪಡೆಮಲ್ವರ್ಕುಂ ॥ ೨೮ ॥

ಆ ಕಾಲದಲ್ಲಿ ನಾಟಕದಲ್ಲಿ ಮರಣವು ಅಶುಭವೆಂದು ಪರಿಗಣಿಸಲ್ಪಟ್ಟಿದ್ದರಿಂದ ಮತ್ತೆ ಒಂದು ತಂತ್ರ ಮಾಡಿ, ಮರಣವು ಅವನನ್ನು ಬದುಕಿಸಲಾಗಿದೆ. ಕೆಳಗಿನ ಮಾತುಗಳು ಇದಕ್ಕೆ ಸಾಕ್ಷಿಯಾಗಿವೆ.

ರಾಜಂ ॥ (ತನ್ನೊಳು) ಆತಂ ಶಾಸ್ತ್ರಾನುಸಾರಮಾಗಿಯುಂ ಲೋಕಾಭಿಪ್ರಾಯದಿ

ಅನ್ವರ್ಥದ್ವಿಜನಾಮನೆಸರಿ (ಪ್ರಕಾಶಮಾಗಿ) ದೇವಿಯೇ. ಇಂಗಿತಜ್ಞಳಾದ ನನ್ನ ಭಾವಮಂ ಸ್ಪಷ್ಟಗೊಳಿಸಿವೆ, ಅದಲ್ಲದೆ, ಬೇರೆಯೇ ನಭಿಲಕ್ಷಿತಂ ।

ಮಂತ್ರಿ ॥ ಎನ್ನುತಾತನಾದ ಬೊಮ್ಮನಂ ಪ್ರಾರ್ಥಿಸಿ ಭವಿಷ್ಯಚ್ಛುಭನೂತನ ಮನರಿತು ರಾಯನಂ ಸಂತಸಂಗೊಳಿಪೆಂ ( ಎಂದು ಧ್ಯಾನನಿಷ್ಟನಾಗಿರ್ದು ಬಹಿರ್ಮುಖನಾಗುವಂ).

( ಆಕಾಶದಲ್ಲಿ)

ತ .॥ ಭಯಮಿಲ್ಲ ಮಗನೆ ಶುಭ ಸಂ। ಚಯಮಿರ್ಪುದರಿಂ ದವಂ ಪ್ರವರ್ಧಿತನಪ್ಪಂ ।

**ಪ್ರೇಕ್ಷಣಿಕದ್ವನುಮಧ್ಯ ಪ್ರವೇಶಕವು :**

ಅನುತಾಪ ಪ್ರೇಕ್ಷಣೀಯು ಮತ್ತು ಉನ್ಮತ್ತ ರಾಘವ ಪ್ರೇಕ್ಷಣಿಕಾ ಎಂಬ ಎರಡು ನಾಟಕದ ಮಧ್ಯದಲ್ಲಿ ಇದನ್ನು ಸೇರಿಸಲಾಗಿದೆ. ಅನುತಾಪ-ಪ್ರೇಕ್ಷಣಿಯಂ ನಾಟಕದ ವಸ್ತು ಅನುತಾಪ. ದುಃಖ ಈ ರಾಗಗಳ ನಾಟಕವಾಗಿದ್ದರಿಂದ ಹಾಗೂ ನಾಟಕದಲ್ಲಿ ಅದು ಸಂಪೂರ್ಣವಾಗಿ ಅಂದರೆ ಕೊನೆಯತನಕ ಆ ಕರುಣ ರಸವು ಇದ್ದುದರಿಂದ ಪ್ರೇಕ್ಷಕರಿಗೆ ಈ ರಸದಿಂದ ಹೊರತರಿಸಿ, ಹಾಸ್ಯ ರಸದ ರುಚಿ ಉಣಬಡಿಸುವ ಇಚ್ಛೆ ಇದೆ. ಲಘು ದಾಟಿಯಲ್ಲಿ ಸಂಭಾಷಣೆಯಲ್ಲಿ, ಇದಕ್ಕೆ ಅಳವಡಿಸಿಕೊಳ್ಳಲಾಗಿದೆ. ಇಲ್ಲಿ ಮತ್ತೆ ಪ್ರತಿಮೆಗಳ ಪ್ರಯೋಗವಿದೆ. ಮೂಗುಹರಕ ಮತ್ತು ಕರುಗಂಣಂ ಇವರ ಹೆಸರೇ ಹೇಳುವಂತೆ ಒಬ್ಬನ ಮೂಗು ಹರುಕು, ಮತ್ತೊಬ್ಬನ ಕಣ್ಣು ಕಿರುಗಣ್ಣು ಆಗಿವೆ. ಅವರ ನಡುವಿನ ಸಂಭಾಷಣೆ ಹಾಸ್ಯ ರಸವನ್ನು ಉಕ್ಕಿಸುತ್ತದೆ.

ಉದಾಹರಣೆಗೆ ;

೧. ಮೂಗುಹರಕ॥ ನಿನ್ನ ಕುರುಗಂನು ಹೇಗೆ ಮಿಣುಗುಟ್ಟುತ್ತೋ ಬುದ್ಧಿಯೂ ಹಾಗೆಯೇ ಇದೆ.
ಕಿರುಗಂಣ : ವಿಲಚಪ್ಪ । ನಿನ್ನ ಮೂಗಿನ ಸಂಗತಿ ಮಾತಾಡುವಾಗ ನನ ಕಂಣಿನ ಚಾರವೇಕೋ?

೨. ಕರುಗಂಣ ॥ಹೊ..ಹೋ...ಹಾಗೋ ! ಅಲ್ಲವೇನೋ ನೋಡು.

ನಾನೇನೋ ಗಾಳಿಯ ಧೂಳು ಬಂದು ಕಂಣಿಗೆ ಬೀಳುತ್ತೆಂದು ಕಂಣು ಅರ್ಥ ಮುಚ್ಚಿಕೊಂಡು ಬಂದೆ ಹೊರತು ನನ್ನ ಕಂಣೆಷ್ಟು ಸೊಗಸಾಪ್ಪೋ.

೩. ಮೂಗಹರಕ ॥ ಎಲ್ಲಾ ನೀಚನೀ ॥ ಅದು ಹಾಗಿರಲಿ, ಚನ್ನಾಗಿ ನೋಡು, ಇದು ಹರುಕು ಮೂಗೆಂದು ಭಾವಿಸಬೇಡ, ಸೌಂದರ್ಯ ಲಕ್ಷ್ಮಿಯು ತನ್ನ ಸಂಪತ್ತನನ್ನು ತುಂಬಿಡುವ ಬೊಕ್ಕಸವು ಕಾಣೋ.

೪. ಮೂಗುಹರಕ ॥ ಎಲ್ ಧಟ್ಟ ಹಾಗಲ್ಲ ಕಾಣೋ ಅವನು (ಸರವಾಯಿ) ನನ್ನ ಸೇವಕ.

ಕರುಗಂಣ ॥ ಎಲಿಯೇಯಲ । ಚೀಟಾಳಿಗೊಂದು ಮೋಟಾಳು , ಮೋಟಾಳಿಗೊಂದು? ಮೊಂಡ ಗುದ್ದಲಿ ಎಂಬಂತೆ ನಾವೇ ಸೇವಕರಾಗಿರುವಾಗ ನಮಗೊಬ್ಬನೇ ವಕ.

ಇವೆಲ್ಲ ಉದಾಹರಣೆಗಳಿಂದ ಚಮತ್ಕಾರ ಪೂರ್ಣವಾಗಿ ಮಾತುಗಾರಿಕೆಯಿಂದ ನಗೆ ಎಬ್ಬಿಸಿದ್ದಾರೆ.

**ಉನ್ಮತ್ತ ಧಾಘವ ಪ್ರೇಕ್ಷಣಿಕಂ :**

ಈ ನಾಟಕವು ರಾಮಾಯಣ ಒಂದು ಉಪಕಥಾ ಪ್ರಸಂಗದ ಪರಿವರ್ತಿತ ರಚನೆಯಾಗಿದೆ. ಇಲ್ಲಿ ರಾಮ ಜಿಂಕೆಯ ಬೆನ್ನತ್ತಿ ಹೋಗುವ ಪ್ರಸಂಗವಿದ್ದರೂ, ಸೀತಾಪಹರಣದ ಪ್ರಸಂಗ ಮಾತ್ರ ಬದಲಾಯಿಸಿ, ರಾಮ-ಸೀತೆಯರ ಮಿಲನವು ಅಗಸ್ತ್ಯ ಮುನಿಗಳ ಆಶ್ರಮದಲ್ಲಿ ಆಗುವಂತೆ ಮಾಡಿದ್ದಾರೆ. ನಾಟಕದ

ಮಕ್ತಾಯವು ಆ ಕಾಲದ ಪರಂಪರೆಯಂತೆ ಸುಖಾಂತ್ಯಗೊಳಿಸಿದ್ದಾರೆ. ಮಧುಕರಿಕೆ ಸೀತೆಯ ಸಖಿ. ಹೂವುಗಳನ್ನು ಬಿಡಿಸುತ್ತಾ ಸೀತೆ ದಟ್ಟವನದಲ್ಲಿ ಹೋಗುವ ಮನಸ್ಸು ಮಾಡುತ್ತಾಳೆ. ರಾಮ ಲಕ್ಷ್ಮಣರು ಜಿಂಕೆಯ ಬೆನ್ನತ್ತಿ ಬೇರೆ ಕಡೆಗೆ ಹೋಗಿದ್ದಾರೆ. ಮಧುಕರಿಕೆ ಎಚ್ಚರಿಸಿದರೂ ಸೀತೆ ರಾಮನ ಪೂಜೆಗೆ ಇನ್ನು ಸಾಕಷ್ಟು ಹೂವುಗಳು ಸಿಕ್ಕಲಿಲ್ಲವೆಂದು ಮುಂದಿನ ವನ ವಿಭಾಗಕ್ಕೆ ಹೋಗುತ್ತಾಳೆ. ಅಲ್ಲಿಯೇ ಅವಳು ಕಾಣದಂತಾಗುವಳು. ಮಧುಕರಿಕೆ ಚಿಂತೆಗೊಳಗಾಗುವಳು. ರಾಮ ಲಕ್ಷ್ಮಣರು ಈ ಸುದ್ದಿಯನ್ನು ಕೇಳಿ ಶೋಕಸಾಗರದಲ್ಲಿ ಮುಳುಗುತ್ತಾರೆ. ರಾಮ ವಿಲಾಪಿಸತೊಡಗುತ್ತಾನೆ. ಸೀತೆಯ ಹೆಜ್ಜೆ ಗುರುತುಗಳನ್ನು ಅನುಲಕ್ಷಿಸಿ, ರಾಮ-ಲಕ್ಷಣರು ಹೊರಡುತ್ತಾರೆ. ಸಿಹಿ ಮಾವಿನ ತೋಪಿನ ಹತ್ತಿರ ಅವರು ಬರುವರು. ಲಕ್ಷ್ಮಣನಿಗೆ ಸೀತೆಯ ಕೈಯಿಂದ ಜಾರಿಬಿದ್ದ ರತ್ನಗವಡಂ ನೋಡುತ್ತಾನೆ. ರಾಮನ ವಿಲಾಪ ಇನ್ನು ತಾರಕಕ್ಕೇರುತ್ತದೆ. ಅಷ್ಟರಲ್ಲಿ ಲಕ್ಷ್ಮಣನಿಗೆ ಸಖಿ ಮಧುಕರಿಕೆ, ಸೀತೆ ಮತ್ತು ಅಗಸ್ತ್ಯಮುನಿಗಳು ಬರುವುದನ್ನು ನೋಡಿ, ಆ ಸಂತೋಷದ ಸುದ್ಧಿಯನ್ನು ರಾಮನಿಗೆ ಹೇಳುತ್ತಾಳೆ, ಅಗಸ್ತ್ಯರು ಸೀತೆಯನ್ನು ರಾಮನಿಗೆ ಒಪ್ಪಿಸುತ್ತಾರೆ. ಅಗಸ್ತ್ಯರು ಸೀತೆ ಕಾಣೆಯಾದುದರ ಬಗ್ಗೆ ಕಾರಣ ಕೊಡುತ್ತಾರೆ. ಹಿಂದೆ ಹರಿಣಿ ಎಂಬ ಅಪ್ಸರೆ ಇಂದ್ರನಿಂದ ಕಳುಹಿಸಲ್ಪಟ್ಟಿದ್ದಳು. ಅವಳು ದುರ್ವಾಸಮುನಿಗಳ ಆಶ್ರಮದಲ್ಲಿ ಹೂಬಿಡಿಸಲು ಬಂದಾಗ ದುವಾಸ ಮುನಿಯೂ ಅದನ್ನು ನೋಡಿ, ನಿನ್ನ ಹೆಸರಂತೆ ಹರಿಣಿಯಾಗು ಎಂದು ಶಾಪ ಕೊಡುತ್ತಾನೆ. ಅಗಸ್ತ್ಯ ಮುನಿಗಳ ಬಳಿ ಆ ಹರಿಣಿ ಹೋಗಿ ಪ್ರಾರ್ಥಿಸಲಾಗಿ ಮುನಿಗಳು ಮಂತ್ರಪೂರಿತವಾದ ಗರಿಕೆ ಹುಲ್ಲಿಂದ ಅವಳ ಶಾಪವಿಮೋಚನೆಯಾಗುತ್ತದೆ. ಸೀತೆ ಅದೇ ವನದಲ್ಲಿ ಸಂಚರಿಸಿದ ಸೀತೆ ಕೂಡ ಶಾಪ ಪ್ರಭಾವದಿಂದ ಹರಿಣಿಯಾಗುತ್ತಾಳೆ. ಧ್ಯಾನದೃಷ್ಟಿಯಿಂದ ಅಗಸ್ತ್ಯ ಮುನಿಗಳು ಇದನ್ನು ತಿಳಿದು ಅವರು ಮತ್ತೆ ಶಾಪ ವಿಮೋಚನೆ ಮಾಡುತ್ತಾರೆ. ಎಲ್ಲರೂ ಸಂತೋಷ ಪಡುತ್ತಾರೆ. ಇದು ಈ ನಾಟಕದ ಸಾರಾಂಶ.

ರಾಮನ ವಿಲಾಪದ ವರ್ಣನೆ ಇಲ್ಲಿ ಸಶಕ್ತವಾಗಿ ಮೂಡಿಬಂದಿದೆ. ಸೀತೆಯ ಪಾದದ ಗುರುತನ್ನು ನೋಡಿ.

ರಾಮಂ ॥ ದಿಟವಾಗಿ ಇದು ಪ್ರಿಯೆಯ ಅಡಿಗಳಸಾಲೆ,
ಕ ॥ ಅದುವೇ ಬೆರಳ್ಗಳವೊತ್ತಿದ ।
ಹದನದುವೇತಳಿರಡಿಗಳನಿಟ್ಟ ವಿಲಾಸಂ ।
ಅದುವೇಕಿರಿ ದೆಡೆಯೊಪ್ಪುಗೆ ।
ಯದುವೇವಿಸ್ಯಾತ ನಿಪುಣತಾ ಸೂಚಕಮಂ ।೬೬॥

ಕೋಗಿಲೆಯ ನುಡಿಗಳು ರಾಮನಿಗೆ ಮದ್ದಳೆಯ ಶಬ್ದದಂತೆ ಕಠೋರವಾಗಿವೆ. ರಾಮನಿಗೆ ರನ್ನ ಕಡಗ ಸಿಕ್ಕಾಗ. ಅವನಿಗೆ ಸ್ವಲ್ಪ ದುಃಖ ಉಪಶಮನವಾಗುತ್ತದೆ.

ಕ॥ ಚಿರಕಾಲ ಕೆನ್ನ ಹೃದಯದ ।
ಪರಿತಾಪಂ ಕೊಂಚಮಣಗುವಂತಾಗಿಸು ವಾ ।
ಕರಕಿಸಲಯದಿಂಚಾರಿದ ।
ಮೆರೆವಿದನಾಂ ಪಡೆದನಿದಿಗೊರಕನ್ನರಪಗಮಂ ।೪೪॥

ಈ ಮೂರು ಲಘು ನಾಟಕಗಳನ್ನು ಅವಲೋಕಿಸಿದಾಗ ಕರುಣ, ವಿರಹ ರಸವು ಪ್ರಧಾನವಾಗಿ ಮೂಡಿಬಂದಿದೆ. ದುಃಖದ ಭಾರ ಪ್ರೇಕ್ಷಕನಿಗೆ ಸಹ್ಯವಾಗಿಸಲು ಮಧ್ಯದಲ್ಲಿ ಹಾಸ್ಯ ರಸವು ಉಪಯೋಗಿಸಲ್ಪಟ್ಟಿದೆ. ಕವಿಯ ವೈಯಕ್ತಿಕ ಬದುಕಿನ ಶೋಕದ ಪ್ರತಿಬಿಂಬ ಇಲ್ಲಿ ಕಂಡಿದೆ. ಈ ನಾಟಕದ ಅನುವಾದ 'ಸ್ವಾಂತಸುಖಾಯ್' ಎಂಬಂತೆ ತನ್ನ ವೈಯಕ್ತಿಕ ವಿವೇಚನೆಯಿಂದ ಬಿಡುಗಡೆ ಹೊಂದಿ ಮನಸ್ಸನ್ನು ನಾಟಕದ ತತ್ವಗಳಿಂದ ತಣಿಸಲು ರಚನೆಯಾಗಿವೆ.

## ೩. ಕರ್ಪೂರ ಮಂಜರಿ (ಸಟ್ಟಕ) :

'ಕರ್ಪೂರ ಮಂಜರಿ' ೧೯೩೬ರಲ್ಲಿ ಶ್ರೀ ಎಸ್. ಎನ್. ನರಹರಯ್ಯ ಅವರಿಂದ ಅನುವಾದಿಸಲ್ಪಟ್ಟಿತು. ಈ ನಾಟಕದ ಮೂಲ ಲೇಖಕನು ರಾಜಶೇಖರನು. ಮೂಲ ನಾಟಕವು ಪ್ರಾಕೃತದಲ್ಲಿದೆ. ತಾನು ಸಂಸ್ಕೃತ ಬಿಟ್ಟು ಪ್ರಾಕೃತಕ್ಕೆ ಏಕೆ ಕೈಹಾಕಿದನೆಂಬುದನ್ನು ಅನುವಾದಕ ಪಾರಿಪಾರ್ಶ್ವಕ ಬಾಯಿಂದಲೇ ಹೇಳಿಸಿದ್ದಾನೆ.

ಪಾರಿಪಾರ್ಶ್ವಕನು - ಸರ್ವಭಾಷಾ ಚರುತನಾದ ಅವನೇ ಹೀಗೆ ಹೇಳಿರುವನು.

ಕಂ: ಅದೇ ಅರ್ಥ ನಿವೇಶಂ ಮ।
ತ್ತವೆ ಶಬ್ದಂ ಪರಿಣಮಿಪ್ಪೊಡಂ ಕಾವ್ಯಮೆನಿ ॥
ಪ್ಪುದದುಕ್ತಿ ವಿಶೇಷದಾ ।
ವುದು ಭಾಷೆಯೆನಿಪ್ಪೊಡಂ ಗಡೆಂತುಟು ಭೇದಂ ॥ ೨ ॥

ಮತ್ತೆ ಕಂ ॥ ಅರಿವೊಡೆ ಸಂಸ್ಕೃತ ಬಂಧಂ ।
ಪರುಷಂ ಕುಮಾರಮಲ್ತೆ ಪ್ರಾಕೃತ ಬಂಧಂ ॥
ಪುರುಷರ್ಗ್ಗಂ ಲಲನೆಯರ್ಗಂ ।
ಮೆರೆದಂತರಮೆನಿತಸಿತ್ತೆ ಅಂತರಮವರ್ಗಂ ॥

ಇದೇ ಮಾತು ಈ ಕನ್ನಡ ಅನುವಾದಕ್ಕೂ ಅನ್ವಯಿಸುತ್ತದೆ ಎಂದು ಅನುವಾದಕ ಹೇಳಬಯಸಿದ್ದಾನೆ. ಪ್ರಸ್ತುತ ನಾಟಕ ಶೃಂಗಾರ ಪ್ರಧಾನವಾಗಿರುವುದು. ನಾಟಕದಲ್ಲಿ ಹಾಸ್ಯ ರಸವು ತನ್ನ ಸ್ಥಾನವನ್ನು ಪಡೆದುಕೊಂಡಿದೆ. ಭೈರವಾನಂದನೆಂಬ ಸಿದ್ಧ ಪುರುಷ. ರಾಜನ ಆಸ್ಥಾನಕ್ಕೆ ಬರುತ್ತಾನೆ. ರಾಜನು ಆ ಭೈರವಾನಂದವನ್ನು ಯಥೋಚಿತವಾಗಿ ಗೌರವಿಸುತ್ತಾನೆ.

ಯಾವುದಾದರೊಂದು ವಿಷಯ ದಲ್ಲಿ ಅತ್ಯದ್ಭುತವಾದ್ದೊಂದು ನೋಡಬೇಕು ಎಂದು ರಾಜನು ಅಪೇಕ್ಷಿಸುತ್ತಾನೆ. ಮತ್ತು ಅಪೂರ್ವವಾದ ಸ್ತ್ರೀರತ್ನವನ್ನು ನೋಡಲು ಆಸೆ ಪಡುತ್ತಾನೆ. ದಕ್ಷಿಣ ದೇಶದಲ್ಲಿ ವೈದರ್ಭವೆಂಬ ನಗರದಲ್ಲಿ ಒಂದು ಕನ್ಯಾರತ್ನವನ್ನು ನೋಡಿದುದಾಗಿಯೂ ಹೇಳಿ, ಆ ನಗರದಿಂದ ತನ್ನ ಯೋಗಬಲ ದಿಂದ ಅವಳನ್ನು ಈ ರಾಜನ ಆಸ್ಥಾನಕ್ಕೆ ಕರೆಯುತ್ತಾನೆ. ಅವಳ ಸೌಂದರ್ಯಕ್ಕೆ ಎಲ್ಲರೂ ಬೆರಗಾಗುತ್ತಾರೆ. ಅವಳ ಹೆಸರು ಕರ್ಪೂರ ಮಂಜರಿ. ಅವಳು ಯಾರು ಎಂದು ಪ್ರಶ್ನಿಸಲಾಗಿ ಅವಳು, ದಕ್ಷಿಣದೇಶದಲ್ಲಿ ವಲ್ಲಭರಾಜನೆಂಬ ದೊರೆಗೆ ಮತ್ತು ಶಶಿ ಪ್ರಭೆಯೆಂಬ ರಾಣಿಗೆ ತವುಡಿಗೆ ಕೊಂಡ ಕೊಂಡ ಮಗಳು ಎಂದು ಹೇಳಿಕೊಳ್ಳುತ್ತಾಳೆ. ರಾಣಿಗೆ (ದೇವಿಗೆ) ವಲ್ಲಭರಾಜ ಅವಳ ಚಿಕ್ಕಮ್ಮನ ಗಂಡನೇ ಮತ್ತು ಶಶಿಪ್ರಭೆ ಅವಳ ತಾಯಿಯ ತಂಗಿಯೇ ಆಗಿರುವಳು. ಈ ಸಂಬಂಧದಿಂದ ರಾಣಿಗೆ ಅವಳು ತಂಗಿಯಾಗಿ ಮಾರ್ಪಟ್ಟಿದ್ದರಿಂದ ಕರ್ಪೂರ ಮಂಜರಿಯ ವಿಷಯದಲ್ಲಿ ರಾಣಿಗೆ ಮಮಕಾರ ಮೂಡುವುದು. ನಿರಾಭರಣ ಸುಂದರಿಯಾದ ಕರ್ಪೂರ ಮಂಜರಿಯನ್ನು ಅಲಂಕರಿಸಲು ರಾಣಿಯಾಗಿ ಕರ್ಪೂರ ಮಂಜರಿಯನ್ನು ಅಂತಃಪುರಕ್ಕೆ ತೆಗೆದುಕೊಂಡು ಹೋಗುವಳು. ಇತ್ತ ರಾಜನಿಗೆ ಕರ್ಪೂರ ಮಂಜರಿಯಲ್ಲಿ ಅನುರಾಗ ಉಂಟಾಗುತ್ತದೆ. ಭೈರವಾನಂದನ ಮಂತ್ರದ ಪ್ರಭಾವದಿಂದ ಕೇತರೆ ವೃಕ್ಷವು ಹೂ ಬಿಡುತ್ತದೆ. ಒಂದು ಹೂವನ್ನು ರಾಣಿಗೆ ಗೌರಿಗೆ ಅರ್ಪಿಸುತ್ತಾಳೆ. ಮತ್ತೊಂದು ಹೂವನ್ನು ತನ್ನ ತಂಗಿಯಾದ ಕರ್ಪೂರಮಂಜರಿಗೆ ಇನ್ನೆರೆಡು ಹೂಗಳನ್ನು ಕೊಡುತ್ತಾಳೆ. ಅದರಲ್ಲಿ ಒಂದನ್ನು ಅವಳು ಗೌರಿಗೆ ಅರ್ಪಿಸುತ್ತಾಳೆ. ಇನ್ನೊಂದನ್ನು ಅವಳು ರಾಜನಿಗೆ ಅರ್ಪಿಸುತ್ತಾಳೆ. ಅಷ್ಟರಲ್ಲಿ ವಿದೂಷಕನು ಒಂದು ರಹಸ್ಯ ಸುದ್ದಿಯನ್ನು ತರುತ್ತಾನೆ. ಹಿಂದೋಲನ ಚತುರ್ಥಿಯ ದಿವ ರಾಣಿಯು ಗೌರಿಯ ಮುಂದೆ ಕರ್ಪೂರ ಮಂಜರಿಯನ್ನು ಉಯ್ಯಾಲೆಯಲ್ಲಿ ಕುಳ್ಳರಿಸಲಿದ್ದಾಳೆ ಎಂಬ ಸುದ್ದಿ ತಿಳಿಸುತ್ತಾನೆ. ಮರಕತಪುಂಜ ಪ್ರಸಾದಲ್ಲಿದ್ದುಕೊಂಡು ರಾಜನು ಈ ದೃಶ್ಯವನ್ನು ನೋಡಲು ವಿದೂಷಕನು ವ್ಯವಸ್ಥೆ ಮಾಡುತ್ತಾನೆ. ಆದರೆ ಕರ್ಪೂರಮಂಜರಿಯ ಸ್ವಲ್ಪ ಸಮಯ ಮಾತ್ರ ಉಯ್ಯಾಲೆಯ ಮೇಲೆ ಕೂಡುತ್ತಾಳೆ. ಅಷ್ಟರಲ್ಲಿ ಕರ್ಪೂರಮಂಜರಿಯೂ ರಾಣಿಯ ಆದೇಶದಂತೆ ದ್ವಾರ ದೇಶಕ್ಕೆ ಬರುತ್ತಾಳೆ. ಅಲ್ಲಿ ರಾನಿ ಕುರವತ, ತಿಲಕ, ಅಶೋಕ ಎಂಬ ಮೂರು ಎಳೆ ಗಿಡಗಳನ್ನು ನೆಟ್ಟಿದ್ದಾಳೆ. ಪುನಃ ತಮಾಲ ವೃಕ್ಷಗಳಲ್ಲಿ ಅಂತರಿಕವಾಗಿ ನಿಲ್ಲಿಸಿ ಆ ದೃಶ್ಯವನ್ನು ನೋಡಲು ವಿದೂಷಕ ಅಣಿ ಮಾಡುತ್ತಾನೆ. ಕರ್ಪೂರ ಮಂಜರಿ ಕುರವಕ ವೃಕ್ಷವನ್ನು ತಬ್ಬಿಕೊಳ್ಳುತ್ತಾಳೆ. ತಿಲಕ ವೃಕ್ಷಕ ಕಣ್ಣು ತಿರುಗಿಸಿ ಕೊಂಚ ಹೊತ್ತು ನೋಡುತ್ತಾಳೆ. ಅಶೋಕ ವೃಕ್ಷಕ್ಕೆ ಚರಣ ತಾಡನವನ್ನು ಮಾಡುತ್ತಾಳೆ. ಈ ಮೂರು ಗಿಡಗಳು ರೂಪರೇಖಾ ರಹಸ್ಯದಿಮದಲೇ ವಿಹರಿಸುವುದಾಗಿದ್ದರಿಂದ ಈ ತರಹದ ಪದ್ಧತಿಯೂ ಇದೆ. ವಿದೂಷಕ ರಾಜನಿಗೆ ಕರ್ಪೂರ ಮಂಜರಿಯ ಭೇಟಿ ಮಾಡಿಸಿ ಇಬ್ಬರೂ ಒಬ್ಬರೊಬ್ಬರ ಹೃದಯ ನಿವೇದನೆಗೆ ಅವಕಾಶ ಮಾಡುತ್ತಾನೆ. ಅಷ್ಟರಲ್ಲಿ ಈ ಸುದ್ಧಿಯು ರಾಣಿಗೆ ತಿಳಿದು, ಅವಳು ಅಲ್ಲಿ ಬರುವ ಸೂಚನೆ ಸಿಗುತ್ತದೆ. ಕರ್ಪೂರ ಮಂಜರಿ ಸುರಂಗದ್ವಾರದ ರಕ್ಷಾಗೃಹದಲ್ಲಿ ಅಡಗುತ್ತಾಳೆ. ರಾಣಿ ಅದನ್ನು ಗಮನಿಸಿ, ಆ ಸುರಂಗ ದ್ವಾರವನ್ನು ಬಹಳ ಶಿಲಾ ಸಂಚಯದಿಂದ ಒಂದು ರಂಧ್ರವು ಇಲ್ಲದಂತೆ ಮಾಡಿ ರಕ್ಷಿಸಲು ಸೇನೆ ಮತ್ತು ಸಖಿಯರನ್ನು ನೇಮಿಸುತ್ತಾಳೆ. ರಾಜನಿಗೆ ಕೊಡು ಎಂದು ಹೇಳುತ್ತಾನೆ. ಲಾಟಾ ದೇಶದಲ್ಲಿ ಚಂಡಸೇನನೆಂಬ ರಾಜನಿಗೆ ಘನಸಾರ ಮಂಜರಿಯೆಂಬ ಮಗಳಿದ್ದಾಳೆ. ಅವಳು

ಚಕ್ರವರ್ತಿಯ ಗೃಹಿಣಿಯಾಗುವಳೆಂಬ ಚಾತಕವಿದೆ. ಆದುದರಿಂದ ಮಹಾರಾಜನಿಗೆ ಅವಳನ್ನು ಮದುವೆ ಮಾಡಿಬಿಡಬೇಕೆಂದು ಹೇಳಿದನು. ರಾಣಿ ಪ್ರಮಿದೋದ್ಯಾನದಲ್ಲಿರುವ ವಟ ವೃಕ್ಷದ ಕೆಳಗೆ ದೇವಿ ಚಾಮುಂಡಾಯತನವನ್ನು ಮಾಡಿಸಿ, ಅಲ್ಲಿಯೇ ಕೌತಂಕ ಗೃಹದಲ್ಲಿ ವಿವಾಹವನ್ನು ನೆರವೇರಿಸಲು ಸಿದ್ಧತೆ ಮಾಡಿದಳು. ನಿಜವಾಗಿ ಭೈರವಾನಂದನೋ ಕರ್ಪೂರ ಮಂಜರಿಯನ್ನು ಘನಸಾರ ಮಂಜರಿಯೆಂದು ಹೇಳಿದ್ದಾನೆ.

ಕರ್ಪೂರ ಮಂಜರಿ ಪ್ರವೇಶಿಸುತ್ತಾಳೆ. ಅವಳನ್ನು ನೋಡಿ ರಾಣಿ ಭ್ರಮಿತಳಾಗಿ ತಾನು ಅವಳನ್ನು ಸುರಂಗಮಾರ್ಗದಲ್ಲಿ ಬಂಧಿಸಲಿಕ್ಕೆ ಇವಳು ಹೇಗೆ ಇಲ್ಲಿಗೆ ಬಂದಳು ? ಎಂದು ಸ್ವಗತವಾಗಿ ಪ್ರಶ್ನೆ ಮಾಡುತ್ತಾಳೆ. ಕರ್ಪೂರ ಮಂಜರಿ ಸುರಂಗದಲ್ಲಿ ಇದ್ದಾಳೆಂದು ನೋಡಲು ವಿವಾಹ ಸಾಮಗ್ರಿಯ ನೆಪ ಮಾಡಿಕೊಂಡು ಅಲ್ಲಿಗೆ ಹೋಗುವಳು. ಭೈರವಾನಂದನು ಕರ್ಪೂರ ಮಂಜರಿಯನ್ನು ಸುರಂಗ ಮಾರ್ಗದಲ್ಲಿ ಬೇಗನೆ ಹೋಗಲು ಹೇಳುವನು. ರಾಣಿಯು ಸುರಂಗಮಾರ್ಗದ ರಕ್ಷಾಗೃಹದಲ್ಲಿ ಕರ್ಪೂರ ಮಂಜರಿಯನ್ನು ನೋಡುವಳು. ಮತ್ತೆ ರಾಣಿ ವಿವಾಹ ಮಂಟಪಕ್ಕೆ ಬರುವಳು. ಪುನಃ ಅಲ್ಲಿ ಕರ್ಪೂರ ಮಂಜರಿಯನ್ನು ಕಾಣುವಳು. ಪುನಃ ರಾಣಿ, ಆಭರಣಗಳನ್ನು ತರುವ ನೆಪದಿಂದ ಸುರಂಗ ಮಾರ್ಗಕ್ಕೆ ಹೋಗುವಳು. ಅಲ್ಲಿ ಪುನಃ ಮೊದಲಿನ ರೀತಿ ಕರ್ಪೂರಮಂಜರಿಯನ್ನು ನೋಡುವಳು. ಮತ್ತೆ ವಿವಾಹಮಂಟಪಕ್ಕೆ ಬಂದಾಗ ಕರ್ಪೂರ ಮಂಜರಿಯನ್ನು ನೋಡುವಳು. ವಿವಾಹ ವಿಧಿ ಪ್ರಾರಂಭವಾಗುವುದು. ವಿದೂಷಕನು ಅಗ್ರಾಚಾರ್ಯವನ್ನು ಮಾಡಲು ರಾಣಿ ಹೇಳುವಳು. ಆಗಾಗ ವಿದೂಷಕನು ಬಾಯತಟ್ಟಿ ರಾಜನಿಗೆ ಕರ್ಪೂರ ಮಂಜರಿಯ ಕೈಯನ್ನು ಹಿಡಿಯಲು ಹೇಳುವನು. ರಾಣಿಗೆ ಅವಳು ಘನಸಾಗರಮಂಜರಿಯಲ್ಲ, ಕರ್ಪೂರ ಮಂಜರಿ ಎಂದು ಗೊತ್ತಾಗುವುದು. ಆದರೆ ವಿವಾಹ ನೆರವೇರುವುದು.

ಪ್ರಸ್ತುತ ನಾಟಕದ ತುಂಬಾ ಶೃಂಗಾರ ರಸದ ವರ್ಣನೆ ಇದೆ.

ರಾಜ - ವೃತ ॥ ಅಂಗಂ ಚಂಗಂ ನಿಜಗುಣಗಣಾಲಂಕೃತಂ ಕಾಂತಿಯಗ್ಗ್ರ
ಶೃಂಗಾರಾಪ್ತಂ ಸಮವ ಸಿರಿಯಂ ಲಕ್ಷಿಮಯಾಚ್ಛಾದಿಕುಂ ತಾಂ।
ತುಂಗಂ ಸೇರ್ದ್ವಿಂತಿರೆ ತನುವೊಳಾರೂಪಮುದ್ರಾಪ್ರತರ್ಷಂ।

ಸಂಗೋಪ್ರಾಂ ಸಧನುವರಿವೇಂ ನಿಷ್ಯಭೃತ್ಯಂ ಸಮಸ್ತಂ ॥೩೩॥
ರಾಜನು ಕರ್ಪೂರಮಂಜರಿಯನ್ನು ನೆನೆಸುತ್ತಾ

ವೃ॥ ಚೆಲಿಸಲ್ಕಿಲ್ಲವನದಿಳ್ಳನಿತ್ತೆನಿಪೊಡಂ ಸ್ವಸ್ಥಂ ನಿತಂಬಸ್ಥಳಂ
ನೆಲೆಯಾ ವೃತ್ತವಳೀ ತರಂಗಮುಡರಂ ತಿರ್ಯರ್ರೈತಮ ಕಂಧರಂ ॥
ವಲಿ ಪಂದಾತ್ಯಹಿಮಾಂ ಶುಭಂ ಘನ ಕುಚಂತಳ್ಳೈಸುಗಂ ವೇಣಿಯುಂ॥
ಸಲೆ ವಿಕ್ಷೇಪಿಸಲೆನ್ನೊಳಕ್ಷಿಯನವಳ್ ಮೇಯ್ವಳ್ಳಿಮೀನಾಲ್ತೆರಂ ॥

ಇಂಥ ವರ್ಣನೆಗಳು ನಾಟಕದ ತುಂಬಾ ಪ್ರಸ್ತಾಪಿತವಾಗಿವೆ. 

ವಿದೂಷಕ ಮತ್ತು ವಿಚಕ್ಷಣೆ ಇವರಿಬ್ಬರ ನಡುವಿನ ಹುಸಿ ಜಗಳ ಹಾಸ್ಯರಸ ಉಕ್ಕಿಸುವಲ್ಲಿ ಯಶಸ್ವಿಯಾಗಿದೆ.

೧) ವಿದೂ - ಇಲ್ಲಿ ನೇಡಿರಿ, ನಿಮ್ಮೆಲ್ಲರ ಮಧ್ಯದಲ್ಲಿ ನಾನೊಬ್ಬನೇ ಕಾಲಾಕ್ಷರಿಕನು ( ಓದಿ ಅರ್ಥ ಮಾಡಬಲ್ಲವನು) ನಮ್ಮ ಮಾವನ ಮಾವನು ಪಂಡಿತನ ಮನೆಯಲ್ಲಿ ಪುಸ್ತಕಗಳನ್ನು ಹೊರುತಿದ್ದರು.

೨) ವಿದೂ - (ವಿಚಕ್ಷಣೆಯ ಮೂದಲಿಕೆಗೆ ಉತ್ತರವಾಗಿ) - ನನ್ನನ್ನು ಹೀಗೆನ್ನುವ ನಿನ್ನ ಎಡೆದ, ಬಲದ, ಯುಧಿಷ್ಠರನ ಅಣ್ಣನ (ಅಂದರೆ ಕರ್ಣನ) ಹೆಸರುಳ್ಳ ಅಂಗದ್ವಯವನ್ನು ಕಿತ್ತು ಹಾಕಿ ಬಿಡುವೆನು.

ಕರ್ಪೂರಮಂಜರಿ ರಾಜನ ಅಭಿಮಾನಗಳಿಸಿದರೂ ರಾಣಿಯನ್ನು ಬಹುವಾಗಿ ಗೌರವಿಸುವಳು. ಈ ನಾಟಕ ಜನಸಾಮಾನ್ಯರ ಮತ್ತು ಪರಾಕ್ರಮಗಳ ಭಯವಿಲ್ಲದೇ ಇರುವ ರಾಜರುಗಳಿಗೆ ಏಕ ಕಾಲಕ್ಕೆ ನಾಟಕ ಅತಿಯಾದ ತಾತ್ವಿಕತೆಗೆ ಹೋಗದೆ, ಜನ ಬಯಸುವುದನ್ನೇ ನಾಟಕದ ಕಥಾವಸ್ತುವಾಗಿಸಿದ್ದಾರೆ.

ಆಗಿನ ಕಾಲದ Romantismಗೆ ಅನುಗುಣವಾಗಿ ಈ ಅನುವಾದ ಮೂಡಿಬಂದಿದೆ. ನಾಟಕವನ್ನು ತತ್ವಗಳ ಭಾರದಲ್ಲಿ ನಾಟಕವನ್ನು ಎಲ್ಲೂ ನಲುಗಿಸಿಲ್ಲ. ಕೇವಲ ಮನೋರಂಜನೆಯನ್ನೇ ಪ್ರಧಾನವಾಗಿ ಇಟ್ಟುಕೊಳ್ಳಲಾಗಿದೆ. ಸಂಭಾಷಣೆಗೆ ಹೊಸಗನ್ನಡದಲ್ಲಿ ಇದ್ದುದರಿಂದ ಅದು ವಾಚನೀಯವೂ ಆಗಿದೆ. ಆದರೆ ಕೆಲವು ಸಂಸ್ಕೃತ ನುಡಿಗಟ್ಟುಗಳು ಹಾಗೇ ಉಳಿದುಹೋಗಿವೆ. ಅವು ರಂಗ ಪ್ರಯೋಗದಲ್ಲಿ ಪ್ರೇಕ್ಷಕನಿಗೆ ಅರ್ಥವಾಗುವ ಸಾಧ್ಯತೆ ಕಡಿಮೆ. ಅಂಥಾ ಮಾತುಗಳ ಸ್ಪಷ್ಟೀಕರಿಸಲಿಕ್ಕಾಗಿ ನಾಟಕದಲ್ಲಿ ಇನ್ನೊಂದು ಪಾತ್ರವೇ ಸ್ಪಷ್ಟಮಾಡಬೇಕಾಗಿ ಬರಬಹುದೇನೋ. ಆದ್ದರಿಂದ ಇದು ರಂಗ ಪಠ್ಯವಾಗದೇ ಓದು ಪಠ್ಯವಾಗಿದೆ. ನಾಟಕ ಕಥಾವಸ್ತುವನ್ನು ನೋಡಿದಾಗ ಅದನ್ನು ಲೋಕಾಭಿಮುಖವಾದಂಥ ಪ್ರಯತ್ನ ಇದಾಗಿವೆ ಎಂದು ಹೇಳಬಹುದು.

## ೪. ಕರ್ಣಾಟಕ ಪಾರ್ವತಿ ಪರಿಣಯ ನಾಟಕಂ:

ನಾಟಕದ ಮೂಲ ಕರ್ತೃ 'ಬಾಣಭಟ್ಟ' ಇದನ್ನು ಮೈಸೂರು ಸೀತಾರಾಮಶಾಸ್ತ್ರಿಗಳು ೧೮೯೬ರಲ್ಲಿ ಹಳೆಗನ್ನಡಕ್ಕೆ ಅನುವಾದಿಸಿದರು. ತಮ್ಮ ಈ ಅನುವಾದವು ಹಳಗನ್ನಡದಲ್ಲಿದ್ದಕ್ಕೆ ಶಾಸ್ತ್ರಿಗಳಿಗೆ ಸ್ವಲ್ಪ ಅಳುಕು ಇದೆ. ಹಳಗನ್ನಡ ಹಿಂದೆ ಬಿದ್ದು ಹೊಸಗನ್ನಡದ ಅರುಣೋದಯ. ಆ ಕಾಲದಲ್ಲಿ ಓದುಗರು ಹೊಸಗನ್ನಡವನ್ನು ಹೆಚ್ಚು ಇಷ್ಟಪಡುತ್ತಿದ್ದುದು ಸ್ಪಷ್ಟವಾಗಿದೆ. ಆದ್ದರಿಂದ ಅವರು '' ಇದು ಹಳಗನ್ನಡದಲ್ಲಿ ಬರೆದಿದೆ ಎಂದು ಕೇಳಿದ ಮಾತ್ರಕ್ಕೆ ಜಿಗುಪ್ಸೆಕರಾಗದೆ, ಆದರದಿಂದ ಆದ್ಯಂತವಾಗಿ ಗುಣ ಗ್ರಹಣದಿಂದ ಸಂತೋಷ ಪಡುವಿಕೆಂದು ನಂಬುವೆನು'' ಎಂದು ಹೇಳಿದ್ದಾರೆ. ಅಲ್ಲದೇ ಪೀಠಿಕೆಯಲ್ಲಿ

ಅವರು ಹೇಳಿದ ಮಾತುಗಳಿಂದ ಇದು ಪಠ್ಯ ಪುಸ್ತಕದ ಅಗತ್ಯತೆ ಹೊಂದಿರುವ ಅನುವಾದವಾಗಿದೆ. ಸಮಾಜಕ್ಕೆ ಆನಂದ ಕೊಡಲು ತಾನು ಈ ನಾಟಕವನ್ನು ಅನುವಾದಿಸಿದನೆಂದು ಹೇಳುತ್ತಾನೆ. ಈ ನಾಟಕವು ರಸೋತ್ಪತ್ತಿಗೆ, ಸಂವಿಧಾನ ಪರಿಪೂರ್ಣತೆಗೆ ವಸ್ತು ಹಳೆಯದಾದರೂ ಹೊಸತೇನೋ ಎನ್ನಿಸುವುದರಿಂದ ಮತ್ತು ಸುಲಭವಾಗಿ ರಸಿಕ ಸಭಾಸದರ ಮನವಲಿಸುವುದರಿಂದ ಗುಣಗಳನ್ನು ಹೊಂದಿವೆ ಎಂದು ಅನುವಾದಕ ಸೂತ್ರಧಾರನಿಂದ ಹೇಳಿಸುತ್ತಾನೆ.

ಸೂತ್ರಧಾರ - ಕಂದಾ॥ ಒಸರುತ್ತಿರೆ ರಸವಿಸರಂ।
ಮಿಸುಗುತಿರೆ ಸಂವಿಧಾನ ಪರಿಪೂರ್ಣತೆ ಮೇಣ್ ॥
ಪೊಸತೆನಿಸಿರೆ ಸಂದರ್ಭಂ ॥
ರಸಕಭಾಸದರ ಮನಮನೊಲಿಪುದು ಸುಲಭಂ ॥೫॥

ಇದರಿಂದ ನಾಟಕವು ಸುಲಭ ಗ್ರಾಹ್ಯವು ಮತ್ತು ಪ್ರೇಮಮಯವಾದುದರಿಂದ ಪ್ರಾರಂಭವಾಗುತ್ತದೆ. ಯಾವುದೇ ಕನ್ಯಾಪಿತೃವಿಗೆ ತನ್ನ ಮಗಳಿಗೆ ತಕ್ಕವರ ಸಿಗುವುದರ ಬಗ್ಗೆ ಆಕಾಶ ಇದ್ದೇ ಇರುತ್ತದೆ. ಹಿಮಂವಂತನಿಗೆ ಅದರಂತೆಯೇ ಪಾರ್ವತಿಯ ಮದುವೆಯ ಚಿಂತೆ. ಅದನ್ನು ಅವನು ಕೆಳಗಿನ ಮಾತುಗಳಲ್ಲಿಯೇ ವ್ಯಕ್ತಗೊಳಿಸುತ್ತಾನೆ.

ಪೀಠಿಕೆಯಲ್ಲಿ ಸೀತಾರಾಮಶಾಸ್ತ್ರಿಗಳು ಹೇಳಿರುವ ಮಾತಿನಿಂದ ಆ ಕಾಲಕ್ಕೆ ಸಂಸ್ಕೃತದಿಂದ ಇಂಗ್ಲೀಷಿನಿಂದ ಅನುವಾದಗಳು ಏಕೆ ಬಂದವು ಎಂಬುದು ಗೊತ್ತಾಗುತ್ತದೆ. ಅಲ್ಲದೇ ಆ ಕಾಲದ ಕೆಲ ಸಾಂಸ್ಕೃತಿಕ ವಿವರಗಳು ಗೊತ್ತಾಗುತ್ತವೆ. ''ಕನ್ನಡದಲ್ಲಿ ಹಿಂದಣ ಕವಿಗಳಿಂದ ರಚಿಸಲ್ಪಟ್ಟ ನಾಟಕಗಳು ಯಾವವೂ ಇಲ್ಲವೆಂದು ತೋರುವುದು. ಪ್ರಾಯಶಃ ೨೦೦ ವರ್ಷಗಳ ಹಿಂದೆ ಸಿಂಗರಾರ್ಯ ಕವಿಯಿಂದ ರಚಿತವಾದ 'ಮಿತ್ರವಿಂದಾ ಗೋವಿಂದ'ವೆಂಬ ನಾಟಕವೊಂದೇ ಪ್ರಸಿದ್ಧವಾಗಿರುವುದು. ಇದೂ ಹೊಸತಲ್ಲ. ಸಂಸ್ಕೃತದಲ್ಲಿ ಶ್ರೀ ಹರ್ಷ ಕವಿಯಿಂದ ರಚಿತವಾದ 'ರತ್ನಾವಳಿ'ಯೆಂಬ ನಾಟಿಕೆಯ ದೆಸೆಯಿಂದ ಸ್ವಲ್ಪ ವ್ಯತ್ಯಾಸ ಮಾಡಿ ಕನ್ನಡಿಸಲ್ಪಟ್ಟುದುದಾಗಿರುವುದು. ನಾಟಕಕ್ಕೆ ಅನೇಕ ಲಕ್ಷಣಗಳಿರಬೇಕು. ಆದರೆ ಈ ನಿರ್ಬಂಧದಿಂದಲೇ ಹಿಂದೆ ಯಾರೂ ಕನ್ನಡದಲ್ಲಿ ಹೊಸತಾಗಿ ನಾಟಕವನ್ನು ಬರೆಯಲು ಪ್ರವರ್ತಿಸಲಿಲ್ಲವೆಂಬುದು ಸರಿಯಲ್ಲ. ಏಕೆಂದರೆ ಅನೇಕೋದ್ಧಾಮ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿರುವ ಮಹಾ ಕವಿಗಳಿಗೆ ಈ ನಿರ್ಬಂಧವು ದೊಡ್ಡದೇ ? ಆದರೆ ಆ ಕಾಲದಲ್ಲಿ ಕನ್ನಡದಲ್ಲಿ ನಾಟಕವನ್ನು ಬರಿಯಬೇಕೆಂದು ಯಾರೂ ಪ್ರೋತ್ಸಾಹಪಡಿಸಲಿಲ್ಲವೆಂದು ತೋರುವುದು. ಈಚೆಗೆ ರಸಿಕರಾದ ಸುಕವಿಗಳ ದುರದೃಷ್ಟದಿಂದಲೂ, ಈ ಕರ್ಣಾಟ ದೇಶದ ದೌರ್ಭಾಗ್ಯ ವಿಶೇದದಿಂದಲೂ ಅಗಲಿದ್ದರೂ, ತಮ್ಮ ಉದಾರವಾದ ಗುಣಗಣದಿಂದ ಉಂಟಾದ ಸತ್ಕೀರ್ತಿಯೆಂಬ ಶರೀರದಿಂದ ಪ್ರಕಾಶಿಸುತ್ತಿರುವ ಶ್ರೀಮಚ್ಚಾಮರಾಜೇಂದ್ರ ಮಹೀಪಾಲಪುಂಗವರ ಪ್ರೋತ್ಸಾಹದಿಂದಲೂ, ಘನತೆಯನ್ನು ಹೊಂದಿದ ಮದ್ರಾಸ್ 'ಯೂನಿವರ್ಸಿಟಿ'ಯವರ ಪ್ರೋತ್ಸಾಹದಿಂದಲೂ,

ಸಂಸ್ಕೃತಾಂಗ್ಲೇಯ ಭಾಷೆಗಳ ದೆಸೆಯಿಂದ ಅನೇಕ ನಾಟಕಗಳು ಕನ್ನಡಿಸಲ್ಪಟ್ಟಿರುವುವು. ಬಾಣಭಟ್ಟನಿಂದ ರಚಿತವಾದ 'ಪಾರ್ವತಿ ಪರಿಣಯ'ವೆಂಬ ಚಿಕ್ಕದಾದ ಸಂಸ್ಕೃತ ನಾಟಕವು ದೊರೆತ ಕಾರಣ ಇದನ್ನು ಈ ರೀತಿ ಸಾಧಾರಣವಾದ ಹಳೆಗನ್ನಡದ ರೂಪದಿಂದ ಪರಿವರ್ತಿಸಿ ಮುದ್ರಿಸಿರುವೆನು. ಇಲ್ಲಿ ಲೇಖಕರು ಸ್ವವಿವರವನ್ನು ಹಾಗೂ ಚಾಮರಾಜ ಒಡೆಯರ ಪ್ರೋತ್ಸಾಹವನ್ನು ಸೂಚನೆಯಲ್ಲಿ ಸೂಚ್ಯವಾಗಿ ತಿಳಿಸಿದ್ದಾರೆ.

ಕಂ ॥ ಮೈಸೂರ ಚೆನ್ನಪುರಿಯೋ।
ಳ್ವಾಸಿಪ್ಪಾಂಗ್ಲೇಯ ಶಾಸ್ತ್ರ ಪಾಠಳಿಯದಾ ॥
ಭಾಸುರ ಕರ್ಣಾಟ ಬಂಧಂ।
ಶ್ರೀ ಸೀತಾರಾಮ ನಾಮಕಂ ಕವಿಯೊರ್ವ್ವಂ ॥

ವೃ ॥ ದೊರೆವಡೆದಿರ್ಪ್ಪ ಬಾ ಕವಿರಾಜನಿನಾತೆರದಿಂದೆ ಪಾರ್ವತಿ।
ಪರಿಣಯವೆಂಬ ನಾಟಕ ವುದೀರಿತವಾಗಿರೆ ಸಂಸ್ಕೃತೋಕ್ತಿಯೊಳ್ ॥
ಶರನಿಧರತ್ನ ವರ್ಣ ಸಮಸಂಖ್ಯವಲಾಕಲಿವರ್ಷವಿಂದೆನ।
ಲ್ಬರೆ ಜಯ ಮಾಖ ಶುಕ್ಲ ಶುಭ ಸಪ್ತಮಿ ಕನ್ನಡಿಸಿರ್ಪ್ಪನಿಂತದಂ ॥

ಈ ನಾಟಕವನ್ನು ಪರಿವರ್ತಿಸಿರುವ ಕಾರಣವನ್ನು ಕುರಿತು ಈ ರೀತಿ ಹೇಳಿದ್ದಾರೆ.

''ವಿದ್ಯಾಹೃವ್ಯಾಪಿ ಸಾವದ್ಯಾ ವಿನಾ ವಿನಯ ಸಂಪದಾ।''
ಕಂದ ॥ ವಿನಯಭರಂ ಬಿಟ್ಟರೆ ತಾ।
ನೆನಿಕುಂ ಸಾವದ್ಯೆ ವಿದ್ಯೆ ಹೃದ್ಯೆಯೆನಲ್ಕಂ ॥

ನಾನು ಕರ್ಪೂರ ಮಂಜರಿಯನ್ನು ಪರಿವರ್ತಿಸಿದುದರ ಉದ್ದೇಶವೂ ಇದೆ. ನಮ್ಮಲ್ಲಿ ಪೂರ್ವದಲ್ಲಿ ಸ್ತ್ರೀ ವಿದ್ಯಾಭ್ಯಾಸವಿತ್ತೇ ಇಲ್ಲವೆ ಎಂದು ಹೊಡೆದಾಡುವರು. ಆ ಕಾಲದಲ್ಲಿ ಚೇಡಿಯರೂ ಹೇಗೆ ವಿದುಷಿಯರಾಗಿದ್ದರೆಂದು ತಿಳಿದುಕೊಂಡು, ಬಳಿಕ ತಾವು ಬೇಕಾದ ಸಿದ್ಧಾಂತವನ್ನು ಮಾಡಿಕೊಳ್ಳಬಹುದು. ಪ್ರಣಯ ಮಾರ್ಗವು ಎಷ್ಟು ಗಂಭೀರವಾಗಿ, ಆಡಂಬರಗಳಿಲ್ಲವಿರುವುದೆಂದು ಇದರಿಂದ ಉದಾರಿತವಾಗುವುದು. ಹೀಗಿರುವ ಸಟ್ಟಕವನ್ನು 'ನನ್ನದೊಂದು ಸಟ್ಟಕ ಎಲ್ಲಿರಿಸಲಿ' ಎಂಬ ಗಾದೆಯಂತೆ ಪರಿವರ್ತಿಸಿರುವೆ''.

ಅನುವಾದಕರ ಉದ್ದೇಶ ಇಲ್ಲಿ ಸ್ಪಷ್ಟವಾಗಿದೆ. ರಾಜಶೇಖರನ ಸಟ್ಟಕವನ್ನು ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಲೇಖಕರೇ ಸೂಚ್ಯವಾಗಿ ಹೇಳಿರುವಂತೆ ಈ ಸಟ್ಟಕದಲ್ಲಿ ಕೆಲ ಬದಲಾವಣೆಗಳನ್ನು ಕವಿ ಮಾಡಿಕೊಂಡಿದೆ. ಪ್ರಥಮ ಅಂಕ ಎನ್ನುವುದನ್ನು ಪ್ರಥಮ ಜವನಿಕಾಂತರಂ ಎಂದು ಸೂತ್ರಧಾರ ಮತ್ತು ನಟಿಯ ಸಂಭಾಷಣೆಯನ್ನು ಸ್ಥಾಪಕ, ಪಾರಿಪಾರ್ಶ್ವಕರ ಸಂಭಾಷಣೆಯಾಗಿ ಮಾರ್ಪಡಿಸಿದ್ದಾನೆ.

ಅದೊಂದು ಬಗೆಯ ಪ್ರಶ್ನೋತ್ತರ ರೂಪದಲ್ಲಿ ಇದೆ. ಸ್ಥಾಪಕನು ಕೇಳುತ್ತಾನೆ. ಸಾಟಿಕವೆಂದರೇನು ? ಅದಕ್ಕೆ ಪಾರಿಪಾರ್ಶ್ವಕನು ಹೇಳುತ್ತಾನೆ.

ಕಂ ॥ ಅದು ಸಾಟಿಕವಾಚ್ಯಮದೆ ।
ಲ್ಲದರೊಳ್ ನಾಟಿಕೆಯನನುಹರಿಪ್ಪೊಡೆ ಬಾಧಂ ॥
ಇದು ಭೇದಮವಿಲ್ಲಂ ಮ ।
ತ್ತದರೋಳಿಂಕ ಪ್ರವೇಶ ವಿಷ್ಣಂಭಂಗಳ್ ॥

ಸ್ಯೆವ ಪ್ರವೇಶಕೇನಾಪಿ ವಿಷ್ಣಂಭಕೇಣ
ವಿನಾಕೃತಾ ಅಂಕಸ್ಥಾನೀಯ ವಿನ್ಯಸ್ತಾ
ಚತುರ್ಜವನಿಕಾನ್ತರಾ ॥ ಪ್ರಕೃಷ್ಟ
ಪ್ರಾಕೃತಮಯಿ ಸಧ್ಬಿಕ್ಕೆ ನಾಮತೋ
ಭವೇತ್ ।

ಸ್ಥಾಪಕ, ಹಾಗಾದರೆ ಸಂಸ್ಕೃತವನ್ನು ಬಿಟ್ಟು ಕವಿ ಏತಕ್ಕೆ ಪ್ರಾಕೃತ ಬಂಧಕ್ಕೆ ತೊಡಗಿದನು ?
ಪಾರಿಪಾರ್ಶ್ವಕ : ಸರ್ವಭಾಷಾ ಚತುರನಾದ ಕವಿ ಹೀಗೆ ಹೇಳಿರುವನು.

ಕಂ। ಅದೆ ಅರ್ಥನಿವೇಶಂ ಮ ।
ತ್ತದೆ ಶಬ್ದಂ ಪರಿಣಮಿಪ್ಪೊಡಂ ಕಾವ್ಯಮೆನಿ ॥
ಪ್ಪುದದುಕ್ತಿ ವಿಶೇಷಮದಾ ।
ವುದು ಭಾಷೆಯೆನಿಪ್ಪೊಡಂ ಗಡೆಂತುಬು ಭೇದಂ ॥

ಮತ್ತೆ ಕಂ। ಅರಿವೊಡೆ ಸಂಸ್ಕೃತಬಂಧಂ ।
ಪರುಷಂ ಸುಕುಮಾರಮತ್ತಿ ಪ್ರಾಕೃತಬಂಧಂ ॥
ಪುರುಷಗ್ಗರ್ಗಂ ಲಲನೆಯರ್ಗಂ ॥
ಮೆರೆವಂತರಮೆನಿತಸಿತ್ತೆ ಅಂತರಮ ವರ್ಗಂ ॥

ಕರ್ಪೂರಮಂಜರಿ ಸಾಮಾಜಿಕ ಸಮಸ್ಯೆಯೊಂದನ್ನು ;

ಕಂ ॥ ಕನ್ನೆಯ ನೆಲೆಯೊಲೆಯೆರಡುಂ ।
ಕನ್ನ ಮದೆತಂತು ಬಳಗು ಮನುಗುವರಚಿಂ ।
ತೋನ್ನತಿಯಂ ಬೊಗದಿಗುದಿ ।
ವೆನ್ನೊಡ ಲಂಕಯ ಕುಂದುತಿರ್ದಪು ದೇವಂ ।೧೫॥

ಅಷ್ಟರಲ್ಲಿ ನಾರದನ ಪ್ರವೇಶವಾಗುತ್ತದೆ. ಇಲ್ಲಿ ನಾರದನ ಪಾತ್ರ ಸಮಸ್ಯೆ ನಿವಾರಕದ ರೂಪದಂತೆ ಬಂದಿದೆ.

ಕಂ॥ ಪಿರಿಮಂ ದುಗುಪಕ್ಕೆ ಸಿಲ್ಕಿದ ।
ಕುರರಿಯ ಪಾಂಗಿಂಪಿ ಕನ್ನೆ ತನ್ನಿನಿಯ ನಗ ॥
ಲ್ಪಿರೆ ಕಂಬನಿಯಿಂ ಪೆರ್ಮೊಲೆ ।
ಯೆರಡಂ ನನೆಯಿಸುತೆ ಕುಸಿದ ದನಿಯಿಂದಳ್ತಳ ।೬೫॥

ದುಗುಡದಿಂದ ಕೂಡಿದ ರತಿಯನ್ನು ಆಗಸದ ನುಡಿ ಸಂತೈಸುತ್ತದೆ.

ಕಂ॥ ದುಗುಪಮ ನಿದನುಳಿಯೆಲೆರತಿ ॥
ಜಗಮೊಳವಾರ್ಬಿದಿಯ ಕ್ಲಿಪ್ತಿಯಂ ಮೀರಿದಡರ ॥
ಮುಗಳ್ಪುಂ ನಿನ್ನಿನಿಯಂ ಬರ್ದು ।
ರುಗು ಮೀಶ್ವರ ನದ್ರಿಸುತೆಯ ಕಮ್ಮಿಡಿವಾಗಳ್ ।೬೦॥

ಮನ್ಮಥ ಇಲ್ಲಿ ಆನಂದನಾಗಿ ಸರ್ವವ್ಯಾಪ್ತಿಯಾಗುತ್ತಾನೆ.

ಪಾರ್ವತಿಯು ಪರಮೇಶ್ವರನನ್ನು ಪಡೆಯುವುದು ಇನೂ ಅಧಿಕವಾಗುತ್ತದೆ. ಆದರೆ ತಾಯಿ ಮೇನಕಾದೇವಿಯೂ ಎಚ್ಚರಿಸುತ್ತಾಳೆ.

ಕಂ ॥ ತವೆ ಬೆಟ್ಟಿತು ತಪವಿದು ನಿ ।
ನ್ನವಯವ ವಿದು ಸಿರಿಸದಂತೆ ಮೆಲ್ಲಿತು ಕಠಿನ ॥
ವ್ಯವಸಾಯ ನಾಲತಿರ್ದ್ದಡೆ ।
ಕುವರೀ, ದುರ್ಲಭಮದೆಂದು ನಾ ನೆಣಿಸಿದಡೆಂ ।೬೪॥

ಆದರೂ ಹಠಬಿಡದ ಪಾರ್ವತಿಯು ಹಠಬಿಡದೆ ಪರ್ವತದ ಮೇಲೆ ತಪಸ್ಸನ್ನು ಆಚರಿಸಲು ವಿಪಕ್ರಮಿಸುತ್ತಾಳೆ. ನಂದಿಯಿಂದ ಈ ವಾರ್ತೆಯನ್ನು ಕೇಳಿದ ಶಿವನು ಪಾರ್ವತಿಯನ್ನು ಪರೀಕ್ಷಿಸಲಿಕ್ಕೆ ಬರುತ್ತಾನೆ. ತಾನೆ ಶಿವನನ್ನು ತಿರಸ್ಕರಿಸಿ ಮಾತನಾಡುತ್ತಾನೆ.

ವೃ ॥ ಭಸುಮಂ ಮೆಯ್ಯನು ಲೇಪನಂ ಫಣಿಯಳಂಕಾರಂ ನಿವಾಸ ಸ್ಥಳಂ ।
ಮಸಣಂ ಮೇಣರುಳ್ವಿಂದು ಭೃತ್ಯರನಿತು
ಭಿಕ್ಷಾತ್ಮಕಂ ವೃತ್ತಿಯುಂ ॥ ಉಸಿರ್ಗು ಸರ್ವ್ವರು ಮಿದಿತ
ಮಂಗಳ ಚರಿತ್ರೋಪೇತನೆಂದಾವನಂ । ರಸ-
ವೊಂದಿರ್ಪುದು ಮಾಡ್ಯದಿಂದ ಮವನೊಳ್ನನ್ನಾತ್ಮ ವೇಳೇಳ್ಪಡಂ ।೬೨।

ಇಂಥ ಮಾತುಗಳನ್ನು ಕೇಳಿ ಪಾರ್ವತಿ ಕೋಪದಿಂದ ಬೇರೆ ಕಡೆಗೆ ಹೊರಟು ಹೋಗಲು ಉದ್ಯುಕ್ತಳಾಗುತ್ತಾಳೆ. ಆಗ ಪರಮೇಶ್ವರನು ತನ್ನ ಸ್ವರೂಪವನ್ನು ತೋರಿಸುತ್ತಾನೆ. ಪಾರ್ವತಿಯ ಸಖಿಯರು ಔಪಚಾರಿಕವಾಗಿ ಮದುವೆ ಕಾರ್ಯಕ್ರಮ ನೆರವೇರಲಿ ಎಂದು ಶಿವನನ್ನು ವಿನಂತಿಸಿ ರಾಜ ಹಿಮವಂತನಿಗೆ ಶಿವನು ಪಾರ್ವತಿಯನ್ನು ಒಪ್ಪಿದ ಮಾತನ್ನು ತಿಳಿಸುತ್ತಾರೆ. ಹಿಮವಂತನು ಸಂತಸದಿಂದ ಮದುವೆಯ ಸಿದ್ಧತೆ ಮಾಡುತ್ತಾನೆ. ನಗಾರಿಗಳ ಸದ್ದು, ಶಂಖಗಳ ನಾದ, ಭೂತಗಣಗಳ ಮೇಳ, ನಂದಿಯ ಡೌಲು ಬರುತ್ತದೆ (ಪಾರ್ವತಿಯ ಅಲಂಕಾರ ವರ್ಣನೆಯಲ್ಲಿ ಬಾಣಭಟ್ಟ ವರ್ಣನೆಯನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ).

ಕಥೆ ಪೌರಾಣಿಕವಾದರೂ ಕಥಾವಸ್ತು ಜನಜೀವನಕ್ಕೆ ಹತ್ತಿರವಾಗಿದೆ. ಹಿಮವಂತನ ಪಾರ್ವತಿಯ ಮದುವೆಯ ಚಿಂತೆ ಯಾವುದೇ ಕನ್ಯಾಪಿತೃವಿನ ಚಿಂತೆಯಾಗಿದೆ. ನಾರದರ ಪಾತ್ರ ಸಮಸ್ಯೆ ನಿವಾರಕರ ಅಥವಾ ಮಧ್ಯಸ್ಥರ ಪಾತ್ರವನ್ನು ಪ್ರತಿನಿಧಿಸುತ್ತದೆ. ಮನ್ಮಥನ ಬಾಣವು ತಾರುಣ್ಯದ ಚಿತ್ತವಿಕಾರಗಳ ಪ್ರತಿನಿಧಿಯಾಗಿದೆ. ಪಾರ್ವತಿಯ ತಪಸ್ಸು, ಪ್ರೇಮವನ್ನು ಪಡೆಯಲು ಮಾಡಬೇಕಾದ ತ್ಯಾಗದ ಕಡೆಗೆ ಬೆರಳು ತೋರುತ್ತದೆ. ತನ್ನನ್ನು ಇಲ್ಲವಾಗಿಸಿದಾಗ ಮಾತ್ರ ಪರಮೇಶ್ವರನ ದರ್ಶನವಾಗುತ್ತದೆ ಎಂಬುದು ಇಲ್ಲಿ ಆಧ್ಯಾತ್ಮಿಕ ತತ್ವವಾಗಿ ಮೂಡಿಬಂದಿದೆ. ಮದುವೆಯ ವರ್ಣನೆ ಒಂದು ಸಾಮಾಜಿಕ ಮತ್ತು ಧಾರ್ಮಿಕ ಪರಂಪರೆಯ ಪ್ರತಿನಿಧಿಕರಣವಾಗಿದೆ. ಈ ಎಲ್ಲಾ ಸನ್ನಿವೇಶಗಳು ನಾಟಕವನ್ನು ಜನಜೀವನಕ್ಕೆ ಹತ್ತಿರ ತಂದಿವೆ. ಪ್ರೇಕ್ಷಕ ಇಲ್ಲಿ ತನ್ನ ಜೀವನದ ಪ್ರತಿಬಿಂಬವನ್ನು ಕಾಣುತ್ತಾನೆ.

ಕೌಶಿಕೆ : ಕಂ ॥ ಚಂದದ ಮಣಿಸರವೆಸೆದಿರೆ ।
ಸುಂದರಿಯೂ ಕುಂಕುಯಾರುಣಂ ಕುಚಕಳತಂ ॥
ಸಿಂಧುರದಿಂ ಸುಂದರವಿಹ ।
ಸಿಂಧುರನಿ । ಕುಂಭತಳಯನೇಂ ನಿಂದಿಸಿ ತೋ ।೯೯ ॥

## ೫. ಭರ್ತೃಹರಿ ನಿರ್ವೇದ ನಾಟಕಮ್ :

'ಕರ್ನಾಟಕ ಭರ್ತೃಹರಿ ನಿರ್ವೇದ ನಾಟಕಂ' ಎಂಬ ನಾಟಕವನ್ನು ಶ್ರೀ ಎಸ್. ಎನ್. ನರಹರಯ್ಯ ಇವರು ೧೯೨೪ರಲ್ಲಿ ಅನುವಾದಿಸಿದರು. ಇದರ ಮೂಲ ಕರ್ತೃ ಹರಿಹರೋಪಾಧ್ಯಾಯ. ಈ ನಾಟಕ ಆಧ್ಯಾತ್ಮಿಕ ನಾಟಕವಾಗಿ ಮೂಡಿಬಂದಿದೆ. ಆ ಕಾಲದಲ್ಲಿ ಈ ನಾಟಕವು ಗದ್ಯರೂಪದಲ್ಲಿರಬೇಕು ಎಂಬ ವಿಚಾರವು ದೃಢವಾಗಲಾರಂಭಿಸಿತ್ತು. ಹಳೆಯ ಪದ್ಧತಿಯಂತೆ ಪದ್ಯದ ಅನುವಾದ ಪದ್ಯದಲ್ಲಿಯೇ ಇರಬೇಕೆಂಬ ವಾದವು ಕ್ರಮೇಣ ಮಾಯವಾಗತೊಡಗಿತು. ಲೇಖಕರಿಗೆ ಈ ಬೆಳವಣಿಗೆಗಳ ಅರಿವಿದ್ದದ್ದರಿಂದ ಅವರು ಸಂಸ್ಕೃತ ಶ್ಲೋಕಗಳನ್ನು ಕಂದವೃತ್ತದಲ್ಲಿ ಅನುವಾದಿಸಿದರೂ, ಅದರ ಗದ್ಯಾನುವಾದವನ್ನು ಪುಟದ ಅಡಿಯಲ್ಲಿ ಸೇರಿಸಿದ್ದಾರೆ. ಅವರ ಈ ಮುಂದಿನ ಮಾತುಗಳಲ್ಲಿ ಈ ವಿಷಯದ ಪ್ರಸ್ತಾಪವಿದೆ.

"ಈಗಲೀಗ ನಾಟಕಗಳನ್ನು ಗದ್ಯ ರೂಪದಲ್ಲಿಯೇ ರಚಿಸಬೇಕೆಂದು ಅನೇಕ ಮಹಾಶಯರು ಅಭಿಪ್ರಾಯ ಪಡುವರು. ರಸ ಕವಿತ್ವಕ್ಕೆ ಪದ್ಯಬಂಧವು ಬರುವಷ್ಟು ಗದ್ಯಬಂಧವು ಬರಲಾರದೆಂದು ಭಾವಿಸುವೆವಾದರೂ ಮಹಾಜನರನ್ನು ಅನುಸರಿಸುವುದೂ ಒಂದು ಮಾರ್ಗವೇ. ಆದುದರಿಂದ ಎಲ್ಲಾ ಪದ್ಯಗಳಿಗು ಗದ್ಯಾನುವಾದವನ್ನು ರಚಿಸಿ, ಪುಟದ ಅಡಿಯಲ್ಲಿ ಸೇರಿಸುವೆವು".

ಪ್ರಸ್ತುತ ನಾಟಕ ಶೃಂಗಾರ ರಸದ ಮೇಲೆ ಶಾಂತರಸದ ವಿಜಯವನ್ನು ಸಾರಿ ಹೇಳುತ್ತದೆ. ಶೃಂಗಾರವು ಶಾಂತ ರಸಕ್ಕೆ ಶರಣಾಗಿದೆ.

ವೃತ್ತ ॥ ಪಲವುಂ ಜನ್ಮ ವಿಪತ್ತಿಗಳ್ ನೆರೆಪಿವೇಣಾಕ್ಷಾದಿಮಾಲಂಬನಂ । ಮಿಳಿತಸ್ವಪ್ನಕ ದೀಪಹಂ ನೆಲಸೆ ಶೃಂಗಾರಾದಿ ಯಂ ಷಣ್ಮುಗಂ ॥ ದಲದೊಂದು ಕ್ಷಣಿಕಮ ರಸಂ ಪ್ರತಿಫಲಂ ಪರ್ಯಸ್ತ ನಿಸ್ಸಾರಮ । ಲ್ತಲೆ ಶಾಂತಂ ರಸಮುತ್ತಮಂ ಸ್ಥಿರಮದಾತ್ಮಾದ್ವೈತ ಸೌಖ್ಯ ಪ್ರದಂ ।೨॥.

ಅರ್ಥ : ಸಾಲುಸಾಲಾಗಿರುವ ಅನೇಕ ಜನ್ಮ ಮರಣಗಳು ಕಂದು ಹಾಕಿರುವ ಉತ್ತಮ ಸ್ತ್ರೀಯರೇ ಮೊದಲಾದ ಆಲಂಬನ ವಿಭಾವಗಳಾಗಲು ಆ ಉದ್ದೀಪನವಿಭಾವಗಳು ಸಹಕಾರಿಯಾಗಲೂ ಉತ್ಪನ್ನ ವಾಗಿ ಪಲಪಲವೂ, ಕ್ಷಣಿಕವೂ ಪಾರ್ಶ್ವದಲ್ಲಿಯೇ ವಿರಸತ್ವಕ್ಕೆ ಸ್ಥಾನವಾಗಿಯೂ ಇರುವ ಶೃಂಗಾರಾದಿ ರಸವೇನೋ ಇದ್ದೇ ಇರುವುದು. ಆದರೆ ಬ್ರಹ್ಮಾದ್ವೈತ ಸುಖಾತ್ಮಕವಾಗಿ ಉತ್ತಮವಾಗಿ ಅವಿಚ್ಛಿನ್ನವಾಗಿರುವುದು (ಶಾಂತಿರಸವೊಂದೇ ಅಲ್ಲವೇ ?).

ಕಥೆಯ ಸಾರಾಂಶ ಹೇಗಿವೆ, ರಾಣಿ ಭಾನುಮತಿ ತನ್ನ ಗಂಡನ ಅಂದರೆ ರಾಜನ ದಾರಿ ಕಾಯುತ್ತಿದ್ದಾಳೆ. ವಿರಹಾಗ್ನಿಯಿಂದ ಅವಳಿಗೆ ದುಃಖ ಸಹಿಸಲಸಾಧ್ಯವಾಗಿದೆ. ರಾಜನು ಬಂದಾಗ ಭಾನುಮತಿಯು ಅವನನ್ನು ದೀರ್ಘ ಅಗಲಿಕೆಯ ಬಗ್ಗೆ ಪ್ರಶ್ನಿಸುತ್ತಾಳೆ. ಅದೇ ಕಾಲಕ್ಕೆ ರಾಜನು ಮತ್ತು ರಾಣಿಯ ಪತಿ ಮರಣದಿಂದ ಸತಿ ಹೋಗುವ ಸ್ತ್ರೀಯನ್ನು ನೋಡುತ್ತಾರೆ. ಆವಾಗ ರಾಜನು ವಿರಹಾಗ್ನಿಯನ್ನು ಸಹಿಸಲಾರದೇ ಸತಿ ಹೋಗುವ ಈ ಸ್ತ್ರೀ, ಸತಿಯರ ಪ್ರಣಯಕ್ಕೆ ಅಪಾರವಾದ ಮಹಿಮೆಯನ್ನು ತರುತ್ತಿದ್ದಾಳೆ ಎನ್ನುತ್ತಾನೆ. ಆವಾಗ ಭಾನುಮತಿಯೂ ' ಆರ್ಯಪುತ್ರನೇ ? ಇವರ ಪ್ರಣಯ ಪರ್ಯವಸಿತವಾದ ಇಮಾಹಿ ಸದೃಶವೇ ; ಏಕೆಂದರೆ, ಧಟ್ಟನೆ ವಿರಿಯಹತ್ತಿದ ವಿರಹಾಗ್ನಿಯನ್ನು ಬಿಟ್ಟು ಚಿತಾಗ್ನಿಯನ್ನು ಅಪೇಕ್ಷಿಸುವುದಲ್ಲವೇ ? ಎನ್ನುತ್ತಾಳೆ. ರಾಣಿಯ ಈ ನಿಶ್ಚಯವು ರಾಜನಿಗೆ ವಿಸ್ಮಯ ಉಂಟುಮಾಡುತ್ತದೆ. ರಾಜನು ಇದನ್ನು ಪರೀಕ್ಷಿಸುವ ಮನಸ್ಸುಳ್ಳವನಾಗಿ ಬೇಟೆಗೆ ಹೋಗುತ್ತಾನೆ. ರಾಜ ಅರಣ್ಯದಿಂಲೇ ದುರಾಖ್ಯಾಯಿಯನ್ನು ಕಳುಹಿಸಿ, ಮೃಗದಿಂದ ರಾಜನು ಕೊಲ್ಲಲ್ಪಟ್ಟನೆಂಬ ಸುಳ್ಳು ಸುದ್ಧಿ ಮುಟ್ಟಿಸುತ್ತಾನೆ. ಆ ದುಃಖದ ವಾರ್ತೆಯನ್ನು ಕೇಳಿ ರಾಣಿ ಮೂರ್ಛಿತಳಾಗಿ ಸತ್ತು ಹೋಗುತ್ತಾಳೆ. ಆಟ ಆಡಲು ಹೋಗಿ ರಾಜ ಅನಾಹುತವನ್ನು ತನ್ನ ಮೇಲೆ ತಂದುಕೊಳ್ಳುತ್ತಾನೆ. ರಾಜನಿಗೆ ರಾಣಿಯ ಸಾವಿನ ಸುದ್ಧಿ ದಿಗ್ಭ್ರಮೆ

ತರುತ್ತವೆ. ರಾಣಿಯ ಶವವನ್ನು ಸಂಸ್ಕಾರ ಮಾಡಲು ರಾಜನು ವಿರೋಧಿಸುತ್ತಾನೆ. ತನ್ನ ಮುರಿದುಹೋದ ಸ್ಥಾಲಿಯನ್ನು (ಭೋಕಿಯನ್ನು) ಮುರಿದ ಬಗ್ಗೆ ಬಗೆಬಗೆಯಾಗಿ ಆಲಾಪಿಸತೊಡಗುತ್ತಾನೆ. ರಾಜನಿಗೆ ಅಲ್ಪವಾದ ಆ ಬೋಕಿಯ ಬಗ್ಗೆ ಆಲಾಪ ಮಾಡುವುದು ಹುಚ್ಚುತನವೆನಿಸಿ ನಶಿಸಿ ಹೋದುದಕ್ಕೆ ಚಿಂತಿಸಬಾರದು ಎನ್ನುತ್ತಾನೆ. ಜಗತ್ತಿನಲ್ಲಿ ಇವೆಲ್ಲವೂ ಸಾಧಾರಣ. ಆದ್ದರಿಂದ ಶೋಕಿಸಬಾರದೆಂದು ಯೋಗಿಗೆ ಬೋಧಿಸುತ್ತಾನೆ. ಯೋಗಿಯೂ ದೇಹವು ಒಂದು ಸ್ವಪ್ನವಾಗಬಹುದಾದ ವಸ್ತುವೂ ಆಗಿದೆ. ಆದ್ದರಿಂದ ಅದರ ಬಗ್ಗೆ ಶೋಕವೇಕೆ? ಎಂದು ರಾಜನನ್ನೇ ಪ್ರಶ್ನಿಸಿ ರಾಜನನ್ನು ಅಂತರ್ಮುಖಿಗೊಳಿಸುತ್ತಾನೆ. ರಾಜನಿಗೆ ಶೋಕದ ಉಪರತಿಯಾಗಿ, ರಾಜನಿಗೆ ವೈರಾಗ್ಯಭಾವದ ದರ್ಶನವಾಗಿ, ವಿರಾಗಿಯಾಗುತ್ತಾನೆ. ಮತ್ತು ಯೋಗಿಗೆ ತನ್ನ ಗುರುವಾಗಲು ವಿನಂತಿಸಿಕೊಳ್ಳುತ್ತಾನೆ. ದೇವತಿಲಕನು (ಅಮಾತ್ಯನು) ರಾಜನನ್ನು ಬಹುಬಗೆಯ ವಿಷಯಾಸಕ್ತಿಯ ಮಾತುಗಳನ್ನಾಡಿ ರಾಜನನ್ನು, ಎಲ್ಲವನ್ನು ತ್ಯಾಗ ಮಾಡುವ ನಿರ್ಧಾರದಿಂದ ಪರಾವೃತಗೊಳಿಸಲು ಪ್ರಯತ್ನಿಸುತ್ತಾನೆ. ಆದರೆ ಇದು ಸಫಲವಾಗುವುದಿಲ್ಲ. ಯೋಗಿಯೂ ತನ್ನ ಯೋಗಬಲದಿಂದ ಭಾನುಮತಿಯನ್ನು ಜೀವಂತಗೊಳಿಸುತ್ತಾನೆ. ಭಾನುಮತಿ ಮತ್ತು ರಾಜ ಏಕಾಂತದಲ್ಲಿ ಸಂಭಾಷಿಸುತ್ತಾರೆ. ಭಾನುಮತಿ ಶೃಂಗಾರ ಮತ್ತು ವೈರಾಗ್ಯವನ್ನು ಉಪಯೋಗಿಸಿ ರಾಜನನ್ನು ಮತ್ತೆ ವಶಮಾಡಿಕೊಳ್ಳಲು ಪ್ರಯತ್ನಿಸುತ್ತಾಳೆ. ಆದರೂ ಅದು ಕೈಗೂಡುವುದಿಲ್ಲ. ಕೊನೆಗೆ ತನ್ನ ಮಗನನ್ನು ತಂದು ನಿಲ್ಲಿಸಿ ಅಪತ್ಯ ಪ್ರೇಮವನ್ನು ಉಂಟು ಮಾಡಲು ಪ್ರಯತ್ನಿಸುತ್ತಾಳೆ. ರಾಜಕುಮಾರನ ಪಟ್ಟಾಭಿಷೇಕವನ್ನು ಮಾಡಲು ಆದೇಶಿಸುತ್ತಾನೆ. ಯೋಗಿ ರಾಜನೊಡನೆ ತೆರಳುತ್ತಾನೆ.

ಈ ಗ್ರಂಥದಲ್ಲಿ ವಿರಹಾಗ್ನಿಯ ವರ್ಣನೆ ಚೆನ್ನಾಗಿ ಮೂಡಿಬಂದಿದೆ. ರಾಜನು ರಾಣಿಯ ಮರಣದ ವಾರ್ತೆ ಕೇಳಿ ಭ್ರಮಿತನಾಗಿ ಶವವನ್ನು ಸುಡಲು ಅನುಮತಿ ನಿರಾಕರಿಸುತ್ತಾನೆ. ದೇಹ ಮೋಹದ ಈ ಪರಾಕಾಷ್ಠೆ, ಈ ಕೆಳಗಿನ ಮಾತುಗಳಲ್ಲಿ ಕಾಣಬಹುದು.

ವೃ ॥ ಇವಳ ಸ್ನಿಗ್ಧಶಿರಿಷ ಕೇಸರ ಶಿಖಾಮೃದ್ವಂಗ ಮಂತಕ್ಕುದೇಂ ।
ಕವಿಯಲ್ ದಾರುಚಿತಂ ಚಿತಾಗ್ನಿಯಕಟಾ ಪ್ರೋದ್ಧೂಮಮೆನ್ನಂಗದೊಳ ॥
ಅವಿಯುಕ್ತಂ ಮೆರೆದಪ್ಪೆ ತೋಳ್ಗಳೆನತೀ ನಲ್ಲಳ ಬಿಜಾಂಗಂಗಳಂ । ಪ್ರವರ
ಸ್ನೇಹಾಯುತಕ್ಕೆ ಬೇಳಿದಪಳೀ ಕಾಮಾಗ್ನಿಗಿಂದೆನ್ನ ದಲ್ ।೧೮॥

(ಅಯ್ಯೋ, ಕೋಮಲವಾದ ಶಿರೀಷ ಪುಷ್ಪದ ಕೇಸರಿಯ ಶಿಖೆದುಂತೆ ಮೃದುವಾದ ಇವಳ ಅಂಗವನ್ನು ಅಧಿಕವಾದ ಹೊಗೆಯೂ, ಬೆಂಕಿಯೂ ಕೂಡಿದ ಕಾಷ್ಠಮಯವಾದ ಚಿತೆ ಆವರಿಸುವುದು ಯುಕ್ತವಲ್ಲ. ನನ್ನ ತೋಳುಗಳು ಬಳಸಿರಲು ನನ್ನ ದೇಹದ ಮೇಲೆ ಇಡಲ್ಪಟ್ಟು ಸ್ನೇಹೋದ್ದೇಶಿತವಾದ ನನ್ನ ಕಾಮಾಗ್ನಿಯಲ್ಲಿ ಅಯ್ಯೋ, ಈ ಶ್ರೇಷ್ಠಗಾತ್ರೆ ಈ ದಿವಸ ತನ್ನ ಅವಯವಗಳನ್ನು ಆಹುತಿ ಹಾಕಲಿ).

ಪ್ರಿಯವಸ್ತುವಿನ ಮೋಹ ರಾಜನಿಗೆ ಧತಿಗೆಡುವಂತೆ ಮಾಡಿದೆ. ಆದ್ದರಿಂದ ರಾಜನು ಯೋಗಿಯ ಬೋಳಕೆ ಅಲ್ಪವಸ್ತುವಾದರೂ, ಅದರ ಬಗ್ಗೆ ಶೋಕಿಸುತ್ತಿರುವುದಕ್ಕೆ;

ಆರ್ಯ ವೃ॥ ವನಿತಲ್ಪಮಾದೊಡೌನದು
ಮನಕಾಗಲ ಪ್ರೇಯಮಳಿಯೆ ವಸ್ತುವಾದರ್ ॥
ಜನರಳರವೆನ್ನವಾದಿಗ ।
ರಿನಿತಾಪದಮೆಯ್ದೆ ಪಿರಿದಿನ್ನೇಂ ।೩೨॥

ಪ್ರಿಯವಾದ ವಸ್ತು ಎಷ್ಟು ಅಲ್ಪವಾದರು ಅದಕ್ಕೇನಾದರೂ ಅಪಾಯವು ಬಂದರೆ, ಯಾರು ಅಳುವುದಿಲ್ಲ ?. ಹೀಗಾದ ಮೇಲೆ ಇಂತಹ ಆಪತ್ತಿನಲ್ಲಿ ನನ್ನಂತವರ ಮಾತೇನು ಹೇಳಬೇಕು ? ತನ್ನ ಸ್ವಂತ ವಿಪತ್ತಿನ ಪರಿಹಾರಕ್ಕಾಗಿ ನಮ್ಮ ವಿವೇಚನೆ ಉಪಯೋಗಕ್ಕೆ ಬರುವುದಿಲ್ಲ. ಆದರೆ ಅದೇ ತರಹದ ವಿಪತ್ತು ಮತ್ತೊಬ್ಬರಿಗೆ ಬಂದರೆ, ಅದೇ ವಿವೇಚನೆ ಜಾಗೃತವಾಗಿ ಉಪದೇಶ ರೂಪವಾಗಿ ಹರಿದು ಬರುವುದು. ರಾಜನ ಸ್ವಂತಹ ದುಃಖದ ನಿವಾರಣೆಯಲ್ಲಿ ಆತನ ವಿವೇಕ/ವಿವೇಚನೆ ಮೇಲೆ ಮೋಹದ ಮುಸುಕು ಬಿದ್ದುದರಿಂದ ಅದು ಉಪಯೋಗಕ್ಕೆ ಬಂದಿಲ್ಲ. ಆದರೆ ಬೇರೆಯವರ ದುಃಖದಲ್ಲಿ ತಮ್ಮ ಮೋಹದ ಪ್ರಸಕ್ತಿಯೇ ಬಂದಿರುವುದರಿಂದ ವಿವೇಕ ಜಾಗೃತವಾಗಿವೆ. ಆದ್ದರಿಂದಲೇ ಪತ್ನಿಯ ಅಗಲಿಕೆಯ ಸನ್ನಿವೇಶದಲ್ಲೂ ಯೋಗಿಗೆ ಸಾಂತ್ವನ ಹೇಳುತ್ತಾನೆ.

ಕಥೆಯ ಮೂಲತತ್ವವಾದ ವೈರಾಗ್ಯದ ವಿಜಯವನ್ನು ಈ ಕೆಳಗಿನ ಮಾತಿನಲ್ಲಿ ನೋಡಬಹುದು.

ವೃ॥ ಜನಿಕುಂ ಸಂಸ್ಕೃತಿಯೆಲ್ಲಮಂ ನಿಜಮನಸ್ಸಂಕಲ್ಪದಿಂ
ತಾಂ ತವರ್ಮನೆ ಯಜ್ಞಾನಕೆ ತನ್ನಿವೃತ್ತಿಗೆಳಸಲ್ಕುತ್ಪಾಟಿಸಾ ಮೂಲ
ಮಂ॥ ಅನವಚ್ಛಿನ್ನ ಮನೇಹದಿಂ ದೆಸೆಯಿನುಂ ಸಚ್ಚಿನ್ಮಯಂ
ಬ್ರಹ್ಮಮೊಂ। ದನೆ ಈ ತತ್ತ್ವಮನೆಯ್ದೆ ಚಿಂತಿಸೆ ಪರಾನಂದಂಲಭಿಕ್ಕುಂ
ಪದಂ ॥ ೪೪॥.

(ಸಂಕಲ್ಪದಿಂದ ಸಂಸಾರವೆಲ್ಲವೂ ಹುಟ್ಟುವುದು; ಈ ಸಂಸಾರವು ವಿಶೇಷವಾದ ಅಜ್ಞಾನಕ್ಕೆ ಉತ್ಪತ್ತಿ ಭೂಮಿಯಾಗಿರುವುದು. ಈ ಸಂಸಾರದಿಂದ ನಿವೃತ್ತಿ ಹೊಂದಲು ಇಚ್ಛಿಸುವೆಯಾದರೆ, ಅದರ ಬೇರನ್ನೇ ಕಿತ್ತು ಹಾಕಿಬಿಡು, ಯಾವುದು ಕಾಲದಿಂದಲೂ, ದಿಕ್ಕಿನಿಂದಲೂ ಅವಿಚ್ಛಿನ್ನವಾಗದೇ ಇರುವುದೋ ಆ ಸಚ್ಚಿನ್ಮಯವಾದ ಬ್ರಹ್ಮವಾಚ್ಯವಾದ ತತ್ವವು ಒಂದೇ ತತ್ವವು. ಇದನ್ನು ಚೆನ್ನಾಗಿ ಮನನ ಮಾಡು, ಪರಾನಂದ ಪದವನ್ನು ಹೊಂದುವೆ).

ಇಲ್ಲಿ ಕಥೆಯ ಪ್ರಮುಖವಾದ ಘಟ್ಟವಿದೆ. ದೇವ ತಿಲಕನ ರೂಪದಿಂದ ಕವಿ ವಿವಿಧ ಹಾಗೂ ಒಂದಾದ ಮೇಲೊಂದು ಮೋಹದ ವಸ್ತುಗಳನ್ನು ಹೆಸರಿಸಿ, ಗುಣವರ್ಣನೆ ಮಾಡಿ ರಾಜನನ್ನು ವೈರಾಗ್ಯ ವಿಮುಖವಾಗುವಂತೆ ಮಾಡತೊಡಗುತ್ತಾನೆ. ಕಥೆಯ ಈ ರೂಪಕ ಆಧ್ಯಾತ್ಮದ ಸಾಧನೆಯನ್ನು ಮಾಡುವವರಿಗೆ ಮಾಡಬಯಸುವವರಿಗೆ ಬರುವ ತೊಡಕುಗಳು ಕಾಡುವ ಮೋಹಗಳ ಅಪ್ರತ್ಯಕ್ಷ ಅಥವಾ ಪರೋಕ್ಷ ವರ್ಣನೆ ಆಗಿದೆ. ದೇವತಿಲಕನು ಕ್ರಮವಾಗಿ ರಾಜ ಪದವಿ, ರಾಜ್ಯಾಡಳಿತ, ಸಂಚಿತ, ವಿತ್ತ, ಭೂಮಿ ಒಡೆತನ, ಬಂಧುಗಳು, ಪರರ ಭೂಮಿ ಆಕ್ರಮಣ, ರಾಜನ ಯೌವ್ವನ ಇವೆಲ್ಲಾ ವಿಷಯಗಳ ನ್ನೆತ್ತಿಕೊಂಡು ರಾಜನನ್ನು ವೈರಾಗ್ಯದಿಂದ ವಿಮುಖನನ್ನಾಗಿ ಮಾಡಲು ಪ್ರಯತ್ನಿಸಿ ರಾಜನಿಂದ ತಕ್ಕ ಪ್ರತ್ಯುತ್ತರ ಹೊಂದಿ ನಿರಾಕರಿಸಲ್ಪಡುತ್ತಾನೆ. ಪ್ರತಿಯೊಂದು ಮೋಹಕ್ಕೂ ಅದನ್ನು ಭೇದಿಸುವ ತತ್ವಗಳಿವೆ ಎಂದು ಕವಿ ಇಲ್ಲಿ ತೋರಿಸಿಕೊಟ್ಟಿದ್ದಾನೆ. ಉದಾಹರಣಾರ್ಥವಾಗಿ ; ದೇವ ತಿಲಕನು ರಾಜಪದ ಎಂಬ ಆಸೆ ತೋರಿಸಿದಾಗ;

ವೃ॥ ನೃಪನೆಂದೇಂ ರುಜೆ ಬಾರದೇ ಕಲಕೆ ತದ್ದರ್ಪೋಚ್ಚದಾ
ಭೀತಿಯಿಂ । ವಿಪದಂ ಶಂಕಿಯಿಸಿದ್ದಾದೇ ಪರಿಗುಮೇ ಮೇಣಿ ಶೋಕ-
ಮುತ್ತಾ ಪಿತಂ ॥ ಅಪಕರ್ಷಿಟ್ಟನೆ ಕಾಲನೀಶ್ವರನೆನುತ್ತುಂ ಕ್ಷೋಭೆಯಿಂದ
ಲ್ಪಮುಂ॥ ಸ್ವಪುರಕ್ಕುಯ್ಯುವ ರೋಳದಿಂ ನೃಪಪವಂ ತಾನೇತರಿಂ
ಮರ್ಮದಂ ।೫೫॥

( ಏನು ? ರಾಜನೆಂದು ಅವನ ದರ್ಪದ ಉಷ್ಣಕ್ಕೆ ಹೆದರಿ ರೋಗಗಳು ಅವನ ಸಮೀಪಕ್ಕೆ ಓಡಿ ಬರುವುದನ್ನು ಬಿಡುವುದೇ ? ಸಂತಾಪದಿಂದ ದುಃಖಗಳು ಅವನನ್ನು ಬಿಟ್ಟು ಓಡಿ ಹೋಗುವುವೇ ? ಶಂಕೆಯಿಂದ ವಿಪತ್ತುಗಳು ಅವನ ಬಳಿಗೆ ಬಾರದಿರುವುದೇ ? ಯಮನೂ ಕೂಡ ಇವನು ಮಹೇಶ್ವರನೆಂದು ಕ್ಷೋಭೆ ಹೊಂದಿ ಎಳೆದುಕೊಂಡು ಹೋಗುವುದರಲ್ಲಿ ಕೊಂಚವಾದರೂ ಶೈಥಿಲ್ಯವನ್ನು ತಾಳುವನೇ ? ಹೀಗಿರಲು ಈ ರಾಜ ಪದವು ಏತರಿಂದ ದುರ್ಮದವೆನಿಸುವುದು).

ಬಂಧುಗಳ ವಿಷಯದಲ್ಲಿರುವ ಮೋಹವನ್ನು ಭೇಧಿಸಿಕೊಂಡ ರಾಜನ ಈ ಕೆಳಗಿನ ಮಾತುಗಳು ಸಮಾಜದ ಕ್ರೂರ ರೂಪ ಹಾಗೂ ಸಂಧಿಸದ ತತ್ವದ ಮತ್ತು ವ್ಯಾವಹಾರಿಕ ಜಗತ್ತಿನ ನಿಯಮಗಳನ್ನು ಹೇಳುವುದು ಮುಖ್ಯವೆನಿಸಿವೆ.

ವೃ ॥ ಅಳಿವೊಳ್ ಪಲಮರ ಮನದೊಳ್ ಸುಖಿಸುತ್ತು ಮಳ್ವದ್
ಬಳೆಯಲ್‌ತೆರಂ ವಿಮನಸರ್ಗ್ಗಡ ಪಾಡಿದಪ್ಪರ್ ॥
ಪಳಿದಾಂತರಿಂ ವಿಹರಿಪರ್ ಸಖದಿಂದೆಶ್ರೀಯೋ ॥
ಳೊಳರಾರಮಿತ್ರರಿವರ ಪ್ಪೊಡೆ ಬಾಂಧವಕ್ಕೆನಳ್ ॥ ೫೯ ॥

(ನಾಶವು ಸಂಭವಿಸಿದರೆ ಮನಸ್ಸಲ್ಲಿ ಬಾರಿಬಾರಿಗೂ ಉಲ್ಲಾಸಪಡುತ್ತ ಮೇಲೆ ರೋದಿಸುವರು; ವೃಧ್ಧಿ ಸಂಭವಿಸಿದರೆ ಅತ್ಯಂತವಾಗಿ ವಿಮನಾಯಮಾನರಾಗಿ (ಮೇಲೆ) ಗಾನ ಮಾಡುವರು, ಸಂಪತ್ತು ಬಂದರೆ ಒಳಗೆ ಕುಲ್ಯೆಸುತ್ತ (ಮೇಲೆ) ಸುಖದಿಂದ ವಿಹರಿಸುವರು, ಇಂತಹರು ಬಂದುಗಳಾದರೆ ಇನ್ನು ಶತ್ರುಗಳೆನ್ನುವರು ಯಾರಿರುವರು?)

ಕವಿ ಈಗ ಮೋಹದ ಎರಡನೇ ಘಟ್ಟವನ್ನು ಪ್ರವೇಶಿಸುತ್ತಾನೆ. ಸತ್ತ ಭಾನುಮತಿಯೂ ಪುನಃ ಜೀವಿತವಾದಾಗ, ಅವಳು ಶೃಂಗಾರ ಭಾವ ಮತ್ತು ಅಪತ್ಯ ಪ್ರೇಮ ಎಂಬ ಎರಡು ಶಸ್ತ್ರಗಳಿಂದ ರಾಜನನ್ನು ಮತ್ತೆ ಲೌಕಿಕದ ವ್ಯಾಮೋಹದ ಕಡೆಗೆ ತರಲು ಪ್ರಯತ್ನ ಮಾಡುತ್ತಾಳೆ ಶೃಂಗಾರ ಭಾವದ ವ್ಯರ್ಥಕೆ ಹೇಳುತ್ತ : ರಾಜ.

ವೃ॥ ತೊಡಗಲ್ಕಾರ್ತ ದಮಕ್ಕೆ ಬುದ್ದಿಯೀವಲಂ ಪುಟ್ಟಿಪಳೇಂ ರಂಭಯಂ ।
ಬಿಡೆತಾಂ ಮೇನಕೆ ಯೇಗುವಳ್ ಮನಮನೇ ಕುಂಠೇಷು ರಾಂಜಿತಂ ॥
ಒಡಲೊಳ್ ಪೇಸಲವಜ್ಞೆ ಯೂರ್ವಶಿಗಮಾ ಚೇತಂ ಬಸಕ್ಕೆಯ್ದಿರಲ್ ।
ಕಡಿಯಲ್ ಮಾಯೆಯನೇ ವಿಲಾಸಿನಿ ಮನಕ್ಕಂದಿಷ್ಟೆಯೇನಪ್ಪಳೇ ॥೭೦॥

ಆತ್ಮ ದಮನಮಾಡಲು ಬುದ್ಧಿ ಆರಂಭಿಯುಕ್ತವಾಗಲು ರಂಭೆಯೂ ಕೂಡ ಏನು ಭಾವವನ್ನು ಹುಟ್ಟಿಸಬಲ್ಲಳೇ? ಆ ಮೊಂಡಬಿಲ್ಲ ಕಾಮನು ಮನಸ್ಸನ್ನೇ ಬಿಟ್ಟು ಹೋದಮೇಲೆ ಮೇನಕೆಯಿಂದ ತಾನೇ ಏನಾಗುವುದು? ದೇಹದಲ್ಲಿ ಹುಟ್ಟಿ ಜಿಹಾಸೆ ಹುಟ್ಟಿ ಮನಸ್ಸು ವಶೀಕರಿಸಲ್ಪಡಲು ಉರ್ವಶಿಯನೇನು ತಿರಸ್ಕರಿಸಿದ ಹಾಗಾಗಲಿಲ್ಲವೇ? ಮಾಯೆಯೇ ಜಯಿಸಲ್ಪಟ್ಟ ಮೇಲೆ ಭಾವವನ್ನು ಉತ್ಪಾದಿಸುವಳೂ ಕೂಡ ಮನಸ್ಸಿಗೆ ಅಭಿಮತೆಯಾಗುವಳೇ?.

ಕವಿ ಗೃಹಸ್ಥಾಶ್ರಮಿಯಾಗಿದ್ದುಕೊಂಡು ಆಧ್ಯಾತ್ಮದ ಸಿದ್ಧಿ ಸಾಮಾನ್ಯವಾಗಿ ದುಸಾಧ್ಯ ಎಂಬ ಧೋರಣೆಯುಳ್ಳವನಾಗಿದ್ದಾನೆ. ಜನಕನಂಥ ರಾಜರ್ಷಿಗಳು ಗೃಹಸ್ಥಾಶ್ರಮದಲ್ಲಿದ್ದುಕೊಂಡೇ ಮತ್ತು ರಾಜ ವೈಭವದಲ್ಲಿರುತ್ತಾ ದೇವ ಸಾಕ್ಷಾತ್ಕಾರ ಮಾಡಿಕೊಂಡಿದ್ದರು. ಆದರೆ ಈ ಉದಾಹರಣೆ ಜನ್ಮದಾರಭ್ಯ ವೈರಾಗ್ಯದ ಕೊಡುಗೆಯನ್ನು ಪಡೆದುಕೊಂಡವರ ಈ ಮಾರ್ಗವೇ ಹೊರತು ಇದು ಜನ ಸಾಮಾನ್ಯರಿಗೆ ಒಗ್ಗುವಂಥದಲ್ಲ ಎಂಬ ಎಚ್ಚರಿಕೆ ಮಾತುಗಳನ್ನು ಕವಿ ರಾಜನ ಬಾಯಿಂದ ಹೇಳಿಸಿದ್ದಾನೆ. ಜನಸಾಮಾನ್ಯರಿಗೆ ಶಾಸ್ತ್ರವಿಹಿತವಾದ ಮಾರ್ಗವೇ ಸೂಕ್ತವಾದುದು, ಶ್ರೇಯಸ್ಕರವಾದುದು ಮತ್ತು ಮಹನೀಯರ ಉದಾಹರಣೆ ಎಲ್ಲರಿಗೂ ಅನ್ವಯಿಸಲಾಗದು ಎಂದು ಕವಿಯ ಅಭಿಪ್ರಾಯವಾಗಿದೆ.

ಕೆಳಗಿನ ಮಾತು ಇಲ್ಲಿ ಉದಾಹರಣೆಯಾಗಿವೆ;

ರಾಜನ-ಅವರಾದರೆ, ಜನರಾದಿಗಳು ಅನೇಕ ಜನ್ಮ ಸಂಸಿದ್ಧಿರಾಗಿ ಜೀವ ಮುಕ್ತಾವಸ್ಥೆಯನ್ನು ಹೊಂದಿ ಹಾಕಿದ್ದರು. ಅಪಕ್ವ ಕಷಾಯರಾದ ನಮ್ಮಂತವರಿಗೆ ಅದು ಮಾರ್ಗವಲ್ಲ.

ರಾಣಿ ಅಪತ್ಯಪ್ರೇಮವನ್ನು ಮುಂದೆ ಮಾಡಿದಾಗಲು ರಾಜನ ಮುಖದಿಂದ ಆತ್ಮಪ್ರತ್ಯಯದ ಮಾತುಗಳು ಹೊರಟದ್ದು, ಅವರ ಅವರ ಕರ್ಮ ಅವರೇ ಸವೆಸಬೇಕೆಂಬ ಭಾವವನ್ನು ಕವಿ ಇಲ್ಲಿ ಹರಿಯಬಿಟ್ಟದ್ದಾನೆ. ಆತ್ಮಕ್ಕೆ ಈ ಜನ್ಮದಾತ ಎಂಬ ಭಾವವಿಲ್ಲ ಎಂಬ ಮಾತು ಇಲ್ಲಿ ಬರುತ್ತದೆ.

ವೃ॥ ಜನಿಕುಂ ಜಂಪುಗದೆಂತು ಪ್ರತ್ಯಯಮಿವಂ ಮಜ್ಜಾತನೆಂಬೊಂದು ತಾ। ನೆನಲಾತ್ಮಂ ಗಡ ಸಾಕ್ಷಿ ಭಿನ್ನಮದು ಮೆಯ್ ಮಯ್ಯಂ ಪರಂ ಪುಟ್ಟಕುಂ॥ ತನಾತಾಳ್ಪೆಂತುಟು ಭೂಪಭವ್ಯ ನೆನಿಪಾತ್ಮಂ ಜನ್ಯನಿಂದಾದಪಂ । ಜನಕಂ ಮೇಣ್ ಶರಿಕೀಪರಂ ।೮೨।

ಇವನು ನನ್ನ ಸುತನು (ನನ್ನಿಂದ ಹುಟ್ಟಿದವನು) ಎಂಬ ಪ್ರತ್ಯಯವು (ನಂಬುಗೆ) ಜಂತುಗೆ (ಹುಟ್ಟಿಗೆ ಸಿಕ್ಕಕೊಂಡ ಪ್ರಾಣಿಗೆ) ಬರುವುದಲ್ಲವೇ. ಅದು ಆತ್ಮನು ಸಾಕ್ಷಿಯಾಗಿರಲು ಹೇಗೆ ಸಿದ್ಧವಾಗುವುದು? ದೇಹದಿಂದ ದೇಹಾಂತರವು ಹುಟ್ಟಿತು ಅಷ್ಟೆ. ಹಿಂದೆ ಕಳೆದುಹೋದು ಕಾಲದಲ್ಲೆಲ್ಲಾ ಇದ್ದು ಮುಂದೆ ಬರುವಕಾಲದಲೆಲ್ಲಾ ಇರುವ ಆತ್ಮನು ಈಗ ಹೇಗೆ ಜನ್ಯ ( ಉತ್ಪಾದ್ಯ) ನಾಗುವನು? ಮತ್ತೆ ನಿತ್ಯನಿವೃತ್ತನಾಗಿ ದೇಹದಿಂದ ಭಿನ್ನವಾದ ಅದೇ ಆತ್ಮನು ಹೇಗೆ ಜನಕ ( ಉತ್ಪಾದಕ) ನಾಗುವನು? ಗೋರಕ್ಷನಾಥ ರಾಣಿಗೆ ಸಮಾಧಾನ ಹೇಳುವಾಗ ದೇಹಭಾವವನ್ನು ಬಿಟ್ಟು ಅಮೃತಮಯವಾದ ಆತ್ಮಸಾಕ್ಷಾತ್ಕಾರ ಮಾಡಿಕೊಂಡಾಗ ಮಾತ್ರ ಪತಿಯ ಸಮಾಗಮವು ಲಭಿಸುವುದೆಂದು ಎಂಬ ಮಾತಿನಲ್ಲಿ ರಾಣಿಗೂ ಕೂಡ ಆಧ್ಯಾತ್ಮದ ಸಾಧನೆಯ ಕಡೆಗೆ ಹೊರಳಲು ಸೂಕ್ಷವಾಗಿ ಹೇಳುವನು.

ಒಟ್ಟಾರೆ ನಾಟಕವನ್ನು ಗಮನಿಸುವಾಗ, ತತ್ವವನ್ನು ಕಥಾರೂಪಕ್ಕೆ ಅಳವಡಿಸಿ ಅದನ್ನು ಪ್ರೇಕ್ಷಕರಿಗೆ ಮನಮುಟ್ಟುವಂತೆ ಮಾಡಿ ಜನಜಾಗೃತಿಗೊಳಿಸುವ ಪ್ರಯತ್ನ ಇದಾಗಿದೆ. ಬರೀ ತತ್ವದ ಭೋಧನೆ ಜನಸಾಮಾನ್ಯರ ತಿಳುವಳಿಕೆ ಸ್ವಾರಸ್ಯರಹಿತವಾದ ಮಾರ್ಗ ಎಂದು ಕವಿಗೆ ಗೊತ್ತಾಗಿದೆ. ವೇದ, ಶಾಸ್ತಗಳಲ್ಲಿರುವ ವಿಚಾರಗಳನ್ನು ದರ್ಶನಗಳನ್ನು ಉಪನಿಷತ್‌ಕಾರರು ಕಥಾನಕದ ಮುಖಾಂತರ ಜನಸಾಮಾನ್ಯರಿಗೆ ತಲುಪಿಸುವ ಋಷಿಗಳ ಪಾತ್ರವೇ ಕವಿ ಇಲ್ಲಿ ನಾಟಕಕಾರನಾಗಿ ಮಾಡಿದ್ದಾನೆ. ಉಪನಿಷತ್‌ಗಳು ಅಕ್ಷರಸ್ಥರಿಗೆ ಮಾತ್ರ ಆದರೆ, ನಾಟಕ ಸಮಗ್ರ ಜನಮಾನಸಕ್ಕೆ ಅರ್ಥವಾಗವುದರಿಂದ ಅದು ಹೆಚ್ಚು ವ್ಯಾಪಕತೆಯನ್ನು ಪಡಿದಿದೆ. ಕವಿಯ ಶ್ರಮ ಈ ದಿಕ್ಕಿನಲ್ಲಿ ಕಂಡು ಬಂದಿದೆ. ಪ್ರಸ್ತುತ ಅನುವಾದದಲ್ಲಿಯೂ ಆರ್ಯಾ ಕಂದವೃತ್ತಗಳ ಬಳಕೆಯಾಗಿದೆ. ನಾಟಕದ ತುಂಬ ಬರಿ ರಾಜನ ಮುಖಾಂತರ ಮಾತ್ರ ಪದ್ಯಗಳು ಹರಿದು ಬಂದಿದ್ದು ವಿಶೇಷವಾಗಿವೆ. ರಾಜನವಾದ ಪರಿಣಾಮಕಾರಿಯಾಗುವಂತೆ ಮಾಡುವ ತಂತ್ರ ಇದಾಗಿದೆ. ಅನುವಾದ ಪ್ರಕ್ರಿಯೆಯ ಪರಣಾಮಕಾರಿ ಅಂಶವಾದ ರಂಗಭೂಮಿ ಇಲ್ಲಿ ಪ್ರಮುಖವಾದ ಅದ್ಯತೆಯೆನಿಸಿದೆ. ವಸಾಹತುಶಾಹಿ ಅಂಶ ಯಾವ ರೀತಿ

ಪರಕೀಯ ಆಕ್ರಮಣ ಸನಾತನ ಸಂಸ್ಕೃತಿಯ ಮೊರೆಹೊಕ್ಕು ಅದನ್ನು ಎತ್ತಿ ಹಿಡಿಯುವ ತಂತ್ರವಾಗಿ ನಾಟಕ ಮಾಧ್ಯಮ ವಹಿಸಿದ ಪಾತ್ರವನ್ನು ನಾವಿಲ್ಲಿ ಕಾಣಬಹುದು. ಪ್ರತಿಮೆಗಳ ಮೂಲಕ ತಾತ್ವಿಕತೆಯನ್ನು ಸಾರುವ ಈ ಮಾಧ್ಯಮ ಅನುವಾದ ರೂಪದಲ್ಲಿ ಸಮಾರ್ಥವಾಗಿ ಮೂಡಿಬಿಂದಿದೆ.

ಇಲ್ಲಿ ಕವಿಸೂತ್ರಧಾರನ ಮೂಲಕ ಕಥಾವಸ್ತುವನ್ನು, ನಾಟಕದ ಔಚಿತ್ಯವನ್ನು ಸೂಚ್ಯವಾಗಿ ಹೇಳಿಸಿದ್ದಾನೆ. ಸೂತ್ರಧಾರ: ಎಲೈ ಮೂರುಲೋಕಕ್ಕೂ ಬೀಜಭೂತನಾಗಿ ಭೂತಪತಿಯೆನಿಸಿದ ಭಗವಂತನಾದ ಭೈರವೇಶ್ವರನೆ ಯಾತ್ರೆಯಲ್ಲಿ ಸಾಮಾಜಿಕರು ಸುಲಭರಾಗಿರುವದು. ಶಾಂತಿರಸಪ್ರಧಾನವಾಗಿ ಶ್ರೀ ಹರಿಹರಿ ಪ್ರಣೀತವಾದ ಭರ್ತೃಹರಿ ನಿರ್ವೇದವೆಂಬ ನಾಟಕದಿಂದ ಅವರನ್ನು ಆರಾಧಿಸಲು ನಮಗೆ ಅಪೇಕ್ಷೆಯಾಗಿರುವುದು ತಾವುಗಳು ಸಾವಧಾನರಾಗಿರಬೇಕು ಎಕೆಂದರೆ.

ವೃತ್ತಿ॥ ಪರಿವುಂ ಜನ್ಮಪಿಪತ್ತಿಗಳ್ ನೆರಪಿದೇಣಾಕ್ಷ್ಯಾದಿಯಾಲಂಬನಂ। ಮಿಳತಿಸ್ವಸ್ವಕದೀಪಕಂ ನೆಲಸಿ ಶೃಂಗಾರಾದಿ ಯಂದುಣ್ಯುಗಂ ॥ ಡುದೊಂದು ಕ್ಷಣಿಕಂ ರಸಂ ಪ್ರತಿಪಲಂ ಪರ್ಯಸ್ತ ನಿಸ್ಸಾರಮ। ಲ್ತಿ ರಸಮುತ್ತ ಮಂ ಸ್ಥಿರಮದಾತ್ಮಾ ದ್ವೈತೆ ಸೌಖ್ಯಪ್ರದಂ ।೭॥

## ೬. ಚಂದ್ರಕಲಾ ಕಲ್ಯಾಣಮ್ :

ಚಂದ್ರಕಲಾಕಲ್ಯಾಣವೆಂಬ ನಾಟಕವು ಕಳಲೇ ನಂಜರಾಜನ ಆಸ್ಥಾನ ಕವಿಯಾದ ನರಸಿಂಹಾಚಾರ್ಯನಿಂದ ಸಂಸ್ಕೃತದಲ್ಲಿ ರಚಿತವಾಯಿತು. ಕೆ. ರಾಮಸ್ವಾಮಯ್ಯಂಗಾರ್ ಅವರು ಇದನ್ನು ಕನ್ನಡದಲ್ಲಿ ಅನುವಾದಿಸಿದರು. ಇದನ್ನು ಯಥಾಮತಿ ಕನ್ನಡಿಸಲಾಗಿದೆ ಎಂದು ಲೇಖಕರು ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಅನುವಾದವು ಒಂದು ಅಗತ್ಯವಾದಂಥ ಕೆಲಸವೆಂದು ಲೇಖಕರು ಭಾವಿಸಿದ್ದಾರೆ. ತಿಳಿದವರು (ಪಂಡಿತರು) ಸಮಾಜಕ್ಕೆ ಬೇಕಾಗುವಂಥ ಕೆಲಸದಲ್ಲಿ ತೊಡಗಬೇಕೆಂದು ಅನುವಾದಕರ ಅಭಿಪ್ರಾಯವಾದಂತೆ ಕಾಣುತ್ತದೆ. ಸೂತ್ರಧಾರನ ಮಾತಿನಿಂದ ಇದು ಸ್ಪಷ್ಟವಾಗಿದೆ.

ಸೂತ್ರಧಾರ -''ಅನುಕ್ತಮಪ್ಯಹತಿ - ಪಂಡಿತೋಜನಃ'' ಎಂಬಂತೆ ಅಗತ್ಯವಾದ ಕೆಲಸವನ್ನು ಮಾಡಿದುದು ಉತ್ತಮ. ನಮ್ಮ ಪುಣ್ಯ ಪರಿಪಾಕದಿಂದ ಈ ಕಪಿಲಾಕಟದಲ್ಲಿ ಶೋಭಿಸುವ ಗರಳಪುರಿನಾಥನ ವಸಂತೋತ್ಸವನ್ನು ನೋಡಲೆಳಸಿ, ನಾನಾ ದೇಶಗಳಿಂದ ಬಂದಿರುವ ಮಹನೀಯರನ್ನು ಸಂತೋಷಪಡಿಸುವುದು ಮುಖ್ಯವು.

ಆ ಕಾಲದಲ್ಲಿ ರಾಜನು ಬಹು ವಲ್ಲಭನಾಗಿರುವುದು ಸಾಮಾನ್ಯವಾಗಿದ್ದರೂ ಅದಕ್ಕೆ ಪ್ರಸ್ತುತ ನಾಟಕದಲ್ಲಿ ಅಲೌಕಿಕ ಕಾರಣವನ್ನು ಜೋಡಿಸಿದ್ದಾರೆ. ರಾಜನ ಸೇವೆಗೆ ಸಂತುಷ್ಟನಾಗಿ ಮಹದೇವನು ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ ಅನುಗ್ರಹಿಸುತ್ತಾನೆ. ಆ ಸ್ವಪ್ನಫಲವನ್ನು ರಾಜನು ತಾನೇ ನಿರ್ಣಯಿಸಿ ಮಿತ್ರರಿಗೆ ತಿಳಿಸುತ್ತಾನೆ. ರಹಸ್ಯವಾದ ಆ ಸ್ವಪ್ನದಲ್ಲಿ ರಾಜನ ಮದುವೆಯಾಗುವುದರ ಸೂಚನೆ ಅಡಗಿದೆ.

ಮಾಗ - ಕಂ॥ ಪ್ರಮಥಾದೀಶಂ ಕನಸೊಳ್ ।
ಮಿಮಲಾಂಬುಜ ಮಾಲೆಯೊಂದನಿತ್ತಾ ॥ಧರಣೀ॥
ರಮಣನ ಮನ್ನಿಸಿ ಸರಿದಂ ।
ಭಮೆಯಿಂ ಕಣ್ದೆರೆದನಾಗಳೇ ನಂಜೇಂದ್ರ ॥೧೦॥

ಕವಿ ನಂಜರಾಜನ ಆಸ್ಥಾನದಲ್ಲಿದ್ದುದರಿಂದ ಇಲ್ಲಿ ನಂಜೇಂದ್ರನಿಗೆ ಕನಸು ಬಿದ್ದಿದೆ ಎಂದು ಬರೆದು ರಾಜನನ್ನು ಸಂಪ್ರೀತಗೊಳಿಸಲು ಪ್ರಯತ್ನಿಸಿದ್ದಾನೆ. ರಾಜನು ಬೇಟೆಯಾಡಲಿಕ್ಕೆ ಹೋದಾಗ ಒಂದು ಸುಂದರವಾದ ಹೆಣ್ಣನ್ನು ಕಾಣುತ್ತಾನೆ.

ರಾಜಂ ॥ ಆಹಾ॥ ಅವಿಳ ರೂಪಾತಿಶಯವೆಂತದು ।
ಕನ್ನೆಯೋ ? ಮೇಣ್ಮನಜೆಯೋ ? ಜಗನ್ಮೋಹಿನಿಯೋ ? ॥
ಕಣ್ಣೆರಡರ ಮನುಜರ್ನಾಂ ।

ಚೆನ್ನೆಯ ರೂಪವನೆ ಕಂಡು ಪಣಿಯಲ್ಬಹುದೊ ?
ಕಂ।। ಅಂಸವ ಮತುವೊಳ್ಪೂಟ್ಟಿಯ ।
ಚಂದದಿ ಬೆಳಿಯುತ್ತೆ ಪಗಲು ಮಿರುಳುಮದಾವಳಿ ।
ಚಂದ್ರ ಕಲೆಯಂತೆ ಸುರಿವಳೊ ? ।
ಸುಂದರ ರಕ್ಷಿಗಳಿಗಮ್ಮತ ವಂಜನವಂ ತಾಂ ॥೧೯॥

ಇಲ್ಲಿ ಚಂದ್ರಕಲೆಯ ಹೆಸರು ರೂಪಕದಂತೆ ಕೇಳಿಬಂದಿದೆ.

ಮನಸ್ಸಿನ ಸಮಾಧಾನ ಸುತ್ತುಮುತ್ತಲಿನ ಪರಿಸರಕ್ಕಿಂತ ಮನಸ್ಸನ್ನೆ ಹೆಚ್ಚು ಅವಲಂಬಿಸುತ್ತದೆ ಎಂದು ಕವಿ ಮನೋಜ್ಞವಾಗಿ ಹೇಳಿದ್ದಾನೆ.

"ರಾಜಂ - ವಿಶಾಲವಾದ ನೆಳಲುಳ್ಳ ಮರದ ಬುಡದಲ್ಲಿ ಕುಳಿತಿದ್ದರೂ ನನ್ನ ಸಂತಾಪವು ಕ್ಷಣೆ ಕ್ಷಣೇ ಹೆಚ್ಚುತ್ತಿರುವುದೇನು ? ಅಥವಾ ಅಲಭ್ಯ ವಸ್ತುವಿನ ಚಿಂತೆಯಿಂದ ಮೂಢನಾದೆನೋ ? ಸಣ್ಣ ಬೀಸಣಿಗೆಯಿಂದ ಬೀಸಿದರೆ ದೀಪದ ಕುಡಿಯ ಬೆಂಕಿಯು ಆರುವಂತ್ತೆ ಉರಿಯುತ್ತಿರುವ ದಾವಾನಲವನ್ನು ಅದರಿಂದಲೇ ಆರಿಸಲೆಳಸಿದನು."

ಎಷ್ಟೇ ನಿಷ್ಠರಾದ ಸೇವಕರಿದ್ದರೂ ತಮ್ಮ ತಮ್ಮ ಕೆಲಸದಲ್ಲಿಯೇ ಆಸಕ್ತಿ ಹೆಚ್ಚು . ರಾಜನ ಕೆಲಸಕ್ಕಿಂತ ವಿದೂಷಕ ಸ್ನಾನ ಭೋಜನಾದಿ ವಿಷಯದಲ್ಲಿ ಆದ್ಯತೆ ಕೊಡುವುದನ್ನು ಕಂಡು ರಾಜ ಮನಗಾಣಿಸಿದ ಸತ್ಯ ಈ ಕೆಳಗಿನ ನುಡಿಗಳಲ್ಲಿ ಬಂದಿದೆ.

ರಾಜಂ - (ತನ್ನಲ್ಲಿ ) ಎಲ್ಲರಿಗೂ ತಮ್ಮ ತಮ್ಮ ಕೆಲಸಗಳಲ್ಲಿಯೇ ಅಭಿಲಾಷೆ ಹೆಚ್ಚು ಇದೋ ಇವನಿಗೆ ಎಷ್ಟು ಕೆಲಸಗಳಿದ್ದರೂ ಹೊಟ್ಟೆಯ ಕಡೆಗೆ ಆಸೆ ಬಿಟ್ಟಿಲ್ಲ.

ರಾಜ ಈಗ ದಕ್ಷಿಣಪಿನಾಕಿನಿ ನದಿಯ ಹತ್ತಿರಕ್ಕೆ ಬರುತ್ತಾನೆ. ಮುಂದೆ ಬಂದ ಕ್ರೀಡಾಶೈಲದ ಮೇಲೆ ಹತ್ತಿ ಪಶ್ಚಿಮದಿಕ್ಕಿನಲ್ಲಿ ಸೂರ್ಯಬಿಂಬವನ್ನು ನೋಡುತ್ತ ವಿದೂಷಕನ ಹಾದಿಕಾಯುತ್ತಾನೆ. ವಿದೂಷಕ ಸಮೀಪದ ಅಗ್ರಹಾರಕ್ಕೆ ಹೋಗಿ ಭೋಜನಪಾನಾದಿ ಕಾರ್ಯವನ್ನು ಮಾಡುತ್ತಾನೆ. ಯಾವುದೇ ವ್ಯಕ್ತಿ ಅಧಿಕಾರಕ್ಕೆ ಸಮೀಪವಿದ್ದಾಗ ಜನರು ಅವನಿಂದ ಏನಾದರೂ ಸಹಾಯ ದೊರೆಯುವದೆಂದು ಆಶಿಸುತ್ತಾರೆ. ಮತ್ತು ಆ ಆಸೆಯಿಂದಲೇ ಸತ್ಕರಿಸುತ್ತಾರೆ. ಅಂತೆಯೇ ವಿದೂಷಕನಿಗೆ ತಮ್ಮ ತಮ್ಮ ಸಮಸ್ಯೆಗಳನ್ನು ಹೇಳಿ ಅವನ್ನು ರಾಜನ ಕಿವಿಗೆ ಹೇಗಾದರೂ ಮಟ್ಟಿಸಬೇಕೆಂದು ಕೇಳಿ ಕೊಳ್ಳುತ್ತಾರೆ .

ವಿದೂಷಕ :- ಈ ಮಹಾರಾಜನ ತಂದೆಯಿಂ ನಿರ್ಮಿತವಾದ ವೀರ ರಾಜ ಸಮುದ್ರವೆಂಬ ಅಗ್ರಹಾರದಲ್ಲಿದ್ದ ಬ್ರಾಹ್ಮಣರೆಲ್ಲರೂ ನನ್ನ ಬಳಿಗೆ ಬಂದು,

ಕಂ ॥ ಮಗನಾಪನಯನವ ಮಳ್ಪುದು ।
ಮಗಳುಂ ಸಂದಿಹೆಳು ಮದುವೆ ಗೊಪ್ಪುವ ಕ್ರತುವಂ ॥
ಬಗೆದಂದಿರ್ಪವುಕೆರೆಯಂ ।
ಮಿಗೆ ರಚಿಸಲ್ವೇಳ್ಕು ಮೆಂದು ಬೇಡುತಲಿರ್ದರ ।೫೮॥

ಇಲ್ಲಿಯ ಬೇಡಿಕೆಗಳಲ್ಲಿ ಬಹಳಷ್ಟು ಮದುವೆ, ಮುಂಜಿವೆಗೆ ಸಹಾಯ ಬೇಡುವಂಥ ವೈಯಕ್ತಿಕ ಅಗತ್ಯಗಳಾದರೂ, ಕೆರೆರಚಿಸಬೇಕೆಂದು ಬೇಡಿಕೆ ಸಮಷ್ಟಿ ಹಿತದ ಸಂಕೇತವು ಆಗಿದೆ. ರಾಜನು ಉನ್ನತಕುಲ ಪೋಷಕನು ಎಂಬ ಸಂಗತಿಯನ್ನು ಕವಿ ಇಲ್ಲಿ ಹೇಳಬಯಸಿದ್ದಾನೆ.

ವಿದೂಷಕ ಜಾಣ ಸಮಯ ನೋಡಿ ರಾಜನಮುಂದೆ ಈ ಬೇಡಿಕೆಗಳೆಲ್ಲವನ್ನು ನಿವೇದಿಸಬೇಕೆಂದು ಅಂದುಕೊಂಡು, ಸಮಯದಲ್ಲಿ ಹೇಳಿದಮಾತು ಸ್ವಲ್ಪವಾದರೂ ಮಹತ್ಫಲವೆನಿಸುವುದು ಎಂದು ಸಮಯ ಸಂದರ್ಭದ ಮಹತ್ವ ವಿವರಿಸುತ್ತಾನೆ.

ವಿದೂಷಕನು ರಾಜನ ಆಸೆಯನ್ನು ನೆರವೇರಿಸಲು ಒಂದು ರಾತ್ರಿಯ ಸಮಯ ಬೇಡುತ್ತಾನೆ. ರಾಜನಿಗೆ ಒಂದು ಕ್ಷಣವೂ ಸಮಾಧಾನವಿಲ್ಲ ತನ್ನಂತೆಯೇ ಕೊಳದಲ್ಲಿರುವ ಚಕ್ರವಾಕವನ್ನು ನೋಡಿ,

ಕಂ॥ ಇನಿಯಳ್ಮರೆಯಾಗಲೊಡಂ।
ಮನದೊಳ್ಮರುತ್ತೆ ಸುತ್ತಲುಂ ನಿರುಕಿಸುತಂ॥
ಅನುರಾಗಿದ ಚಿಹ್ನೆಗೆಳಂ।
ನೆನೆನೆನೆದಳಲುತ್ತ ಮೆರ್ಶುಮೆನ್ನಮೊಲಿದುವುಂ।೯೯ ॥

ಚಕ್ರವಾಕ ಪಕ್ಷಿ ವಿಯೋಗದ ಸಂಕೇತವಾಗಿ ಬಳಸಲಾಗುತ್ತದೆ. ಅಸ್ವಸ್ಥವಾಗಿ ತನ್ನ ಸಂಗಾತಿಯನ್ನು ನೆನೆಸುತ್ತ ಅದು ಚಕ್ರಾಕಾರವಾಗಿ ಸುತ್ತುತ್ತದೆ. ರಾಜನ ಮನಸ್ಸು ಕೂಡ ಅವನು ನೋಡಿದ ಕನ್ಯೆಯಲ್ಲಿ ಈ ಚಕ್ರವಾಕ ಪಕ್ಷಿಯಂತೆ ಅಸ್ವಸ್ಥವಾಗಿದೆ.

ಇತ್ತ ಚಂದ್ರಕಲೆಯ ಸಖಿಯರು ರಾಜ ಮತ್ತು ಚಂದ್ರಕಲೆಯ ಭೇಟಿಗೋಸ್ಕರ ಒಂದು ಉಪಾಯವನ್ನು ಮಾಡುತ್ತಾರೆ. ದೋಹಳ ಕ್ರಿಯಾನಿಯೋಗದ ನೆವದಿಂದ ಚಂದ್ರಕಲೆಯು ಕುರುವರ ವೃಕ್ಷದ ಹತ್ತಿರ ಹೋಗುವುದು ಮತ್ತು ರಾಜನೂ ಅದೇ ಸಮಯಕ್ಕೆ ಅಲ್ಲಿ ಬರುವುದನ್ನು ನಿಶ್ಚಯಿಸಲಾಗುತ್ತದೆ. ವಿದೂಷಕನು ರಾಜನಿಗೆ ಧನುರ್ಬಾಣಗಳನ್ನು ಕೈಗೆ ಕೊಟ್ಟು ಪುಷ್ಪಮಯವಾದ ಬಾಣ, ಬಾಣಾಸನಗಳನ್ನು ಕೈಯಲ್ಲಿ ಕೊಡುತ್ತಾನೆ. ಸೂಕ್ಷ್ಮವಾಗಿ ಕಟ್ಟಲ್ಪಟ್ಟ ತೆರೆಯೊಳಗೆ ಪ್ರವೇಶಿಸಿ ಚಂದ್ರಕಲೆಯರು ಬಂದು ಹೋಗುವತನಕ ಕಲುವಿಗ್ರಹದಂತೆ ನಿಶ್ಚಲಾಂಗನಾಗಿ ಇರಲು ತಿಳಿಸುತ್ತಾನೆ. ರಾಜನಿಗೆ ಇದು ಬಹಳ ಕಷ್ಟಕರವಾದದ್ದೆಂದು ಅನಿಸುತ್ತದೆ ಏಕೆಂದರೆ.

ರಾಜ - ಕಂ॥ ಇನಿಯಳ್ ದರ್ಶನದಿಂ ರಾ ॥
ಮನ ವಿಭ್ರಮಮದಿಸಿ ಬಳೆದು ತನ್ನುಜ್ಜುಗಮಂ॥
ಕೊನೆಗಾಣಿಸದೆಯೆ ಪಡವುದು।
ಮನಮಂ ರಾಜನಾದರೂ ತನ್ನಸೆಯನ್ನು ತಾನೇಗೆಯ್ಯೆಂ?

ಎಂತಹ ರಾಜನಾದರೂ ತನ್ನಾಸೆಯನ್ನು ಪೂರೈಸಿಕೊಳ್ಳಬೇಕಾಗಿಬಂದಾಗ ವಿವಿಧ ಉಪಾಯಗಳು ಅದು ವ್ಯಕ್ತಿತ್ವಕ್ಕೆ ಶೋಭೆ ತರಲಿ ಬಿಡಲಿ ಮಾಡಬೇಕಾಗುತ್ತದೆ. ರಾಜನ ಈ ಮುಂದಿನ ಮಾತುಗಳಲ್ಲಿ ಈ ವ್ಯಥೆ ಇದೆ.

ರಾಜ - ಆದರೂ ಅಸಾಧ್ಯವಾದ ಕೆಲಸಗಳನ್ನು ಸಾಧಿಸಲಿಕ್ಕೆ ಜನರಿಂದ ಬಗೆಬಗೆಯ ಉಪಾಯಗಳು ಸೂಚಿಸಲ್ಪಡುತ್ತಿವೆ. ಅದನ್ನು ಸಂಪಾದಿಸುವಾಗ ಆದರ ಕಷ್ಟಗಳು ತಿಳಿವುವು. ಹೇಗಾದರೂ ಆಗ. ಮಿತ್ರನು ಹೇಳಿದಂತೆ ಮಾಡುವುದಕ್ಕೆ ಪ್ರಯಾಸ ಪಟ್ಟು ಯತ್ನಿಸುವೆನು. ಕಷ್ಟಪಡದೆ ಬಯಸಿದ ಸುಖವು ಯಾರಿಗೆ ತಾನೇ ಲಭಿಸುವುದು.

ಚಂದ್ರಕಲೆಯ ಸಖಿಯಾರು ಅವಳ ವಿರಹತಾಪವನ್ನು ಕಡಿಮೆ ಮಾಡುವ ಪೂರ್ವನಿಯೋಜಿತ ಉಪಾಯವಾಗಿ ಅವಳನ್ನು ರಾಜನು ಮನ್ಮಥನ ಪ್ರತಿಮೆಯಂತೆ ಕುಳಿತಿರುವ ಜಾಗಕ್ಕೆ ಬರುತ್ತಾರೆ. ಸಖಿಯರು ತೆರೆಯನ್ನು ಸರಿಸುತ್ತಾರೆ. ತನ್ನ ಇನಿಯನ ಭಂಗಿ ನೋಡಿ ಚಂದ್ರಕಲೆ ಭ್ರಾಂತಳಾಗುತ್ತಾಳೆ. ಸಖಿಯರ ಸೂಚನೆಯಂತೆ ಅವಳು ಮದನ ಕಾಲುಗಳನ್ನು ಸ್ಪರ್ಷಿಸಿ ನಮಸ್ಕರಿಸುತ್ತಾಳೆ. ಕಾಲಿನ ತೆವರ ಹನಿ ನೋಡಿ ಅವಳು ಸಾಶಂಕಿತಳಾಗುತ್ತಾಳೆ. ಆದರೆ ಸಖಿಯರು ಪೂರ್ಣಚಂದ್ರ ದರ್ಶನದಿಂದ ಚಂದ್ರಕಾಂತ ಶಿಲಾಪ್ರತಿಮೆಯ ಪ್ರಸವಿಸುವದರಿಂದ ಅಲ್ಲಿ ಬೆವರಹನಿ ಬಿಟ್ಟಿವೆ ಎಂದು ಹೇಳುತ್ತಾರೆ. ರಾಜನು ಚಂದ್ರಕಲೆ ನಮಸ್ಕಾರ ಮಾಡುವಾಗ ಹೂವುಗಳನ್ನು ಸುರಿಸುತ್ತಾನೆ. ಆದರೆ ಸಖಿಯರು ಅವು ಶುಭಶಕುನ ಪ್ರಸಾದವೆಂದು ವ್ಯಾಖ್ಯಾನಿಸಿ ಅದನ್ನು ಮರೆ ಮಾಚುತ್ತಾರೆ.

ಚಂದ್ರಕಲೆ ಕುರುವರ ವೃಕ್ಷವನ್ನು ಆಲಿಂಗಿಸುವಳು ಉಪರ ಕನ್ಯೆಯಾ ಆ ವೃಕ್ಷವನ್ನು ಆಲಂಗಿಸಿದರೆ ಆದು ಹೂ ಬಿಡುವುದು ಎಂದು ಪ್ರತೀತೀ. ರಾಜನೂ ಅಲ್ಲಿ ಬರುವನು. ಮತ್ತು ರಾಜನು ಒಬ್ಬರಿಗೊಬ್ಬರು ನೋಡುವರು ಅಷ್ಟರಲ್ಲಿ ಒಂದು ಕೋಲಾಹಲವು ಕೇಳಿಬಂದು ಬಹುಷಃ ವೀರಸೇನ ತನ್ನನ್ನು ಹುಡುಕುತ್ತಿರಬೇಕು ಎಂದು ಭಾವಿಸಿ ರಾಜನು ಕೂಡಲೇ ಅಲ್ಲಿಂದ ನಿರ್ಗಮಿಸುವನು ಹೊಸದಾಗಿ ಚಿಗುರಿದ ಕುರುವರ ಮಂಜರಿಯನ್ನು ಗೌರಿಗೆ ಸಮರ್ಪಿಸುತ್ತಾರೆ. ಬೇಟೆಯಲ್ಲಿ ಅಗಲಿದ ವೀರಸೇನನು ಮತ್ತೆ ಭೇಟಿಯಾಗುತ್ತಾನೆ. ಅದೇ ವೇಳೆಗೆ ಕೇರಳದ ರಾಜನಾವ ಕನಕವರ್ಮನನ್ನು ಹಿಡಿಯುವದಕ್ಕ ಹೋದ ತಮ್ಮನಾದ ವಿಜಯಸೇನನು ಬರುತ್ತಾನೆ. ಕನಕವರ್ಮನನ್ನು ಸೆರೆಮನೆಗೆ ಹಾಕಬೇಕೆಂದು ಕಂಚುಕಿಯ ಮುಖಾಂತರ ಆಜ್ಞಾಪಿಸುವನು. ರಾಜನು ಚಾರರಿಂದ ಸುದ್ದಿಗಳನ್ನು ಕೇಳುತ್ತಿರುವಾಗ ಕುಂತಳ್ ದೇಶವಲ್ಲಭನಾದ ರತ್ನಾಕರದಿಂದ ಒಂದು ಪತ್ರ ಬರುವುದು.

ಚಂದ್ರಕಲೆಯ ಸ್ವಯಂವರ ಮಹೋತ್ಸವವನ್ನು ನೋಡಲು ಇಂದ್ರನ ಪತ್ನಿಯಾದ ಶಚೀದೇವಿಯೂ ವಶಿಷ್ಠ ಮಹರ್ಷಿಗಳ ಪತ್ನಿಯಾದ ಅರುಂಧತಿಯಾಡನೆ ವಿಮಾನದಿಂದ ಅಲ್ಲಿಗೆ ಹೋಗುತ್ತಾಳೆ. ಅಲ್ಲಿ ನಂಜನೃಪಾಲನಿಗೆ ಚಂದ್ರಕಲೆಯು ಮಾಲೆ ಹಾಕುವಳು ಶಚೀಯ ವಿವಾಹ ಮಹೋತ್ಸವನ್ನು ನೋಡಿ ಹೊಗಲು, ಅಲ್ಲಿಯೇ ಇರುವಳು. ತನ್ನ ರಾಜನಾದ ನಂಜರಾಜನು ಮದುವೆಗೆ ದೇವತಿಗಳೇ ಬಂದಿದ್ದರು ಎಂದು ಸೂಚಿಸಬಯಸುತ್ತಾನೆ ಕವಿ . ರಾಜನಲ್ಲಿ ಈಶ್ವರನ ಅಂಶವಿದೆ ಎಂಬ ಆ ಕಾಲದ ನಂಬುಗೆ ಆದ್ದರಿಂದಲೇ ಕವಿ ಅನುಸೂಯಳ ಮಾತಿನಿಂದಲೇ ಹೇಳಿಸುತ್ತಾನೆ.

ಅನೂ- ಒಡೆಯನು ಶ್ರೀಪತಿಯ ಅವತಾರವೆಂತಲೂ ವೃಕಶರಣನೆಂತಲ್ಲೂ ಹೇಳಿವುದು ಸತ್ಯವು ಅದುದರಿಂದಲೇ ಅನೇಕ ರಾಜರುಗಳಿದ್ದರೂ ಭಗವಂತನಾದ ಚಂದ್ರಚೂಡೇಶ್ವರನು ಅನುಗ್ರಹಿಸಿದುದರಿಂದ ಚೆಲ್ವಾವರೆದಂಡೆಯ ವ್ಯಾಜದಿಂದ ಇಂದಿರಾಂಶದಲ್ಲಿ ಅವತರಿಸಿದ ಕನ್ಯೆಯನ್ನು ಬೇಡಿದನು'' ರಾಜನ ಅಧಿಕಾರಿಗಳಿಂದ ಬಂದ ವಿವಿಧ ಕೊಡುಗೆಯನ್ನು ಅತಿಶಯವಾಗಿ ಹೊಗಳಲಾಗಿದೆ.

ದೇವಾ। ಕಾವೇರಿಯ ಸಮುದ್ರ ಸಂಗಮವಾಗುವ ಕಡೆ ಬಿರುಗಾಳಿಯಿಂದ ತರಲ್ಪಟ್ಟ ರತ್ನಪೂರಿತವಾದ ದ್ವೀಪಾಂತರದ ಹಡಗವೂ ಶ್ವೇತಾದ್ರಿದುರ್ಗದ ಬಳಿ ದೊರೆವ ನಿಕ್ಷೇಪವೂ ತಮ್ಮ ಮಹೋತ್ಸವಕ್ಕೆಂದು ಅಧಿಕಾರಿಗಳಿಂದ ಕಳುಹಿಸಲ್ಪಟ್ಟಿವೆ''. ಇಲ್ಲಿ ರಾಜನ ದಿಗ್ವಿಜಯ ತಮಿಳನಾಡಿವರೆಗೆ ಹಬ್ಬಿದೆ ಎಂದು ಸೂಚ್ಯವಾಗಿ ಹೇಳಲಾಗಿದೆ. ವಿಜಯಸೇನನ (ರಾಜನ ತಮ್ಮನ) ದಿಗ್ವಿಜಯ ರಾಜನ ಪರಾಕ್ರಮವನ್ನು ಹೇಳಲು ಅನಗತ್ಯವಾಗಿ ಸೇರಿಸಲ್ಪಟ್ಟಿದೆ. ದೇವತೆಗಳು ಆಕಾಶದಿಂದ ವಿಮಾನ ಸಹಿತವಾಗಿ ಬಂದಿದ್ದು ರಾಜನನ್ನು ಅತಿಯಾಗಿ ವೈಭವೀಕರಿಸುವ ಪ್ರಯತ್ನವಾಗಿವೆ. ರಾಜನ ಕುಲವರ್ಣನೆ ತನ್ನ ಅರಸ ನಂಜರಾಜನ ಕುಲವನ್ನು ಹೊಗಳಲು ಬಳಸಿಕೊಳ್ಳಲಾಗಿದೆ. ಆದರೂ ತೀರ ಕ್ಲೀಷ್ಟವಲ್ಲದ ಕಂದ ಪದ್ಯಗಳು, ಸರಸ ಸಂಭಾಷಣೆ ನಾಟಕದ ಸೊಗಸನ್ನು ಹೆಚ್ಚಿಸಿವೆ.

## ೭. ಕರ್ಣಾಟಕ ಸ್ನುಷಾ ವಿಜಯಂ:

ಕರ್ನಾಟಕ ಸ್ನುಷಾ ವಿಜಯಂ ಎಂಬ ಕೃತಿಯನ್ನು ಮೈಸೂರು ಸೀತಾರಾಮಶಾಸ್ತ್ರಿಗಳು ಅನುವಾದಿಸಿದರು. ೧೮೯೭ರಲ್ಲಿ ಮೂಡಿಬಂದ ಈ ಅನುವಾದ ಸಾಮಾಜಿಕ ನಾಟಕವೆನಿಸಿದೆ. ಪೌರಾಣಿಕ ವಸ್ತುವನ್ನಾಧರಿಸಿದ ನಾಟಕಗಳೇ ಅನುವಾದವಾಗುತ್ತಿರುವ ಕಾಲದಲ್ಲಿ ಕರ್ಪೂರ ಮಂಜರಿ ಯಂತಹ, ತೀರ ಸಾಮಾಜಿಕ ನಾಟಕವೆನಿಸಿದ ಸ್ನುಷಾ ವಿಜಯದಂತಹ ನಾಟಕಗಳು ಅನುವಾದಗೊಂಡಿರು ವನು, ಸಂಕಲ್ಪ ಸೂರ್ಯೋದಯ, ಅನುತಾಪಿಕ ಪ್ರೇಕ್ಷಣಿಕಮಂ' ಎಂಬ ಆಧ್ಯಾತ್ಮಿಕ ವಸ್ತು ಆಧರಿತ ನಾಟಕಗಳು ಕನ್ನಡೀಕರಣಗೊಂಡಿವೆ. ಅನುವಾದದ ಉದ್ದೇಶವನ್ನು ಲೇಖಕರು ಪೀಠಿಕೆಯಲ್ಲಿ ಈ ರೀತಿ ಹೇಳುತ್ತಾರೆ. ''ಲೋಕದಲ್ಲಿ ಪ್ರಾಯಶಃ ಅತ್ತೆ ಸೊಸೆಯರಿಗೆ ವಿವಾದವು ಸಿದ್ಧವಾಗಿರುವುದು. ಈ ವಿಷಯದಲ್ಲಿ ಗುಣದೋಷಗಳನ್ನು ವಿವರಿಸಿ ವಿವೇಕವನ್ನು ಬೋಧಿಸುವ ತಕ್ಕ ಪುಸ್ತಕಗಳು ಯಾವುವೂ ಕಾಣಲಿಲ್ಲ. ಇದನ್ನು ಆಲೋಚಿಸಿ ಅನಂತಶಯನ ಸಂಸ್ಥಾನದ ಸುಂದರ ರಾಜಕವಿಯೆಂಬುವರು ಸ್ನುಷಾ ವಿಜಯವೆಂಬ ಪ್ರಶ್ನೋತ್ತರ ರೂಪದಿಂದ ಸಣ್ಣ ಗ್ರಂಥವನ್ನು ಸಂಸ್ಕೃತದಲ್ಲಿ ಸರಳವಾದ ಸರಣಿಯಿಂದ ವಿರಚಿಸಿರುವರು. ಮುದ್ರಿತವಾಗಿರುವ ಈ ಗ್ರಂಥವನ್ನು ನಾನು ನೋಡಿ ಸ್ವಭಾವ ಮಧುರವಾಗಿಯೂ, ನೀತಿಬೋಧಕವಾಗಿಯೂ ಇರುವ ಈ ಸಂಗತಿಯನ್ನು ಕನ್ನಡಿಗರ ಉಪಯೋಗಕ್ಕೋಸ್ಕರ ಕನ್ನಡಿಸ ಬೇಕೆಂದು ಅಭಿಪ್ರಾಯಪಟ್ಟೆನು. ಈ ವಿಷಯದಲ್ಲಿ ಗ್ರಂಥಕರ್ತರು ಅನುಮತಿಸಿದುದಲ್ಲದೆ, ಈ ಗ್ರಂಥದ ಸ್ವಾತಂತ್ರ್ಯವನ್ನು ನನಗೆ ಕೊಟ್ಟಿರುವುದಕ್ಕಾಗಿ ನಾನವರಿಗೆ ಅತ್ಯಂತ ಕೃತಜ್ಞನಾಗಿರುವೆನು. ಸರ್ವ ಸಾಧಾರಣವಾಗಿ ತಿಳಿಯುವಂತೆ ಮಾತುಗಳನ್ನು ಹೊಸಗನ್ನಡಿದಲ್ಲಿ ಬರೆದಿರುವೆನು. ಇದು ವ್ಯುತ್ಪಾದಕವೂ ಆಗಿರಬೇಕೆಂಬ ಅಭಿಪ್ರಾಯದಿಂದ ಪದ್ಯಗಳನ್ನು ಕಾವ್ಯ ಸರಣಿಯಲ್ಲಿ ರಚಿಸಿರುವೆನು''.

ಈ ಪೀಠಿಕೆಯಿಂದ ಹಲವು ಅಂಶಗಳು ವ್ಯಕ್ತವಾಗುತ್ತವೆ. ಇದೊಂದು ಲೌಕಿಕ ನಾಟ. ಆ ಕಾಲಕ್ಕೆ ಜನಜಾಗೃತಿಯಾಗಿ ನಾಟಕಗಳು ಪ್ರಯೋಗಿಸಲ್ಪಡುತ್ತಿರುವುದರಿಂದ ಪೌರಾಣಿಕ, ಐತಿಹಾಸಿಕ ನಾಟಕಗಳ ಜೊತೆಗೆ ಸಾಮಾಜಿಕ ನಾಟಕಗಳು ಅನುವಾದಗೊಳ್ಳುತ್ತಿದ್ದವು. ಕೇವಲ ಭಾಸ, ಕಾಳಿದಾಸಾದಿಗಳ ನಾಟಕಗಳಷ್ಟೇ ಅಲ್ಲದೇ ಬೇರೆ ಕವಿಗಳ ನಾಟಕಗಳು ಅನುವಾದಗೊಳ್ಳುತ್ತಿದ್ದವು. ಸಂಸ್ಕೃತ ನಾಟಕಗಳ ರಚನೆಯೂ ನಡೆಯುತ್ತಿತ್ತು ಎಂಬುದು ಗ್ರಂಥಕರ್ತರ ಅನುಮತಿ ಪಡೆದು ಅನುವಾದಿಸಿರುವೆ ಎಂಬಲ್ಲಿ ತಿಳಿದುಬರುತ್ತದೆ. ಸೃಜನಶೀಲ ಅನುವಾದ ಎಂಬುದಕ್ಕೆ ವ್ಯುತ್ಪಾದಕ ಎಂಬ ಪದ ಪ್ರಯೋಗ ವಿಲ್ಲದೆ. ಪ್ರಾರ್ಥನಾ ಪದ್ಯದಲ್ಲಿಯೇ ಕಥಾ ಸಾರಾಂಶವನ್ನು ತಿಳಿಸಿಕೊಡುತ್ತಾರೆ.

ವೃ ॥ ಸೊಸೆಯವರಲ್ಲಿ ವೈರವನೆ ಬಿತ್ತರಿಕುಂಗಡೆನುತ್ತದೆತ್ತಲುಂ ।
ವಸುಧೆಯನೊತ್ತಿದತ್ತೆಯಪಕೀರ್ತಿಯನೀಕೆ ತಪಿಪ್ಪಳೆಂಬಿನಂ ॥

ಕಂ ॥ ಮೈಸೂರ ಚೆನ್ನ ಪ್ರರಿಯೊ ।
ಳ್ಬಾಸಿಪ್ಪಾಂಗ್ಲೇಯ ಶಾಸ್ತ್ರ ಪಾರಾಳಿಯದು ॥
ಭಾಸುರ ಕರ್ಣಾಟ ಬುಧಂ ।
ಶ್ರೀ ಸೀತಾರಾಮನಾಮಕಂ ಕವಿಯೋರ್ವ್ವಂ ॥

ವೃ॥ ದೊರೆವಡೆವಿರ್ಪ್ಪ ಬಾಣಕವಿ ರಾಜನಿನಾತೆರದಿಂದೆ ಪಾರ್ವತೀ ।
ಪರಿಣಯವೆಂಬ ನಾಟಕ ವುದೀರಿತವಾಗಿರೆ ಸಂಸ್ಕೃತೋಕ್ತಿಯೊಳ್ ॥
ಶರನಿಧಿ ರತ್ನ ವರ್ಣ ಸಮಸಂಖ್ಯವಲಾಕಲಿ ವರ್ಷವಿಂದೆನ ।
ಲ್ಪರೆ ಜಯ ಮಾಖ ಶುಕ್ಲಶುಭ ಸಪ್ತಮಿಂ ಕನ್ನಡಿಸಿರ್ಪ್ಪನಿಂತದಂ ॥ (ಪೀಠಿಕೆ)

ಸೊಸೆಯನುರಾಗಕಾಶ್ರಯರೆನಿಪ್ಪ ಬುಧರ್ಕ್ಕಳ ವಕ್ತ್ರ ಪದ್ಮದೊ ।
ಳ್ಮಿಸಂಪ ಸರೋಜವಾಸಿನಿ ಜಗಜ್ಜನಯಿತ್ರಿ ನೆಗಳ್ಗೆ ಸೌಖ್ಯಮಂ ॥

'ಸ್ನುಷಾವಿಜಯಂ' ನಾಟಕ ವಿವೇಕವನ್ನು ಬೋಧಿಸತಕ್ಕ ಪುಸ್ತಕವಾಗಿ ಅಥವಾ ನಾಟಕವಾಗಿ ಬರೆಯಲ್ಪಟ್ಟಿದೆ. ಅನುವಾದಕರಿಗೆ ಸಾರ್ವತ್ರಿಕವಾದ ಮನೆಮನೆಯಲ್ಲಿ ನಡೆಯುವ ಕಥಾವಸ್ತುವುಳ್ಳ ಈ ನಾಟಕ ಸರ್ವಜನರ ಆದರಾಭಿಮಾನಗಳಿಸಲು ಯೋಗ್ಯವಾದುದರಿಂದಲೂ ಪ್ರಿಯವೆನಿಸಿದೆ. ನೀತಭೋಧನೆ ಮತ್ತು ಪುರಾಣಗಳ ಕಥಾ ಸಂವಿಧಾನಗಳ ಸುರಿಮಳೆಯಿಂದ ಹೊರತರುವ ಪ್ರಯತ್ನ ಈ ಎರಡೂ ಉದ್ದೇಶಗಳು ಈ ಅನುವಾದದ ಹಿಂದೆ ಇವೆ. ಸಂಭಾಷಣೆ ಹೊಸಗನ್ನಡದಲ್ಲಿದ್ದರೆ, ಪದ್ಯಗಳು ಕಾವ್ಯ ಧರ್ಮವನ್ನು ಅನುಸರಿಸಿವೆ. ಬಹುಶಃ ಹಳೆಯ ಮತ್ತು ತರುಣ ಪೀಳಿಗೆಯ ಎರಡೂ ಪ್ರೇಕ್ಷಕರನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ನಾಟಕ ಬರೆದುದಾಗಿವೆ.

'ಮರಾಸೆ' ಎಂಬ ಅತ್ತೆಯ ಮನಸ್ಸನ್ನು ಸಚ್ಚರಿತೆ ಎಂಬ ಸೊಸೆ ತನ್ನ ಕ್ಷಮಾ ಗುಣದಿಂದಲೂ, ಸಹನೆಯಿಂದಲೂ ಮಾರ್ಪಡಿಸುವ ಪ್ರಕ್ರಿಯೆ ನಾಟಕದ ಉದ್ದಕ್ಕೂ ಕಂಡು ಬಂದಿದೆ. ಇತ್ತ ಪ್ರಿಯ ಪತ್ನಿಯ ದುಃಖ ನೋಡಲಾಗದೆ, ತಳಮಳಿಸುತ್ತಿರುವನು. ಮಾವನಾದ ಸುಶೀಲನು ತನ್ನ ಹೆಂಡತಿಯ ಸೊಸೆಯ ಬಗೆಗಿನ ನಡತೆಯನ್ನು ನೋಡಿ, ಚಿಂತಿಸುತ್ತಿರುವನು.

ದುರಾಸೆ ತನ್ನ ಸಖಿಯಾದ ಚಾರುವೃತೆಯನ್ನು ಭೇಟಿಯಾಗಿ ತನ್ನ ಸೊಸೆಯ ಬಗ್ಗೆ ಇಲ್ಲಸಲ್ಲದ್ದನ್ನು ಮಾತಾಡುವಳು. ಆದರೆ ಚಾರುವೃತ್ತೆ ಅದನ್ನು ಮೃದುಮಾತಿನಿಂದಲೂ ಖಂಡಿಸುವಳು.

ದುರಾಸೆ - ಇನ್ನೊಂದನ್ನೂ ಹೇಳುವೆನು ಕೇಳು;

ಕಂ॥ ಮಂದಿರಕೊಂದುದಿನಂ ನಡೆ ॥
ತಂದೆನ್ನಳಿಯಂಗದೆಂತಮಾಂ ಕೆನೆಮೊಸರಂ ॥
ತಂದಿರೆ ಕಂಡೆನ್ನಾಜ್ಞೆಯ ।
ನೊಂದಾವೆ ಮಾವಳಂದು ಹಾಯ್ಕಿದಳ್ರಮಣಂಗಂ ।೧೬॥

ಚಾರು - ರಮಣನಿಗು ಹಾಕಿದಳೆಂಬ ನಿನ್ನ ಮಾತಿನಿಂದಲೇ ಅಳಿಯನಿಗೆ ಬಡಿಸಿ, ಮಿಕ್ಕ ಮೊಸರನ್ನೇ ಅವಳ ನಿನ್ನ ಮಗನಿಗೆ ಹಾಕಿದಳೆಂಬುದು ಸ್ಪಷ್ಟವು. ಆದುದರಿಂದ ಈ ವಿಷಯದಲ್ಲಿ ತಪ್ಪೇನು ? .

ಈ ಯತ್ನವು ಸಫಲವಾಗಲಿಲ್ಲವೆಂದು ಮಗನಲ್ಲಿ ಒಂದು ಅರಿಕೆ ಮಾಡುತ್ತಾಳೆ. ಮಗನಿಗೂ ಕೂಡ ಬುದ್ಧಿಯು ಹಿಡಿಸುವುದಿಲ್ಲ. ದುರಾಶೆ ಸೊಸೆಯ ತವರು ಮನೆಯ ಹುಲಸಲಾಗಿ ಮಗನು ಅದು ಸಲ್ಲದೆಂದು ಪ್ರತ್ಯುತ್ತರ ಕೊಡುತ್ತಾನೆ.

ವೃ॥ ಅವಳಾ ತಂದೆ ದುರಾತ್ಮ ಶೇಖರನೆನುತ್ತಂ ಮುನ್ನಮೇ ಬಲ್ಲೆನಾ । ನವಳಂ ಪೆತ್ತಳುಮಂ ಜಗದ್ವಳಯದೊಳ್ಪುಶ್ಯೇಲೆವೆಂದೆನ್ನರಾರ್ ॥ ಅವಳಾ ಭಾತರನುಂ ವಿಟಾಗ್ರಣಿಯಲಾ ಮೇಣ್ತಂಗೆಯುಂ ಪಾಣ್ಬೆಕೇ । ಳವಲಾವಂಶಮನೇವವೊಗಳ್ವೆನಣು ನೀ ನೆಂತಕ್ಕಟಾಬಲ್ಲೆ ಪೇಳ್ ।೩೫॥

ಸುಗುಣಂ ॥ ಜನನಿ । ನಿನ್ನ ಮಗಳತ್ತೆಯು ಸೊಸೆಯಲ್ಲಿ ಕೋಪಿಸಿಕೊಂಡರೆ, ನಮ್ಮ ವಂಶವನ್ನೂ ಇಂತೆ ದೂಷಿಸಬಹುದು. ಆದಕಾರಣ ಎಲ್ಲವನ್ನೂ ಚೆನ್ನಾಗಿ ವಿಚಾರಿಸಿಯೇ ನನಗೋಸ್ಕರ ತಂದೆ ಈ ಸೊಸೆಯ ವಿಷಯದಲ್ಲಿ ಈಗಳಿಂತು ಮಿತಿಮೀರಿ ಮಾತನಾಡುವುದು ನಿನನಗರ್ಹವಲ್ಲ.

ಆದರೂ ತೀರ ಮಾತೆಗೆ ವಿರುದ್ಧವಾಗಲು ಮನಸ್ಸಿಲ್ಲದ್ದರಿಂದ, ಹಿರಿಯರನ್ನು ಸಂತೋಷಪಡಿಸುವ ಸಲುವಾಗಿ ತಾಯಿಯ ಕಾಲಿಗೆ ಬೀಳುವನು. ತಾಯಿ ತನ್ನ ಮಾತಿನಂತೆ ನಡೆಯಬೇಕೆಂದು ಆಜ್ಞೆ ಮಾಡುವಳು.

-ರಂ ॥ ಎನ್ನಯ ಜೀವದ ವಿಷಯದೊ ।
ಳಿನ್ನುಂ ನಿನಗಾನೆ ಮಿರ್ಪ್ಪೊಡಾಲಿಸ ನೀನು ॥
ನನ್ನಾಣತಿಯಂ ಕೊಳ್ಳವೆ ।
ನಿನ್ನವಳಿರ್ಪ್ಪೆಡೆಗೆ ಪಜ್ಜೆ ಯಿಡದಿರವೇಳ್ಕುಂ ।೪೧॥

ಸಜ್ಜರಿಕೆ ಯಾರನ್ನೂ ದೂಷಿಸದೇ ತನ್ನ ಪತಿಗೆ ತನ್ನ ಸಂಕಟವನ್ನು ಹೇಳುವ ರೀತಿ ಮನೋಜ್ಞವಾಗಿದೆ. ತಾಯಿಯಲ್ಲಿ ದ್ವೇಷವುಂಟಗುವುದು ತನಗೆ ಬೇಕಿಲ್ಲವೆಂದು ಸ್ಪಷ್ಟವಾಗಿ ಹೇಳುವಳು.

ಸಚ್ಚರಿಕೆ - ಕಾಂತಾ । ನಿನಗೆ ಮಾತೃದ್ವೇಶವುಂಟಾಗಲೆಂದು ಪ್ರಾರ್ಥಿಸುವುದಿಲ್ಲ. ಲೋಕದಲ್ಲಿ ಮಾತೆ ಎಂಬುವಳು. ಮಕ್ಕಳಿಗೆ ಮೊದಲನೆಯ ದೇವರಲ್ಲವೇ?.

ಕಂ ॥ ಪಿರಿಯರ ದೆಸೆಯಿಂದೊದವುವ ।
ಪರಿಪರಿಯಪಟಳಮ ನೆಂತುಮಾಂ ಸೈರಿದಪೆಂ॥
ಅರಸನೆ ನೀಂ ಸಿಲ್ಕದವೋ ।
ಲಿಲ ತಾಯ್ವಿರ ಶಾಪಪಾಶ ಬಂಧಕಪಿಂದು ।೮೩॥

ಆದರೆ ಎಲ್ಲವನ್ನೂ ಸಹಿಸುವ ತಾಕತ್ತು ಬರುವುದು ಕೇವಲ ಪ್ರೇಯಸಿ ಅನುರಾಗವೊಂದೇ ಎಂದು ಹೆಂಡತಿ ಸ್ಪಷ್ಟವಾಗಿ ಹೇಳುವಳು.

॥ಸಚ್ಚರಿತೆ ಪ್ರಿಯನ್ । ಎಲ್ಲವನ್ನೂ ಸೈರಿಸುವೆನು. ನಿನ್ನಯ ರಾಗವೊಂದೇ ಬೇಕಾದುದು॥.

ಮಾವನಿಗೆ ಮಾತ್ರ ಸೊಸೆಯಲ್ಲಿ ಅನುಕಂಪವಿದೆ. ಮಾವನಿಗೆ ಸುಶೀಲನೆಂಬ ಹೆಸರಿವೆ.

ಸುಶೀಲ - (ಸ್ವಗತಾ) ಅಯ್ಯೋ ! ಮೂಢೆಯಾದ ನನ್ನ ಮಡದಿ ಸೊಸೆಯಲ್ಲಿ ಸರ್ವಥಾ ದ್ವೇಷ ಮಾಡುವಳೆಂಬ ವಿಚಾರವು ರಾತ್ರಿ, ಹಗಲು ನನ್ನನ್ನು ಖೇದಪಡಿಸುತ್ತಿರುವುದು.

ಮಾವನಾದ ಸುಶೀಲನು ಕೊನೆಗೆ ತನ್ನ ತೀರ್ಮಾನವನ್ನು ಹೇಳುತ್ತಾನೆ.

ಸುಶೀಲ - ಕಂ ॥ ಕಳಹಂ ಕುಟುಂಬದೊಳ್ನೆಲೆ ।
ಗೊಳಿಸಿದರೆ ಕಂಟುಸಿಕಮಿಂದೆ ಕುಲದೇಳ್ಗಿಯ ನೊ ॥
ಲ್ಪೆಳಸಲು ಮನೆಯಾಣಂ ತಾಂ ।
ಕಲಹಿಗಳಂ ಬೇರೆಬೇರೆ ನಿರಿಸಲ್ವೇಳ್ಕುಂ ।೬೧॥.

ದುರ್ಬಲತೆಯೆಂಬ ತಂಗಿಯೂ ಆವಾಗ ಬರುವಳು. ತನ್ನ ತಾಯಿಯೂ ಇನ್ನು ಮೇಲೆ ಈ ಮನೆಯಲ್ಲಿ ಇರುವುದಿಲ್ಲ ಎನ್ನುವ ತೀರ್ಮಾನವನ್ನು ತಿಳಿಸುತ್ತಾಳೆ. ಸುಶೀಲನು ಮಾತ್ರ ತಾನು ಉದರ ಭರಣಕ್ಕೆ ಹಣವನ್ನು ಕೊಡುವೆನು; ಆದರೆ ತನ್ನ ಹೆಂಡತಿಯು ಈ ಮನೆಯಲ್ಲಿ ಇರುವುದು ಬೇಡ ಎನ್ನುತ್ತಾನೆ.

ಕಂ। ಮತಿಹೀನೆಶಿವಳ್ಗದೆ ನಾಂ ।
ಪ್ರತಿಮಾಸಂ ಕುಡುವೆನಾದರಭರಣಕೆ ಪಣಮಂ ।
ಹಿತದಿನದುಕೊಂಡವಳೀ ।
ಹಿತದಿನದೆತ್ತಾನು ಮಿರ್ಕ್ಕೆಪೊಡೆಪೊರೆಯುತ್ತುಂ ।೬೯॥

ಸುಗುಣನು ತನ್ನ ತಂಗಿಗೆ ಕೂಡ ಹಣ ಕೊಡಲು ನೋಡುವನು. ಅತ್ತೆ ಮತ್ತು ಮಾವನವರಲ್ಲಿ ಜಗಳವಾಗಿ ಕೊನೆಗೆ ಅತ್ತೆ ಹೊರಡುತ್ತಾಳೆ. ಅತ್ತೆಯ ಸ್ನೇಹಿತೆ ಅದೇ ಸಮಯಕ್ಕೆ ಬರುತ್ತಾಳೆ. ಅತ್ತೆ ಮನೆ ಬಿಟ್ಟು ಹೋಗುವುದು ಅವಳಿಗೆ ಇಷ್ಟವಿಲ್ಲ. ಆದ್ದರಿಂದ ಅವಳು ಈ ರೀತಿಯಾಗಿ ಸಮಾಧಾನಿಸುತ್ತಾಳೆ.

॥ವೃ॥ ಜನನೀ ಸ್ವೈರಿಪುದೆನ್ನ ತಟ್ಟನನಿತಂನಿಮ್ಮಾಜ್ಞೆಯಂ ಮಿರಲಾ।
ರ್ಪೆನೆ ನಿಮ್ಮಂಪರದೈವವೆಂದು ಮನದೊಳ್ ನಾಂಭಾವಿಸಿರ್ಪೆಂಗಡಾ ॥
ಮನೆಯೊಳ್ಬುದ್ಧಿಯಂ ಪೇಳ್ವರಿಲ್ಲದೊಡೆ ನಿಮ್ಮನ್ನರ್ಕರಂಬಲ್ಲರೆಂ ।
ತನುವಿಂನೇರ್ಪಡುಗುಂ ನವೀನವೆನಿಪೀಸಂಸಾರವೆಮ್ಮನ್ನರಾ ॥
ಆದಕಾರಣ ಸರ್ವಥಾ ನೀವು ಈ ಮನೆಯಲ್ಲಿಯೇ ಇರುತ್ತಾ ನಮ್ಮನ್ನು ಕಾಪಾಡಬೇಕು.

ಈ ಮಾತು ಅತ್ತೆಯನ್ನು ಸಮಾಧಾನಿಸುತ್ತದೆ.

ಅನುನಯ, ವಿನಯ ಮತ್ತು ಸಹನೆಯೇ ಕುಟುಂಬ ಒಡೆಯುವುದನ್ನು ತಡೆಯುತ್ತದೆ. ಅದೇ ಕೊನೆಗೆ ಯಶಸ್ವಿಯಾಗುವುದು ಎಂದು ಈ ನಾಟಕದ ಜೀವಾಳವಾಗಿದೆ. ಸಚ್ಚರಿತೆಯ ಮಾತಿನಿಂದಲೇ ಇದು ವ್ಯಕ್ತವಾಗುತ್ತದೆ.

ಸಚ್ಚಂ - ಕಂ ॥ ಅನುನಯದಿಂದತ್ತೆವಿರು ॥
ಮುನಿಸುಳಿದೇಯ್ನಳ್ಕಸನ್ನ ಭಾವಮನಾಂತರ ॥
ವಿನುತಗುಣೆ ನಿನ್ನ ನೆರವಿಂ ।
ಘನವೆನಿಸಿತು ನ್ನ ಬರ್ದುಕು ಪೇಳನಗಿನ್ನೇಂ ।೮೦॥

'ರಂಡೆ' ಅಂತಹ ಕೆಲವು ಬೈಗುಳಗಳು ಈ ನಾಟಕದಲ್ಲಿ ನುಸುಳಿವೆ. ಅವು ನಾಟಕದ ಘನತೆಗೆ ಕುಂದುಂಟು ಮಾಡುತ್ತವೆ. ಆದರೆ ಇವು ಜನಸಾಮಾನ್ಯರಲ್ಲಿ ಬಳಕೆಯಾಗಿರುವುದರಿಂದ ಮತ್ತು ಸಾಮಾಜಿಕ ನಾಟಕವಿರುವುದರಿಂದ ಅದನ್ನು ಅಲಕ್ಷಿಸಬಹುದು ಎಂಬ ಭಾವವಿರುವಂತೆ ತೋರುತ್ತದೆ. ಯಾವ ಕೆಲಸ ಮಗಳು ಮಾಡಿದರೆ ಚೆನ್ನವೋ ಅದೇ ಸೊಸೆ ಮಾಡಿದರೆ ತಪ್ಪು ಎಂಬ ಸಾಮಾನ್ಯ ಸತ್ಯ ಇಲ್ಲಿ ಒಡಮೂಡಿದೆ.

ಅತಿ ಕ್ಲಿಷ್ಟ ಪದಗಳನ್ನು ಬಳಸದೇ ಮತ್ತು ಹದವಾದ ಪದ್ಯ ವಿನ್ಯಾಸವು ನಾಟಕದ ಸೊಗಸನ್ನು ಹೆಚ್ಚಿಸಿದೆ.

## ೮. ಕರ್ನಾಟಕ ನಾಗಾನಂದ ನಾಟಕಮ್ :

ಮೂಲನಾಗಾನಂದ ನಾಟಕದ ಕರ್ತೃ ಶ್ರೀಹರ್ಷ, ಪ್ರಿಯದರ್ಶಿಕೆ, ನಾಗಾನಂದ, ರತ್ನಾವಳಿ ಇವುಗಳೆಲ್ಲವೂ ಶ್ರೀಹರ್ಷಕೃತ ನಾಟಕಗಳು, ರತ್ನಾವಳಿ ಮತ್ತು ಪ್ರಿಯದರ್ಶಿಕೆ ಸಾಮಾನ್ಯವಾಗಿ ಒಂದೇ ಪಾತಳಿಯಲ್ಲಿದ್ದು, ನಾಗಾನಂದ ನಾಟಕ ಮಾತ್ರ ಭಿನ್ನ ನೆಲೆಯನ್ನು ಹೊಂದಿದೆ. ಕಥಾ ಸರಿತ್ಸಾಗರ/ಬೃಹತ್ಕಥೆಯ ಮೂಲವಸ್ತುವನ್ನಿರಿಸಿಕೊಂಡು ಹೊರಟ ಪ್ರಿಯದರ್ಶಿಕೆ, ರತ್ನಾವಳಿ ನಾಟಕಗಳು ಕಾಳಿದಾಸನ ಮಾಲವಿಕಾಗ್ನಿ ಮಿತ್ರವನ್ನು ಹೋಲುತ್ತವೆ. ಆದರೆ ಅಹಿಂಸಾತತ್ವ ಪರಿಪಾಲಕನಾದ ಜೀಮೂತ ವಾಹನನ ಕಥೆಯನ್ನೊಳಗೊಂಡ ನಾಗಾನಂದ ನಾಟಕ ಜೈನ ತತ್ತ್ವವನ್ನು ಆಧರಿಸಿದೆ ಎನ್ನಬಹುದು.

ಕಥಾ ವಿವರ :- ಜೀಮೂತ ವಾಹನನೆಂಬ ವಿದ್ಯಾಧರ ರಾಜಕುಮಾರನು ಮಲಯ ಪರ್ವತ ಪ್ರದೇಶದಲ್ಲಿ ಸಂಚರಿಸುತ್ತಾ ಅಲ್ಲಿನ ಗೌರಿ ದೇವಾಲಯಕ್ಕೆ ಪೂಜೆಗೆಂದು ಬಂದಿದ್ದ ಮಲಯವತಿಯನ್ನು

ನೋಡುವನು. ಇಬ್ಬರಿಗೂ ಪರಸ್ಪರ ಪ್ರೇಮವು ಉತ್ಪನ್ನವಾಗುವುದು. ಅವನು ಶ್ಲಾಘ್ಯನಾದ ವರನೆಂದರಿತು, ಆಕೆಯ ತಂದೆ ವಿಶ್ವಾವಸುವು ತನ್ನ ಮಗಳನ್ನು ಮದುವೆ ಮಾಡಿಕೊಡುವುದಾಗಿ ಹೇಳಿ ಕಳುಹಿಸುವನು. ಆದರೆ, ತಾನು ಗೌರೀ ದೇವಾಲಯದಲ್ಲಿ ನೋಡಿದ್ದವಳೂ ಮಲಯವತಿಯೂ ಒಬ್ಬಳೇ ಎಂದು ಅವನಿಗೆ ಗೊತ್ತಿಲ್ಲದೆ ಇದ್ದದ್ದರಿಂದ ಸ್ವಲ್ಪ ರಗಳೆಯಾಗಿ ಕೊನೆಗೆ ಇಬ್ಬರಿಗೂ ಮದುವೆಯಾಗುವುದು ಎಲ್ಲರೂ ಆ ಉತ್ಸವದಲ್ಲಿರುವರು.

ಜೀಮೂತ ವಾಹನವು ಸಮುದ್ರದ ಕರೆಯಲ್ಲಿ ತಿರುಗುತ್ತಾ ಅಲ್ಲಿ ಪರ್ವತಾಕಾರವಾಗಿ ಬಿಟ್ಟಿದ್ದ ಹಾವಿನ ಮೂಳೆಗಳನ್ನು ನೋಡಿ, ಅದರ ಪೂರ್ವ ವೃತ್ತಾಂತವನ್ನು ತಿಳಿದು ಕನಿಕರಪಡುತ್ತಿದ್ದನು. ಅಷ್ಟು ಹೊತ್ತಿಗೆ ಗರುಡನ ಆಹಾರವಾಗಿ ಬಂದಿದ್ದ ಶಂಖಚೂಡ ನಾಗನನ್ನು ಕಂಡು, ಅವನು ಗೋಕರ್ಣೇಶ್ವರ ನನ್ನು ನೋಡಿಕೊಂಡು ಬರಲು ಹೋಗಿದ್ದಾಗ, ತನ್ನ ದೇಹವನ್ನು ಗರುಡನಿಗೆ ಅರ್ಪಿಸುವನು. ಗರುಡನು ಅವನನ್ನು ನಾಗನೆಂದೇ ಭಾವಿಸಿ ಎತ್ತಿಕೊಂಡು ಬಂದು ನಿಜಸ್ಥಿತಿಯನ್ನು ತಿಳಿಸುವನು. ಜೀಮೂತ ವಾಹನನ ಮುದುಕ ತಂದೆ ತಾಯಿಗಳೂ, ಹೊಸದಾಗಿ ಮದುವೆಯಾದ ಹೆಂಡತಿಯೂ ಬಂದು ಸೇರುವರು. ಜೀಮೂತ ವಾಹನನು ಸಾಯುವನು. ಅದನ್ನು ನೋಡಿ ಅವನ ಕಡೆಯವರೆಲ್ಲರೂ ಬೆಂಕಿ ಯಲ್ಲಿ ಬಿದ್ದು ಪ್ರಾಣ ಬಿಡಬೇಕೆಂದಿರುವಾಗ ಗೌರಿ ಜೀಮೂತವಾಹನನ್ನು ಬದುಕಿಸುವಳು. ಗರುಡನು ಸ್ವರ್ಗದಿಂದ ಅಮೃತವನ್ನು ತಂದು ಚುಮುಕಿಸಿ ಬಹುಕಾಲದಿಂದ ಸತ್ತು ಮೂಳೆಯ ರಾಶಿಗಳಾಗಿದ್ದ ಸರ್ಪಗಳನ್ನು ಬದುಕಿಸಿ, ತಾನು ಹಿಂದೆ ಮಾಡಿದ್ದ ಪಾಪಕ್ಕೆ ಅನುತಾಪ ಪಟ್ಟು ಮುಂದೆ ಸರ್ಪಗಳನ್ನು ಹಿಂಸಿಸುವುದಿಲ್ಲವೆಂದು ಪ್ರತಿಜ್ಞೆ ಮಾಡುವನು.

ಯಥಾರೀತಿಯಂತೆ ಕರ್ಣಾಟಕ ನಾಗಾನಂದ ನಾಟಕಂ ಎಂಬುದಾಗಿ ಪರಿವರ್ತಿಸಿದ್ದ ಲೇಖಕರು ಸೂತ್ರಧಾರನ ಮೂಲಕ ನಾಟಕದ ವಸ್ತು, ಉದ್ದೇಶ, ಆಗತ್ಯಗಳನ್ನು ಹರ್ಷನು ತನ್ನ ನಾಟಕಗಳಲ್ಲಿ ಹೇಳಿಸಿದ್ದಾನೆ. ''ಅದ್ಯಾಹಮಿಂದ್ರೋತ್ಸವೇ ಸಬಹುಮಾನ ಮಾಹೂಯ ನಾನಾದಿಗ್ದೇಶಾಗತೇನ ರಾಜ್ಞಃ ಶ್ರೀ ಹರ್ಷದೇವಸ್ಯ ಪಾದ ಪದ್ಮೋಪಜೀವಿನಾ ರಾಜಸಮೂಹೇನೋಕ್ತಃ - ''ಯತ್ತದಸ್ಮತ್ ಸ್ವಾಮಿನಾ ಶ್ರೀಹರ್ಷದೇವೇನ ಅಪೂರ್ವ ವಸ್ತು ರಚನಾಲಂಕೃತಃ ವಿದ್ಯಾಧರ ಜಾತಕ ಪ್ರತಿಬದ್ಧಂ ನಾಗಾನಂದಂ ನಾಮ ನಾಟಕಂ ಕೃತಮಿತ್ಯಸ್ಮಾಭಿಃ ಶ್ರೋತ್ರ ಪರಂಪರಯಾ ಶ್ರುತಂ, ನ ಚ ಪ್ರಯೋಗತೋ ದೃಷ್ಟಮ್ । ತತ್ತಸ್ಯೈವ ರಾಜ್ಞಃ ಸಕಲಜನಹೃದಯಾಹ್ಲಾದಿನೋ ಬಹುಮಾನಾತ್, ಅಸ್ಮಾಸುಚಾನುಗ್ರಹ ಬುಧ್ಯಾ ಯಥಾವತ್ಪ್ರಯೋಗೇಣ ಅದ್ಯ ತ್ವಯಾ ನಾಟಯಿತವ್ಯಮ್' ಇತಿ । ತತ್ ಯಾವತ್ ಇದಾನೀಂ ನೇಪಥ್ಯ ರಚನಾಂ ಕೃತ್ವಾ ಯಥಾಭಿಲಷಿತಂ ಸಂಪಾದಯಾಮಿ ।.

ಶ್ರೀ ಹರ್ಷೋ ನಿಪುಣಃ ಕವಿ ಪರಿಷದಷ್ಯೇಷಾ ಗುಣಗ್ರಾಹಿಣೀ
ಲೋಕೇ ಹಾರಿ ಚ ಬೋಧಿಸತ್ವ ಚರಿತಂ ನಾಟ್ಯೇ ಚ ದಕ್ಷಾ ವಯಮ್ ।
ವಸ್ತ್ವೈಕೈಕ ಮಪೀಹ ವಾಂಛತ ಫಲಪ್ರಾಪ್ತೇಃ ಪದಂ ಕಿಂ ಪುನಃ

ಮದ್ಭಾಗ್ಯೋಪಚಯಾದಯಂ ಸಮುದಿತಃ ಸರ್ವೋ ಗುಣಾನಾಂ ಗಣಃ ॥

ಈಗ ನಮ್ಮೊಡೆಯನಾದ ಶ್ರೀಹರ್ಷ ಮಹಾರಾಜನು ಅಪೂರ್ವ ಕಥಾ ಸಂದರ್ಭಗಳಿಂದ ಅಲಂಕೃತವಾಗಿಯೂ, ವಿದ್ಯಾಧರ ರಾಜನ ಚರಿತ್ರೆಯಿಂದ ಮನೋಹರವಾಗಿಯೂ ಇರುವ ನಾಗಾನಂದವೆಂಬ ನಾಟಕವನ್ನು ಮಾಡಿರುವನೆಂದು ಜನಗಳಾಡುತ್ತಿದ್ದ ಮಾತು ಕಿವಿಗೆ ಬಿದ್ದಿತೇ ಹೊರತು ಅದರ ಅಭಿನಯವನ್ನು ಬೇರೆ, ಕಣ್ಣಾರೆ ನೋಡಲಿಲ್ಲ. ಆದುದರಿಂದ ಆ ರಾಜನ ವಿಷಯದಲ್ಲಿ ನಿನಗಿಂತ ಗೌರವದಿಂದಾಗಲಿ, ಅಲ್ಲದಿದ್ದರೆ ನಮ್ಮಲ್ಲಿ ಅನುಗ್ರಹ ಬುದ್ಧಿಯಿಂದಾಗಲಿ, ಈ ವಸಂತೋತ್ಸವದಲ್ಲಿ ನೀನು ಆ ನಾಟಕವನ್ನು ಪ್ರಯೋಗಾನುಸಾರವಾಗಿ ಅಭಿನಯಿಸಬೇಕೆಂದು ಶ್ರೀಹರ್ಷ ಮಹಾರಾಜನ ಪಾದಸೇವೆಗಾಗಿ ನಾನು ದಿಗ್ದೇಶಗಳಿಂದ ಬಂದಿರುವ ರಾಜ ಸಮೂಹವು ಪುರಸ್ಸರವಾಗಿ ನನಗೆ ನಿಯಮಿಸಿರುವುದು''.

ನಾಗಾನಂದ ನಾಟಕದ ಅನುವಾದ ''ಕರ್ಣಾಟಕ ನಾಗಾನಂದ ನಾಟಕಮ್' ಎಂಬ ಶೀರ್ಷಿಕೆಯಲ್ಲಿ ಸಮುಚಿತತೆಯನ್ನು ಪಡೆದುಕೊಂಡಿದೆ. ನಂಜನಗೂಡು ಅನಂತ ನಾರಾಯಣಶಾಸ್ತ್ರಿಗಳ ಈ ಅನುವಾದ ಹೆಚ್ಚು ಕಡಿಮೆ ಬಸವಪ್ಪಶಾಸ್ತ್ರಿಗಳ ಅನುವಾದದ ಟ್ರೆಂಡ್‌ನ್ನೇ ಹೋಲುತ್ತದೆ ಎನ್ನಬಹುದು. ಬಹುಶಃ ಆ ಕಾಲಘಟ್ಟದ ಅನುವಾದಕರೆಲ್ಲರ ಕೃತಿಗಳಲ್ಲೂ ಈ ಬಗೆಯ ಪ್ರಭಾವವನ್ನು ಗುರುತಿಸಬಹುದಾಗಿದೆ. ಮೂಲ ಸಂಸ್ಕೃತ ಪಠ್ಯಕ್ಕೆ ಬದ್ಧವಾದ, ಪದ-ಪದ್ಯಗಳ ಅನುವಾದದಲ್ಲಿ ಸಾಂದರ್ಭಿಕ ಅರ್ಥ ಗ್ರಹಿಕೆಯನ್ನು ಗ್ರಹಿಸಿದ ಸರಳ । ನಿಕಟ ಅನುವಾದವಿದಾಗಿದೆ. ಬದ್ಧ ಎನ್ನುವಲ್ಲಿಯೂ ಪದ ಪದ್ಯಗಳ ಬಳಕೆಯಲ್ಲಿ ಕವಿಯನ್ನು ಸಾಂಸ್ಕೃತಿಕ ಒತ್ತಾಸೆಯೊಂದು ನಿಯಂತ್ರಿಸಿದೆ ಎಂಬುದು ಸೂಚಿತವಾಗಿರುತ್ತದೆ.

ಉದಾ : ಜೀಮೂತವಾಹನ : ರಾಗಸ್ಯಾಸ್ಪದಮಿತ್ಯವೈಮಿ ನ ಪ್ರತ್ಯಯಃ
ಕೃತ್ಯಾಕೃತ್ಯ ವಿಚಾರಣಾಸು ವಿಮುಖಂ ಕೋವಾ ನ ವೇತ್ತಿ ಕ್ಷಿತೌ ।
ಏವಂ ನಿಂದ್ಯಮಪೀದಮಿಂದ್ರಿಯವರಂ ಪ್ರೀತ್ಯೈ ಭವೇದ್ಯೌವನಂ
ಭಕ್ತ್ಯಾಯಾತಿ ಯದೀತ್ಥಮೇವ ಪಿತರೌ ಶುಶ್ರೂಷಮಾಣಸ್ಯ ಮೇ ॥

ಅನುವಾದ : ಅರಿವೆಂ ರಾಗದ ಪ್ರತ್ತಿದೆಂದುಮರಿವೆಂ ನೀರ್ಗುಳ್ಳೆ ಪಾಂಗಿಂದಿದ
ಸ್ಥಿರಮೆಂದುಂ ಸದಸದ್ವಿವೇಕ ಮನಿದೇ ಪಾಳ್ಗೆಪುದೆಂದು ವಸುಂ
ಧರೆಯೊಳ್ ಕಾಣದರಿರ್ಪರೇ ಪಳಿಗಿದಿಂತೀಡಾದೊಡಂ ಭಕ್ತಿಯಿಂ
ಗುರುಶುಶ್ರೂಷೆಯೊಳಿಂತುಟೇ ಕಳೆಯೇ ತಾರುಣ್ಯಂ ಮದಾನಂದದಂ

ಈ ಅನುವಾದಕ್ಕೂ ಮೂಲಶ್ಲೋಕಕ್ಕೂ ಸಾಮ್ಯತೆ ಇರುವಲ್ಲಿಯೂ ಅರ್ಥೈಸುವಿಕೆಯ ಕ್ರಮವಾಗಿ ಮೂಡಿಬಂದಿರುವ ಕೆಲ ಪದಗಳು ಕವಿ ಸ್ವಾತಂತ್ರ್ಯವಹಿಸಲು ಅನುವು ಮಾಡಿಕೊಟ್ಟಿವೆ

ಎನ್ನಬಹುದು. ಕೃತ್ಯಾಕೃತ್ಯ ವಿಚಾರಣಾಸು ಎನ್ನುವುದನ್ನು ಸದಸದ್ವಿವೇಕಮನಿದೇ ಪಿತರೌ ಶುಶ್ರೂಷ ಮಾಣಸ್ಯ ಎನ್ನುವುದನ್ನು ಗುರುಶುಶ್ರೂಷೆ ಎಂಬುದಾಗಿ ಪರಿವರ್ತಿಸಿದ್ದಾರೆ. ಇಲ್ಲಿ ಕವಿ ಪಿತರೌ ಶುಶ್ರೂಷಮಾಣಸ್ಯ ಎಂಬುದನ್ನು ಸಾಂದರ್ಭಿಕ ಅಗತ್ಯಕ್ಕೆ ತಕ್ಕಂತೆ ಗುರುಶುಶ್ರೂಷೆಯಾಗಿಸಿದ್ದಾರೆ.

ಉದಾರ: (೨) ಜೀಮೂತವಾಹನ:

ತಿಷ್ಠನ್ ಭಾತಿಪಿತುಃ ಪುರೋಭುವಿ ಯಥಾ ಸಿಂಹಾಸನೇ ಕಿಂತಥಾ
ಯತ್ ಸಂವಾಹಯತಃ ಸುಖಹ ತು ಚರಣೌ ತಾತಸ್ಯ ಕಿಂ ರಾಜಕೇ।
ರೆಂ ಭುಕ್ತೇ ಭಂವನತ್ರಯೇ ಧೃತಿರಸೌ ಭುಕ್ತೋಜ್ಝತೇ ಯಾಗುರೋಃ
ಆಯಾಸಃ ಖಲು ರಾಜ್ಯಮುಜ್ಝೀತ ಗುರೋಸ್ತತ್ರಾಸ್ತಿ ಕಶ್ಚಿದ್ಗುಣಃ॥

ವಿದೂಷಕ: ಭೋ ವಯಸ್ಯ, ನನು ನಿರ್ವಿಣ್ಣ ಏಕ ತ್ವಮೇತಾವಂತಂ ಕಾಲಮೇತಯೋಃ ಜೀವನ್ಮೃತಯೋ! ಕೃತೇ ಇದಮಿದೃಶಂ ವನವಾಸ ದುಃಖ ಮನುಭವನ್। ತತ್ಪ್ರಸೀದ ಇದಾನೀಮಪಿ ತಾವತ್, ಗುರುಚರಣ ಶುಶ್ರೂಷಾ ನಿರ್ಬಂಧಾತ್ ನಿವೃತ್ಯ ಇಚ್ಛಾ ಪರಿಭೋಗರಮಣೀಯಂ ರಾಜ್ಯ ಸುಖವನು ಭೂಯತಾಮ್! ಮೇಲಿನ ಶ್ಲೋಕಗಳಲ್ಲಿ ;

ಅನುವಾದ: ಇರೆ ಸಿಂಹಾಸನದಲ್ಲಿ ತಂದೆಯಿದಿರಲ್ಲಿರ್ಪಂತೆವೊಲ್ ಕಾಣ್ಬೆನೇ
ಧರೆಯೊಳ್ ತಂದೆಯ ಕಾಲ್ಗಳೊತ್ತುವೆನಗಾರಾಜಾಳಿಯೊಲ್ ಸೌಖ್ಯಮೇ
ಗುರುಭುಕ್ತೋಜ್ಝಿತದಲ್ಲಿ ತೋರ್ಪ ಸೊಗಮಾಮೂಲೋಕದಲ್ಲಿರ್ಪುದೇ
ಬರೆ ರಾಜ್ಯಂ ಶ್ರಮವತ್ತಿ ತಾತರಹಿತಂಗಾರಾಜ್ಯದಿಂದೇಂ ಫಲಂ.

ಎಂಬಲ್ಲಿ ಪಿತುಃ ಎಂಬುದನ್ನು ತಂದೆ ಎಂಬುದಾಗಿ, ಭುಕ್ತೋಜ್ಝಿತೇ ಯಾಗುರೋ! ಗುರುಭುಕ್ತೋಜ್ಝಿತ ಎಂದು ಹೇಳಿದ್ದಾರಾದರೂ ನಂತರದ ಸಂವಾದದಲ್ಲಿ ಮತ್ತೆ;

ವಿದೂಷಕ: ಅಯ್ಯಾ, ಇದೇನು, ಸ್ವಲ್ಪವೂ ವಿಷಾದ ಪಡೆದಿರುವೆ! ಇಷ್ಟು ವಯಸ್ಸಾದರೂ ಇನ್ನೂ ಬದುಕಿರುವ ಕಂಗಳಿರಾದ ಆ ತಂದೆ ತಾಯಿಗಳಿಗಾಗಿ ವಿಜನವಾದ ಈ ವನದಲ್ಲಿ ವಾಸಮಾಡುತ್ತಾ ದುಃಖ ಪಡುವುದೇ ? ಬಹಳ ಚೆನ್ನಾಯಿತು. ನಾನು ಹೇಳುವ ಮಾತನ್ನು ಸ್ವಲ್ಪ ಲಾಲಿಸಿ, ಆ ಪಿತೃ ಪಾದ ಸೇವೆ ಯನ್ನು ಬಿಟ್ಟು, ಸರ್ವಸೌಖ್ಯಪೂರ್ಣವಾದ ರಾಜ್ಯದಲ್ಲಿ ಸುಖವಾಗಿರು.

ಗುರುಚರಣ ಶುಶ್ರೂಷೆಯೆನ್ನುವುದನ್ನು ಪಿತೃಪಾದಸೇವೆ ಎಂದು ಹೇಳಿದ್ದಾರೆ. ಇಲ್ಲಿ ಸ್ವಲ್ಪ ಗೊಂದಲಮಯತೆ ಕಾಣುತ್ತದೆ. ಕೆಲವು ಕಡೆ ಶ್ಲೋಕಾರ್ಥವನ್ನು ಸಂಗ್ರಹಾನುವಾದವಾಗಿಯೂ ಹೇಳಿದಂತಿದೆ.

ವಿದೂಷಕ : ಅಹೋ ಅಸ್ಯ ಗುರುಚರಣ ಶುಶ್ರೂಷಾನುರಾಗಃ ಭವತು ತದೇತದಪಿ ಅನ್ಯ
ದಿವ ಭಣಿಷ್ಯಾಮಿ । ಭೋ ವಯಸ್ಸಯ ನ ಖಲ್ವಹಂ ರಾಜ್ಯಸುಖಮೇವ ಕೇವಲ
ಮುದ್ದಿಶ್ಯ ಏವಂ ಭಣಾಮಿ ಅನ್ಯದಪಿ ತೇ ಕರಣೀಯಮಸ್ತ್ಯೇವ ।

ಎಂಬುದನ್ನು ಈತನಿಗೆ ಪಿತೃಪಾದ ಸೇವಾನುರಾಗವು ಬಲವತ್ತರವಾಗಿರುವುದು. ಆದುದರಿಂದ ಹೀಗೆ ಹೇಳುವೆನು, ಹೇಳಿದ್ದಾರೆ. ನಂತರ ಬರುವ ವಾಕ್ಯದ ಅರ್ಥವನ್ನು ತಮ್ಮದೇ ಆದ ಆಡುಮಾತಿನ ದೃಷ್ಟಿಯಲ್ಲಿ ಹೇಳಿದ್ದಾರೆ. ಭೋ ವಯಸ್ಸಯನ ಖಲ್ವಹಂ ರಾಜ್ಯ ಸುಖಮೇವ ಕೇವಲ ಮುದ್ದಿಶ್ಯ ಏವಂ ಭಣಾಮಿ । ಅನ್ಯದಪಿ ತೇ ಕರಣೀಯ ವಸ್ತ್ಯೇವ ।. ಈ ಮಾತಿನ ಅರ್ಥ ಎಲೈ ಮಿತ್ರನೇ ನಾನು ನಿಜವಾಗಿಯೂ ರಾಜ್ಯ ಸುಖವನ್ನು ಉದ್ದೇಶವಾಗಿಟ್ಟುಕೊಂಡು ಹೇಳಿದೆನು. ನಿನಗೆ ಮಾಡುವುದಕ್ಕೆ ಸಾಕಷ್ಟಿದೆ ಎಂಬುದಾಗಿರಬೇಕಾದದ್ದನ್ನು ಲೇಖಕರು ಹೀಗೆ ಹೇಳಿದ್ದಾರೆ. ನೀನು ಮಾಡತಕ್ಕ ಕಾರ್ಯಗಳು ಇನ್ನೂ ಅನೇಕಗಳಿರುವುದೆಂದು ಹೇಳಿದೆನೇ ಹೊರತು ಸೌಖ್ಯವನ್ನು ಮಾತ್ರ ಉದ್ದೇಶಿಸಿ ಹೇಳಲಿಲ್ಲ ಎಂದು;

ಕೆಲ ಶ್ಲೋಕಗಳ ಅನುವಾದವಂತೂ ಆತ್ಮೀಯವೆನಿಸುವುದಿಲ್ಲ.

ಉದಾ: ನ್ಯಾಯೋ ವರ್ತ್ಮನಿಯೋಜಿತಾಃ, ಪ್ರಕೃತಯಃ ಸಂತಃ ಸುಖಂ ಸ್ಥಾಪಿತಾಃ
ನೀತೋ ಬಂಧುಜನಸ್ತಥಾತ್ಮ ಸಮತಾಂ ರಾಜ್ಯೇ ಚ ರಕ್ಷಾ ಕೃತಾ ।
ದತ್ತೋ ದತ್ತ ಮನೋರಥಾಧಿಕ ಫಲಃ ಕಲ್ಪದ್ರುಮೋ ಪ್ಯರ್ಥಿನೇ
ಕಿಂ ಕರ್ತವ್ಯಮತಃ ಪರಂ ಕಥೆಯ ವಾ ಯತ್ತೇ ಸ್ಥಿತಃ ಚೇತಸಿ ॥

ಅನುವಾದ : ಜನಮಂ ನಲ್ಮೆಯ ಮಾರ್ಗದೊಳ್ ನಿರಿಸಿದೆಂ ಸಂತೋಷಮಿರ್ಪಂತೆವೋಲ್
ಅನುಗೆಯ್ದೆಂ ಸುಜನರ್ಗೆ ನಂಟರುಮನಾನೆನ್ನರಂ ಗೆಯ್ದೆನೊ
ಲ್ದು ನೆಲಕ್ಕಂ ತವೆ ಕಾಪುಗೆಯ್ದೆನೆರೆವರ್ಗೊಂದರ್ಕೆ ಪತ್ತೀವ ಕಲ್ಪನ ಗಂ
ಗೊಟ್ಟೆ ನದಾವುದಿನ್ನೆಗಳ್ವುದೋ ಪೇಳ್ ನಿನ್ನಭಿಪ್ರಾಯಮಂ.

ಇಲ್ಲಿ ನ್ಯಾಯೋ ವರ್ತ್ಮನಿ ಯೋಜಿತಾಃ ಎನ್ನುವುದನ್ನು ನಲ್ಮೆಯ ಮಾರ್ಗದೊಳ್ ನಿರಿಸಿದೆಂ, ಸಂತಃ ಸುಖಂ ಸ್ಥಾಪಿತಾಃ. ಸಂತೋಷಮಿರ್ಪಂತೆವೋಲ್, ಬಂಧುಜನಸ್ತಥಾತ್ಮ ಸವಲತಾಂ ಸುಜನರ್ಗೆ ನಂಟರುಮನಾನೆನ್ನರಂ. ಸ್ಥಿತಂ ಚೇತಸಿ = ನಿನ್ನಾಭಿಪ್ರಾಯಮಂ ಎಂದು ಹೇಳಿದ್ದಾರೆ.

ಉದಾ: ಜೀಮೂತವಾಹನಃ ಯದ್ಯೇವಂ, ತತ್ ಕಿಂ ನ ಸ್ಯಾತ್ ? ನನು ಸ್ವಶರೀರಾತ್ ಪ್ರಭೃತಿ ಸರ್ವಂ ಪರಾರ್ಥಮೇವ ಮಯಾ ಪರಿಪಾಲ್ಯತೇ । ಯತ್ತು ಸ್ವಯಂ ನ ದೀಯತೇ, ತತ್ ತಾತಾನುರೋದಾತ್? ತತ್ ಕಿಮನೇನಾವಸ್ತಾನು ಚಿಂತಿತೇನ ? ವರಂ ತಾತಜ್ಞೈವಾನುಷ್ಠಿತಾ । ಆಜ್ಞಾಪಿತಶ್ಚಾಸ್ಮಿತಾನೇನಃ. ಯಥಾ 'ವತ್ಸ' ಜೀಮೂತವಾಹನ, ಬಹು ದಿವಸ ಪರಿಭೋಗೇಣ ದೂರೀ ಕೃತ ಸಮಿತ್ಕುಶ ಕುಸುಮೆ ಮುಪಭುಕ್ತ ಮೂಲ ಫಲಕಂದ ನೀ ವಾರ ಪ್ರಾಯಮಿದಂ ಸ್ಥಾನಂ ವರ್ತತೇ । ತದಿತೋ ಮಲಿಯ ಪರ್ವತಂಗತ್ವಾ ಕಿಂಚಿತ್ ತಸ್ಮಿನ್ ನಿವಾಸ ಯೋಗ್ಯಮಾಶ್ರಮಪದಂ ನಿರೂಪಯ' ಇತಿ । ತದೇಹಿ ಮಲಯ ಪರ್ವತಮೇವ ಗಚ್ಛಾವಃ ।.

ಅನು : ಏನು ಮತಂಗನು ರಾಜ್ಯವನ್ನು ಆಕ್ರಮಿಸುವೆನೆಂದು ಯೋಚಿಸುವೆಯೋ ? ನಾನು ನನ್ನ ದೇಹ ಮೊದಲುಗೊಂಡು ಎಲ್ಲವನ್ನೂ ಪರಾರ್ಥವಾಗಿಯೇ ಕಾಪಾಡುತ್ತಿರುವೆ ನಲ್ಲವೇ? ಆದರೆ ಇನ್ನೂ ಕೆಲವು ಪದಾರ್ಥಗಳನ್ನು ನೀನು ಏತಕ್ಕೆ ಪರರಿಗೆ ಕೊಡುವುದಿಲ್ಲವೆಂದು ನೀನು ನನ್ನನ್ನು ಆಕ್ಷೇಪಿಸಬಹುದು. ಆ ವಿಷಯದಲ್ಲಿ ನಮ್ಮ ಪಿತ್ರಾಚಾರವನ್ನೇ ಅನುಸರಿಸಿರುವೆನು. ಈಗ ಈ ಕಥೆಯಿಂದ ಫಲವೇನು ? ತಂದೆಯ ಆಜ್ಞೆಯಾದಂತೆ ನಡೆಯುವುದೇ ಒಳ್ಳೆಯದು. 'ಮಗೂ ಜೀಮೂತವಾಹನ, ಅನೇಕ ದಿನಗಳಿಂದ ನಾವು ಒಂದೇ ಸ್ಥಳದಲ್ಲಿ ವಾಸಮಾಡುತ್ತಿರುವ ಕಾರಣ ಈ ಪ್ರದೇಶದಲ್ಲಿದ್ದ ದರ್ಭೆಗಳೂ ಸಮಿತ್ತುಗಳೂ, ಪುಷ್ಪಗಳೂ, ಕಂದಮೂಲ ಫಲಾದಿಗಳೂ ಎಲ್ಲವೂ ಮುಗಿದವು. ಆದುದರಿಂದ ಮಲಯ ಪರ್ವತಕ್ಕೆ ಹೋಗಿ ವಾಸಮಾಡುವುದಕ್ಕೆ ಯೋಗ್ಯ ವಾಗಿರುವ ಒಂದಾನೊಂದು ಆಶ್ರಮವನ್ನು ನೋಡಿಕೊಂಡು ಬಾ ಎಂದು ನಮ್ಮ ತಂದೆಯವರು ಆಜ್ಞಾಪಿಸಿರುವರು.

ಉದಾ : (೨) ವಾಸೋರ್ಥಾSSಂದಯಯೇವ ನಾತಿ ಪೃಥವಃ ಕೃತ್ತಾಸ್ವರೂಣಾಂ ತ್ವಚೋ
ಭಗ್ನಾ ಲಕ್ಷ್ಯ ಭರತ್ಕಾಮಂಡಲುನಭಃ ಸ್ವಚ್ಛಂ ಪಯೊ ನೈರ್ಝರಮ್ ।
ದೃಶ್ಯಂತೇ ತ್ರುಟಿತೋಜ್ಝಿತಾಶ್ಚ ವಮಭಿರ್ಮೌಂಜ್ಯಃ ಕ್ವಚಿನ್ಮೇಖಲಾ
ನಿತ್ಯಾಕರ್ಣನೆಯಾ ಶುಕೇನ ಚ ಪದಂ ಸಾಮ್ನಾಮಿದಂ ಪಠ್ಯತೇ ॥

ಅನು : ನಗದೊಳ್ ವಲ್ಕಿಕೆ ನಾರ್ಗಳಿಲ್ಲ ಕಿಂದೆತ್ತಿರ್ಕುಂ ಪದಂ ಗೆಳ್ದು ಗುಂ
ಡಿಗೆಗಳ್ ಸಿಳ್ಳನೆ ಸೀಳ್ದು ಕಾಣ್ಬವೆನೆಸುಂ ಸ್ವಚ್ಛೋದಕಂ ನೈರ್ಝರಂ
ಬಗೆವಂದಿರ್ಪುದು ಕಿಳ್ತುಪೋದ ಕತದಿಂದೀ ಮೇಖಲಾಮೌಂಜಿಗಳ್
ತೆಗೆದಿಟ್ಟಿರ್ಪುವು ಕೇಳ್ದು ಕೇಳ್ದು ಗಿಳಿಯುಂ ಸಾಮಂಗಳಿಂ ಪಾಡುಗಂ

ಕೆಲವು ಶ್ಲೋಕಗಳನ್ನು ತನ್ನದೇ ಆದ ಶೈಲಿಯಲ್ಲಿ ಬರೆದಿದ್ದಾರೆ. 

ಉದಾ: ಉತ್ಫುಲ್ಲಕ ಮಲಕೇಸರಪರಾಗಗೌರದ್ಯುತೇ। ಮಮ ಹಿ ಗೌರಿ!
ಅಭಿವಾಂಛಿತುಂ ಪ್ರಸಿಧ್ಯತು ಭಗವತಿ। ಯುಷ್ಮತ್ಪ್ರಸಾದೇನ ॥

ಅನು: ಶೌಲಿ ಸಹೋದರಿ ವಿಕಸಿತ
ಸಾರಸ ಕೇಸರ ಪರಾಗಗೌರೀ ಗೌರೀ
ಕಾರುಣ್ಯದೆ ನೀ ನಿಚ್ಛಾ
ಪೂರಣಮಪ್ಪಂತೆ ವರನನೆಸಗುದುದೀಗಳ್.

(೨) ವ್ಯಕ್ತಿರ್ವ್ಯಂಜನಧಾತುನಾ ದಶವಿಧೇನಾಪ್ಯತ್ರ ಲಬ್ಧಾಽ ಮುನಾ
ವಿಸ್ಪಷ್ಟೋ ದ್ರುತ ಮಧ್ಯಲಿಂಬಿತ ಪರಿಚ್ಛಿನ್ನ ಸ್ತ್ರೀಧಾಽ ಯಂ ಲಯಃ।
ಗೋಪುಚ್ಛಾ ಪ್ರಮುಖಾಃ ಕ್ರಮೇಣ ಯತಯಸ್ತಿಸ್ರೋ ಪಿ ಽಸಂಪಾದಿತಃ
ತತ್ವೌಘಾನುಗೆತಾಶ್ವ ವಾದ್ಯ ವಿಧಯಃ ಸಮ್ಯಕ್ ತ್ರಯೋ ದರ್ಶಿತಾಃ॥

ಅನು: ಈರೈದುಂ ಗಮಕಂಗಳುಲ್ಪಣತೆಯಂ ತಾಳ್ದಿರ್ಪುವಿಗಾನದೊಳ್
ಮೂರುಂ ಮಧ್ಯಮಿಂಬಿತದ್ರುತಲಯಂಗಳ್ ಬೇರೆ ಬೇರೊಪ್ಪುಗಂ
ಮೂರುಂ ಬೆನ್ನನೆ ಬಿಂದುವಿನಲ್ಲಿ ವರಗೋಪುಚ್ಛಾದಿ ವಿಚ್ಛಿತ್ತಿಗಳ್
ಮೂರುಂ ವಾದ್ಯ ವಿಧಾನ ಮೈದೆ ಮೆರಗುಂ ತಂತ್ರೀ ಸ್ವನಾಧಾರದಿಂ.

ಸಾಮಾನ್ಯ ಸಂಗತಿಗಳನ್ನು ಯಥವತ್ತಾಗಿ ಅನುವಾದದಲ್ಲಿ ಉಳಿಸಿಕೊಂಡಿದ್ದಾರೆ.

ಜೀಮೂತವಾಹನಃ ಕೋ ದೋಷಃ ? ನಿರ್ದೋಷ ದರ್ಶನಾಃ ಕನ್ಯಕಾ ಭವಂತಿ । ಕಿಂತು ಕದಾಚಿದಸ್ಮಾನ್ ದೃಷ್ಟ್ವಾ ಬಾಲಭಾವ ಸುಲಭಲಜ್ಜಾಸಾಧ್ವಸಾನ್ನ ಜೆಂಮಿಹ ತಿಷ್ಠೇತ್, ತದನೇನೈವ ಲತಾಜಲಾಂತರೇಣ ಪಶ್ಯಾವಃ।

ಅನು: ತಪ್ಪೇನು ? ಕನ್ನಿಕೆಯರನ್ನು ನೋಡುವುದರಿಂದ, ಏನೇನೂ ದೋಷವಿಲ್ಲ. ಆದರೆ ಆಕೆಯು ನಮ್ಮನ್ನು ನೋಡಿ ಬಾಲಿಕಾಜನ ಸುಲಭವಾದ ಲಜ್ಜೆಯಿಂದಾಗಲಿ, ಭಯದಿಂದಾಗಲಿ ಬಹುಕಾಲದವರೆಗೂ ಇಲ್ಲಿ ನಿಲ್ಲದೆ ಹೊರಟು ಹೋದಾಳು ! ಆದುದರಿಂದ ಈ ಬಳ್ಳಿಗಳ ಗುಂಪಿನಲ್ಲಿಯೇ ನಿಂತು ನೋಡೋಣ.

ಕವಿ ಸಮಯಗಳನ್ನು ಯಥಾವತ್ತಾಗಿ ಅನುವಾದಿಸಿದ್ದಾರೆ. 

ಭರ್ತೃವಿರಿಕೆ, ಎತದಸ್ಮಿ ವಕ್ತುಕಾಮಾ - ಏಷ ತೇ ಹೃದಯಸ್ಥಿತೋ ವರ ಏವದೇವ್ಯಾ ದತ್ತಃ ಸ್ವಪ್ನೆ ಪ್ರಸ್ತುತೇ ಕ್ಷಣಮೇಜವ ಪ್ರವಿಮುಕ್ತ ಕುಸುಮ ಬಾಣ ಇವ ಮಕರ ಧ್ವಜೋ ಭರ್ತೃದಾರಿಕೆಯಾ ದಷ್ಟಃ। ಸ ತೇ ಅಸ್ಯ ಸಂತಾಪಸ್ಯ ಕಾರಣಂ, ಯೇನೈತತ್ ಸ್ವಭಾವಶೀತಲಮಪಿ ಚಂದನಲಿತಂ ಗೃಹಂ ನ ತೇ ಸಂತಾಪದುಃಖಮಪನಯತಿ।.

ಅನು : ಎಲೆ, ರಾಜಪುತ್ರಿ, ನಿನ್ನ ಮನಸ್ಸಿನಲ್ಲಿ ಯೋಚಿಸುತ್ತಿದ್ದ ವರನನ್ನೇ ದೇವಿಯು ಅನುಗ್ರಹಿಸಿದಳು. ನೀನು ಕಣ್ಣುಬಟ್ಟು ಕೂಡಲೆ ಕುಸುಮಬಾಣವನ್ನು ತೆಗೆದಿಟ್ಟು ಬಂದ ಮನ್ಮಥನಂತೆ ಇರುವ ಆ ವರನನ್ನು ಕಂಡೆಯಲ್ಲವೇ ? ಆತನೇ ಈ ತಾಪಕ್ಕೆ ಕಾರಣನೆಂದೂಹಿಸುವೆನು. ಇಲ್ಲದಿದ್ದರೆ ಸ್ವಭಾವದಿಂದ ಶೀತಲ ವಾಗಿರುವ ಈ ಶಿಲಾತವು ನಿನ್ನ ಸಂತಾಪವನ್ನು ಹೋಗಲಾಡಿಸದೇ ಇರುವುದೆಂದರೇನು ?

ಒಟ್ಟಿನಲ್ಲಿ ನಂ. ಅನಂತನಾರಾಯಣಶಾಸ್ತ್ರಿಗಳ ಅನುವಾದ ಸಂಸ್ಕೃತ ಭೂಯಿಷ್ಠವಾದ ಕನ್ನಡ ಪದಗಳನ್ನು ಓದುತ್ತಿರುವಂತೆ ಭಾಸವಾಗುವುದಿಲ್ಲ. ಕನ್ನಡ ಭಾಷೆಯಲ್ಲಿಯೇ ಈ ಕೃತಿಯನ್ನು ಓದುತ್ತಿರುವಂತೆ ಅನಿಸುತ್ತದೆ. ಈ ಬಗೆಯಲ್ಲಿ ಇದೊಂದು ಸಮರ್ಥ ಕನ್ನಡಾನುವಾದ ಎಂಬುದು ವಿದಿತವಾಗುತ್ತದೆ.

ಮೂಲದಲ್ಲಿ ಭರತವಾಕ್ಯವಿಲ್ಲ. ಆದರೆ ಅನುವಾದದಲ್ಲಿ ಇದೆ.

ನೀಡುಗೆ ವೃಷ್ಟಿಯಂ ಸಮಯಮೊಳ್ ಮುಗಿರಾಡುಗೆ ಸೊಗೆಯಾವಗಂ
ಬಾಡದ ಸಸ್ಯವೆಂಬ ಪಸುರೇರ್ದುಡೆಯೊಂದುಗೆ ಧಾತ್ರಿ ಮಚ್ಚರಾ
ಮೂಡದೆ ಪುಣ್ಯಮಂ ಪಡೆದೆಡರ್ಗಡೆಯಾಗದೆ ಬಂಧು-ಮಿತ್ರರಿಂ
ಕೂಡಿ ವಿನೋದದಿರಂ ಬೆರೆತು ಬೀಗುಗೆ ಕೆಮ್ಮನೆ ಸರ್ವಲೋಕಮುಂ.

ಪಂಚಮಾಂಕದ ಕೊನೆಯಲ್ಲಿ ಕವಿಗಳು ತಮ್ಮ ವಿವರವನ್ನು ಹೇಳಿಕೊಂಡಿರುವುದು ಪೀಠಿಕೆಯಂತೆ ಅವರು ಅನುವದಿಸುವ ಉದ್ದೇಶ್ಯವನ್ನು ಸೂಚ್ಯವಾಗಿ ತಿಳಿಸಿದೆ.

ದುರುಳನಿಕ್ಕಿ ಸತ್ಪುರುಷರಂ ಪರಿಪಾಲಿಸಿ ವಿದ್ಯ ಕೀರ್ತಿಯಂ
ಪರಪಿ ದಿಗಂತದೊಳ್ ಭಳಿರೆ ಈತನ ಪಾಸಡಿವರ್ಪರಾರೊ ಎಂ
ದೊರೆವವೊಲೆಲ್ಲರಂ ತಣಿಸಿ ಭೂವನಿತಾಮಣಿ ತನ್ನತೋಳ್ಗೆ ಸಾ
ರ್ತರೆ ಮಹಿಷಾಸುರಾಖ್ಯ ಪುರದೊಳ್ ಮೆರೆವಂ ವರಚಾಮಭೂಮಿಪಂ.

ಆರಸನ ಸಂಮುಖದೊಳ್ ಗರ
ಪುರ ಸುಬ್ರಹ್ಮಣ್ಯಶಾಸ್ತ್ರಿ ನಾಮ ರವೀಂದ್ರಂ
ಮೆರೆದಿರ್ಪನು ಭಯ ಭಾಷಾ
ಪರಿಣತಿ ಸಮಧಿಗತ ಸರಸಕವಿತಾ ರಾಜ್ಯಂ.

ಜನಿಸಿ ತದೀಯೋದರದೊಳ
ಗನಂತನಾರಾಯಣಾಖ್ಯನೊರ್ವಂ ವಿದ್ವ
ಜ್ಜನತಾ ಸಂಗತೆ ಕವಿತಾಂ
ಗನೆಗಯ್ವಿಡಿದನನೆ ಕೇವಲಮೆ ಬುಧಸಂಗಂ.

ಖ್ಯಾತ ಶ್ರೀಮತ್ಸಜ್ಜಯ
ತಾತಾರ್ಯ ಪದಾಬ್ಜ ಪರ್ಯುಪಾಸನದಿಂದಂ
ಮಾತೇಂ ತೆಗೆ ಸಾಹಿತ್ಯದ
ರೀತಿಯನರಿದಂ ಸಮಂತು ನಿಜಶೈಶದೊಳ್.

ನಾಗಾನಂದಂ ಕೃತಿಮು
ನ್ನಾಗಿರೆ ಸಕ್ಕದದೆ ಬಲಮಣೀ ನಿಧಿಯುಗಸಂ
ಖ್ಯಾಗಣ್ಯ ಮಾನಕುಲವ
ರ್ಷಾಗಮನ ದೊಳೀತನದನೆ ಕನ್ನಡಿಸಿರ್ಪಂ.

ಗುಣಿಗಳಿದರಲ್ಲಿ ದೋಷಮಂ
ನೆಣಿಸದೆ ಗುಣಮಂ ಪರಿಗ್ರಹಿಸಿ ಬೀಗುಗೆ ಬಂ
ಡುಣಿಗರಿವೂವಿನ ಮುಳ್ಳಂ
ಗಣಿಸದೆ ಸವಿ ಬಂಡನುಂಡು ತಣಿವಂತಿರೆವೋಲ್

ಚಳವೆಟ್ಟಣುಗಿಯ ನಳಿತೋಳ್
ಪೊಳೆವುದೊ ಸೆಳೆಮಿಂಚಿನಂಡೆವೋಲಾವುದರೊಳ್
ಎಳೆದೇರನ ಕರಿಗೂರಲದು
ಸಲುಪುಗೆ ಕಾಲಾಂಬುದೋಪಮಂ ಬಿಡದೆಮ್ಮಂ.

## ೯) ಕರ್ಣಭಾರ, ದೂತವಾಕ್ಯ :

ಮೂಲಭೂತ ನಾಟಕ ಚಕ್ರದ ೧೩ ನಾಟಕಗಳಲ್ಲಿ ಕರ್ಣಭಾರ, ದೂತ ವಾಕ್ಯವು ಸೇರಿಕೊಂಡಿವೆ. ಈ ನಾಟಕಗಳ ಮೂಲ ಕಥಾವಸ್ತು ರಾಮಾಯಣ ಇಲ್ಲವೇ ಮಹಾಭಾರತ ವಸ್ತು ವಿಷಯಗಳನ್ನೊಳಗೊಂಡಿವೆ. ಹಾಗಾಗಿ ಈ ನಾಟಕಗಳ ಪಾತಳಿ ಒಂದೇ ಆಗಿದ್ದು ವಸ್ತು-ಸ್ವಲ್ಪ ಭಿನ್ನ ಭಿನ್ನ ಸಂದರ್ಭಗಳನ್ನಾಧರಿಸಿದೆ. ಪಾನ್ಯಂ ಸುಂದರಶಾಸ್ತ್ರಿಗಳು ಈ ನಾಟಕವನ್ನು ಅನುವಾದಿಸಿದ್ದಾರೆ.

ಭಾಸಕವಿಯ ಏಕಾಂತನಾಟಕಗಳಾದ ಕರ್ಣಭಾರ ಮತ್ತು ದೂತವಾಕ್ಯ ಎಂಬೆರಡು ನಾಟಕಗಳನ್ನು ಪಾನ್ಯಂಸುಂದರಶಾಸ್ತ್ರಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಮೂಲತಃ ಮಧ್ಯಮ ವ್ಯಾಯೋಗ (ಅರಣ್ಯ ಪರ್ವದ ವೃತ್ತಾಂತ) , ದೂತವಾಕ್ಯ (ಉದ್ಯೋಗ ಪರ್ವದ) 'ದೂತ ಘಟೋತ್ಕಚ ' (ದ್ರೋಣಾಚಾರ್ಯ), 'ಕರ್ಣಭಾರ' (ಕರ್ಣವರ್ಷ) ಮತ್ತು 'ಊರುಭಂಗ' (ಗದಾಯುದ್ಧ) ಈ ಎಲ್ಲ ಏಕಾಂಕ ನಾಟಕಗಳು ಮೂಲತಃ ಒಂದೇ ನಾಟಕದ ಐದು ಭಾಗಗಳಾಗಿರಬಹುದು ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಕರ್ಣಭಾರ :-

ನಾಟಕದ ಪ್ರಾರಂಭವು ದುರ್ಯೋಧನನ ಅನುಚರನು ಕರ್ಣನಿಗೆ ರಣರಂಗಕ್ಕೆ ಧುಮಿಕಲು ದರ್ಯೋಧನನು ಸೂಚಿಸಿದ ವಾರ್ತೆಯಿಂದ ಪ್ರಾರಂಭವಾಗುವುದು. ಎಲ್ಲ ಸಿದ್ಧತೆಗಳಿಂದ ಕೂಡಿದವನಾಗಿ ಕರ್ಣನು ಶಲ್ಯನೊಡನೆ ರಣರಂಗಕ್ಕೆ ತೆರಳಲು ಸಿದ್ಧನಾಗುವನು. ಕರ್ಣ ಪ್ರಾರಂಭದಲ್ಲಿಯೇ ಅಧೈರ್ಯವನ್ನು ಅನುಭವಿಸುತಿದ್ದಾನೆ ಆ ಅಧೈರ್ಯವು ಪರಾಕ್ರಮದ ಕೊರತೆಯಿಂದ ಇಲ್ಲದೇ ಮಾನಸಿಕ ಸಂಕಷ್ಟದ ಪ್ರತೀಕವಾಗಿದೆ. ಈಗಾಗಲೇ ಕರ್ಣನಿಗೆ ತಾನು ಕುಂತಿದೇವಿಯ ಮಗನೆಂದು ತಿಳಿದಿದೆ. ಯುಧಿಷ್ಠಿರ ಮುಂತಾದ ಪಾಂಡವರು ತನ್ನ ತಮ್ಮಂದಿರು ಎನ್ನುವ ಭಾವ / ಮಮಕಾರ ಕರ್ಣನನ್ನು ಕಾಡುತ್ತದೆ. ಕರ್ಣಕುಂತಿಗೆ ತೊಟ್ಟ ಬಾಣವನ್ನು ಮತ್ತೆ ತೊಡುವುದಿಲ್ಲ ಮತ್ತು ಅರ್ಜುನನ್ನುಳಿದು ಇತರ ನಾಲ್ಕು ಸಹೋದರರನ್ನು ಸಂಹರಿಸುವುದಿಲ್ಲ ಎಂದು ಮಾತು ಕೊಟ್ಟಿದ್ದಾನೆ. ಯುದ್ಧದ ಸಮಯದಲ್ಲಿ ಕಾಲವೊದಗಿದಾಗ ನಿನ್ನ ಅಸ್ತ್ರಗಳು ಬಲಗುಂದಿ ನಿನಗೆ ಫಲಿಸದಿರಲಿ ಎಂಬ ಪರಶುರಾಮನ ಶಾಪ ಬೇರೆ ಕರ್ಣನಿಗೆ ಇದೆ. ಶಲ್ಯ ಮತ್ತು ಕರ್ಣರ ಸಂವಾದವು ಕರ್ಣನ ಯುದ್ಧ ಪೂರ್ವದ ಮನೋಸ್ಥಿತಿಯ ದ್ಯೋತಕವಾಗಿದೆ. ಕರ್ಣ ಶಾಪ ಪ್ರಸಂಗವನ್ನು ವರ್ಣಿಸುತ್ತಾನೆ. ಪರಶುರಾಮನೆಡೆಗೆ ಕರ್ಣ ವಿದ್ಯೆಗಾಗಿ ಹೋದಾಗ, ಕ್ಷತ್ರಿಯ ಕುಲ ವಿರೋಧಿಯಾದ ಪರಶುರಾಮ ವಿದ್ಯೆಯನ್ನು ಬ್ರಾಹ್ಮಣರಿಗೆ ಮಾತ್ರ ಹೇಳಿಕೊಡುವೆನು ಎಂದು ಹೇಳುತ್ತಾನೆ. ಕರ್ಣ ತಾನು ಬ್ರಾಹ್ಮಣನೆಂದು ಸುಳ್ಳು ಹೇಳುತ್ತಾನೆ. ಒಂದು ಸಲ ಪರಶುರಾಮನು ಕರ್ಣನ ತೊಡೆಯ ಮೇಲೆ ಮಲಗಿದಾಗ ವಜ್ರಮುಖವೆಂಬ ಹುಳುವು ಅವನ ತೊಡೆಯನ್ನು ಬಲವಾಗಿ ಕಚ್ಚತೊಡಗುತ್ತದೆ. ಗುರುವಿಗೆ ನಿದ್ರಾಭಂಗವಾದೀತೆಂದು ಕರ್ಣ ಅದನ್ನು ಸಹಿಸುತ್ತಾನೆ. ರಕ್ತ ಪ್ರವಾಹವು ಹರಿಯುತ್ತದೆ. ಬಿಸಿ ರಕ್ತದ ಸ್ಪರ್ಶವಾದೊಡನೆ ಗುರುಗಳಿಗೆ ಎಚ್ಚರವಾಗುತ್ತದೆ. ಬ್ರಾಹ್ಮಣರಿಗೆ ಇಷ್ಟು ನೋವನ್ನು

ಸಹಿಸುವ ಶಕ್ತಿಯಿರುವುದಿಲ್ಲ. ನೀನು ಕ್ಷತ್ರಿಯನಿರುವೆ. ನೀನು ಸುಳ್ಳು ಹೇಳಿದ್ದರಿಂದ ನಿನಗೆ ಕಾಲವೊದಗಿದಾಗ ನಿನ್ನ ಅಸ್ತ್ರಗಳು ಬಲಗುಂದಿ ನಿನಗೆ ಫಲಿಸದಿರಲಿ ಎಂದು ಶಾಪ ಕೊಡುತ್ತಾನೆ. ಅಷ್ಟರಲ್ಲಿ ಕರ್ಣನೆಡೆಗೆ ಒಬ್ಬ ಬ್ರಾಹ್ಮಣನು ಬರುತ್ತಾನೆ. ಮತ್ತು ವಿಶಿಷ್ಟವಾದ ದಾನವನ್ನು ಬೇಡುತ್ತಾನೆ. ಕರ್ಣ ಗೋವುಗಳು, ಆಭರಣಗಳು, ಕುದುರೆಗಳು, ಭೂಮಿ ಮುಂತಾದ ದಾನವನ್ನು ಕೊಡಲ್ಮಾಡಿದರು. ಅವು ಯಾವುದನ್ನೂ ಸ್ವೀಕರಿಸಲು ಬ್ರಾಹ್ಮಣ ಒಪ್ಪುವುದಿಲ್ಲ. ಕೊನೆಗೆ ಕರ್ಣನು ತನ್ನ ಜನ್ಮದಾರಭ್ಯ ಬಂದಂಥ ಕವಚ ಕುಂಡಲಗಳನ್ನು ಕೊಡುತ್ತಾನೆ. ಮದ್ರ ನರೇಶ ಶಲ್ಯ ತಡೆಯಲು ನೋಡುತ್ತಾನೆ. ಶಲ್ಯನಿಂದ ಬ್ರಾಹ್ಮಣನು ದೇವೇಂದ್ರನೆಂದು ತಿಳಿದಾಗ ಸಂಕಟ ಪಡದೆ ಇಂಥ ಶ್ರೇಷ್ಠ ಯಾಚಕ ಸಿಕ್ಕಿದ್ದಕ್ಕೆ ಸಂತಸಪಡುತ್ತಾನೆ. ಇಂದ್ರ ಪ್ರತಿರೂಪವಾಗಿ ಒಂದು ಅಮೋಘವಾದ ಶಕ್ತ್ಯ ಯುದ್ಧವನ್ನು ಕಳುಹಿಸಿಕೊಡುತ್ತಾನೆ. ಮೊದಲು ಒಪ್ಪದಿದ್ದರೂ ಕರ್ಣ ಬ್ರಾಹ್ಮಣನ ಮಾತು ಮೀರ ಲಾರದೇ ತೆಗೆದುಕೊಳ್ಳುತ್ತಾನೆ. ಅರ್ಜುನನ ಕಡೆಗೆ ರಥವನ್ನು ತೆಗೆದುಕೊಂಡು ಹೋಗುವುದರ ಮುಖಾಂತರ ನಾಟಕವು ಮುಗಿಯುತ್ತದೆ.

ನಾಟಕದ ಹೆಸರು ಕರ್ಣನ ಮನಃಸ್ಥಿತಿಗೆ ಮತ್ತು ಅವನ ಭಾಗ್ಯಕ್ಕೆ ವ್ಯಾಖ್ಯಾನದಂತಿದೆ. ಕರ್ಣ ತನ್ನ ಪಾಂಡವರು ಅನುಜರೆಂಬ ಮಮಕಾರದಿಂದಲೂ, ಕುಂತಿಗೆ ಕೊಟ್ಟ ಆತ್ಮಘಾತಕ ವಚನದಿಂದಲೂ, ಪರಶುರಾಮನ ಶಾಪ ನುಡಿಯಿಂದಲೂ ಮತ್ತು ಕೊನೆಗೆ ಇಂದ್ರನಿಂದ ಕವಚ ಕುಂಡಲಗಳನ್ನು ಕಳೆದು ಕೊಂಡದರಿಂದಲೂ ಹೆಚ್ಚು ನಿಸ್ಸಾಹಯಕನಾಗಿದ್ದಾನೆ. ಕರ್ಣ ತನ್ನ ತಟ್ಟಿನ ಭಾರಕ್ಕೆ ತಾನೇ ಕುಸಿದಿದ್ದಾನೆ. ಆದ್ದರಿಂದ ಪರಾಕ್ರವಿದ್ದು ಅನುಪಯುಕ್ತನಾಗಿದ್ದೆನೆಂಬ ಭಾವದ ಭಾರಕ್ಕೆ ಈಡಾಗಿದ್ದಾನೆ. ಹಿಂದೆ ಆದ ಘಟನೆಗಳೆಲ್ಲವು ಸಂವಾದ ರೂಪದಲ್ಲಿಯೇ ಬಂದಿದೆ. ಅನುವಾದದ ಶೈಲಿ ಸುಲಲಿತವಾಗಿದೆ.

ಈ ಅನುವಾದ ಕೃತಿ ಭಾಸನ ಒಂದು ಏಕಾಂತ ನಾಟಕ. ನಂತರ ಬಂದ ಅನುವಾದವಾದ್ದರಿಂದ ಅದೊಂದು ಸಾಹಿತ್ಯ ಕೃತಿಯಾಗಿ ಅನುವಾದವಾಗಿದೆ ಎನ್ನುವುದು ಸುಲಭ. ಪಠ್ಯ ಪುಸ್ತಕವಾಗಿ ಪ್ರಕಟಿಸಲು ಅನುವಾದಿಸಲಾಗಿದೆ ಎನ್ನಬಹುದು. ಸಂಸ್ಕೃತ ಶ್ಲೋಕಗಳನ್ನು ಕಥಾ ರೂಪದಲ್ಲಿ ತಿಳಿ ಹೇಳಲು ಅನುಕೂಲವಾಗುವಂತೆ ಗದ್ಯಾನುವಾದ ಮಾಡಲಾಗಿದೆ.

ಉದಾ : ಕಂತುರಗರಥಸ್ಥೈಃ ಪಾರ್ಥಕೇತೋಃ ಪುರಸ್ತಾತ್
ಮುದಿತನೃಪತಿಸಿಂಹೈಃ ಸಿಂಹನಾದಃ ಕೃತೋಽದ್ಯ ।
ತ್ವರಿತಮರಿನಿನಾದೈಃ ದುಸ್ಸಹಾಲೋಕ ವೀರಃ
ಸಮರ ಮಧಿಗ ತಾರ್ಥಃ ಪ್ರಸ್ಥಿತೋ ನಾಗಕೇತುಃ ॥

ಈಗ ಸಕಲನರ ಪಾಲಕರೂ ಉತ್ಸಾಹಗೊಂಡು ರಣರಂಗದಲ್ಲಿ ತಮ್ಮ ತಮ್ಮ ಪರಾಕ್ರಮವನ್ನು ತೋರಲೆಳಿಸಿ, ಕರಿ, ತುರಗ ರಥಗಳನ್ನು ಏರಿ ಅರ್ಜುನನನ್ನು ಇದಿರಿಸಿ ಭಯಂಕರವಾದ ರೀತಿಯಿಂದ ಸಿಂಹನಾದ ಗೈಯುವುದನ್ನು ಕೇಳಿದ ದುರ್ಯೋಧನ ಮಹಾರಾಜನು, ಆ ಅಟ್ಟಹಾಸವನ್ನು ಸಹಿಸಲಾರದೆ

ಆಗ್ರಹದಿಂದ ರಣಮುಖವನ್ನು ಕುರಿತು ತೆರಳಿರುವನು. ಅನುವಾದವು ಮೂಲಪಠ್ಯಕ್ಕೆ ತೀರ ನಿಕಟವಾಗಿದೆ.

ಉದಾ: ವಿದ್ಯುಲ್ಲತಾಕಪಿಲತುಂಗ ಜಡಾಕಲಾಪ -
ಮುದ್ಯತ್ಪ್ರಭಾವಲಯಿನಂ ಪರಶುಂದಧಾನಮ್ ।
ಕ್ಷತ್ರಾಂತಕಂ ಮುನಿವರಂ ಭೃಗು ವಂಶಕೇತುಂ
ಗತ್ವಾ ಪ್ರಣಮ್ಯ ನಿಕಟೆ ನಿಭೃತಃ ಸ್ಥಿತೋಽಸ್ಮಿ ॥

ಅನು: ಮಿಂಚಿನಂತೆ ಹೊಂಬಣ್ಣವಾಗಿ ಕಾಲಿನವರೆಗೆ ಜೋಲಾಡುವ ಜಡೆಗಳನ್ನು ಧರಿಸಿ, ತೇಜಃ ಪ್ರಸಾರದಿಂದ ಪರರು ಕಣ್ಣುಮುಚ್ಚುವಂತಹ ವಿದ್ಯ ಪ್ರಭಾವದಿಂದೊಡಗೂಡಿ, ಝುಳ ಝುಳಿಸುವ ಕೊಡಲಿಯನ್ನು ಕೈಯಲ್ಲಿ ಹಿಡಿದು, ಭೃಗು ಮಹಾಮುನಿಯ ವಂಶಕ್ಕೆ ಉತ್ತಮವಾದ ಧ್ವಜದಂತೆ ಕಂಗೊಳಿಸುತ್ತಾ, ಕ್ಷತ್ರಿಯಾಂತಕನೆನಿಸಿದ, ಮುನಿವರೇಣ್ಯನಾದ ಜಮದಗ್ನಿ ಪುತ್ರನನ್ನು ಕಂಡು ಸಾಷ್ಟಂಗವೆರಗಿ ವಿನಯದಿಂದ ತಲೆಬಾಗಿ ಸಮೀಪದಲ್ಲಿ ನಿಂತುಕೊಂಡೆನು.

(೨) ಕೃತ್ತೇ ವಜ್ರ ಮುಖೇನ ನಾಮ ಕೃಮಿಣಾ ದೈವಾನ್ಮಮೋರುದ್ವಯೇ
ನಿದ್ರಾಚ್ಛೇದ ಭಯಾದಸಹ್ಯತ ಗುರೋರ್ಧೈರ್ಯಾತ್ತದಾ ವೇದನಾ ।
ಉತ್ಥಾಯ ಕ್ಷತ ಚಾಪ್ಲುತಃ ಸ ಸಹಸಾ ರೋಷಾನಲೋದ್ದೀಪತೋ
ಬುದ್ಧ್ವಾಮಾಂಚ ಶಶಾಪ ಕಾಲವಿಫಲಾನ್ಯ ಸ್ತ್ರಾಣಿ ತೇ ಸಂತ್ವಿತಿ ॥

ಅನು: ನನ್ನ ದುರದೃಷ್ಟಕ್ಕೆ ತಕ್ಕಂತೆ ವಜ್ರಮುಖವೆಂಬ ಹುಳುವು ನನ್ನ ಎರಡು ತೊಡೆಗಳಿಂದ ಸುರಿದ ರಕ್ತವು ಆತನ ಮೈಗೆ ಸೋಕಿದೊಡನೆಯೇ ಆತನು ಜಗ್ಗನೇ ಎಚ್ಚತ್ತು ರೋಷದಿಂದ ಕಣ್ಣುಗಳನ್ನು ಕೆಂಪಡರಿಸಿ ನಡೆದ ಸಮಾಚಾರವನ್ನೆಲ್ಲಾ ಕೇಳಿ, ಛೀ ಮೂಢನೆ! ನಿನ್ನ ಅಸ್ತ್ರ ವಿದ್ಯಾಭ್ಯಾಸವೆಲ್ಲ ವ್ಯರ್ಥವಾಯಿತು. ಕಾಲವೊದಗಿದಾಗ ನಿನ್ನ ಅಸ್ತ್ರಗಳು ಬಲಗುಂದಿ ನಿನಗೆ ಫಲಿಸದಿರಲಿ ಎಂದು ಶಾಪಕೊಟ್ಟನು.

ಎಷ್ಟೇ ನಿಕಟವಾಗಿದೆ ಎಂದರೂ ಕೂಡ ಕೆಲ ಸಂದರ್ಭ ಆಡು ಮಾತಿನ ಜಾಡನ್ನು ಸಾಂದರ್ಭಿಕ ಒತ್ತಾಸೆಯ ಮೂಲಕ ಅನುವಾದಕ ನೋಡಲು ಪ್ರಯತ್ನಿಸಿದ್ದಾನೆ.

ಉದಾ: ಅಕ್ಷಯೋಽಸ್ತು ಗೋಬ್ರಾಹ್ಮಣಾನಾಮ್ । ಅಕ್ಷಯೋಽಸ್ತು ಪತಿವ್ರತಾನಾಮ್ ।
ಅಕ್ಷಯೋಽಸ್ತು ರಣೇಶ್ವಪರಾನ್ಮುಖಾನಾಮ್ ಯೋಧ ಪುರುಷಾಣಾಮ್ ।
ಅಕ್ಷಯೋಽಸ್ತು ಮಮ ಪ್ರಾಪ್ತ ಕಾಲಸ್ಯ । ವಿಷಭೋಃ ಪ್ರಸನ್ನೋಽಸ್ಮಿ ।

ಅನು : ಗೋವುಗಳಿಗೂ ಬ್ರಾಹ್ಮಣರಿಗೂ ಅಕ್ಷಯವಾದ ಸುಖವು ಶಾಶ್ವತವಾಗಿರಲಿ! ಪತಿವ್ರತೆಯರಿಗೆ ಶಾಶ್ವತವಾದ ಮಂಗಳವು ಅನುದಿನವೂ ವೃದ್ಧಿ ಹೊಂದಲಿ ವೀರಾಗ್ರೇಸರಿಗೆ ನಿತ್ಯ ಸಂತೋಷವು ದೊರೆಯಲಿ! ಈಗ ಒದಗಿರುವ ಸಮಯವು ಸುಖಕರವಾಗಿ ಪರಿಣಮಿಸಲಿ! ನನ್ನ ಮನವೂ ಪ್ರಸನ್ನವಾಗಿರುವುದು.

ಸಂಸ್ಕೃತದ ಶ್ಲೋಕಗಳು ತೀರ ಸರಳ ಭಾಷೆಯಲ್ಲಿ ಅಳವಡಿಸಲ್ಪಟ್ಟಿವೆ ಎನ್ನಬಹುದು. ಸಂಸ್ಕೃತ ಶ್ಲೋಕಾನುವಾದ ಎಂಬ ಇದು ಓದುಗರಿಗೆ ಅರ್ಥವಾಗದೇ ಕನ್ನಡದಲ್ಲಿಯೇ ರಚಿತವಾದ ಕೃತಿಯೊಂದನ್ನು ಓದುತ್ತಿರುವೆ ಎಂದು ಭಾಸವಾಗುತ್ತದೆ.

ಉದಾ : ಯಾತಃ ಕೃತಾರ್ಥಗಣನಾಮಹ ಮಧ್ಯ ಲೋಕೇ
ರಾಜೇಂದ್ರಮೌಲಿಮಣಿ ರಂಜಿತ ಪಾದಪದ್ಮಃ।
ಪಿಪೇಂದ್ರ ಪಾದರಜಸಾ ತು ಪವಿತ್ರ ಮೌಲಿ
ಕರ್ಣೋ ಭವಂತ ಮಹಮೇಷ ನಮಸ್ಕಾರೋಮಿ ॥

ಅನು : ಭೂಸುರೇಂದ್ರನೆ! ಇಂದಿಗೆ ನಾನು ಕೃತಾರ್ಥರಲ್ಲಿ ಗಣನೆಗೆ ಸೇರಿದೆನು. ನಾನು ಈಗ ಧನ್ಯವಾದೆನು. ನನ್ನ ಜನ್ಮವು ಇಂದಿಗೆ ಸಫಲಗೊಂಡುದು. ಅನೇಕ ಮಂದಿ ಭೂಸುರೋತ್ತಮರ ಪಾದಧೂಳಿಯಿಂದ ಪವಿತ್ರವೆನಿಸಿದ ಉತ್ತಮಾಂಗವುಳ್ಳ ರಾಜಾಧಿರಾಜರ ಮಕುಟ ರತ್ನಗಳ ಸಾಲು ದೀವಿಗೆಗಳಿಂದ ನೀರಾಜಿತವಾದ ಪಾದಪದ್ಮಗಳಿಂದೊಪ್ಪುವ ಕರ್ಣನೆಂದು ಲೋಕದಲ್ಲಿ ಪ್ರಖ್ಯಾತಿಗೊಂಡ ನಾನು ನಮ್ಮ ಅಡಿದಾವರೆಗಳಿಗೆ ಭಕ್ತಿಪೂರ್ವಕವಾಗಿ ಎರಗುವೆನು.

ಸಂಸ್ಕೃತ ಶ್ಲೋಕಗಳನ್ನು ಸರಳ, ಸುಂದರ ಶೈಲಿಯಲ್ಲಿ ಅನುವಾದಿಸಿರುವ ರೀತಿಯಲ್ಲಿಯೂ, ಕೆಲವು ದೋಷಗಳಿವೆ. ಪದಕ್ಕೆ ಪದ ಸೇರುವಂತಹ, ಆದರೆ ಸಂಸ್ಕೃತ ಭೂಯಿಷ್ಠವೆನಿಸದೇ ಕನ್ನಡ ಕಾವ್ಯದಂತೆಯೇ ಓದಲ್ಪಡುವ ಅನುವಾದ ಇರುವುದಿಲ್ಲ. ಬದಲಾಗಿ ಒಟ್ಟು ಭಾವಾರ್ಥವನ್ನು ಆರೋಪಿಸುವಿಕೆ ಆ ಪದ್ಯಗಳಲ್ಲಿ ಕಂಡುಬರುತ್ತದೆ.

ಉದಾ : ಸಮರಮುಖಮಸಹ್ಯಂ ಪಾಂಡವಾನಾಂ ಪ್ರವಿಶ್ಯ
ಪ್ರಥಿತಗುಣಗಣಾಢ್ಯಂ ಧರ್ಮರಾಜಂ ಚ ಬದ್ಧ್ವಾ।
ಬಿಂದುಶರವರವೇಗೈರರ್ಜುನಂ ಪಾತಯಿತ್ವಾ
ವನಮಿರುವ ಹೆತಸಿಂಹಂ ಸುಪ್ರವೇಶಂ ಕರೋಮಿ ॥

ಅನು : ಭೇಧಿಸಲು ಅಶಕ್ಯವೆನಿಸಿರುವ ಪಾಂಡವ ಸೇನೆಯ ಚೂಣಿಯನ್ನು ಮುರಿದು ಸಕಲ ಸುಗುಣಗಳಿಗೂ ಆಶ್ರಯಭೂತನೆಂಬುದಾಗಿ ಹೆಸರುಗೊಂಡ ಯುಧಿಷ್ಠಿರನನ್ನು ಗೌರವಿಸಿ ನನ್ನ ಬಾಣವೇಗದಿಂದ ಒಂದೇ ಬಾರಿ ಅರ್ಜುನನ್ನು ಉರುಳಿಸಿ ಸಿಂಹವನ್ನು ಕೊಂದ ಬಳಿಕ ನಿರ್ಭಯವಾಗಿ ಹುಗುವುದಕ್ಕೆ ದಾರಿಕೊಟ್ಟ ದನದಂತೆ ಪಾಂಡವರ ಸೇನೆಯನ್ನು ನಿರುಪಾಧಿಕವಾಗಿ ಹುಗುವಂತೆ ಮಾಡುವೆನು.

ಕೆಲವು ಕಡೆಗಳಲ್ಲಿ ಮೂಲ ಪಠ್ಯಕ್ಕೆ ಬದ್ಧವಾಗಿಲ್ಲದಿದ್ದರೂ ಒಟ್ಟಾದ ಅರ್ಥ ಬರುವಂತೆ ಜನಸಾಮಾನ್ಯರ ಮಾತುಗಳಂತೆ ಅನುವಾದ ಕೇಳಿ ಬರುತ್ತದೆ.

ಉದಾ : ಶಕ್ರ:- (ಆತ್ಮಗತಂ) ಕಿಂ ನು ಖಲು ಮಯಾ ವಕ್ತವ್ಯಮ್ ? ಯದಿ ದೀರ್ಘಾಯುರ್ಭವೇತಿ ವಕ್ಷ್ಯೇ ದೀರ್ಘಾಯುರ್ಭವಿಷ್ಯತಿ । ಯದಿ ನ ವಕ್ಷ್ಯೇ ಮೂಢ ಇತಿ ಮಾಂ ಪರಿಭವತಿ । ತಸ್ಮಾದುಭಯಂ ಪರಿಹೃತ್ಯ ಕಿಂ ನು ಖಲು ವಕ್ಷ್ಯಾಮಿ ? ಭವತು ದೃಷ್ಟಮ್ । (ಪ್ರಕಾಶಂ) ಭೋ ಕರ್ಣ। ಸೂರ್ಯ ಇವ, ಚಂದ್ರ ಇವ, ಹಿಮವಾನ್ ಇವ, ಸಾಗರ ಇವ ತಿಷ್ಠತು ತೇ ಯಶಃ।.

ಇಂದ್ರ: (ಆತ್ಮಗತಂ) ಆಹಾ ! ಎಂತಹ ಸಂಕಟಕ್ಕೆ ಗುರಿಯಾದೆನು ? ಈಗ ನಾನೇನೆಂದು ಇವನನ್ನು ಹರಸಲಿ ? 'ದೀರ್ಘಾಯುಷ್ಮಂತನಾಗು' ಎಂದು ಹೇಳಿದೆನಾದರೆ ನಮ್ಮ ಕಾರ್ಯವು ಕೈಗೂಡದು ಏನೊಂದನ್ನು ಹೇಳದೆ ಸುಮ್ಮನಿದ್ದರೆ ' ಇವನಾವನೋ ಒಬ್ಬ ಮಂಕನು' ಎಂದು ಜರಿಯುವನಲ್ಲಾ. ಇವೆರಡೂ ಇಲ್ಲದಂತೆ ನಾನೆಂತು ಈ ಸಂಕಟದಿಂದ ಪಾರಾಗುವೆನು? ( ಎಂದು ಯೋಚಿಸಿ) ಇರಲಿ. ಈಗ ಮನಸ್ಸಿಗೆ ಹೊಳೆಯಿತು. ಅಯ್ಯಾ, ಕರ್ಣಾ ! ಸೂರ್ಯ, ಚಂದ್ರ,ಸಮುದ್ರ, ಹಿಮಾಲಯಗಳಂತೆ ನಿನ್ನ ಕೀರ್ತಿಯು ಈ ಲೋಕದಲ್ಲಿ ಶಾಶ್ವತವಾಗಿರಲಿ ಎಂದು ಹರಸುವನು.

ಇಲ್ಲಿ ಕಿಂ ನು ಖಲು ಮಯಾ ವಕ್ತವ್ಯಮ್ ? ಎನ್ನುವುದು ನಿಜವಾಗಿಯೂ ನಾನೇನು ಹೇಳಲಿ ಎಂದಾಗುತ್ತದೆ. ಆದರೆ ಲೋಕರೂಢಿಯ ಮಾತಾಗಿ ಎಂತಹ ಸಂಕಟಕ್ಕೆ ಒಳಗಾದೆನೆಂದು ಬಣ್ಣಿಸಿದ್ದಾರೆ. ಯದಿ ದೀರ್ಘಾಯುರ್ಭವೇತಿ ವಕ್ಷ್ಯೆ ದೀರ್ಘಾಯುರ್ಭವಿಷ್ಯತಿ ಎನ್ನುವುದನ್ನು ದೀರ್ಘಾಯು ಎಂದು ಹೇಳಿದೆನಾದರೆ ದೀರ್ಘಾಯುವಾಗುತ್ತಾನೆ ಎಂದು

ಹೇಳುವ ಬದಲು ಅನುವಾದಕರು ಈಗ ನಾನೇನೆಂದು ಇವನನ್ನು ಹರಸಲಿ? 'ದೀರ್ಘಾಯುಷ್ಮಂತನಾಗು' ಎಂದು ಹೇಳಿದೆನಾದರೆ ನಮ್ಮ ಕಾರ್ಯವು ಕೈಗೂಡದು ಎಂದಿದ್ದಾರೆ. ತಸ್ಮಾದುಭಯಂ ಪರಿಹೃತ್ಯಕಿಂನು ಖಲು ವಕ್ಷ್ಯಾಮಿ? ಎಂಬುದನ್ನು ಅನುವಾದಕರು ಈ ಎರಡರಿಂದ ಪಾರಾಗಲು ಏನೆಂದು ಹೇಳಿರಿ? ಎಂಬುದರ ಬದಲಾಗಿ ಇವೆರಡೂ ಇಲ್ಲದಂತೆ ನಾನೆಂತು ಈ ಸಂಕಟದಿಂದ ಪಾರಾಗುವೆನು.

ಉದಾ: (೨) ಶಕ್ರ: ಅಶ್ವ ಇತಿ? ಮುಹೂರ್ತಕದೂರೋಹಾಮಿ। ನೇಚ್ಛಾಮಿ ಕರ್ಣ। ನೇಚ್ಛಾಮಿ। ಇಂದ್ರ ಏನು? ಕುದುರೆಗಳೇ? ಆದರೇನು? ಒಂದು ಕ್ಷಣ ಕಾಲದಲ್ಲಿಯೇ ಸಂಚರಿಸಬಹುದು. ಇದೊಂದು ದೊಡ್ಡ ಭಿಕ್ಷೆಯೆಂದು ನಾನು ತಿಳಿದಿಲ್ಲ. ಅಯ್ಯಾ! ನನಗೆ ಆದರಲ್ಲಿ ಇಚ್ಛೆಯಿಲ್ಲವಲ್ಲಾ! ಅದರಿಂದ ನನಗೆ ಆಗಬೇಕಾದ ಪ್ರಯೋಜನವೂ ಇಲ್ಲ.

ಇದಕ್ಕೆ ವ್ಯತಿರಿಕ್ತವಾಗಿ ಸಂವಾದಿ ಪದಗಳಿಂದ ಅನುವಾದ ಪದ್ಯಗಳಿವೆ.

(೨) ಕರ್ಣ: (ಆತ್ಮಗತಂ) ಏಷ್ಯ ಏವಾಸ್ಯ ಕಾಮಃ ಕಿಂ ನು ಖಲು ಅನೇಕಪಟಬುದ್ದೇಃ ಕೃಷ್ಣಸ್ಯೋಪಾಯಃ ಸೊಪಿ ಭವತು। ಧಿಕ್ ಅಯುಕ್ತಮೆನುಶೋಚಿತುಮ್। ನಾಸ್ತಿ ಸಂಶಯಂ।(ಪ್ರಕಾಶಂ) ಗೃಹ್ಯತಾಮ್।

ಕರ್ಣ (ಆತ್ಮಗತಂ) ಅಹಾ! ಇದೇ ಇತನ ಕೋರಿಕೆಯು? ಇದೊಂದು ವೇಳೆ, ಮೋಸಗಾರನಾದ ಆ ಕೃಷ್ಣನ ತಂತ್ರವಾಗಿರಬಹುದಲ್ಲವೇ?, ಹುಂ ಏನಾದರೂ ಆಗಲಿ! ಅವನೇ ಈ ರೀತಿ ವೇಷವನ್ನು ಮಾರ್ಪಡಿಸಿಕೊಂಡು ಬಂದಿರಕೂಡದೇಕೆ? ಚಿಃ...ಚಿಃ। ಈ ವಿಷಯದಲ್ಲಿ ಪಶ್ಚಾತ್ತಾಪಪಟ್ಟು ಫಲವಿಲ್ಲ. ಅದು ಯುಕ್ತವೂ ಅಲ್ಲ. ಸಂದೇಹವೇಕೆ? ಯಾರಾದರೇನು? (ಪ್ರಕಾಶಂ) ಮಹಾತ್ಮನೇ! ಈ ವಿಷಯದಲ್ಲಿ ಪಶ್ಚಾತ್ತಾಪಪಟ್ಟು ಫಲವಿಲ್ಲ. ಆದು ಯುಕ್ತವೂ ಅಲ್ಲ. ಸಂದೇಹವೇಕೆ? ಯಾರಾದರೇನು? (ಪ್ರಕಾಶಂ) ಮಹಾತ್ಮನೇ। ಇದನ್ನು ಸ್ವೀಕರಿಸಿ ಸಂತಸಗೊಳ್ಳುವೆಯೆಂದು ತಿಳಿಯುವೆನು ದಯವಿಟ್ಟು ಪರಿಗ್ರಹಿಸಿ ಅನುಗ್ರಹಿಸಿ.

**ದೂತವಾಕ್ಯಮ್ :**

ಕರ್ಣಭಾರ ಏಕಾಂಕದಂತೆಯೇ, ದೂತ ವಾಕ್ಯಮ್ ಕೂಡಾ ಏಕಾಂಕ ನಾಟಕವೆನಿಸಿದೆ. ಇದು ಕೂಡ ಮಹಾಭಾರತದ ಕಥೆಯನ್ನು ಆಕರವಾಗಿಸಿ ರಚಿತವಾದ ಗ್ರಂಥ ಭಾಸ ನಾಟಕ ಚಕ್ರವು ಅರ್ಥಾತ್ ಭಾಸನ ೧೩ ನಾಟಕಗಳು ರಾಮಾಯಣ, ಮಹಾಭಾರತ ಕಥೆಯಾಧಾರಿತವಾದವುಗಳು. ದೂತ ವಾಕ್ಯವು ಮಹಾಭಾರತ ಕಥಾವಸ್ತು ಆಧಾರಿತವಾಗಿದೆ.

ಕಥಾ ವಿವರ : ಪ್ರಾರಂಭದಲ್ಲಿ ದುರ್ಯೋಧನನು ಯುದ್ಧವನ್ನು ಕುರಿತಾಗಿ ಮಂತ್ರ ಸಮಾಲೋಚನೆಯನ್ನು ನಡೆಸುತ್ತಿರುತ್ತಾನೆ. ಈ ಸಮಾಲೋಚನೆಗೆ ಭೀಷ್ಮ, ದ್ರೋಣ, ಶಕುನಿ ಮೊದಲಾದವರು ಬಂದಿರುವರು. ನಂತರ ದುರ್ಯೋಧನನು ಈ ಹನ್ನೊಂದು ಅಕ್ಷೋಹಿಣಿ ಸೈನ್ಯಕ್ಕೆ ಅಧಿಪತಿಯನ್ನಾಗಿ ಯಾರನ್ನು ನಿಯಮಿಸಬೇಕೆಂದು ಪ್ರಶ್ನಿಸುವನು. ಪಿತಾಮಹರಾದ ಭೀಷ್ಮರು ಸೇನಾ ನಾಯಕರಾಗಬೇಕೆಂದು ಶಕುನಿಯು ಸೂಚಿಸುವನು. ಈ ಸಂದರ್ಭದಲ್ಲಿ ಪಾಂಡವರ ಪಾಳೆಯದಿಂದ ಶ್ರೀ ಕೃಷ್ಣನು ಬರುವನು. ಆಗ ದುರ್ಯೋಧನನು ಕೃಷ್ಣನನ್ನು ಇದಿರುಗೊಳ್ಳದಿರಲು ನಿರ್ಧರಿಸಿ ಬೇರೊಂದು ಉಪಾಯವನ್ನು ಹೂಡುವನು. ಅವನನ್ನು ಹಿಡಿದು ಬಂದಿಯಂತೆ ಹಿಂಗಟ್ಟು ಕಟ್ಟುವುದೆಂದು ನಿರ್ಧರಿಸುವನು. ಯಾರು ಈ ಸಭೆಯಲ್ಲಿ ಕೃಷ್ಣನಿಗೆ ಗೌರವವನ್ನು ಕೊಡುತ್ತಾರೋ ಅವರಿಗೆ ಹನ್ನೆರಡು ಭಾರ ತೂಕದ ಚಿನ್ನವನ್ನು ದಂಡ ದ್ರವ್ಯವಾಗಿ ವಿಧಿಸಿರುವೆನೆಂದು ಆಜ್ಞಾಪಿಸುತ್ತಾನೆ. ದ್ರೌಪದಿ ಮಾನಭಂಗದ ಚಿತ್ರಪಟವನ್ನು ನೋಡುತ್ತಾ ಕುಳಿಕತುಕೊಳ್ಳುವನು. ಚಿತ್ರಪಟ ನೋಡುತ್ತಾ ಕುಳಿತುಕೊಂಡಿದ್ದ ಪೀಠದಿಂದ ದುರ್ಯೋಧನನು ಉರುಳಿ ಬೀಳುವನು. ಆಗ ಕೃಷ್ಣನ ಪ್ರವೇಶವಾಗುವುದು. ಆಗ ಕೃಷ್ಣನು ವನವಾಸ ಮುಗಿಸಿ ಬಂದ ಪಾಂಡವರಿಗೆ ಧರ್ಮವಾಗಿ ಸಲ್ಲತಕ್ಕ ಭಾಗವನ್ನು ಕೊಡು ಎಂದು ಕೇಳುತ್ತಾನೆ. ಅದಕ್ಕೆ ದುರ್ಯೋಧನನು ಪಾಂಡವರು ನನಗೆ ದಾಯಾದಿಗಳಲ್ಲ ಎನ್ನುತ್ತಾನೆ. ಆಗ ಶ್ರೀ ಕೃಷ್ಣನು ವೃಥಾ ದೋಷಾರೋಪಣೆಯನ್ನು ಮಾಡದೇ ಅದರ ರಾಜ್ಯವನನು ಅವರಿಗೆ ಕೊಡು ಎಂದು ಕಿವಿ ಮಾತು ಹೇಳುವನು. ಆಗ ದುರ್ಯೋಧನನು ರಾಜ್ಯ ಬೇಕಾದರೆ ರಣರಂಗದಲ್ಲಿ ಕಾದು ಪಡೆಯಲಿ ಎನ್ನುತ್ತಾನೆ. ನಂತರ ಶ್ರೀಕೃಷ್ಣನು ಸಾಮೋಪಾಯದಿಂದ ಒಲಿಯದಿದ್ದ ದುರ್ಯೋಧನನ್ನು ವಾಗ್ಜಾಲದಲ್ಲಿ ಬಂಧಿಸಲು ಮುಂದಾಗುವನು. ದುರ್ಯೋಧನನು ಯಾವುದೇ ಮಾತಿಗೂ ಬಗ್ಗದೇ ಇರುವಾಗ ಶ್ರೀಕೃಷ್ಣನು ಸುಮ್ಮನಾಗುವನು. ಜೊತೆಗೆ ದುರ್ಯೋಧನನ ಮುಂದಿನ ತಂತ್ರವನ್ನು ಯೋಚಿಸುವನು. ದುರ್ಯೋಧನನು ಶ್ರೀ ಕೃಷ್ಣ ಸಂಧಾನ ವಿಫಲವಾದ ನಂತರ ಅವನನ್ನು ಬಂದಿಯಾಗಿಸಲು ಪ್ರಯತ್ನಿಸುವನು. ಆಗ ಶ್ರೀ ಕೃಷ್ಣನು ಸುದರ್ಶನನ್ನು ಕರೆಯುವನು. ಆಗ ಸುದರ್ಶನನು ಅವನನ್ನು ಸಮಾಧಾನ ಪಡಿಸುವನು. ಹೀಗೆ ಒಂದೊಂದಾಗಿ ಶ್ರೀ

ಕೃಷ್ಣನ ಆಯುಧಗಳು ಆತನನ್ನು ಸಮಾಧಾನಗೊಳಿಸುವವು ನಂತರ ಧೃತರಾಷ್ಟ್ರನು ಶ್ರೀ ಕೃಷ್ಣನನ್ನು ಸ್ತುತಿಸುವನು. ಶ್ರೀ ಕೃಷ್ಣನು ಪಾಂಡವರ ಶಿಬಿರಕ್ಕೆ ತೆರಳುವನು.

ಈ ರೀತಿಯಾದ ಕಥಾವಸ್ತುವನ್ನು ಒಳಗೊಂಡ ನಾಟಕವನ್ನು ಪಾನ್ಯಂ ಸುಂದರ ಶಾಸ್ತ್ರಿಗಳು ಅನುವಾದಿಸಿದ ಬಗೆಯನ್ನು ಇಲ್ಲಿ ಚರ್ಚಿಸಲಾಗುವುದು. ಮೂಲ ಪಠ್ಯದ ಆಶಯವನ್ನು ಒಳಗೊಂಡು ಶ್ಲೋಕಗಳು ಗದ್ಯಾನುವಾದವಾಗಿವೆ. ಆದರೆ ಪದಶಃ ಅನುವಾದವೆನಿಸುವುದಿಲ್ಲ. ಅಥವಾ ಸಂಸ್ಕೃತ ಪಠ್ಯಕ್ಕೆ ಬದ್ಧವಾದವುಗಳಿಲ್ಲ.

ಉದಾ : ಉತ್ಪನ್ನೇ ಧಾರ್ತರಾಷ್ಟ್ರಾಣಾಂ ವಿರೋಧೇ ಪಾಂಡವೈಃ ಸಹ ।
ಮಂತ್ರಶಾಲಾಂ ರಚಯತಿ ಭೃತ್ಯೋ ದುರ್ಯೋಧನಾಜ್ಞಯಾ ॥

ಅನು : ಪಾಂಡುತನಯರೊಂದಿಗೆ ಕೌರವರು ಪ್ರಬಲವಾದ ವೈರಾಗ್ಯವನ್ನು ಸ್ಥಿರಪಡಿಸಿರುವರು. ಆದಕ್ಕಾಗಿ ದುರ್ಯೋಧನನ ಅಪ್ಪಣೆಯಂತೆ ಭೃತ್ಯನು ಮಂತ್ರಶಾಲೆಯನ್ನು ರಚಿಸುತ್ತಿರುವನು. ಇಲ್ಲ ಉತ್ಪನ್ನೇ ಧಾರ್ತರಾಷ್ಟ್ರಾಣಾಂ ವಿರೋಧೇ ಪಾಂಡವೈಃ ಸಹ ಎನ್ನುವುದನು ಅನುವಾದಕರು ಪಾಂಡುತನಯರೊಂದಿಗೆ ಕೌರವರು ಪ್ರಬಲವಾದ ವೈರವನ್ನು ಸ್ಥಿರಪಡಿಸಿರುವರು. ಆದರೆ ಮೂಲಾರ್ಥವನ್ನು ಹೀಗೆ ಗ್ರಹಿಸಬಹುದಾಗಿದೆ. ಧೃತರಾಷ್ಟ್ರನ ಮಕ್ಕಳಿಗೆ ಪಾಂಡವರೊಂದಿಗೆ ವಿರೋಧ ಉತ್ಪನ್ನವಾಗಿವೆ.

ಉದಾ : (೨) ಉದ್ಧೂತರೋಷಮಿವ ಮೇ ಹೃದಯಂ ಸಹರ್ಷಂ
ಪ್ರಾಪ್ತಂ ರಣೋತ್ಸವಮಿದುಂ ಸಹಸು ವಿಚಿಂತ್ಯ ।
ಇಚ್ಛಾಮಿ ಪಾಂಡವಬಲೇ ವರವಾರಣಾನಾಂ
ಉತ್ಕೃತ್ತ ದಂತ ಮುಸಲಾಗಿ ಮುಖಾನಿ ಕರ್ತುಮ್ ॥.

ಅನು : ದುರ್ಯೋ(ಪ್ರವೇಶಿಸಿ) ಅಹಾ ! ಅಕಸ್ಮಾತ್ತಾಗಿ ಒದಗಿರುವ ಈ ರಣಕೇಳಿಯು ನನ್ನ ಮನಸ್ಸಿಗೆ ಪರಮಾನಂದವನ್ನುಂಟು ಮಾಡಿರುವುದು. ನನ್ನ ಅಂತರಂಗದಲ್ಲಿದ್ದ ರೋಷವೆಲ್ಲವೂ ಮಾಯವಾಯಿತು. ಪಾಂಡವರ ಸೇನೆಯನ್ನು ಹೊಕ್ಕು ಮದ್ದಾನೆಗಳ ದಂತವನ್ನು ಬುಡ ಮಟ್ಟ ಕಿತ್ತು ಎಸೆಯಬೇಕೆಂದು ಬಯಸುವೆನು.

ಒಟ್ಟಾಗಿರುವ ಗದ್ಯ ಭಾಗವನ್ನು ಸಂಭಾಷಣೆಗಳಾಗಿ ವಿಂಗಡಿಸಿ ಬರೆದಿರುವುದು ಒಂದು ವೈಶಿಷ್ಟ್ಯ.

ದುರ್ಯೋಧನ : ಆರ್ಯೌ ವೈಕರ್ಣ ವರ್ಷದೇವೌ । ಉಚ್ಯತುಮ್ - ಅಸ್ತಿಮ ಮೈಕಾದಶಾಕ್ಷೌಹಿಣೀ ಬಲ ಸಮುದಯಃ। ಅಸ್ಯಕಃ ಸೇನಾಪತಿರ್ಭವಿತು ಮರ್ಹತಿ ? ಕಿಂ ಕಿಮಾಹತುರ್ಭವಂತಾ?

ಮಹಾನ್ ಖಲ್ವಯಮರ್ಥಃ ।ಮಂತ್ರಯಿತ್ವಾ ವಕ್ತವ್ಯಮಿತಿ ? ಸದೃಶಮೇತತ್ । ತದಾಗಮ್ಯತಾಮ ಮಂತ್ರಶಾಲಾಮೇವ ಪ್ರವಿಶಾಮಃ । ಆಚಾರ್ಯ ! ಅಭಿವಾದಯೇ । ಪ್ರವಿಶತು ಭವಾನ್ ಮಂತ್ರ ಶಾಲಾದ್।ಪಿತಾಮಹ। ಅಭಿವಾದಯೇ ಪ್ರವಿಶತು ಭವಾನ್ ಮಂತ್ರ ಶಾಲಾಮ್ । ಮಾತುಲ । ಅಭಿವಾದಯೇ । ಪ್ರವಿಶತು ಭವಾನ್ ಮಂತ್ರ ಶಾಲಾಮ್ । ಆರ್ಯ್ಯೌ ವೈಕರ್ಣ ವರ್ಷದೇವೌ । ಪ್ರವಿಶತಾಂ ಭವಮತೌ । ಭೋ ಭೋ ಸರ್ವಕ್ಷತ್ರಿಯಾಃ । ಸ್ವೈರಂ ಪ್ರವಿಶಂತು ಭವಂತಃ । ವಯಸ್ಯಕರ್ಣ । ಪ್ರವಿಶಾಮಸ್ತಾವತ್। (ಪ್ರವಿಶ್ಯ) ಆಚಾರ್ಯ । ಎತತ್ ಕೂರ್ಮಾಸನಮ್ । ಆಸ್ಯತಾಮ್ । ಪಿತಾಮಹ । ಎತತ್ ಸಿಂಹಾಸನಮ್, ಅಸ್ಯತಾಮ್ । ಮಾತುಲ । ವಿತಚ್ಚರ್ಮಾಸನಮ್ । ಅಸ್ಯತಾಮ್ । ಪಿತಾಮಹ । ಎತತ್ ಸಿಂಹಾಸನಮ್, ಅಸ್ಯತಾಮ್ । ಮಾತುಲ । ವಿತಚ್ಚರ್ಮಾಸನಮ್, ಅಸ್ಯತಾಮ್ । ಆರ್ಯೌ ವೈಕರ್ಣವರ್ಷದೇವೌ। ಅಸತುಮ್ ಭವಂತೌ। ಭೊ ಭೋ ಸರ್ವಕ್ಷತ್ರಿಯಾಃ । ಸ್ವೈರಮಾಸತಾಂ ಭವಂತಃ । ಕಿಮಿತಿ ಕಿಮಿತಿ ಮಹಾರಾಜೋ ನಾಸ್ತ ಇತಿ । ಅಹೋ । ಸೇನಾಧರ್ಮಃ । ನನ್ವಯ ಮಹಮಾಸೇ । ಮಯಸ್ಸಯ ಕರ್ಣ। ತ್ವಮಪ್ಯಾಸ್ಸ್ವ ॥.

ಅನು : ದುರ್ಯೋ - ಪೂಜ್ಯರಾದ ವೈಕರ್ಣ, ವರ್ಷದೇವರೆ ! ನನ್ನ ಸೇನೆಯು ಹನ್ನೊಂದು ಅಕ್ಷೌಹಿಣಿ ಪರಿಮಿತವಾದುದು. ಈ ಸೇನೆಗೆ ಯಾರನ್ನು ಅಧಿಪತಿಯನ್ನಾಗಿ ಮಾಡಬಹುದು ? ಹೇಳಿರಿ. ಆ! ಏನಂದು ಹೇಳುವಿರಿ ? ಈ ವಿಷಯವು ಸಾಮಾನ್ಯವಾಗಿ ತೀರ್ಮಾನಿಸತಕ್ಕುದ್ದಲ್ಲ. ಚೆನ್ನಾಗಿ ಯೋಚಿಸಿ ಹೇಳಬೇಕೆಂದೂ, ಇದೀಗ ಯುಕ್ತವಾದ ಮಾತು; ಹಾಗಾದರೆ ಮಂತ್ರ ಶಾಲೆಗೆ ಹೋಗುವ ನಡೆಯಿರಿ.

(ಭೀಷ್ಮನೊಂದಿಗೆ ದ್ರೋಣನು ಪ್ರವೇಶಿಸುವನು).

ದುರ್ಯೋಧನ: ಆಚಾರ್ಯ ವರ್ಯನೆ! ವಂದಿಸುವೆನು. ಶಾಲೆಯೊಳಗೆ ದಯೆ ಮಾಡಿಸಬೇಕು ಪಿತಾಮಹನೆ! ನಮಸ್ಕರಿಸುವೆನು. ಕೆಲವು ರಾಜಕೀಯ ವಿಷಯಗಳನ್ನು ಯೋಚಿಸಿ ತೀರ್ಮಾನಿಸ ಬೇಕಾಗಿರುವುದು ಶಾಲೆಯನ್ನು ಹೊಕ್ಕು ವಿಶ್ರಮಿಸಿಕೊಳ್ಳಬಹುದಲ್ಲವೇ? ಮಾತುಲನೆ! ನಮಸ್ಕಾರವು ನೀನೂ ಒಳಗೆ ನಡೆ ಆರ್ಯರೆ! ವೈಕರ್ಣ, ವರ್ಷ ದೇವರೇ! ನೀವೂ ಒಳಕ್ಕೆ ನಡೆಯಿರಿ. ಸಾಮಂತ ನರಪಾಲಕರೆ । ನೀವೆಲ್ಲರೂ ಧಾರಾಳವಾಗಿ ಒಳಗೆ ಹೋಗಬಹುದು.

ಇಲ್ಲಿ ಮೂಲಪಠ್ಯಕ್ಕಿಂತ ಒಡೆದುಕೊಂಡು ರಚಿಸಿರುವ ಸಂಭಾಷಣೆಗಳಲ್ಲಿ ಕೆಲವು ಹೆಚ್ಚಿನ ವಿಷಯಗಳಿವೆ. ಜನ ಸಾಮಾನ್ಯನೊಬ್ಬನಿಗೆ ಇಷ್ಟೊಂದು ದೀರ್ಘ ಮಾತನ್ನು ಅರಗಿಸಿಕೊಳ್ಳುವುದು ಕಠಿಣ ವೆನಿಸುತ್ತದೆ. ರಂಗಭೂಮಿಯ ಆಧ್ಯತೆಯನ್ನು ಗಮನದಲ್ಲಿಟ್ಟುಕೊಂಡು ಅನುವಾದಕಾರ ಈ ಬದಲಾವಣೆ ಮಾಡಿಕೊಂಡಿರಲು ಸಾಕು. ಅನುವಾದಕ ಕೆಲವು ಕಡೆ ಸ್ವಾತಂತ್ರ್ಯವನ್ನು ವಹಿಸಿಕೊಂಡಿದ್ದಾನೆ.

> ಕಮಾಹತುರ್ಭವಂತೌ - ಅತ್ರ ಭವಾನ್ ಗಾಂಧಾರರಾಜೋ ವಕ್ಷ್ಯತೀತಿ ? ಭವತು, ಮಾತುಲೇನಾಭಿಧಿಯತಾಮ್ । ಕಿಮಾಹ ಮಾತುಲಹ - ಅತ್ರ ಭವತಿ ಗಾಂಗೇಯೇ ಸ್ಥಿತೇ ಕೋನ್ಯಃ ಸೇನಾಪತಿ ರ್ಭವಿತುಮರ್ಹತೀತಿ? ಸಮ್ಯಗಾಹ ಮಾತುಲಹ। ಭವತು ಭವತು, ಪಿತಾಮಹ ಏವ ಭವತು। ವಯಮಪ್ಯೇತದಭಿದಲಷುಮಃ।

ವೈಕರ್ಣ - ಗಾಂಧಾರರಾಜನು ಈ ವಿಷಯದಲ್ಲಿ ಅಪ್ಪಣೆ ಕೊಡಿಸಬೇಕು.

ದುರ್ಯೋ: ಒಳ್ಳೆಯದು. ಹಾಗಾದರೆ ನಮ್ಮ ಸಹೋದರ ಮಾವನನ್ನೇ ಕೇಳುವೆನು. ಮಾತುಲನೇ ! ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ?.

ಶಕುನಿ: ವತ್ಸ ದುರ್ಯೋಧನನೇ ! ಪೂಜ್ಯನಾದ ಗಂಗಾಪುತ್ರನಿರುವಲ್ಲಿ ಸೇನಾಧಿಪತ್ಯವನ್ನು ವಹಿಸಲು ಮತ್ತಾರಿಗೆ ಯೋಗ್ಯತೆಯಿರುವುದು?.

ದುರ್ಯೋ: ಭಲಾ ! ಮಾತುಲನೆ ಚೆನ್ನಾಗಿ ಹೇಳಿದೆ. ಆಗಲಿ... ಆಗಲಿ ! ನಮ್ಮ ಪಿತಾಮಹನೇ ಈ ಭಾರವನ್ನು ವಹಿಸಲಿ. ನಾವೂ ಇದನ್ನೇ ಬಯಸುತ್ತಿದ್ದೆವು. ಈಗ ನಿನ್ನ ಮಾತನ್ನು ಅನುಮೋದಿಸುವೆವು.

ಇಲ್ಲಿ ಅಭಿದಲಷಾಮಃ ಎನ್ನುವುದನ್ನು ಅನುಮೋದನೆ ಎಂದಿದ್ದಾರೆ. ಮೇಲಿನ ಒಂದೆರಡು ವಾಕ್ಯಗಳನ್ನು ಅನುವಾದಕ ಸೃಜನ ವಕ್ತಾರನಾಗಿ ಕಥೆ ಬೆಳೆಸಿದ ಬಗೆಯನ್ನು ನಾವಿಲ್ಲಿ ಕಾಣಬಹುದು. ಮೂಲ ಸಂಸ್ಕೃತಕ್ಕೆ ಬದ್ಧವಾದ ಗದ್ಯಾನುವಾದವನ್ನು ನಾವಿಲ್ಲಿ ಕಾಣಬಹುದು.

ಉದಾ: ಸೇನಾನಿನಾದ ಪಟಹಸ್ವನ ಶಂಖನಾದ್ಯೈಃ
ಚಂಡಾನಿಲಾಹತ ಮಹೋದಧಿನಾದಕಲ್ಪೈಃ।
ಗಾಂಗೇಯ ಮೂರ್ಧ್ನಿ ಪತಿತೈರಭಿಷೇಕ ತೋಯೈಃ

ಸಾರ್ಧಂ ಪತಂತು ಹೃದಯಾನಿ ನರಾಧಿಪಾನಾಮ್ ॥

ಪ್ರಳಯಕಾಲದ ಚಂಡಮಾರುತದಿಂದ ದಡಮೀರಿ ಅಲ್ಲೋಲ ಕಲ್ಲೋಲವಾಗಿ ಮೊರೆಯುವ ಕಡಲಿನ ತೆರೆಗಳ ಅಪ್ಪಳಿಸುವ ಶಬ್ದದಂತೆ ಭಯಂಕರವಾದ ಸೇನೆಯ ಕೋಲಾಹಲ ಮತ್ತು ಭೇರಿ, ಪಟಹ, ಶಂಖ, ಕಹಳೆ ಮುಂತಾದ ವಾದ್ಯ ವಿಶೇಷಗಳು ಮೊಳಗುತ್ತಲೂ ಇರಲು ಎದೆಗುಂದಿದ ನರಪಾಲಕರ ತಲೆಬುರುಡೆಗಳು ನೆಲದ ಮೇಲೆ ಬೀಳಲಿ.

ನಾಟಕಕಾರನ ಮಾತುಗಳನ್ನೆಲ್ಲಾ ತನ್ನ ಆಡು ಭಾಷೆಯ ಮಾತುಗಳಾಗಿ ಅನುವಾದಕ ಪರಿವರ್ತಿಸಿಕೊಂಡಿದ್ದಾರ ಗ್ರಹಣಮಸ್ಯಾತ್ರಹಿತಂ ಪಶ್ಯಾಮಿ ಎನ್ನುವುದನ್ನು ಅವನನ್ನು ಹಿಡಿದು ಬಂದಿಯಂತೆ ಹಿಂಗಟ್ಟು ಕಟ್ಟುವುದೇ ವಿಹಿತವಾದುದು ಎನ್ನುತ್ತಾರೆ.

ಹೇಗೆಂದರೆ : ಉದಾ: ಕೇಶವ ಇತಿ ? ಏವಮೇಷ್ಟವ್ಯಂ । ಅಯಮೇವ ಸಮುದಾಚಾರಃ । ಭೋ ಭೋ ರಾಜಾನಃ ! ದೌತ್ಯೇ ನಾಗತಸ್ಯ ಕೇಶವಸ್ಯ ಕಿಂಯುಕ್ತಮ್? ಕಿಮಾಹುರ್ಭವಂತಃ ? ಅರ್ಘ್ಯ ಪ್ರಮಸೇನ ಪೂಜಾಯಿತವ್ಯಃ ಕೇಶವ ಇತಿ ? ನ ಮೇ ರೋಚತೇ । ಗ್ರಹಣಮಸ್ಯಾತ್ರ ಹಿತಂ ಪಶ್ಯಾಮಿ ।

ದುರ್ಯೋ : ಕೇಶವನೆ ? ಇದೀಗ ಯುಕ್ತವಾದುದು ಅವನ ಹೆಸರಿಗೆ ತಕ್ಕ ಕಾರ್ಯವನ್ನೇ ಕೈಗೊಂಡಿರುವನು. ಇದೇ ಉಚಿತವಾದ ರೀತಿಯು. ಎಲೈ ಸಭಾಸದರೆ ದೂತನಾಗಿ ಬಂದಿರುವ ಆ ಕೇಶವನಿಗೆ ಯಾವುದು ಯುಕ್ತವಾದುದು? ಏನು? ಏನೆಂದು ಹೇಳುವಿರಿ ? ಉತ್ತಮ ರೀತಿಯಿಂದ ಅವನನ್ನು ಗೌರವಿಸಿ ಇದಿರುಗೊಂಡು ಕರೆದು ತಂದು ಮನ್ನಿಸಬೇಕೆಂದೋ, ಊಹುಂ ಇದು ನನಗೆ ಎಷ್ಟು ಮಾತ್ರವೂ ಸಮ್ಮತವಲ್ಲ. ಅವನನ್ನು ಹಿಡಿದು ಬಂದಿಯಂತೆ ಹಿಂಗಟ್ಟು ಕಟ್ಟುವುದೇ ವಿಹಿತವಾದುದು. ಕೆಲವೊಮ್ಮೆ ಮೂಲ ಪಠ್ಯದ ಮಾತುಗಳನ್ನು ಹಿಗ್ಗಿಸಿ ಬರೆದರೆ, ಕೆಲವೊಮ್ಮೆ ವಿಸ್ತೃತವಾದ ವಾಕ್ಯಗಳನ್ನೇ ಸಂಕ್ಷೇಪಿಸಿ ಬರೆದಿದ್ದಾರೆ.

ಉದಾ: ದುಃಶಾಸನಪರಾಮೃಷ್ಟಾ ಸಂಭ್ರಮೋತ್ಫುಲ್ಲಲೋಚನಾ ।
ರಾಹುವಕ್ತ್ರಾಂತರಗತಾ ಚಂದ್ರಲೇಖೇವ ಶೋಭತೇ ॥

ದುಶ್ಯಾಸನನ ಕೈಗೆ ಸಿಕ್ಕಿ ಗಾಬರಿಯಿಂದ ಸುತ್ತಲೂ ನೋಡುತ್ತಿರುವ ಈ ಚಂಚಲಾಕ್ಷಿಯು ರಾಹುವಿನ ದವಡೆಯಲ್ಲಿ ಸಿಕ್ಕಿ ಬಿದ್ದಿರುವ ಚಂದ್ರನನ್ನು ಹೋಲುವಳು ಎಂದಿದೆ. ಸಂಭ್ರಮೋತ್ಫುಲ್ಲಲೋಚನ ಎಂಬುದನ್ನು ಗಾಬರಿಯಿಂದ ಸುತ್ತಲೂ ನೋಡುತ್ತಿರುವ ಎಂದು ಲೇಖಕರು ಹೇಳಿರುವುದು ತುಸು ಗೊಂದಲಮಯವಾಗಿದೆ.

ಪಾಸ್ಕಂ ಸುಂದರಶಾಸ್ತ್ರಿಗಳ ಅನುವಾದದಲ್ಲಿ ಪದ್ಯಗಳೆಲ್ಲಾ ಗದ್ಯಾನುವಾದಗಳಾಗಿರುವುದು ಸಾಮಾನ್ಯ ನಿಯಮದಂತಿದೆ.

ಉದಾ: ದುರ್ಯೋಧನ:

ಪ್ರಾಪ್ತಃ ಕಿಲಾದ್ಯ ವಚನಾವಿಹ ಪಾಂಡವಾನಾಂ
ದೌತ್ಯೇನ ಭೃತ್ಯ ಇವ ಕೃಷ್ಣಮತಿಃ ಸ ಕೃಷ್ಣಃ।
ಶ್ರೋತುಂ ಸಖೇ ಸ್ವಮಪಿ ಸಜ್ಜಯ ಕರ್ಣ ಕರ್ಣೌ
ನಾರಿಮೃದೂನಿ ವಚನಾನಿ ಯುಧಿಷ್ಠಿರಸ್ಯ ॥

ಅನು: ಮಲಿನ ಬುದ್ಧಿಯುಳ್ಳ ಆ ಕೃಷ್ಣನು ಪಾಂಡವರ ಮಾತಿನಂತೆ ದೂತನಾಗಲು ಒಪ್ಪಿ, ಮಾನವಿಲ್ಲದೆ ಸೇವಕನ ರೀತಿಯಿಂದ ಬಂಧುಗಳಾದ ನಮ್ಮ ಬಳಿಗೆ ಬಂದು ಏನೆಂದು ಹಲ್ಲುಕಿರಿಯುವನೋ ಕೇಳಬೇಕು. ಸಖನೆ! ಜೀವನಾಂಶವನ್ನು ಬೇಡುವ ಹೆಂಗಸಿನಂತೆ ಮೃದು ಮಧುರವಾದ ಆ ಯುಧಿಷ್ಠಿರನ ವಿನಯ ವಚನಗಳನ್ನು ಕೇಳುವೆಯಂತೆ ! ಕಿವಿಗಳನ್ನು ಸಜ್ಜುಗೊಳಿಸಿ ಚಿತ್ತವೃತ್ತಿಯನ್ನು ಬೇರೊಂದು ಕಡೆ ಇರಿಸದೆ ಜಾಗರೂಕನಾಗಿರು.

ಅನುವಾದಕರು ಶ್ಲೋಕ ಭಾಗಗಳನ್ನು ಗದ್ಯಾನುವಾದಗಳಾಗಿ ವಿಸ್ತರಿಸಿರುವುದರ ಜೊತೆಗೆ ಜನರಿಗೆ ತಿಳಿಯುವಂತೆ ಸರಳ ಸುಂದರ ಶೈಲಿಯಲ್ಲಿ ತಿಳಿಸಿ ಹೇಳಿರುವುದೊಂದು ವಿಶೇಷ. ಅಲ್ಲದೇ ಕೆಲವು ಶೋಧನಾತ್ಮಕ ಸಂದರ್ಭ, ಪದಗಳನ್ನು ಸೇರಿಸಿರುವುದು ಕಂಡು ಬಂದಿದೆ.

ವಿಚಿತ್ರವೀರ್ಯೋ ವಿಷಯಾ ವಿಪತ್ತಿಂ
ಕ್ಷಯೇಣ ಯಾತಃ ಪುನರಂಬಿಕಾಯಾಮ್।
ವ್ಯಾಸೇನ ಜಾತೋ ಧೃತರಾಷ್ಟ್ರ ಏಷ
ಲಭೇತ ರಾಜ್ಯಂ ಜನಕಃ ಕಥಂ ತೇ? ॥.

ಅದು ಅಯ್ಯಾ! ನೀನು ಸಕಲವನ್ನೂ ಬಲ್ಲವನು ಈ ಹಿಂದಿನ ಚರಿತ್ರೆಯನ್ನೆಲ್ಲಾ ನಾನೇನು ಬಲ್ಲೆನು? ಆದರೆ ನಿನ್ನನ್ನು ಕೇಳಿ ತಿಳಿದುಕೊಳ್ಳಬೇಕಾದ ವಿಷಯವುಂಟು ಅದನ್ನು ದಯಮಾಡಿ ವಿಷದ ಗೊಳಿಸು.

ನಿಮ್ಮ ಅಜ್ಜನಾದ ವಿಚಿತ್ರವೀರ್ಯನು ವಿಷಯ ಲಂಪಟನಾಗಿದ್ದು, ಕ್ಷಯ ರೋಗವನ್ನು ಸಂಪಾದಿಸಿ ಕೊನೆಗೂ ಅದೇ ವ್ಯಾಧಿಯಿಂದಲೇ ಮಡಿದವನಲ್ಲವೇ? ಬಳಿಕ ನಿಮ್ಮ ಅಜ್ಜಿಯಾದ ಅಂಬಿಕೆಯು ವ್ಯಾಸ ಮುನಿಯ ಸನ್ನಿಧಾನ ಎಂದಲ್ಲವೇ ? ನಿಮ್ಮ ತಂದೆಯನ್ನು ಹೆತ್ತಳು ? ಹೀಗಿರುವಲ್ಲಿ ಗೋಳಕಾಗ್ರಜನೆನಿಸಿದ. ನಿಮ್ಮ ತಂದೆಗೆ ರಾಜ್ಯದಲ್ಲಿ ಬಾಧ್ಯತೆ ಸ್ಥಿರಪಟ್ಟುದು ಹೇಗೆ? ಇದನ್ನು ವಿವರಿಸಿ ಹೇಳು. ಇಲ್ಲಿ ಲೇಖಕರು ಮಹಾಭಾರತದ ಕಥೆಯಲ್ಲಿ ಬರುವಂತೆ ವ್ಯಾಸಮುನಿಗಳು ನಿಯೋಗ ಪದ್ಧತಿಯಿಂದ ಕುರುವಂಶವನ್ನು ಬೆಳೆಸಿದ್ದನ್ನು ಹೇಳಿದ್ದಾರೆ. ಗೋಳಕಾಗ್ರಜ ಎಂಬ ಹೊಸ ಪದವೊಂದನ್ನು ಹುಡುಕಿ ತೆಗೆದಿದ್ದಾರೆ. ಗಾಂಧಾರಿ ರೋಷದಿಂದ ತನ್ನ ದರ್ಭವನ್ನು ಎಸೆದಾಗ ವ್ಯಾಸರು ಆ ಗರ್ಭಸ್ಥ ಶಿಶುಗಳನ್ನು ಮಡಿಕೆಯಲ್ಲಿ ಹಾಕಿ ಬೆಳೆಸುತ್ತಾರೆ. ಅದನ್ನು ಲೇಖಕರು ಗೋಳಕಾಗ್ರಜ ಎಂದು ಸಂಬೋಧಿಸಿ ಹಿನ್ನೆಲೆಯನ್ನು ಸೂಚ್ಯವಾಗಿ ತಿಳಿಸುವ ಸ್ವಾತಂತ್ರ್ಯವಹಿಸಿರುವುದು ಗಮನಾರ್ಹ ಸಂಗತಿ ಎನಿಸಿದೆ.

## ೧೦. ಅಭಿಷೇಕ ನಾಟಕಮ್ :

ಭಾಸನ ಹದಿಮೂರು ನಾಟಕಗಳಲ್ಲಿ ಅಭಿಷೇಕ ನಾಟಕ ಒಂದು. ಪಾನ್ಯ ಸುಂದರಶಾಸ್ತ್ರಿಗಳೇ ಈ ನಾಟಕವನ್ನು ಅನುವಾದಿಸಿರುವರು. ಅನುವಾದದ ಉದ್ದೇಶವನ್ನು ಪ್ರಕಾಶಕರ ಮುನ್ನುಡಿಯಿಂದ ಸೂಚ್ಯವಾಗಿ ಗ್ರಹಿಸಬಹುದಾಗಿದೆ. ''ಸಂಸ್ಕೃತ ಸಾಹಿತ್ಯದಲ್ಲಿ ದೇದೀಪ್ಯಮಾನವಾದ ಭಾಸ ಕವಿಯ ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸುವ ಶ್ರೀ ಶಾಸ್ತ್ರಿಯವರ ಪ್ರಯತ್ನವು ತುಂಬಾ ಸ್ತುತ್ಯವಾದುದೆಂದು ಪುನಃ ಹೇಳಬೇಕಾದ ಅವಶ್ಯಕತೆಯಿಲ್ಲ. ಇದರಲ್ಲಿ ಅಡಕವಾದ ಪೌರಾಣಿಕ ಕಥಾಭಾಗವು ಸರ್ವವಿಶ್ರುತವಾಗಿರುವುದರಿಂದಲೂ ಪ್ರಸ್ತುತ ಗ್ರಂಥದ ವಿಷಯದ ಹಾಗೂ ವಿವೇಚನಾ ಕ್ರಮದ ಸಂಬಂಧದಿಂದ ನಾವು ಹೇಳಬೇಕಾದುದೇನೂ ಉಳಿದಿಲ್ಲ. ಗ್ರಂಥದ ಭಾಷೆಯು ಪ್ರಶಸ್ತವೂ, ಸಮಯೋಚಿತವಾದುದೂ ಆಗಿ, ಓದುಗರಿಗೆ ಸ್ಫೂರ್ತಿದಾಯಕವಾಗಿದೆ. ಕ.ವಿ.ವ. ಸಂಘದ ಚಾಲಕರು ಈ ವರ್ಷ ಇದಕ್ಕೆ ತಕ್ಕ ಬಹುಮಾನವನ್ನೂ ಅರ್ಪಿಸಿರುವರೆಂದು ಹೇಳಲು ಆನಂದವಾಗುವುದು''. ಕರ್ನಾಟಕ ವಿದ್ಯಾವರ್ಧಕ ಸಂಘದವರ ಯೋಜನೆಗಳಲ್ಲಿ ಒಂದಾದ ಅನ್ಯ ಭಾಷಾ ಕೃತಿಗಳನ್ನು ಕನ್ನಡಕ್ಕೆ ತರುವ ಮತ್ತು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೋಸ್ಕರ ಲೇಖನಗಳನ್ನು ಆಹ್ವಾನಿಸುವ ಮತ್ತು ವಾಗ್ಭೂಷಣ ಪತ್ರಿಕೆಯಲ್ಲಿ ಪ್ರಕಟಿಸುವುದು ಇವೇ ಮೊದಲಾದವುಗಳು ಇದ್ದವು. ಆ ಯೋಜನೆಯ ಅನುಸಾರವಾಗಿ ಈ ಅನುವಾದವು ಬಂದಿರಬಹುದಾಗಿದೆ.

ಪೀಠಿಕೆಯಲ್ಲಿ ಲೇಖಕರು ಈ ರೀತಿ ಹೇಳುತ್ತಾರೆ; ''ಭಾಸ ಮಹಾಕವಿಯ ಪರಿವರ್ತನವೆನಿಸಿದ ಈ ರೂಪಕವು ಶ್ರೀ ಮದ್ರಾಮಾಯಣದಲ್ಲಿನ ಕಿಷ್ಕಿಂಧಾಕಾಂಡದಲ್ಲಿ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಬಂದು, ಸುಗ್ರೀವನೊಂದಿಗೆ ಮೈತ್ರಿಯನ್ನು ಬೆಳೆಯಿಸಿದ ಪ್ರಕರಣವನ್ನು ಮೊದಲು ಮಾಡಿ, ಅಯೋಧ್ಯಾ ರಾಜಾಧಿಪತ್ಯದಲ್ಲಿ ರಾಮನು ಅಭಿಷಿಕ್ತನಾಗುವವರೆಗಿನ ಕಥೆಯನ್ನು ಆರು

ಅಂಕಗಳಲ್ಲಿ ಒಳಗೊಂಡಿರುವುದು. ವರ್ಣನೆಯು ಅಷ್ಟೊಂದು ವಿಶೇಷ ಚಮತ್ಕಾರವನ್ನು ತೋರ್ಪಡಿಸಿದ್ದರೂ ಕಥಾ ಸಂವಿಧಾನವು ಮಾತ್ರ ಮನೋಹರವಾಗಿಯೇ ಇರುವುದು. ಆರನೆಯ ಅಂಕದಲ್ಲಿ ರಾಮರಾಜ್ಯಾಭಿಷೇಕವು, ಅಗ್ನಿದೇವನನ್ನು ಮುಂದಿದ್ದು ದೇವತೆಗಳ ಅನುಮೋದನಾನುಸಾರ ಲಂಕೆಯಲ್ಲಿಯೇ ನಡೆದಿರುವುದು. ಹಿಂದೆ ಯೌವರಾಜ್ಯಾಭಿಷೇಕ ಭಗ್ನ ಪ್ರಯತ್ನವಾದ ದಶರಥನು ಈ ಅಭಿಷೇಕ ಕಾಲದಲ್ಲಿ ದೇವತೆಗಳ ಮೂಲಕ ತನ್ನ ಇಷ್ಟಾರ್ಥವನ್ನು ಸಫಲಗೊಳಿಸಿದಂತೆ ತಿಳಿಯಬರುವುದು. ಈ ರೂಪಕವನ್ನು ಅಮೂಲ್ಯವಾದ ತಮ್ಮ ಮಾಸಪತ್ರಿಕೆಯಲ್ಲಿ ಪ್ರಕಟಿಸಿದ 'ವಾಗ್ಭೂಷಣ' ಪತ್ರಿಕಾ ಪ್ರಚಾರಕರ ಭಾಷಾಭಿಮಾನವು ಶ್ಲಾಘನೀಯವಾಗಿರುವುದು''. ಹೀಗೆ ಕಥಾ ಸಾರಾಂಶವನ್ನು ಅನುವಾದದ ಉದ್ದೇಶವನ್ನು ರೂಢಿಗುಚಿತವಾಗಿ ಹೇಳಿಕೊಂಡಿದ್ದಾರೆ.

ಈ ನಾಟಕದ ಶ್ಲೋಕಾನುವಾದಗಳು ಭಾವಾನುವಾದಗಳಾಗಿ ಬಂದಿವೆ ;

ಉದಾ : ಭಾವ !

ಕುತೋನು ಖಲ್ವೇಷ ಸಮುತ್ಥಿತೋ ಧ್ವನಿಃ
ಪ್ರವರ್ತತೇ ಶ್ರೋತ್ರವಿದಾರಣೋ ಮಹಾನ್।
ಪ್ರಚಂಡ ವಾತೋದ್ಧತ ಭೀಮಗಾಮಿನಾಂ
ಬಲಾಹಕಾನಾಮಿವ ಖೇಭಿಗರ್ಜತಾಮ್ ॥

ಅನು : ಭಾವಾ! ಬಿರುಗಾಳಿಯ ಪೆಟ್ಟಿನಿಂದ ಭಯಂಕರವಾದ ರೀತಿಯಲ್ಲಿ ಹರಿದಾಡುತ್ತಾ ಅಂತರಿಕ್ಷದಲ್ಲಿ ಗರ್ಜಿಸುತ್ತಿರುವ ಮೇಘಧ್ವನಿಯೋ ಎಂಬಂತೆ ಕರ್ಣಕುಹರವನ್ನು ಸೀಳುವ ಈ ದೊಡ್ಡ ಸಪ್ಪಳವು ಎಲ್ಲಿಂದ ಬರುತ್ತಿರಬಹುದು.

ಮೂಲ ಪಠ್ಯಕ್ಕೆ ಬದ್ಧವಾದ ಅನುವಾದವೂ ಇಲ್ಲಿ ಕಂಡುಬರುತ್ತದೆ.

ಸೂತ್ರಧಾರ : ''ಮಾರ್ಷಃ ! ಕಿಂ ನಾದಗಚ್ಛಸಿ? ಏಷ ಖಲು ಸೀತಾಪಹರಣ ಜನಿತ ಸಂತಾಪಸ್ಯ ರಘುಕುಲ ಪ್ರದೀಪಸ್ಯ ಸರ್ವಲೋಕ ನಯನಾಭಿರಾಮಸ್ಯ ರಾಮಸ್ಯ ಚ ದುರಾಭಿಮರ್ಶನ ನಿರ್ವಿಷಯಿಕೃತಸ್ಯ ಸಾರ್ವಹರ್ಯೃಕ್ಷರಾಜಸ್ಯ ಸುವಿಪುಲಮಹಾಗ್ರೀವಸ್ಯ ಸುಗ್ರೀವಸ್ಯ ಚ ಪರಸ್ಪರೋಪಕಾರ ಕೃತ ಪ್ರತಿಜ್ಞಯೋ !. ಸರ್ವವಾನರಾಧಿಪತಿಂ ಹೇಮಮಾಲಿನಿಂ ವಾಲಿನಂ ಹಂತುಂ ಸಮುದ್ಯೋಗಃ ಪ್ರವರ್ತತೇ''.

ಅನು : ''ಮಾಲಿಷ ! ತಿಳಿಯಲಿಲ್ಲವೇನು ? ಸೀತಾಪಹರಣದಿಂದ ಸಂತೃಪ್ತನೆನಿಸಿ ರಘುಕುಲ ಪ್ರದೀಪನೂ ಸಕಲ ಲೋಕನೇತ್ರಾನಂದಕರನಾದ ರಾಮನಿಗೂ, ದಾರಾಪಹರಣದಿಂದ ತಿರಸ್ಕೃತನಾಗಿ, ಸಕಲ ಕವಿ ಸೇನಾಧಿಪನೂ, ವಿಪುಲಗ್ರೀವನೂ ಎನಿಸಿದ ಸುಗ್ರೀವನಿಗೂ ಪರಸ್ಪರ ಉಪಕಾರ ಮಾಡುವಂತೆ

ಪ್ರತಿಜ್ಞೆಯು ನಡೆದು ಸಕಲ ವಾನರ ರಾಜನೆನಿಸಿದ ಹೇಮಮಾಲಿಯಾದ ವಾಲಿಯನ್ನು ಕೊಲ್ಲುವ ಸಲುವಾಗಿ ಸನ್ನಾಹವು ನಡೆಯುತ್ತಿರುವುದು. ಇದು ಎಷ್ಟು ನಿಕಟವಾಗಿ ಪಡಿಮೂಡಿದೆ ಎಂದರೆ; ಪದಶಃ ಎಂಬುದ ಸೂಕ್ತವೇನೋ ಎನ್ನುವಷ್ಟರಮಟ್ಟಿಗೆ ದಾರಾಭಿಮರ್ಷನ ನಿರ್ದಿಷ್ಟಯ ಕೃತಸ್ಯ ದಾರಾಪಹರಣ ದಿಂದ ತಿರಸ್ಕೃತನಾಗಿ ಸರ್ವಹರ್ಯೃಕ್ಷ ರಾಜಸ್ಯ ಸಕಲ ಕಪಿ ಸೇನಾಧಿಪನೂ, ಸುವಿಪುಲ ಮಹಾಗ್ರೀವಸ್ಯ-ವಿಪುಲಗ್ರೀವನೂ ಎನಿಸಿದ ಸುಗ್ರೀವನಿಗೂ--- ವಾಲಿನಂ ಹಂತುಂ - ವಾಲಿಯನ್ನು ಕೊಲ್ಲಲು ಸಮುದ್ಯೋಗಃ ಪ್ರವರ್ತತೇ - ಸನ್ನಾಹವು ನಡೆಯುತ್ತಿರುವುದು.

ಕೆಲವೊಮ್ಮೆ ಸಂಗ್ರಹಾನುವಾದವಾಗಿ ಮೂಡಿಬಂದಿದೆ.

ಉದಾ: ತಾರೇ । ಮಯಾ ಖಲಾ ಪ್ರರಾಮೃತ ಮಂಥರ್ನೇಪಿ
ಗತ್ವಾ ಪ್ರಹಸ್ಯ ಸುರದಾನವದೈತ್ಯ ಸಮುಘಾನ್ ।
ಉತ್ಫಾಲ್ಲನೇತ್ರ ಮುರಗೇಂದ್ರ ಮದಗ್ರರೂಪಂ
ಆ ಕೃಷ್ಯ ಮಾಣಮವಲೋದ್ಯ ಸಂವಿಸ್ಮಿತಾಸ್ತೇ ॥

ಅನು : - ''ತಾರೇ ! ಹಿಂದೆ ಅಮೃತಮಥನಕಾಲದಲ್ಲಿ ನಾನಲ್ಲಿಗೆ ಹೋಗಿ ದೇವದಾನವರನ್ನು ಹೀಯಾಳಿಸಿ ಸರ್ಪರಾಜನ ಕಣ್ಣು ಗುಡ್ಡೆಗಳು ಸಿಡಿಯುವ ರೀತಿಯಲ್ಲಿ ಕಡೆಯತೊಡಗಿದ ನನ್ನನ್ನು ಕಂಡು ಅವರೆಲ್ಲರೂ ವಿಸ್ಮಿತರಾದರು''.

ಶ್ಲೋಕಗಳೆಲ್ಲವನ್ನು ಗದ್ಯಾನುವಾದವಾಗಿ ಅನುವಾದಿಸಿದ್ದಾರೆ.

ಉದಾ:- ''ಅಂಗದ:- ಶ್ರುತ್ವಾ ಕಾಲವಶಂ ಯಾಂತಂ ಹರಿಮೃಕ್ಷಗಣೇಶ್ವರಮ್।
ಸಮಾಪತೀತ ಸಂತಾಪ : ಪ್ರಯಾಮಿ ಶಿಥಿಕ್ರಮ : ॥''.

ಅನು : ಋಷಹರಿಕುಲಾಧಿಪನು ಕಾಲವಶವನ್ನೈದಿದ ಸಮಾಚಾರವನ್ನು ಕೇಳಿ, ಸಡಿಲವಾದ ಮೈ ಬಿಗುವುಳ್ಳ ನಾನು ಮುಂದೆ ಕವಿದ ದು:ಖ ಭರವುಳ್ಳವನಾಗಿ ನಡೆಯುತ್ತಿರುವೆನು.

ನೇರ ಅನುವಾದಕ್ಕಿಂತ ಆಡುಮಾತಿನ ಒಟ್ಟು ಆರ್ಥ ಅನುವಾದದಲ್ಲಿ ಗೋಚರಿಸುತ್ತವೆ.

ಉದಾ :- ಶರರ್ಭಿನ್ನ ಹೃದಯೋ ವಿಭಾತಿ ಧಿರಣೀತಲೇ ।
ಗುಹಶಕ್ತಿ ಸಮಾಕ್ರಾಂತೋ ಯಥಾ ಕ್ರೌಂಚಾಚಲೋತ್ತಮ : ॥

ಅನು: ಇದೋ ಮಹಾರಾಜನು - ಬಾಣದಿಂದ ಬಿರಿದ ಎದೆಯುಳ್ಳವನಾಗಿ ಗುಹೆನ ಶಕ್ತ್ಯಾಯುಧದಿಂದ ಉರುಳಿಬಿದ್ದ ಕ್ರೌಂಚ ಪರ್ವತದಂತೆ ನೆಲದ ಮೇಲೆ ಕಂಗೊಳಿಸುತ್ತಿರುವನು.

ಗದ್ಯ ಸಂವಾದವನ್ನು ಭಾವಾನುವಾದವಾಗಿ ಪರಿವರ್ತಿಸಿಕೊಂಡಿದ್ದಾರೆ.
ಉದಾ : ಬಿಂಮುಖ :- ಪ್ರೇಷಿತೋಽಸ್ಮಿ ಮಹಾರಾಜೇಣ ಸುಗ್ರೀವೇಣ - ಆರ್ಯಮಸ್ಯ ಕೃತೋಪಕಾರ ಪ್ರತ್ಯುಪಕಾರ ನಿಮಿತ್ತಂ ಸರ್ವಾಸು ಸೀತಾವಿಚಯನೇ ಪ್ರೇಷಿತಾಃ ಸರ್ವೇ ವಾನರಾ ಆಗಿತಾಃ। ತೇಷಾಂ ದಕ್ಷಿಣಾ ಪಥಮುಖಸ್ಯ ಕುಮಾರಸ್ಯಾಂಗದಸ್ಯ ಪ್ರವೃತ್ತಿ ಜ್ಞಾತ್ವಾ ಶೀಘ್ರಮಾಗಡ್ಡ ಇತಿ । ತತಶ್ವನು ಖಲು ಗತ: ಕುಮಾರ :? (ಪರಿಕ್ರಮ ಆಗ್ರತೋ ವಿಲೋಕ್ಯ) ಏಷ ಆರ್ಯಕಕುಭ: । ಯಾವದೇನಂ ಪೃಚ್ಛಾಮಿ ।
( ಉಪಸೃತ್ಯ) ಸುಖಮಾರ್ಯಸ್ಯ.

ಅನು : ಮಹಾರಾಜನಾದ ಸುಗ್ರಿವನು ಈ ರೀತಿ ಅಜ್ಞಾಪಿಸಿರುವನು . '' ಆರ್ಯರಾಮನ ಉಪಕಾರಕ್ಕೆ ಪ್ರತ್ಯುಪಕಾರ ನಿಮಿತ್ತವಾಗಿ ಸಕಲದಿಕ್ಕೂಗಳಿಗೆ ಸೀತೆಯನ್ನು ಹುಡುಕುವ ಸಲುವಾಗಿ ಕಳುಹಿಸಿದ್ದ ವಾನರ ರೆಲ್ಲರೂ ಹಿಂದಿರುಗಿ ಬಂದರು. ಅವರೆಲ್ಲ ದಕ್ಷಿಣ ದಿಕ್ಕಿಗೆ ಹೊರಡಿ ಅಂಗದ ಕುಮಾರನ ವೃತ್ತಾಂತವನ್ನು ತಿಳಿದು ಬೇಗ ಬಾ '' ಎಂದು ಆದರೆ ಕುಮಾರನು ಎಲ್ಲಿ ಹೋಗಿರಬಹುದು ? ಓಹೋ ಇವನು ಆರ್ಯ ಕಕುಭನು ಇರಲಿ ಇವನನ್ನೇ ಕೇಳಿ ನೋಡುವೆನು. ಆರ್ಯನಿಗೆ ಸೌಖ್ಯವಷ್ಟೇ ?

## ೧೧. ಪಂಚರಾತ್ರಮ್ :

ಪಂಚರಾತ್ರವು ಮಹಾಭಾರತ ಕಥಾವಸ್ತುವನ್ನುಳ್ಳ ನಾಟಕ. ಈ ನಾಟಕವನ್ನು ಪಾನ್ಯಂ ಸುಂದರ ಶಾಸ್ತ್ರಿಗಳೇ ಅನುವಾದಿಸಿದ್ದಾರೆ.

**ಕಥಾಸಾರಾಂಶ :** ''ದುರ್ಯೋಧನನು ಯಜ್ಞಾಂಗವಾದ ಬ್ರಾಹ್ಮಣ ಸಂತರ್ಪಣೆಯ ಕೊನೆಯಲ್ಲಿ ಧನುರ್ವಿದ್ಯಾ ಗುರುವಾದ ದ್ರೋಣನನ್ನು ಕುರಿತು, ದಕ್ಷಿಣೆಯನ್ನು ಸ್ವೀಕರಿಸುವಂತೆ ಬೇಡಿದಾಗ, ದ್ರೋಣ ಪಾಂಡವರಿಗೆ ಸಲ್ಲಬೇಕಾದ ಅರ್ಧ ರಾಜ್ಯಕ್ಕಿಂತಲೂ ಮಿಂಚಿದ ದಕ್ಷಿಣೆಯಿಲ್ಲವೆನ್ನಲು, ಐದು ರಾತ್ರಿಗಳೊಳಗಾಗಿ ಪಾಂಡವರನ್ನು ಕರೆತಂದರೆ ಅರ್ಧ ರಾಜ್ಯವನ್ನು ಕೊಡುವೆನೆಂದು ಪ್ರತಿಜ್ಞೆ ಮಾಡುವನು. ಈ ಕಾರಣದಿಂದಲೇ ಈ ರೂಪಕ್ಕೆ ''ಪಂಚರಾತ್ರಮ್''ವೆಂಬ ಹೆಸರು ಬಂದಿತು. ದೂತನೊಬ್ಬನು ವಿರಾಟನಗರದಿಂದ ಬಂದು ಕೀಚಕರ ಕೊಲೆಯನ್ನು ತಿಳಿಸಲು ಪಾಂಡವರು ವಿರಾಟನಗರ ದಲ್ಲಿರುವರೆಂದು ನಿಶ್ಚಯಿಸಿದ ಭೀಷ್ಮನು ದ್ರೋಣನ ಬಳಿ ಸಾರ್ದು, ತನಗೆ ವಿರಾಟನೊಡನೆ ವೈರವಿರುವುದೆಂದು ನೆಪಮಾಡಿ, ವಿರಾಟನ ಗೋವುಗಳನ್ನು ಹಿಡಿಯುವಂತೆ ದುರ್ಯೋಧನನನ್ನು ಪ್ರೋತ್ಸಾಹಗೊಳಿಸಿದನು. ಅವರೆಲ್ಲರೂ ಒಟ್ಟುಗೂಡಿ ವಿರಾಟನ ಗೋವುಗಳನ್ನು ಹಿಡಿಯುತ್ತಿರುವಾಗ ಬೃಹನ್ನಳೆಯವೇಷವನ್ನು ತಳೆದಿದ್ದ ಅರ್ಜುನನು ಉತ್ತರನನ್ನು ರಥದಲ್ಲಿ ಕೂಡಿಸಿ, ತಾನು ಸಾರಥಿಯಾಗಿ ಸ್ಮಶಾನದಲ್ಲಿಟ್ಟಿದ್ದ ತಮ್ಮ ಆಯುಧಗಳನ್ನು ತೆಗೆದುಕೊಂಡು ತಾನೇ ಹೋರಾಡಿ ದುರ್ಯೋಧನನೇ ಮುಂತಾದವರನ್ನು ಹಿಂದಟ್ಟಿದನು. ಬಳಿಕ ಅಡಿಗೆಯವನಾಗಿದ್ದ ಭೀಮನು, ಮಗನನ್ನು (ಅಭಿಮನ್ಯುವನ್ನು) ಮುದ್ದಾಡಲು ಕುತೂಹಲದಿಂದ ರಥಕ್ಕೆ ಹಾರಿ ಅಭಿಮನ್ಯುವನ್ನು

ಕಂಕುಳಲ್ಲಿರಿಸಿಕೊಂಡು ವಿರಾಟನ ಹತ್ತಿರ ಕರೆದುತಂದುಬಿಟ್ಟನು. ಬಳಿಕ ಅಭಿಮನ್ಯುವು ವಾಸ್ತವಾಂಶವನ್ನು ಅರಿಯದೆ, ಭೀಮಾರ್ಜುನರನ್ನೂ, ವಿರಾಟನನ್ನೂ ಶತ್ರುಗಳೆಂದು ಬಗೆ ಧಿಕ್ಕರಿಸಿ, ಬ್ರಾಹ್ಮಣ ರೂಪ ದಿಂದಿದ್ದ ಧರ್ಮಪುತ್ರನನ್ನು ಮಾತ್ರ ವಂದಿಸುವನು. ಇಲ್ಲಿನ ಅಭಿಮನ್ಯು, ಭೀಮಾರ್ಜುನರ ಸಂಭಾಷಣವು ಆಚ್ಚರ್ಯಕರವಾಗಿರುವುದು. ಇಷ್ಟೊಂದು ಸಾಹಸವನ್ನೂ ತನ್ನ ಮಗನೇ ಮಾಡಿದನೆಂದು ವಿರಾಟನು ಹಿಗ್ಗುತ್ತಿರುವಲ್ಲಿ ಉತ್ತರನು, ಬೃಹನ್ನಳೆಯ ವೇಷವನ್ನು ತಳೆದಿರುವನೇ ಅರ್ಜುನನೆಂತಲು ಅವನೇ ದುರ್ಯೋಧನಾದಿಗಳನ್ನು ಹಿಂದಟ್ಟಿದವನೆಂತಲೂ, ವಿರಾಟನಿಗೆ ತಿಳಿಸುವನು. ಬಳಿಕ ಅರ್ಜುನನು ವೇಷವನ್ನು ಬದಲಾಯಿಸಿರುವ ಯುಧಿಷ್ಠಿರ ಮುಂತಾದವರನ್ನು ಗುರುತಿಸಿ ಹೇಳಲು, ವಿಜಯಶುಲ್ಕ ರೂಪವಾಗಿ ವಿರಾಟನು ಉತ್ತರೆಯನ್ನು ಬರೆಯಿಸಿ, ಭೀಷ್ಮ ಮುಂತಾದವರಿಗೆ ಉತ್ತರನ ಮೂಲಕ ಹೇಳಿ ಕಳುಹಿಸುವನು. ಭೀಷ್ಮಾದಿಗಳು, ಅಭಿಮನ್ಯುವು ಶತ್ರುಗಳ ಕೈಸೇರಿದನೆಂದು ಮರುಗಿ ಯಾವುದೋ ಒಂದು ಬಾಣದಲ್ಲಿ ಅರ್ಜುನನ ಹೆಸರನ್ನು ನೋಡಿ, "ನಮ್ಮ ಅವಮಾನವೆಲ್ಲವೂ ಅರ್ಜುನನ ಕಾರ್ಯವು. ಅಭಿಮನ್ಯುವನ್ನು ಭೀಮನೇ ಕರೆದುಕೊಂಡು ಹೋಗಿರುವನು" ಎಂದು ನಿರ್ಧರಿಸುತ್ತಿರಲು, ಶಕುನಿಯು ಅದನ್ನು ಒಪ್ಪಿಕೊಳ್ಳದೆ ಪ್ರತಿ ಮಾತನಾಡುತ್ತಿರುವಲ್ಲಿ, ಉತ್ತರನು ಹಠಾತ್ತಾಗಿ ಬಂದು ಎಲ್ಲರನ್ನೂ ನಮಸ್ಕರಿಸಿ, ಯುಧಿಷ್ಠಿರನ ಸಂದೇಶವನ್ನು ತಿಳಿಸುವನು. ಬಳಿಕ ದ್ರೋಣನ ಮಾತಿನಂತೆ ದುರ್ಯೋಧನನು ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡುವುದಕ್ಕೆ ಸಮ್ಮತಿಸುವನು. ಅದರಿಂದ ಎಲ್ಲರೂ ಸಂತುಷ್ಟರಾಗುವರು.

ಕವಿಯು ಮಹಾಭಾರತದ ಕಥೆಯನ್ನು ವಿಚಿತ್ರ ರೀತಿಯಿಂದ ರಚಿಸಿರುವುದು ಸರ್ವಜನಾಹ್ಲಾದ ಕರವಾಗಿರುವುದು. ಪಾಠಕರು ಒಮ್ಮೆ ಓದಿ ನೋಡಿದಲ್ಲಿ ಆಶ್ಚರ್ಯ ಭರಿತರಾಗಿ ಕವಿಯ ಚಮತ್ಕೃತಿ ಯನ್ನು ಕೊಂಡಾಡಿ ಆನಂದಿಸದಿರಲಾರರೆಂದು ದೃಢವಾಗಿ ನಂಬಿರುವೆನು. ಮುನ್ನುಡಿಯಲ್ಲಿ ಅನುವಾದಕರು ಕಥಾ ಸಾರಾಂಶದೊಂದಿಗೆ ಅನುವಾದದ ಉದ್ದೇಶವನ್ನು ಹೇಳಿಕೊಂಡಿದ್ದಾರೆ.

ನಾಂದಿ ಪದ್ಯ : ದ್ರೋಣಃ ಪೃಥಿವ್ಯರ್ಜುನ ಭೀಮದುತೋ
ಯಃ ಕರ್ಣಧಾರಃ ಶಕುನೀಶ್ವರಸ್ಯ ।
ದುರ್ಯೋಧನೋ ಭೀಷ್ಮ ಯುಧಿಷ್ಠಿರಃ ಸ
ಪಾಯಾತ್ ವಿರಾಡುತ್ತರಗೋಭಿಮನ್ಯುಃ ॥

ನಾಟಕದ ಪ್ರಸ್ತಾವನೆಯಲ್ಲಿ ಕಥಾ ಸಂದರ್ಭವನ್ನು ಸೂಚಿಸುವುದು ಮಹಾಕವಿ ಸಂಪ್ರದಾಯ ಸಿದ್ಧವಾದುದು. ಅಲಂಕಾರಿಕರು ಲಕ್ಷಣ ಗ್ರಂಥದಲ್ಲಿ ಇದೇ ಮಾರ್ಗವನ್ನೇ ಅನುಸರಿಸುವರು. ಅದಕ್ಕೆ ತಕ್ಕಂತೆಯೇ ಈ ನಾಟಕದಲ್ಲಿಯೂ, ಕವಿಯು ಮಂಗಳ ಶ್ಲೋಕದಲ್ಲಿನ ದ್ರೋಣ ಮುಂತಾದ ಶಬ್ದಗಳಿಂದ ಈ ನಾಟಕದ ಕಥಾವಿಷಯರೆನಿಸಿದ ದ್ರೋಣ, ಅರ್ಜುನ, ಭೀಮ, ಕರ್ಣ, ಶಕುನಿ, ದುರ್ಯೋಧನ, ಭೀಷ್ಮ, ಯುಧಿಷ್ಠರ, ವಿರಾಟ, ಉತ್ತರ ಗೋವುಗಳು, ಅಭಿಮನ್ಯು ಪದಗಳಿಂದ ಆಯಾ

ಪಾತ್ರಗಳನ್ನು ಸೂಚಿಸಿ, ಪ್ರಕೃತಾನುಸಾರವಾಗಿ ಅರ್ಥವು ಶ್ರೀಕೃಷ್ಣನಿಗೆ ಅನ್ವಯಿಸುವಂತೆ ರಚಿಸಿರುವನು ಪ್ರಕೃತವಾದ ಅರ್ಥಕ್ಕೆ ಅನುಸಾರವಾಗಿ ಪದ ರಚನಾ ಚಾತುರ್ಯದಿಂದ ಸೂಚಿಸುವುದಕ್ಕೆ ಯೋಗ್ಯವಾದ ಬೇರೊಂದು ಅರ್ಥವು ಸೂಚಿತವಾದರೆ "ಮುದ್ರಾಲಂಕಾರ"ವೆನಿಸುವುದು ಎಂಬ ಲಕ್ಷಣವನ್ನು ಅನುಸರಿಸಿ, ಈ ಮಂಗಳ ಶ್ಲೋಕವು ಬಂದಿರುವುದು. ಅನುವಾದಕಾರರು ಮೂಲ ಶ್ಲೋಕವನ್ನು ಅನುವಾದಿಸುವುದರ ಜೊತೆಗೆ ತಮ್ಮ ಮಾತುಗಳನ್ನು ಇಲ್ಲಿ ಸೇರಿಸಿದ್ದಾರೆ.

ಅನು : "ದ್ರೋಣ ಪಕ್ಷಿಯಂತೆ ಕಪ್ಪು ಬಣ್ಣದಿಂದ ಕೂಡಿ, ಭೂಮಿಯನ್ನು ಬೇಡುವುದಕ್ಕಾಗಿ ಭೀಮಾರ್ಜುನರಿಗೆ ದೂತನಾಗಿ, ಶಕುನೀಶ್ವರನೆನಿಸಿದ ಗರುಡನೆಂಬ ನಾವೆಯನ್ನು ನಡೆಯಿಸುವುದರಲ್ಲಿ ಕರ್ಣಧಾರನೆನಿಸಿ, ಯುದ್ಧದಲ್ಲಿ ಭಯಂಕರವಾದ ಪ್ರಯುಕ್ತ ಭೀಷ್ಮನೆಂತಲೂ, ರಣಮುಖದಲ್ಲಿ ಹಣೆಗೆ ಬೆನ್ನು ತೋರದೆ ಸ್ಥಿರವಾಗಿ ನಿಂತು ಹೋರಾಡುವವನಾದುದರಿಂದ ಯುಧಿಷ್ಠಿರನೆಂತಲೂ, ಶತ್ರುಗಳಿಂದ ಎದುರಿಸಲು ಅವಶ್ಯಕವಾದ ಕಾರಣ ದುರ್ಯೋಧನನೆಂತಲೂ, ಲೋಕೋತ್ತರವಾದ ದಾರಿಯಲ್ಲಿ ನಡೆಯುವ ಮೂಲಕ ಉತ್ತರಗನೆಂತಲೂ ಯಜ್ಞ ಮುಖದಲ್ಲಿ ಅಗ್ರ ಪೂಜೆಯನ್ನು ಕೈಗೊಳ್ಳುವುದರಿಂದ ಅಭಿಮನ್ಯುವೆಂತಲೂ ಕರೆಯಿಸಿಕೊಳ್ಳುವ ವಿರಾಟ್ ಶಬ್ದಮಚ್ಯನಾದ ಶ್ರೀಕೃಷ್ಣನು ನಮ್ಮೆಲ್ಲರನ್ನೂ ಸಲಹಲಿ!".

ಇಲ್ಲಿ ದ್ರೋಣಃ ಶಬ್ದವನ್ನು ಅನುವಾದಕ ದ್ರೋಣ ಪಕ್ಷಿಯಂತೆ ಕಪ್ಪುಬಣ್ಣದಿಂದ ಕೂಡಿ; ಯಃ ಕರ್ಣಧಾರಃ ಶಕುನಿಶ್ವರಸ್ಯ ಎನ್ನುವುದನ್ನು ಶಕುನೀಶ್ವರನೆನಿಸಿದ ಗರುಡನೆಂಬ ನಾವೆಯನ್ನು ನಡೆಯಿಸುವುದರಲ್ಲಿ ಕರ್ಣಧಾರನೆನಿಸಿ- ಹೀಗೆ ಒಂದೇ ಪದದಲ್ಲಿ ಅಡಗಿದ ಮುದ್ರಾಲಂಕಾರವನ್ನು ಉಪಯೋಗಿಸಿ ಅನುವಾದಿಸಿರುವುದು ವಿಶಿಷ್ಟ ಬಗೆಯೆನಿಸಿದೆ.

ಅನುವಾದಕರು ವಾಕ್ಯದ ಮೇಲ್ಮೈಗೆ ಅನುಸರಿಸಿ ಅನುವಾದಿಸಿರುವುದು ಇಲ್ಲಿ ಕಂಡು ಬರುತ್ತದೆ. ಪ್ರತಿಪದಾರ್ಥ ವಿವರಣೆಯು ಇಲ್ಲಿಲ್ಲ.

ಉದಾ : "ಸರ್ವೈರಂತಃಪುರೈಃ ಸಾರ್ಧಂ ಪ್ರೀತ್ಯಾ ಪ್ರಾಪ್ತೇಷು ರಾಜಸು ।
ಯಜ್ಞೋ ದುರ್ಯೋಧನಸ್ಯೈಷ ಕುರುರಾಜಸ್ಯ ವರ್ತತೇ ॥".

ಅನು : "ಕುರುರಾಜನಾದ ದುರ್ಯೋಧನನು ಯಜ್ಞ ದೀಕ್ಷೆಯನ್ನು ಕೈಗೊಂಡಿರುವನು. ಪೃಥಿವಿಯ ಅರಸರೆಲ್ಲರೂ ಯಜ್ಞದರ್ಶನ ಕುತೂಹಲದಿಂದ ತಂತಮ್ಮ ಅಂತಃಪುರ ಪರಿವಾರದೊಂದಿಗೆ ಬಿಜಮಾಡಿಸಿರುವರು".

ಪದಕ್ಕೆ ಪದಶಃ ಇಟ್ಟಂತಿರುವ ಶ್ಲೋಕಾನುವಾದವು ಕಂಡು ಬರುತ್ತದೆ.

ಉದಾ : ''ದ್ವಿಜೋಚ್ಛಿಷ್ಟೈರನ್ನೈಃ ಪ್ರಕುಸುಮಿತಕಾಶಾ ಇದ ದಿಶೋ
ಹ ವಿಧೂರ್ಮ್ಯೈಃ ಸರ್ವೇ ಹೃತಕುಸುಮಗಂಧಾಸ್ತರುಗಣಾಃ ।
ಮೃಗೈಸ್ತುಲ್ಯಾ ವ್ಯಾಘ್ರಾವಧನಿಭೃತ ಸಿಂಹಾಶ್ಚ ಗಿರಯೋ
ನತೇ ದೀಕ್ಷಾಂ ಪ್ರಾಪ್ತೇ ಜಗದಪಿಸಮಂ ದೀಕ್ಷಿತಮಿದ ॥''.

ಅನು : ''ಬ್ರಾಹ್ಮಣರು ತಿಂದು ತೇಗಿ, ಎಂಜಲಿನಲ್ಲಿ ಬಿಸುಟ ಅನ್ನರಾಶಿಯು ದಿಕ್ಕುದಿಕ್ಕಿನಲ್ಲಿಯೂ ಕಾಚಿಯ ಹೂಗೊಂಚಲಿನಂತೆ ಕಂಡುಬರುವುದು. ಅಗ್ನಿಯಲ್ಲಿ ಹೋಮ ಮಾಡಿದ ಆಹುತಿಗಳ ಧೂಮವು ಗಿಡ, ಮರ, ಬಳ್ಳಿಗಳ ಹೂಗೊಂಚಲಿನ ವಾಸನೆಯನ್ನು ಅಪಹರಿಸಿರುವುದು. ಹುಲಿಗಳು ಪಳಗಿದ ಜಿಂಕೆಗಳಂತೆ ಇರುವವರು. ಯಾವ ಬೆಟ್ಟದಲ್ಲಿ ನೋಡಿದರೂ ಗವಿಗಳೊಳಗಣ ಸಿಂಹಗಳೆಲ್ಲಾ ಕೊಲ್ಲಲ್ಪಟ್ಟಿರುವವು. ರಾಜಾಧಿರಾಜನೆನಿಸಿದ ದುರ್ಯೋಧನನು ದೀಕ್ಷೆಯನ್ನು ಕೈಗೊಂಡುದನ್ನು ಕಂಡು ಲೋಕವು ದೀಕ್ಷಿತವಾಗಿರುವಂತೆ ಕಾಣುವುದು''.

ಕೆಲವು ಶ್ಲೋಕಾನುವಾದಗಳಲ್ಲಿ ಸಂಗ್ರಹಾನುವಾದ ಕಂಡುಬರುತ್ತದೆ.

ಉದಾ ೧) ''ಅಗ್ನಿರಗ್ನಿಭಯಾದೇಷ ಭೀತೈರ್ನಿವಾಸ್ಯತೇ ದ್ವಿಜೈಃ ।
ಕುಲೇ ವ್ಯತ್ಕಾಂತ ಚಾರಿತ್ರೇ ಜ್ಞಾತಿಜ್ಞಾತಿಭಯಾದಿಪ ॥''.

ಅನು : ''ಸರಿ, ಸರಿ ಚೆನ್ನಾಗಿದೆ. ಇದು ಹೀಗೆಯೇ ಸರಿ. ಧರ್ಮ ವಿರುದ್ಧವಾದ ನಡವಳಿಕೆಯಿಂದ ಬಹಿಷ್ಕೃತನಾದವನು ತನ್ನ ನಂಟರನ್ನು ಕಂಡು ತಾನಾಗಿಯೇ ಹಿಂದಿರುಗಿ ಹೋಗುವಂತೆ ಅಗ್ನಿಜ್ವಾಲೆಗೆ ಹೆದರಿದ ದ್ವಿಜರು ವೈದಿಕಾಗ್ನಿಯನ್ನು ಬೆಂಕಿಯೆಂಬ ಭಯದಿಂದ ದೂರದಲ್ಲಿಯೇ ನೋಡಿ ಹಿಂದಿರುಗುವರು''.

ಉಪಮಾಲಂಕಾರದ ಬಳಕೆಯೂ ಇಲ್ಲಿ ಕಂಡು ಬಂದಿರುವುದರಿಂದ ಆ ಅಲಂಕಾರಯುಕ್ತವಾದ ಶ್ಲೋಕಗಳನ್ನು ಕವಿ ಯಥಾವತ್ತಾಗಿ ಗದ್ಯಾನುವಾದ ಮಾಡಿದ್ದಾರೆ.

ಉದಾ : ''ವಲ್ಮೀಕ ಮೂಲಾತ್ ದಹನೇನ ಭೀತಾಃ
ತತ್ಕೋಟರೈಃ ಪಂಚ ಸಮಂ ಭುಜಂಗಾಃ ।
ಸಮಂ ವಿಪನ್ನಸ್ಯ ನರಸ್ಯ ದೇಹಾತ್
ವಿನಿಸೃತಾಃ ಪಂಚ ಯಥೇಂದ್ರಿಯಾಣಿ ॥''.

ಅನು: "ಹತ್ತಿರದಲ್ಲಿರುವ ಹುತ್ತಕ್ಕೆ ಅಗ್ನಿಯ ಜ್ವಾಲೆಯು ಸೋಕಿದ ಕಾರಣ ಒಳಗಿದ್ದ ಐದು ಸರ್ಪಗಳೂ ಏಕಕಾಲದಲ್ಲಿಯೇ ಪೊಟರೆಯಿಂದ ಹೊರಗೆ ಬಂದು, ಮೃತಪಟ್ಟ ಅರಸನ ದೇಹದಿಂದ ಸಮಕಾಲದಲ್ಲಿಯೇ ಹೊರಗೆ ಬರುವ ಐದು ಇಂದ್ರಿಯಗಳೋ ಎಂಬಂತೆ ಕಂಗೊಳಿಸುವವು".

ಮೂಲ ಶ್ಲೋಕಗಳೆಲ್ಲವೂ ಗದ್ಯಾನುವಾದಗಳಾಗಿರುವುದೊಂದು ವಿಶೇಷ.

ಉದಾ: "ಅತೀತ್ಯ ಬಂಧೂನ್ ಅಮುಷ್ಯ ಮಿತ್ರಾ-
ಣ್ಯಾಚಾರ್ಯ ಮಾಗಚ್ಛತಿ ಶಿಷ್ಯದೋಷಃ ।
ಬಾಲಂ ಹ್ಯಪತ್ಯಂ ಗುರುವೇ ಪ್ರದಾತುಃ
ನೈವಾಪರಾಧೋಸ್ತಿ ಪಿತುರ್ನ ಮಾತುಃ ॥".

ಅನು: "ಸಾವಿರಾರು ಮಂದಿ ನೆಂಟರೂ- ಇಷ್ಟರೂ, ಆಪ್ತರೂ ಇರುತ್ತಿದ್ದರೂ, ನೂರಾರು ಮಂದಿ ಅಂತರಂಗ ಮಿತ್ರರಿದ್ದರೂ, ಶಿಷ್ಯನು ಮಾಡುವ ದೋಷವನ್ನೆಲ್ಲಾ ಲೋಕವು ಗುರುವಿನ ತಲೆಯ ಮೇಲೆಯೇ ಹೊರಿಸುವುದಲ್ಲಾ ! ಹೆತ್ತ ತಂದೆ-ತಾಯಿಗಳಾದರೋ ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ಮಗನನ್ನು ಗುರುವಿಗೆ ಸಮರ್ಪಿಸುವ ಕಾರಣ, ಅವರ ತಲೆಯ ಮೇಲಂತೂ ಯಾವ ವಿಧವಾದ ಅಪರಾಧವನ್ನು ಹೊರಿಸುವುದಕ್ಕೂ ಅವಕಾಶವೇ ಇಲ್ಲವಷ್ಟೆ".

(೨) ಬಾಣಾಧೀನಾ ಕ್ಷತ್ರಿಯಾಣಾಂ ಸಮೃದ್ಧಿಃ
ಪುತ್ರಾಪೇಕ್ಷೀ ವಂಚ್ಯತೇ ಸನ್ನಿಧಾತಾ ।
ವಿಪ್ರೋತ್ಸಂಗೇ ವಿತ್ತಮಾವರ್ಜ್ಯ ಸರ್ವಂ
ರಾಜ್ಞಾದೇಯಂ ಚಾಪ ಮಾತ್ರಂ ಸುತೇಭ್ಯಃ ॥

ಅನು: "ಅರಸರ ಏಳಿಗೆಯು ಅಂಬಿನ ಆಸರೆಯಲ್ಲಿರುವುದು. ಇಂತು ಬಾಣಬಲದಿಂದ ಗಳಿಸಿದ ಹಣವನ್ನು ಮಕ್ಕಳ ಸಲುವಾಗಿ ಬಚ್ಚಿಡುವವನಿಗೆ ಇಹಪರಗಳೆರಡೂ ಇಲ್ಲದೆ, ಅವನು ತನ್ನನ್ನು ತಾನೇ ವಂಚಿಸುವನು. ರಾಜ್ಯಾಧಿಕಾರದಲ್ಲಿ ನಿಯುಕ್ತನಾದ ಅರಸನು ಧರ್ಮಮಾರ್ಗದಿಂದ ಸಂಪಾದಿಸಿದ ಹಣವನ್ನೆಲ್ಲಾ ಭೂಸುರರ ಆಧೀನ ಮಾಡಿ, ಮಕ್ಕಳಿಗೆ ಬಿಲ್ಲು ಹೊರತು ಮತ್ತೇನನ್ನೂ ಕೂಡಿಸಿಟ್ಟು ಕೊಡಬಾರದು".

ಮೂಲ ಸಂಭಾಷಣೆಯನ್ನು ಅನುವಾದದಲ್ಲಿ ವಿಸ್ತರಿಸಿಕೊಟ್ಟಿರುವದು ಒಂದು ವೈಶಿಷ್ಟ್ಯ.

ದ್ರೋಣ: "ಧರ್ಮ ಮಾಲಂಭಮಾನೇನ ದುರ್ಯೋಧನೇನಾಹ ಮೇದಾನುಗೃಹೀತೋ ನಾಮ।".

ಅನು: ''ದುರಾತ್ಮನಾದ ದುರ್ಯೋಧನನು ಇಷ್ಟೊಂದು ಧರ್ಮ ಕಾರ್ಯವನ್ನು ನಡೆಯಿಸುವನೆಂದು ಯಾರು ತಿಳಿದಿದ್ದರಾ? ಇದರಿಂದ ನನಗೇನಾದರೂ ಲೇಶ ಮಾತ್ರವಾದರೂ ಫಲವುಂಟೇ? ಯಾರಿಗೋ ಏನೇನನ್ನೋ। ಅವರೆದರು ಕೋರಿದುದನ್ನೆಲ್ಲಾ ಎಲ್ಲರಿಗೂ ಕೊಟ್ಟು ಸಮತುಷ್ಟನಾಗಿರುವಂತೆ! ನನಗೆ ಬಂದ ಲಾಭವೇನು?.

ಉದಾ (೨) ದುರ್ಯೋಧನ:

''ಕೃತಶ್ರದ್ಧೋ ಹ್ಯಾತ್ಮಾ ವಹತಿ ಪರಿತೋಷಂ ಗುರಾಜನೋ
ಜಗತ್ ವಿಶ್ವಸ್ತಂ ಮೇ ನಿವಸತಿ ಗುಣೋ ನಷ್ಟ ಮಯಶಃ।
ಮೃತ್ಯೈಃ ಪ್ರಾಪ್ಯಃ ಸ್ವರ್ಗೋಯದಿಹ ಕಥೆಯತ್ಯೇತದನೃತಾ
ಪರೋಕ್ಷೋ ನ ಸ್ವರ್ಗೋ ಬಹುಗುಣಮಿಹೈವೈಷ ಫಲತಿ॥''.

ಅನು: ನನ್ನ ಅಂತರಂಗವು ಶ್ರದ್ಧೆಯಿಂದ ತುಂಬಿರುವುದು. ಗುರುಹಿರಿಯರೆಲ್ಲರೂ ಹಿಗ್ಗುತ್ತಿರುವರು. ಲೋಕವೆಲ್ಲವೂ ನನ್ನ ವಿಷಯದಲ್ಲಿ ಹೆಚ್ಚಿನ ವಿಶ್ವಾಸವನ್ನು ಇರಿಸತೊಡಗಿರುವುದು. ಇದೇ ಸುಗುಣ ಸಂಪತ್ತಿಯೇ ಇನ್ನು ಮೇಲೆ ನನ್ನಲ್ಲಿ ಸ್ಥಿರವಾಗಿರುವುದು. ನನ್ನ ಅಪಕೀರ್ತಿಯೆಲ್ಲವೂ ಮಾಯವಾಯಿತು. ಸ್ವರ್ಗವು ಸತ್ತ ಮೇಲೆ ಲಭಿಸುವುದೆಂದು ಹೇಳುವುದು ಮರುಳರ ಮಾತು. ಛಿಃ ಛಿಃ ಇದೆಲ್ಲಾ ಸುಳ್ಳು. ಇದಕ್ಕಿಂತಲೂ ಬೇರೆಯಾದ ಸ್ವರ್ಗವೂ ಒಂದಿರುವುದೇ? ಹಾಗೆ ಇದ್ದುದೇ ದಿಟವಾದರೆ, ಅದು ಎಂದಿಗಾದರೂ ಕಣ್ಣಿಗೆ ಕಾಣದಿರುವುದೇ! ಈಗಲೇ ಬಗೆ ಬಗೆಯಾಗಿ ನನ್ನ ಸುಕೃತದ ಫಲವು ಕಂಡು ಬರುತ್ತಿದೆಯಲ್ಲವೇ? ಪ್ರತ್ಯಕ್ಷ ಫಲದಾಯಕವೆನಿಸಿದ ಯಜ್ಞವು ಎಂದಿಗಾದರು ಪರೋಕ್ಷ ಫಲದಾಯಕ ವಾಗುವುದೇ?. ಇಲ್ಲಿ ನಿಕಟವಾದಂಥ ಅನುವಾದ ಎನ್ನುವುಕ್ಕಿಂತಲೂ ಆಡು ಮಾತಿನ ಅರ್ಥ ವಿವರಣೆ ಕಂಡು ಬರುತ್ತದೆ. ಕೆಲ ಸಂದರ್ಭಗಳಲ್ಲಿ ಇದು ಅತಿರೇಕವೆನಿಸುತ್ತದೆಯಾದರೂ ಸಾಮಾನ್ಯ ಜನರನ್ನು ದೃಷ್ಟಿ ಯಲ್ಲಿಟ್ಟುಕೊಂಡಾಗ ಈ ಮಾತುಗಳು ಸಹ್ಯವೆನಿಸುತ್ತವೆ.

ಉದಾ : ''ದ್ರೋಣಃ ಕಥಂ ಧರ್ಮ ವಂಚನೇತಿ? ಮಾ ತಾವತ್ ಭೋ ಗಾಂಧಾರ ವಿಷಯ ವಿಸ್ಮಿತ। ಶಕುನೇತ್ವದನಾರ್ಯಭಾಮತ್ ಸರ್ವಲೋಕ ಮನಾರ್ಯಮಿತಿ ಮನ್ಯಸೇ। ಹಂತ ಭೋಃ।''.

ಅನು: ಏನು? ಧರ್ಮವಂಚನೆಯೇ ? ಎಲೋ ! ಬೇಡ. ಹಾಗೆಂದಿಗೂ ತಿಳಿಯಬೇಡ. ಕೂಪ ಕೂರ್ಮದಂತೆ ಗಾಂಧಾರ ದೇಶವನ್ನು ಮಾತ್ರ ನೋಡಿ, ಯಾವುದೋ ಒಂದು ಮೂಲೆಯಲ್ಲಿ ಇದ್ದ ಮಾತ್ರದಿಂದಲೇ ನಿನಗೂ ಇಷ್ಟೊಂದು ದುರಂಹಕಾರವೇ ? ನೀನಾವದೇಶವನ್ನು ಬಲ್ಲೆ ? ಧರ್ಮದ ಗಂಧವನ್ನಾದರೂ ಬಲ್ಲೆಯಾ ? ಶಕುನಿಯೇ! ನೀನೊಬ್ಬನು ನೀಚನಾದ ಮಾತ್ರಕ್ಕೆ 'ತಾ ಕಳ್ಳ ಪರರ ನಂಬ'' ಎಂಬಂತೆ ಎಲ್ಲರೂ ನಿನ್ನಂತೆಯೇ ಇರುವುರೆಂದು ತಿಳಿದೆಯಾ ? ಅಯ್ಯಾ ! ಅದು ಹಾಗಿರಲಿ.

ಇಲ್ಲಿ 'ಮಾ ತಾವತ್ ಭೋ ಗಾಂಧಾರ ವಿಷಯ ವಿಸ್ಮಿತ!' ಎನ್ನುವುದಕ್ಕೆ ಕೂಪಕೂರ್ಮದಂತೆ ಗಾಂಧಾರ ದೇಶವನ್ನು ಮಾತ್ರ ನೋಡಿ, ಯಾವುದೋ ಒಂದು ಮೂಲೆಯಲ್ಲಿ ಇದ್ದ ಮಾತ್ರದಿಂದಲೇ ನಿನಗೂ ಇಷ್ಟೊಂದು ದುರಂಹಕಾರವೇ ? ಎಂದಿದ್ದಾರೆ. ಇದು ಪದಶಃ ಅಲ್ಲದಿದ್ದರೂ ನಿಕಟಾನುವಾದ ಕೂಡ ಆಗದೇ ತಮಗೆ ಅನಿಸಿರುವ ಹೇಳಿಕೆಯೊಂದನ್ನು ಹೇಳಿದ ವ್ಯಾಖ್ಯಾನವೆನಿಸುತ್ತದೆ. 'ತ್ವದನಾರ್ಯ ಭಾವಾತ್ ಸರ್ವಲೋಕ ಮನಾರ್ಯಮಿತಿ' ಎಂಬುದನ್ನು ನೀನಾವ ದೇಶವನ್ನು ಬಲ್ಲೆ? ಧರ್ಮದ ಗಂಧವನ್ನಾದರೂ ಬಲ್ಲೆಯಾ ? ಶಕುನಿಯೆ! ನೀನೊಬ್ಬನು ನೀಚನಾದ ಮಾತ್ರಕ್ಕೆ 'ತಾ ಕಳ್ಳ ಪರರ ನಂಬ' ಎಂಬಂತೆ ಎಲ್ಲರೂ ನಿನ್ನಂತೆಯೇ ಇರುವರೆಂದು ತಿಳಿದೆಯಾ? ಹೀಗೆ ಹೇಳಿದ್ದಾರೆ.

## ೧೨. ಕನ್ನಡ ವೇಣೀಸಂಹಾರ ನಾಟಕ :

ಇದು ಕವಿ ಮೃಗರಾಜ ಲಕ್ಷ್ಮಣಭಟ್ಟನಾರಾಯಣನೆಂಬುವವನು ಸಂಸ್ಕೃತದಲ್ಲಿ 'ವೇಣಿಸಂಹಾರ'ವೆಂಬ ನಾಟಕ ಕನ್ನಡ ಅನುವಾದವಾಗಿದೆ. ಪಂಡಿತ ಜಯರಾಯಾಚಾರ್ಯರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಶ್ರೀ ಜಯರಾಯಾಚಾರ್ಯರು ರಾಜಾಶ್ರಯವನ್ನೇ ನಂಬಿ ಬದುಕಿದವರು. ಅವರು ಮೈಸೂರು ಅರಸರಾದ ಚಾಮರಾಜ ಒಡೆಯರ ಅಪೇಕ್ಷೆಯ ಮೇರೆಗೆ ಇದನ್ನು ಕನ್ನಡಕ್ಕೆ ಅನುವಾದಿಸಿದರು.

ನಾಟಕದ ಕಥಾ ವಸ್ತು ತೀರ ವಿಚಾರವಾದುದು. ನಾಯಕನ ಅಥವಾ ನಾಯಿಕೆಯ ಹೆಸರು ಇಡದೆ ಈ ನಾಟಕಕ್ಕೆ 'ವೇಣಿಸಂಹಾರ' ಎಂಬ ಘಟನೆಯ ಹೆಸರಿಟ್ಟಿದ್ದನ್ನು ನೋಡಿದರೆ ಇದರಲ್ಲಿ ಒಂದಕ್ಕಿಂತ ಹೆಚ್ಚು ಜನ ಪ್ರಮುಖ ಪಾತ್ರಧಾರಿಗಳಾಗಿದ್ದಾರೆ ಎನ್ನುವುದು ಗೊತ್ತಾಗುತ್ತದೆ. ಮಹಾಭಾರತದಲ್ಲಿ ಶ್ರೀಕೃಷ್ಣನು ಕೌರವನ ಬಳಿ ಹೋಗಿ ಸಂಧಿಗಾಗಿ ಪ್ರಯತ್ನಿಸುತ್ತಾನೆ. ದುರ್ಯೋಧನನ ಹಟದಿಂದ ಮುರಿದುಬಿದ್ದು ರಣಕಹಳೆ ಊದಲಾಗುತ್ತದೆ. ಭೀಷ್ಮ, ದ್ರೋಣ, ಕರ್ಣ, ಶಲ್ಯ ಮತ್ತು ಕೊನೆಯಲ್ಲಿ ದುರ್ಯೋಧನನ ಸಂಹಾರವಾಗಿ ಭೀಮನು ಕೌರವನ ತೊಡೆಯೊಡೆದು ದ್ರೌಪದಿಯ ಮುಡಿಗಟ್ಟುವವರೆಗಿನ ಕಥೆಯನ್ನು ಈ ನಾಟಕವು ಒಳಗೊಂಡಿದೆ.

ಭೀಮ ಮೊದಲಿನಿಂದಲೂ ಯುದ್ಧದ ಪರವಾಗಿಯೇ ಇದ್ದಾನೆ. ಆದ್ದರಿಂದಲೆ ಅವನಿಗೆ ಶ್ರೀಕೃಷ್ಣನು ಕೌರವರೊಡನೆ ಸಂಧಿಗೆ ಹೋಗುವುದು ಇಷ್ಟವಿಲ್ಲ. ಭೀಮನು ಸಹದೇವನೊಡನೆ ಮಾತಿಗೆ ಇಳಿದಿದ್ದಾನೆ. ಭೀಮನು ಈ ವಿಷಯವಾಗಿ ಧರ್ಮರಾಜನನ್ನು ನಿಂದಿಸಲು ಹಿಂದೆ ಮುಂದೆ ನೋಡುವುದಿಲ್ಲ. ಸಹದೇವನು ಭೀಮನಿಗೆ ನಿನ್ನ ಮಾತಿನಿಂದ ಧರ್ಮರಾಜನು ಖೇದಪಟ್ಟಾನು ಎಂದು ಎನ್ನಲು, ಭೀಮನ ಈ ಕೆಳಗಿನ ಮಾತು ಮೊನಚಾಗಿವೆ.

"ಭೀಮ-(ನಕ್ಕು) ಏನು ಮಹಾರಾಜನು ಖೇದಪಡುತ್ತಾನೆಯೋ? (ಸಾಮಿಷ್ಯದಿಂದ)ವತ್ಸ, ಮಹಾರಾಜನು ಖೇದವನ್ನು ಬಲ್ಲನೋ? ಹಾಗಿದ್ದರೆ ಜನತಾಸ್ಥಾನ ದುರ್ದಶೆಯೊಳಾಪಾಂಚಾಲಿಕಂಗೊಂಡಳಾ ವನದಲ್ಲಿರ್ದೆವು ಬೇಡರೊಂದಿಗೆ ಚಿರಂ ನಾರ್ವಟ್ಟೆಯುಟ್ಟಾವಿರಾ ಟನೊಳಿರ್ದ್ದಾದುದಡಂಗಿ ಮಾಡದುದಲ್ಲಿದು ಖಿನ್ನನೊ ಳ್ಖೇದಮಂ ಮುನಿವೆಳ್ವೊರೆಯಾಂಟನಾಕುರಗಳೊಳ್ತಾನಾನನವ್ಯಾಪಿಯುಂ ॥೧॥".

ಭೀಮ ದ್ರೌಪದಿಯ ವಾಸಭವನಕ್ಕೆ ಹೋಗುತ್ತಾನೆ. ದ್ರೌಪದಿಯು ಕಣ್ಣೀರನ್ನು ಸುರಿಸುತ್ತಾ ಭೀಮನ ಸಮೀಪಕ್ಕೆ ಬರುವವಳಾಗುತ್ತಾಳೆ. ಅದಕ್ಕೆ ಸಹದೇವನು ಮಾಮಿಂಚಿನ ಸಿಡಿಲಿನ ತೇಜಕ್ಕೆ ಮಳೆ-ಗಾಳಿ ಬಂದಂತೆ, ಭೀಮನೊಳಗಿನ ನಿಟ್ಟೆಂಬ ಅಗ್ನಿಗೆ ಇನ್ನಷ್ಟು ವಿಜೃಂಭಿಸುವಂತೆ ಮಾಡುತಿದ್ದಾಳೆ ಎಂದು ಆತಂಕ ಪಡುತ್ತಾನೆ.

''ಮಾಮಿಂಚಿನೊಳಿಂಗ ತೇಜಮ
ನಾಮಳೆಗಾಲಂ ಸಮಂತು ಪೆರ್ಚ್ಚುವ ತೆರದಿಂ
ಭೀಮನೊಳೊಗೆದಿಹ ಮುಳಿಸಿಚನ
ಧಾಮವನೀ ಕೃಷ್ಣ ನಿಸದಯಜ್ಞಜ್ಜ್ರುಂಭಿಸುವಳ್''.

ದ್ರೌಪದಿಗೆ ಭೀಮನ ಮೇಲೆಯೇ ಹೆಚ್ಚು ನಂಬಿಕೆ. ಅವಳಿಗೆ ತನ್ನ ಹಟಸಾಧನೆ ಕೇವಲ ಭೀಮನಲ್ಲಿ ಮಾತ್ರ ನೆರವೇರುವುದು ಎಂದು ಗೊತ್ತಾಗಿದೆ. ದ್ರೌಪದಿ ತನಗೆ ಭಾನುಮತಿಯಿಂದ ಆದ ಅವಮಾನವನ್ನು ತನ್ನ ಸಖಿಯರ ಮುಖಾಂತರ ಹೇಳಿಸುತ್ತಾಳೆ. ಗಾಂಧಾರಿಯ ಪಾದವಂದನೆಯನ್ನು ಮಾಡಿ ಬರುವಾಗ ಭಾನುಮತಿಯು ಭೆಟ್ಟಿಯಾಗುತ್ತಾಳೆ. ಅವಳು ದ್ರೌಪದಿಯನ್ನು ಅಪಹಾಸಮಾಡಿ 'ಎಲೆ ಯಜ್ಞಸೇನಿ! ನಿನ್ನ ಗಂಡಂದಿರು ಐದು ಗ್ರಾಮಗಳನ್ನು ಬೇಡುತ್ತಿರುವರೆಂದು ನಾನು ಕೇಳಿರುವೆನು. ಬಿಚ್ಚಿಕೊಂಡಿರುವ ನಿನ್ನ ಕೂದಲುಗಂಟನ್ನು ಇನ್ನೂ ಏತಕ್ಕೆ ಕಟ್ಟಿಲ್ಲ? ಎಂದು ಕೇಳುತ್ತಾಳೆ. ಆವಾಗ ದ್ರೌಪದಿಯ ಸಖಿ 'ಎಲೆ ಭಾನುಮತಿ, ನಿಮ್ಮ ಕೂದಲು ಗಂಟು ಬಿಚ್ಚದೆ, ನಮ್ಮ ದೇವಿಯ ಕೂದಲು ಹೇಗೆ ಕಟ್ಟಲ್ಪಟ್ಟೀತು?' ಎಂದು ಉತ್ತರ ಕೊಡುತ್ತಾಳೆ. ಸೂಚ್ಯವಾಗಿಯೇ ಇಲ್ಲಿ ದುರ್ಯೋಧನನ ಅವಸಾನವನ್ನು ಪ್ರಸ್ಥಾಪಿಸಲಾಗಿದೆ. ಶ್ರೀಕೃಷ್ಣಸಂಧಾನ ವಿಫಲವಾಗಿ ರಣಕಹಳೆ ಮೊಳಗುತ್ತದೆ.

ಇತ್ತ ನಕುಲ (ಮುಂಗಿಸಿ) ಒಂದು ನೂರು ಹಾವುಗಳನ್ನು (ಕೌರವರನ್ನು) ತಿನ್ನುವ ಸ್ವಪ್ನ ಭಾನುಮತಿಗೆ ಬೀಳುತ್ತದೆ. ಈ ಅನಿಷ್ಟಶಕುನವನ್ನು ಕೊನೆಗಾಣಿಸಲು ಅವಳು ದೇವತಾ ಪೂಜೆಗೆ ತೊಡಗುತ್ತಾಳೆ. ನಕುಲನ ವಿಷಯದಲ್ಲಿ ಬಿದ್ದಂಥ ಸ್ವಪ್ನವನ್ನು ಕೇಳಿ ದುರ್ಯೋಧನನಿಗೆ ಭಾನುಮತಿಯ ವಿಷಯದಲ್ಲಿ ಶಂಕೆ ಮೂಡುತ್ತದೆ. ಆದರೆ ಅದು ಕೊನೆಗೆ ನಿವಾರಣೆಯಾಗುತ್ತದೆ. ಅವನು ಅವಳೊಡನೆ ಸುಖಪಡಲು ಆಶಿಸುತ್ತಾನೆ. ಬಿರುಗಾಳಿ ಬಿಸಿ ಅವರ ಸಂಭಾಷಣೆಗೆ ಅಡ್ಡಿಯಾಗುತ್ತದೆ. ಅಷ್ಟರಲ್ಲಿ ಜಯದ್ರಥನ ತಾಯಿಯೂ ಬಂದು ಅಭಿಮನ್ಯುವಿನ ಮೃತ್ಯುವಿನಿಂದ ಕೋಪಾದಿತನಾದ ಅರ್ಜುನನು ನಾಳೆ ಸಂಜೆಯೊಳಗಾಗಿ ಜಯದ್ರಥನ ತಲೆಯನ್ನು ಕಡಿದು ಹಾಕುವುದಾಗಿ ಪ್ರತಿಜ್ಞೆ ಮಾಡಿದ್ದಾನೆ. ಇದು ಸಾಧ್ಯವಾಗದಿದ್ದರೆ ತಾನು ಅಗ್ನಿಪ್ರವೇಶ ಮಾಡುವುದಾಗಿ ಹೇಳಿದ್ದಾನೆ. ಕೌರವನು ತಕ್ಕ ಉಪಾಯವನ್ನು ಮಾಡಿದರ ಜಯದ್ರಥ ಕೃಷ್ಣನ ಮಹಿಮೆಯಿಂದ ಸತ್ತು ಹೋಗಿ ಅರ್ಜುನನ ಅಗ್ನಿಪ್ರವೇಶ ನಿಲ್ಲುತ್ತದೆ.

ಇತ್ತ ಧೃಷ್ಟದ್ಯುಮ್ನನು ದ್ರೋಣಾಚಾರ್ಯರ ತಲೆಯನ್ನು ಕತ್ತರಿಸಿ ಅಶ್ವತ್ಥಾಮನ ಕೋಪಕ್ಕೆ ಈಡಾಗುತ್ತಾನೆ. ಕೃಪನು ಅವನಿಗೆ ಸೇನಾಧಿಪತಿಯಾಗಿ ಧೃಷ್ಟದ್ಯುಮ್ನನನ್ನು ಸಂಹರಿಸಲು ಅನುವಾಗುವಂತೆ ದುರ್ಯೋಧನನ ಬಳಿಗೆ ಕರೆದೊಯ್ಯುತ್ತಾನೆ. ಆದರೆ ಈಗಾಗಲೇ ಕರ್ಣನಿಗೆ ಅವನು ಭಾಷೆ ಕೊಟ್ಟಾಗಿದೆ. ಕರ್ಣ ಅಶ್ವತ್ಥಾಮರ ಕಲಹ ಉಂಟಾಗುತ್ತದೆ. ಇದರಿಂದಾಗಿ ಸೂತಪುತ್ರನಾದ ಕರ್ಣ ಸೇನಾಧಿಪತಿಯಾಗಿರುವ ತಾನು

ಯುದ್ಧದಲ್ಲಿ ಪಾತ್ರವಹಿಸುವುದಿಲ್ಲ ಎಂದು ಪ್ರತಿಜ್ಞೆ ಮಾಡುತ್ತಾನೆ. ಕರ್ಣನ ಮಗ ವೃಷಸೇನ ಮಡಿಯುತ್ತಾನೆ. ಧೃತರಾಷ್ಟ್ರ ಗಾಂಧಾರಿಯರು ರಣರಂಗಕ್ಕೆ ಬಂದು ಸಂಧಿ ಮಾಡಿಕೊಳ್ಳಿ ಎಂದು ದುರ್ಯೋಧನನಿಗೆ ಬುದ್ಧಿವಾದ ಹೇಳುವರು. ಆದರೆ ಅದು ವ್ಯರ್ಥವಾಗುವುದು. ಕರ್ಣನ ಸಾವಿನ ಸುದ್ದಿ ರಣರಂಗದಿಂದ ಬರುತ್ತದೆ. ಕರ್ಣನ ಸಾವಿಗೆ ಸೇಡನ್ನು ತೀರಿಸಿಕೊಳ್ಳಲು ದುರ್ಯೋಧನ ಹೊರಡುವಾಗಲೇ ಭೀಮಾರ್ಜುನರು ಅಲ್ಲಿಗೆ ಬರುತ್ತಾರೆ. ಭೀಮ ಧೃತರಾಷ್ಟ್ರ ಮತ್ತು ಗಾಂಧಾರಿಗೆ ಗೌರವ ಕೊಟ್ಟರೂ ಹಿಯ್ಯಾಳಿಸುತ್ತಾನೆ. ದುರ್ಯೋಧನ ಪ್ರತಿ ಮಾತನಾಡುತ್ತಾನೆ. ಅಶ್ವತ್ಥಾಮನು ದುಶ್ಶಾಸನನ ಸಾವಿನ ಸೇಡನ್ನು ತೀರಿಸಲು ಅವಕಾಶ ಬೇಡಿದರೂ ದುರ್ಯೋಧನ ಲಕ್ಷಿಸುವುದಿಲ್ಲ. ದುರ್ಯೋಧನ ಸರೋವರದಲ್ಲಿ ಅಡಗುತ್ತಾನೆ. ಆದರೆ ಶ್ರೀಕೃಷ್ಣನಿಗೆ ಇದು ಗೊತ್ತಾಗಿ ದುರ್ಯೋಧನ ಮತ್ತು ಭೀಮನಲ್ಲಿ ಯುದ್ಧವಾಗಿ ದುರ್ಯೋಧನ ಮಡಿಯುತ್ತಾನೆ. ಚಾರ್ವಾಕನೆಂಬ ದುರ್ಯೋಧನ ಮಿತ್ರ ಮುನಿವೇಶದಿಂದ ಬಂದು ಭೀಮಾರ್ಜುನರ ಸಾವಿನ ಸುದ್ದಿ ತರುತ್ತಾನೆ. ಆದರೆ ಮೋಸ ಬಯಲಾಗುತ್ತದೆ. ಭೀಮ ದ್ರೌಪದಿಯ ಮುಡಿಕಟ್ಟಿ ಪ್ರತಿಜ್ಞೆ ಪೂರೈಸುತ್ತಾಳೆ.

ಕಥಾವಸ್ತು ದೊಡ್ಡದಾಗಿದ್ದರಿಂದ ನಾಟಕಕ್ಕೆ ಅದುವೇ ಭಾರವಾದಂತಾಗಿದೆ. ಇದು ಹಲವಾರು ನಾಟಕಗಳಿಗೆ ವಸ್ತುವಾಗಬಹುದು. ನಾಟಕದ ನಾಯಕ, ನಾಟಕದ ಪ್ರತಿಜ್ಞೆ ಮತ್ತು ಘಟನೆಗಳನ್ನು ಮೂಲ ಮಹಾಭಾರತದಲ್ಲಿ ಧರ್ಮರಾಜನೇ ನಾಯಕ ಆದರೆ ಇಲ್ಲಿ ಅವನು ಒಂದೇ ಅಂಕದಲ್ಲಿ ಮಾತ್ರ ಬರುತ್ತಾನೆ. ಸಾತ್ವಿಕ ಗುಣದ ನಾಯಕನಾಗಿದ್ದರಿಂದ ಮತ್ತು ಪ್ರಸ್ತುತ ನಾಟಕ ಯುದ್ಧಸಂಬಂಧಿಯಾದುದರಿಂದ ಅವನಿಗೆ ಅಷ್ಟು ಪ್ರಾಮುಖ್ಯತೆ ಸಿಕ್ಕಿಲ್ಲ. ಒಂದು ಅರ್ಥದಲ್ಲಿ ಭೀಮನು ನಾಟಕದ ಪ್ರಧಾನ ಪಾತ್ರಧಾರಿಯಾಗಿದ್ದಾನೆ. ಓಜಸ್ಸು ಉಂಟುಮಾಡುವ ಈ ನಾಟಕವು ಭೀಮನಿಗೆ ಪ್ರಾಮುಖ್ಯತೆಯನ್ನು ತಂದುಕೊಟ್ಟಿದೆ. ಭೀಮ ಖಚಿತ ನಿರ್ಧಾರವುಳ್ಳವನು. ಅವನಿಗೆ ಯುದ್ಧದ ಅನಿವಾರ್ಯತೆಯಲ್ಲಿ ಬಲವಾದ ನಂಬಿಕೆ. ಉಳಿದ ಪಾಂಡವರಿಗೆ ಬಾಧಿಸುವ ದ್ವಂದ್ವಗಳು ಇವನಿಗೆ ಎಂದಿಗೂ ಕಾಡುವುದಿಲ್ಲ. ದ್ರೌಪದಿಯನ್ನು ಅತ್ಯಂತ ಹತ್ತಿರದಿಂದ ಬಲ್ಲ ಅವನು ಹಲವಾರು ವಿಷಯದಲ್ಲಿ ಅವಳ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟವನು. ದ್ರೌಪದಿ ಸಂಕಟದಲ್ಲಿ ಯಾವಾಗಲೂ ಭೀಮನಲ್ಲಿ ಮೊರೆಹೋಗುತ್ತಾಳೆ. ಅವಳ ಸ್ವಭಾವ ಭೀಮನ ಸ್ವಭಾವಕ್ಕೆ ಹೊಂದಿಕೊಳ್ಳುವುದರಿಂದ ಮತ್ತು ಹಟದಲ್ಲಿ ಅವಳು ಭೀಮನನ್ನು ಹೋಲುವುದರಿಂದ ಅವಳು ಭೀಮನ ಅಸಹನೆಯೇ ಅವಳಿಗೆ ಆನಂದವನ್ನು ಉಂಟುಮಾಡುತ್ತದೆ.

ಭೀಮ - ( ಕೋಪದಿಂದ) - ಏನು ? ಐದು ಗ್ರಾಮಗಳಿಗೋಸ್ಕ ಸಂಧಿಯೋ?

ಕುರುಶತವಧೆಮಾಡೇಂ ಕಾಯ್ದು ದುಶ್ಶಾಸನಾರಾ
ತ್ಯುರದೆ ಕುಳಿತಸೃಕ್ಕಂ ಪೀರೆನಾಂ ತುಂಡು ಮಾಡೇಂ
ಬಿರುಗದೆ ಪೊಡೆಯಿಂ ದುರ್ಯೋಧನೋ ಗ್ರೋರುವಂ ತಾಂ
ವಿರಚಿಕೆ ಪಣದಿಂದಂ ಸಂಧಿಯಂ ನಿಮ್ಮ ರಾಯಂ ।೨೦।

ದ್ರೌಪದಿ - (ಸಂತೋಷದಿಂದ ಜನಾಂತಿಕಂ) ಈ ವಿಧವಾದ ಪ್ರಯೋಕ್ತಿಯನ್ನು ಹಿಂದೆ ನಾನು ಯಾವಾಗಲೂ ಕೇಳಿಲ್ಲ, ಆದುದರಿಂದ ಇನ್ನೊಂದು ಸಾರಿ ಹೇಳು.

ದುರ್ಯೋಧನನು ಭಾನುಮತಿಯೊಡನೆ ಸುಖಿಸುವ ಅಪೇಕ್ಷೆಪಡುವುದು ನಾಟಕದ ವರ್ಚಸ್ಸಿಗೆ ಮತ್ತು ದುರ್ಯೋಧನ ಪಾತ್ರಕ್ಕೆ ಕುಂದು ತಂದಿದೆ. ಯುದ್ಧ ಸಂಬಂಧಿ ವರ್ಣನೆ ಅಧಿಕವಾಗಿರುವುದರಿಂದ ನಿಸರ್ಗ ವರ್ಣನೆ ಇಲ್ಲ. ಕವಿತಾಚಾತುರ್ಯವು ಅಷ್ಟಕಷ್ಟೆ. ಹಾಸ್ಯರಸಕ್ಕೆ ಈ ನಾಟಕದಲ್ಲಿ ಅವಕಾಶವಿಲ್ಲ.

ಭವಿಷ್ಯಸೂಚಕ ಮತ್ತು ಉಕ್ತಿಚಾತುರ್ಯವುಳ್ಳ ಮಾತುಗಳು ಅಲ್ಲಲ್ಲಿ ಬಂದಿವೆ. ದ್ರೌಪದಿ ಮತ್ತು ಭಾನುಮತಿಯರ ಉಪರೋಧದ ಮಾತುಗಳು ಇದಕ್ಕೆ ಸಾಕ್ಷಿಯಾಗಿವೆ. ಅಶ್ವತ್ಥಾಮ ಮತ್ತು ಕರ್ಣರ ನಡುವಿನ ಜಗಳದಲ್ಲಿ ಕರ್ಣನ ದ್ರೋಣ ನಿಂದನೆ ಕರ್ಣನಲ್ಲಿ ಗೌರವ ಮೂಡಿಸಲು ಸಹಕಾರಿಯಾಗಿಲ್ಲ. ಅಶ್ವತ್ಥಾಮ ತನ್ನ ತಂದೆಯಾದ ದ್ರೋಣರ ವಧೆಗೆ ಪ್ರತಿಕಾರ ತೆಗೆದುಕೊಳ್ಳಲು ಪ್ರಯತ್ನಿಸುವುದು ಸಹಜವಾದರೂ ಸೇನಾಧಿಪತ್ಯವೇ ಆ ಕಾರ್ಯಕ್ಕೆ ಅನುಕೂಲವೆಂದು ಭಾವಿಸುವುದು ಒಣ ಅಭಿಮಾನವನ್ನು ತೋರಿಸುತ್ತದೆ. ಮೇಲಾಗಿ ಕರ್ಣನ ಅಡಿಯೊಳಗೆ ಯುದ್ಧಮಾಡುವುದಿಲ್ಲ ಎಂಬ ನಿಶ್ಚಯವು ದುರ್ಯೋಧನನ ವಿಷಯದಲ್ಲಿ ಅನ್ಯಾಯಕಾರಕ ವಾಗುವುದನ್ನು ಅಶ್ವತ್ಥಾಮ ಕಡೆಗಾಣಿಸುತ್ತಾನೆ.

ಮೂಲ ಮಹಾಭಾರತದಲ್ಲಿ ಧೃತರಾಷ್ಟ್ರ ಮತ್ತು ಗಾಂಧಾರಿಯರು ರಣರಂಗಕ್ಕೆ ಬರುವುದಿಲ್ಲ. ಆದರೆ ಭಟ್ಟನಾರಾಯಣ ಅವರನ್ನು ರಣರಂಗಕ್ಕೆ ತಂದು ಕರುಣರಸಕ್ಕೆ ಅವಕಾಶಮಾಡಿಕೊಟ್ಟಿದ್ದಾನೆ. ದುರ್ಯೋಧನನ ಪಾತ್ರವನ್ನು ಬೆಳಗುವ ಪ್ರಯತ್ನ ಇದಾಗಿದೆ. ಆ ಸಮಯದಲ್ಲಿಯೇ ವೃಷಸೇನ ಮತ್ತು ಕರ್ಣರ ಅವಸಾನದ ವಾರ್ತೆ ಬರುತ್ತದೆ. ದುರ್ಯೋಧನ ಮತ್ತಷ್ಟು ವಿಫಲನಾಗುತ್ತಾನೆ. ಯಾರಲ್ಲಿಯೂ ಇಲ್ಲದ ಭರವಸೆ ಅವನಿಗೆ ಕರ್ಣನಲ್ಲಿ ಇದೆ.

ಕಡುಗಲಿ ಕರ್ಣನೆ ಕರ್ಣನೆ
ಸಡಗರದಿಂ ಮುದವ ತೋರುವಂತಿರೆ ನುಡಿಯಯ್ಯೆ
ಎಡೆವಿಡದಿರ್ದ್ದೀ ಸಖನಂ
ಬಿಡುತಂ ವೃಷಸೇನವತ್ಸಲನೆ ತೋವಪೆಯೇ

ಭೀಮ ಧೃತರಾಷ್ಟ್ರ ಗಾಂಧಾರಿಯರನ್ನು ಗೌರವದಿಂದ ಕಾಣುತ್ತಾನೆ. ಆದರೆ ವ್ಯಂಗ್ಯೋಕ್ತಿ ಆಡುವುದರಲ್ಲಿ ಹಿಂದೆ ಬಿದ್ದಿಲ್ಲ.

ಭೀಮ - ಕುಡಿದುದುಶ್ಶಾಸನರ
ದಡೆ ರಗುತವನೆಲ್ಲ ಕುರುಗಳಂ ಪುಡಿಗೆಯ್ದಂ
ಕಡುಗಲಿ ಕುರುಪನ ತೊಡೆಗಳ
ನುಡಿಮಂ ನಿಮ್ಮಡಿಗೆ ಭೀಮನಿವೊ ಪೊಡೆಮಟ್ಟುಂ

ಭೀಮನು ಮಾಡುವ ನಿಂದನೆ ಆ ಕ್ಷಣಕ್ಕೆ ಅವಶ್ಯವಲ್ಲ ಎಂದು ಕಂಡರೂ, ದ್ರೌಪದಿಯ ವಸ್ತ್ರಾಪಹರಣಕ್ಕೆ ಮೂಕಸಾಕ್ಷಿಯಾಗಿ ಅಧಿಕಾರವಿದ್ದರೂ ತಟಪಸಲಿಕ್ಕಾಗದೆ ಕೂತ ಧೃತರಾಷ್ಟ್ರನಿಗೆ ಇದಕ್ಕಿಂತ ಶಿಕ್ಷೆ ಬೇರಾವುದಿದೆ ಎಂಬ ಭಾವವಿದೆ. ಧೃತರಾಷ್ಟ್ರನು ಪರಿಪರಿಯಾಗಿ ತನ್ನ ಪುತ್ರನಿಗೆ ಯುಧಿಷ್ಠರನೊಡನೆ ಸಂಧಿ ಮಾಡಿಕೊಳ್ಳಲು

ಅವಲತ್ತುಕೊಂಡರೂ ದುರ್ಯೋಧನ ವಿಚಲಿತನಾಗುವುದಿಲ್ಲ ರಣರಂಗಕ್ಕೆ ಗಾಂಧಾರಿ, ಧೃತರಾಷ್ಟ್ರರು ಬರುವುದು ಮೂಲ ಮಹಾಭಾರತದಲ್ಲಿ ಇಲ್ಲ ಆದರೆ ಕರುಣರಸವನ್ನು ಉದ್ದೀಪನಗೊಳಿಸಲು ಇದು ಸಹಕಾರಿಯಾಗಿದೆ. ಕವಿಯ ಪ್ರತಿಭೆ ಇಲ್ಲಿ ಎದ್ದು ಕಾಣುತ್ತದೆ.

ಚಾರ್ವಾಕ ಎಂಬ ಮುನಿ ಬಂದು ಭೀಮಾರ್ಜುನರ ಕೇಡನ್ನು ಧರ್ಮರಾಜಾದಿಗಳಿಗೆ ತಿಳಿಸುವುದು ಅನಗತ್ಯವಾಗಿ ತುರುಕಿರುವಂತೆ ತೋರಿಬರುತ್ತದೆ. ಚಾರ್ವಾಕ ದುರ್ಯೋಧನ ಪಕ್ಷಪಾತಿ. ಚಾರ್ವಾಕನ ಸಂಹಾರ ದುರ್ಯೋಧನನಂಥ ಮತ್ತು ಅವನನ್ನು, ಅವನ ವಿಚಾರಗಳನ್ನು ಬೆಂಬಲಿಸುವಂಥ ಜನರ ಸಂಹಾರ ಎಂದು ಕವಿ ಚಿತ್ರಿಸುತ್ತಾನೆ. ಚಾರ್ವಾಕನೆಂಬ ರಾಕ್ಷಸನು ಮುನಿವೇಷದಲ್ಲಿ ಬಂದುದು,ದುಷ್ಟಬುದ್ಧಿಯ ಜನರು ಜ್ಞಾನಿಗಳ ವೇಷದಲ್ಲಿ ಬಂದು ಜನರ ಧರ್ಮದವಿಷಯದಲ್ಲಿ ಶಂಕೆ, ಅಪನಂಬಿಕೆಗಳನ್ನು ಮೂಡಿಸಿ ದಿಕ್ಕುತಪ್ಪಿಸುವ ಪ್ರಯತ್ನವಾಗಿದ್ದುದನ್ನು ಕವಿ ಇಲ್ಲಿ ಚಿತ್ರಿಸಿದ್ದಾನೆ. ಮೂಲಮಹಾಭಾರತದಲ್ಲಿ ಚಾರ್ವಾಕನು ಧರ್ಮರಾಜನ ಎದುರಿಗೆ ಬಂದು, ನೀನು ಧರ್ಮದಿಂದ ಯುದ್ಧಮಾಡಿದೆನೆಂದು ತಿಳಿದರೂ; ಅಧರ್ಮದಿಂದಲೇ ಜಯಶಾಲಿಯಾಗಿದ್ದಿಯೇ ಎಂದು ನೇರವಾಗಿ ಹೇಳುತ್ತಾನೆ. ನಂತರ ಚಾರ್ವಾಕರನ್ನು ಸಂಹರಿಸಲಾಗುತ್ತದೆ.

ಅನುವಾದವು ತಿಳಿಗನ್ನಡದಲ್ಲಿ ಚೆನ್ನಾಗಿ ಮೂಡಿಬಂದಿದೆ. ನಾಟಕವನ್ನಾಡುವುದಕ್ಕಾಗಿಯೇ ಮತ್ತು ಕರ್ನಾಟಕ ಭಾಷೆಗೆ ಅನುವಾದ ಮಾಡುವ ಉದ್ದೇಶದಿಂದ ಇದನ್ನು ಅನುವಾದಿಸಲ್ಪಡಲಾಯಿತು ಎಂದು ಅನುವಾದಕರ ಗ್ರಂಥದ ಪ್ರಥಮ ಮುದ್ರಣದ ಪೀಠಿಕೆಯಿಂದ ತಿಳಿದುಬರುವುದು.

'' ಈ ನಾಟಕವನ್ನು ನಮ್ಮ ಪೂರ್ವದ ಶ್ರೀ ಮಾನ್ಯ ಮಹಾರಾಜ ಚಾಮರಾಜೇಂದ್ರ ಒಡೆಯರವರು ಆದ್ಯಂತವಾಗಿ ಕೇಳಿ ಇದಕ್ಕೆ ನೀವೇ ಸರಿಯಾದ ಕರ್ಣಾಟಕ ಭಾಷಾಂತರವನ್ನು ಮಾಡಬೇಕೆಂದು, ಅದು ನಾಟಕವನ್ನು ಆಡುವುದಕ್ಕೂ ಅನುಕುಲವಾಗುವಂತೆಯೂ ಕರ್ಣಾನಂದಕರವಾದ ಗಾನ-ಪದಗಳನ್ನೂ ಮಾಡಿ ಸೇರಿಸಬೇಕೆಂತಲೂ, ಅಪ್ಪಣೆಯನ್ನು ಕೊಡಿಸಿದರು''

ಈ ಕೃತಿ ಪದವಿ ತರಗತಿಗಳಿಗೆ ಪಠ್ಯ ಪುಸ್ತಕವಾಗಿದ್ದನ್ನು ಇಲ್ಲಿ ಗಮನಿಸಬೇಕಾಗಿದೆ. ಸ್ವತಂತ್ರ ಕೃತಿಗಳ ಅಭಾವ ಆ ಕಾಲದಲ್ಲಿ ಎಷ್ಟಿತ್ತು ಎಂಬುದನ್ನು ಸೂಚಿಸುತ್ತದೆ. ಆದರೆ ಪದವಿ ತರಗತಿಗೆ ಆಯ್ಕೆಯಾದ ಈ ಕೃತಿಯ ಮಹತ್ವ ಹೆಚ್ಚುಗಾರಿಕೆಯೂ ಗೊತ್ತಾಗುತ್ತದೆ. ಸಂಸ್ಕೃತ ಸಾಹಿತ್ಯದ ರತ್ನಗಳನ್ನು ಕನ್ನಡಕ್ಕೆ ಪರಿಚಯಿಸುವ ಕೆಲಸವನ್ನು ಮಾತ್ರ ಯಾವುದೇ ವಂಚನೆಯಿಲ್ಲದೆ ಸಂಪೂರ್ಣ ಪ್ರತಿಭೆಯನ್ನುಪಯೋಗಿಸಿ ಮಾಡಿದ್ದಾರೆ.

## ೪.ಬ. ಜಯರಾಯಾಚಾರ್ಯರು : 

'ಕರ್ನಾಟಕ ಚಂಡಕೌಶಿಕ ನಾಟಕವೆಂಬ ಹರಿಶ್ಚಂದ್ರ ನಾಟಕಂ' ಎಂಬ ಶೀರ್ಷಿಕೆಯಡಿಯಲ್ಲಿ ಕ್ರಿ.ಶ. ೧೮೮೯ರಲ್ಲಿ ಜಯರಾಯಾಚಾರ್ಯರು ಆರ್ಯಕ್ಷೇಮೀಶ್ವರನ ಕೃತಿಯನ್ನು ಅನುವಾದಿಸಿದರು. ಈ ನಾಟಕದ (ಸಂಸ್ಕೃತ) ನಾಟಕದ ಅನುವಾದವನ್ನು ಬಸವಪ್ಪ ಶಾಸ್ತ್ರಗಳು ಮಾಡಿದ್ದಾರೆ. ಜಯರಾಯಾಚಾರ್ಯರು ಈ ನಾಟಕದ ಅನುವಾದ ಕುರಿತಾಗಿ ಪೀಠಿಕೆಯಲ್ಲಿ ಈ ರೀತಿ ಹೇಳಿಕೊಂಡಿದ್ದಾರೆ. ಪೀಠಿಕೆಯ ಮೊದಲಲ್ಲಿ ಪರಿಪಾಠದಂತೆ ಆಸ್ಥಾನ ವಿದ್ವಾಂಸರಾಗಿರುವ ಹಿನ್ನೆಲೆಯಲ್ಲಿ ಚಾಮರಾಜ ಒಡೆಯರನ್ನು ಸ್ತುತಿಸಿದ್ದಾರೆ. ದೃ॥ '' ಶ್ರೀಮಾಮನೋಜ್ಞ ಕರುನಾರಸಪೂರಭಾಜಂ। ಸೋಮಾಭಿರಾಮವದನಂ ಶ್ರೀತಕಲ್ಪಭೂಜಂ ''॥ ಸಾಮಾದ್ಯು ಪಾಯನಿರತಂ ಕವಿನವ್ಯಭೋಜಂ। ಚಾಮೇಂದ್ರನೊಲ್ದೆಸೆದಪಂ ಧರಣೀ ಮನೋಜಂ॥ ಸಕಲ ವಿದ್ಯಾಭಿವೃದ್ಧಿ ಬದ್ಧದರರಾದ, ಸಂಸ್ಕೃತ ನಾಟಕಗಳಿಗೆ ಭಾಷಾಂತರವನ್ನು ಮೂಡಿಸಿ ನಾಟಕ ಲಕ್ಷಣವು ಸಕಲರಿಗೂ ತಿಳಿವಂತೆ ಮಾಡಬೇಕೆಂಬುದಾಗಿ, ಕುತೂಹಲವುಳ್ಳ, ಶ್ರೀಮದ್ರಾಜೌಧಿರಾಜ ಚಾಮರಾಜೇಂದ್ರ ಭೂಪಾಲರವರ ಅಭಿಪ್ರಾಯಾನುಸಾರವಾಗಿ ವಿದ್ಯಾಭಿಮಾನಿಗಳಾದ ಮ ॥ ರಂ॥ ದರ್ಬಾರ್ ಭಕ್ಷಿನರಸಿಹ್ಮೆಂಯ್ಯಂಗಾರ್ಯರ ವರಿಂದಲೂ, ಪೂರ್ವದ ವಿದಾನರಾಗಿಯೂ, ಸಕಲಜನ ಶ್ಲಾಘನೀಯ ರುಣಗಣಾ ಲಂಕೃತರಾಗಿಯೂ ಇದ್ದ ರಂಗಾಚಾರ್ಯರವರಿಂದಲೂ, ಪ್ರೋತ್ಸಾಹಿತನಾಗಿ, ಸಕಲಜನ ಶ್ರೋತ್ರಮನೋರಂಜಕವಾಗಿಯೂ, ಸತ್ಯ, ಜ್ಞಾನ, ವೈರಾಗ್ಯ, ನೀತಿ ಬೋಧಕಮಾಗಿಯೂ, ಇರುವ ಆರ್ಯಕ್ಷೇಮೀಶ್ವರ ಮಹಾಕವಿ ವಿರಚಿತ ಚಂಡಕೌಶಿಕ ವೆಂಬ ಹರಿಶ್ವಂದ್ರ ನಾಟಕವನ್ನು ತನ್ನಾಟಕೇತರ ಹರಿಶ್ಚಂದ್ರೋಪಾಖ್ಯಾನಂಗಳಲ್ಲಿ ಹೇಳಿರುವ, ಕೆಲವು ಸಂದರ್ಭಗಳನ್ನು ಜನರಂಜನಾರ್ಥವಾಗಿ ಸೇರಿಸಿಯೂ, ನಾಟಕದವರಿಗೆ ಅನುಕೂಲವಾಗುವಂತೆ, ರಸಾನುಗುಣರಾಗೆ, ತಳಿಗಳಿಂದ ಶ್ರೋತ್ರುನಂದ ಸಂದಾಯಕಂಗಳಾದ ಪದಗಳನ್ನು ಮಾಡಿ ಸೇರಿಸಿಯೂ, ಸಂಸ್ಕೃತ, ನಾಟಕದಲ್ಲಿನ ಕೆಲವು ವರ್ಣನಾ ಭಾಗಗಳನ್ನು ಮಾತ್ರಬಿಟ್ಟು, ಕರ್ನಾಟಕ ಭಾಷೆಯಲ್ಲಿ ಬರೆದಿದ್ದನು.

ಆ ನಾಟಕವನ್ನು ಮುದ್ರಿಸಬೇಕೆಂದು ಪ್ರಯತ್ನಪಟ್ಟಾಗ ಸಂಸ್ಕೃತ ನಾಟಕದಲ್ಲಿರುವ ಯಾವ ವಿಷಯವನ್ನೂ ಬಿಡದೆಯೇ ಭಾಷಾಂತರವನ್ನು ಮಾಡಬೇಕೆಂದು ನನಗೆ ಇಷ್ಟಮಿತ್ರರಾದವರು ಪ್ರೋತ್ಸಾಹಪಡಿಸಿದ್ದರಿಂದ, ವಿದ್ಯಾರ್ಥಿಗಳಿಗೂ, ಓದುವವರಿಗೂ, ನಾಟಕದವರಿಗೂ ಅನುಕೂಲವಾಗುವಂತೆ ಆ ನಾಟಕಕ್ಕೆ ಸರಿಯಾಗಿ ಭಾಷಾಂತರವನ್ನು ಮಾಡಿರುವೆನು. ನಾಟಕದ ಆದಿಕಥಾ ಸಂದರ್ಭವು ಗೊತ್ತಾಗುವದಕ್ಕಾಗಿ ಇಂದ್ರಸಭೆ ಎಂಬ ಒಂದು ಸ್ಥಾನವು ನಾಟಕದ ಆದಿಭಾಗದಲ್ಲಿ ಸೇರಿಸಲ್ಪಟ್ಟಿರುವದು'' (ಪೀಠಿಕೆ)

ಜಯರಾಯಾಚಾರ್ಯರು ಈ ನಾಟಕವನ್ನು ಅನುವಾದಿಸಿದ ಹಿನ್ನೆಲೆಯನ್ನು ನೋಡಿದಾಗ ಇಗಾಗಲೇ ಚರ್ಚಿಸಿರುವಂತೆ ಒಂದು ಅನುವಾದ ಕೃತಿಯ ಹಿಂದೆ ಅನೇಕ ಕಾರಣಗಳು ಕೆಲಸ ಮಾಡಿರುತ್ತವೆ. ಅದರಲ್ಲಿಯೂ ವಸಾಹತುಶಾಹಿ ಪ್ರಜ್ಞೆ, ಕನ್ನಡ ಭಾಷೆ ಮತ್ತು ಸಾಹಿತ್ಯ ಸ್ಮರಣೆ ರಂಗಭೂಮಿ ಈ ಮೂರು ಪ್ರಮುಖ ಅಂಶಗಳು ವಸಾಹತುಕುಲಘಟ್ಟದ ಅನುವಾದಗಳನ್ನು ನಿಯಂತ್ರಿಸಿವೆ. ಜಯರಾಯಾಚಾರ್ಯರು

ರಂಗಭೂಮಿಯ ಆದ್ಯತೆಗನುಸಾರವಾಗಿ ಹರಿಶ್ಚಂದ್ರನಾಟಕವನ್ನು ಜನರಂಜನೆಗಾಗಿ ರಸಾನುಗುಣ ರಾಗ ತಾಳ ತಳಿಗಳಿಂದೊಡಗಿದ ಪದಗಳನ್ನು ರಚಿಸಿ, ಕ್ಲಿಷ್ಟವರ್ಣನಾಭಾಗಗಳನ್ನು ತೆಗೆದುಕನ್ನಡ ಭಾಷೆಯಲ್ಲಿ ಸಂಸ್ಕೃತ ನಾಟಕವೊಂದನ್ನು ತಂದಿದ್ದೇನೆ ಎಂದು ಹೇಳಿದ್ದಾರೆ. ರಂಗಭೂಮಿಯ ಆಧ್ಯತೆಗನುಸಾರವಾಗಿ ಸಂಸ್ಕೃತ ಕೃತಿಯೊಂದು ರಂಗ ಪಠ್ಯವಾಗಿ ಮಾರ್ಪಡುವ ಪ್ರಕ್ರಿಯೆಯನ್ನು ಸೂಚ್ಯವಾಗಿ ಹೇಳಿದಂತಾಗಿದೆ. ಇನ್ನು ವಸಾಹತುಶಾಹಿ ಪ್ರಜ್ಞೆಯ ದ್ಯೋತಕವಾಗಿ ಮೂಡಿಬಂದ ಮುದ್ರಣ ಸೌಲಭ್ಯದಿಂದ ನಾಟಕವನ್ನು ಮುದ್ರಿಸಬೇಕೆಂದು, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಪಠ್ಯವನ್ನಾಗಿ ಮೂಲಕ್ಕೆ ನಿಷ್ಠವಾದ ಅನುವಾದ ಮೂಡಿಬಂದಿದೆ. ಇದು ಓದು ಪಠ್ಯವಾಗಿದೆ. ಹೀಗೆ ಒಬ್ಬ ಅನುವಾದಕ ಏಕಕಾಲಕ್ಕೆ ಒಂದು ಕೃತಿಯನ್ನು ಅನುವಾಸಿದುವಾಗ ಇರಬಹುದಾದ ಸಾಧ್ಯತೆಯನ್ನು ಈ ಪ್ರಕ್ರಿಯೆತೋರಿಸುತ್ತದೆ. ಅಷ್ಟೇ ಅಲ್ಲ ಅನುವಾದಕನೊರ್ವ ಕೌಶಲ್ಯದಿಂದ ಓದು ಪಠ್ಯ / ರಂಗ ಪಠ್ಯವಾಗಿ ಮಾರ್ಪಡಿಸಿಕೊಂಡು ಏಕಕಾಲಕ್ಕೆ ವಸಾಹತುಶಾಹಿ ರಾಜಕಾರಣದಿಂದ ಉದ್ದೀಪನಗೊಂಡ ರಂಗಭೂಮಿ / ಶೈಕ್ಷಣಿಕ ಕ್ಷೇತ್ರಗಳೆರಡರ ಅಗತ್ಯತೆಯನ್ನು ಹಿಗೆ ಪೂರೈಸಿದ ಎನ್ನುವದು ಮುಖ್ಯವಾಗುತ್ತಿದೆ. ಇಲ್ಲಿ ಅನುವಾದಕರೇ ಹೇಳಿಕೊಂಡಂತೆ ಅರಮನೆಯ ಆಸ್ಥಾನ ವಿದ್ವಾಂಸನಾಗಿದ್ದು ಅರಮನೆಯ ಕಲಾತ್ಮಕ ಚಟುವಟಿಕೆಯ ಧ್ಯೇಯವಾದ ರಂಜನೆಯನ್ನು ಪೂರ್ಣವಾಗಿಸುವಲ್ಲಿ ಮಾಡಿಕೊಂಡ ಅಲ್ಪಸ್ವಲ್ಪ ಬದಲಾವಣೆಗಳು, ವಿದ್ಯಾರ್ಥಿ ಹಾಗೂ ಹಿತೈಷಿಗಳ ವಾಚನಾಭಿರುಚಿಯನ್ನು ತಣಿಸುವಲ್ಲಿ, ಮುದ್ರಣದ ಸೌಲಭ್ಯವನ್ನು ಬಳಿಸಿಕೊಳ್ಳುವ ಬಗೆಯನ್ನು ಓದುಪಠ್ಯ ಅರಗಿಸಿಕೊಳ್ಳುವ ಪ್ರಕ್ರಿಯೆಕಂಡು ಬರುತ್ತದೆ. ವಸಹತೀಕರಣದಿಂದ ಉಂಟಾದ ಶಿಕ್ಷಣ ಕ್ರಾಂತಿ, ಪಠ್ಯಪುಸ್ತಕಗಳ ಓದುಪಠ್ಯಗಳಿಗೆ ಬೇಕಾಗುವ ಮಾಹಿತಿಯಾಗಿ ಕೃತಿಯೊಂದು ಮೂಡಿಬರುವ ಸಾಧ್ಯಯತೆಯನ್ನು ಜಯರಾಯಾಚಾರ್ಯರ ಮಾತಿನಲ್ಲಿ ಗ್ರಹಿಸಬಹುದಾಗಿದೆ. ಇಂದ್ರಸಭೆ ಎಂಬುದು ಸೇರಿಸಲ್ಪಟ್ಟಿರುವದು ರಂಗಭೂಮಿ ಪ್ರೇಕ್ಷಕರ ಅಗತ್ಯತೆಯನ್ನು ಸೂಚಿಸುತ್ತದೆ. ಆ ಕಾಲಕ್ಕೆ ಮೂಡಿಬಂದ ಅನುವಾದಗಳಲ್ಲಿ ಅದರಲ್ಲೂ ಸಂಸ್ಕೃತಾನುವಾದಗಳಲ್ಲಿ ನಡೆದಿರಬಹುದಾದ ಒಂದು ಪ್ರಕ್ರಿಯೆಯನ್ನು ಸ್ವತಃ ಅನುವಾದಕರುಗಳು ಹೇಳಿಕೊಳ್ಳುವ ಬಗೆ ಮತ್ತು ಅನುವಾದ ಕೃತಿಯೊಂದು ಮೂಡಿ ಬಂದಿರುವ ಹಿನ್ನೆಲೆಯಲ್ಲಿ ನಡೆದಿರಬಹುದಾದ ಸಾಧ್ಯಾಸಾಧ್ಯತೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ಹಾಗಾಗಿಯೇ ವಸಾಹತೀಕರಣ ಘಟ್ಟದಲ್ಲಿ ಮೂಡಿಬಂದಿರುವದು ಭಾಷ್ಯಾಂತರವಲ್ಲ. ಅನುವಾದ ಸಾಂಸತಿಕ ಅಂಶಗಳೆಲ್ಲವನ್ನೂ ಒಳಗೊಂಡು ಮೂಲಕ್ಕೆ ನಿಷ್ಠವಾಗಿ ಕೃತಿಯೊಂದು ಬರುವ ಸಾಧ್ಯತೆಯಿದೆ ಎಂಬುದನ್ನು ತೋರಿಸಿ ಕೊಟ್ಟ ಕೃತಿಗಳು ಇವು ಹಾಗಾಗಿಯೇ ಸಾಹಿತ್ಯ ಚರಿತ್ರೆಯಲ್ಲಿ ಅನುವಾದಯುಗವೆಂದು ದಾಖಲಾಗಿದೆ. ಪ್ರಸ್ಥಾವನಾ ಕಂದ ಪದ್ಯವೊಂದರಲ್ಲಿ ಸೂತ್ರಧಾನ ಮೂಲಕ ರಾಜನ ಆಸ್ಥಾನವರ್ಣನೆಯನ್ನು, ನಾಟಕವನ್ನು ಅನುವಾದಿಸುವ ಅಗತ್ಯತೆಯನ್ನು ಹೇಳಿಸುತ್ತಾರೆ. ಬಹುತೇಕ ಇದು ವಸಾಹತುಶಾಹಿ ಕಾಲಿಘಟ್ಟದಲ್ಲಿ ಮೂಡಿಬಂದ ಅನುವಾದಗಳಲ್ಲಿ ಲೇಖಕರು ಈ ಬಗೆಯಲ್ಲಿ ಹೇಳಿರುವುದು ಒಂದು ವಿಶೇಷ.

ಸೂ : ವಿಜಯ ಪ್ರಕೋಷ್ಠ ಪ್ರಪೌತ್ರನಾದ, ಆರ್ಯಕ್ಷೇಮಿಶ್ವರ ಮಹಾಕವಿಯಿಂದ, ವಿರಚಿತವಾದ ಚಂಡಕೌಶಿಕವೆಂಬ ನಾಟಕವನ್ನು

ಕಂ॥ ಶ್ರೀ ಚಾಮರಾಜಸಮ್ಮುಖ । ಗೋಚರ ವಿದ್ವತ್ಸಮೂಹ ಮಧ್ಯದ ಜೆಯರಾ ॥
ಯಾಚಾರ್ಯನೆಂಬ ಭೂಸುರ । ನಾಚಾರ್ಯಾನಿಂದ ತೀರ್ಥಮುನಿಮತಜಾತಂ॥

ಕರ್ನಾಟಕ ಭಾಷೆಯಲ್ಲಿ ಮಾಡಿರುವನು ಅದನ್ನೇ ಅಭಿನಯಿಸುವಂತೆ ಆಜ್ಞಪ್ತನಾಗಿರುವೆನಂ ಎಂದು ನಾಂದಿ ಪದ್ಯದಂತೆ ಈ ಬಗೆಯ ಮಾತನ್ನು ಸೂತ್ರಧಾರನಿಂದ ಕವಿಗಳು ಹೇಳಿದ್ದಾರೆ.

ಇದೇ ಜಯರಾಯಾಚಾರ್ಯರು ಭಟ್ಟನಾರಾಯಣನ ವೇಣಿಸಂಹಾರ ನಾಟಕವನ್ನು ಕನ್ನಡಕ್ಕೆ ಪರಿವರ್ತಿಸಿಕೊಂಡಿದ್ದಾರೆ. 'ಕನ್ನಡ ವೇಣಿಸಂಹಾರ ನಾಟಕ' ಎಂಬ ಶೀರ್ಷಿಕೆಯಡಿಯಲ್ಲಿ ಮೂಡಿಬಂದ ಈ ನಾಟಕ ಹರಿಶ್ಚಂದ್ರ ನಾಟಕದ ಅನಂತರದ ಕಾಲದಲ್ಲಿ ಮೂಡಿಬಂದಿರುವದು ಪಂಡಿತ ಜಯರಾಯಾಚಾರ್ಯರು ಕನ್ನಡ ಹರಿಶ್ಚಂದ್ರ ನಾಟಕ, ಕನ್ನಡ ಚಂದ್ರಹಾಸ ನಾಟಕ, ಕನ್ನಡ ಸಿರಿಯಾಳರಾಜನ ಚರಿತ್ರೆ, ವೇಣಿಸಂಹಾರ ನಾಟಕ, ಮಂದಾಸು ಪರಿಣಯ ನಾಟಕ ಹೀಗೆ ಹಲವಾರು ಸಂಸ್ಕೃತ ಅದರಲ್ಲೂ ನಾಟಕ ಸಾಹಿತ್ಯದ ಭಾಷೆ, ಲಿಪಿಗಳಲ್ಲೂ ಅಜಗಜಾಂತರ ವ್ಯತ್ಯಾಸವಿದೆ. ಸರಿಸುಮಾರು ೧೯೦೦ರವೇಳೆಗೆ ಬಂದಿರಬಹುದಾದ ಈ ಕೃತಿ ಕೆಲ ವರ್ಷಗಳ ಅಂತರದಲ್ಲೆ ಹರಿಶ್ಚಂದ್ರ ನಾಟಕಕ್ಕಿಂತ ಭಿನ್ನವಾಗಿ ಮೂಡಿಬಂದಿವೆ.

ಜಯರಾಯಾಚಾರ್ಯರು ಪೀಠಿಕೆಯಲ್ಲಿ ಯಾಕೆ ಅನುವಾದವನ್ನು ಕೈಗೊಳ್ಳಬೇಕಾಯಿತು ಎಂಬ ಮಾತನ್ನು ವಿವರಿಸುತ್ತ ಭಟ್ಟನಾರಾಯಣನು ಈ ವೇಣಿಸಂಹಾರ ಕೃತಿ ರಚಿಸಲು ಕಾರಣವೇನು ಎಂಬುದನ್ನು ವಿಶದವಾಗಿ ವಿವರಿಸಿದ್ದಾರೆ. ''ವೇಣಿಸಂಹಾರ ನಾಟಕ ಎಂದರೆ ದ್ರೌಪದಿಯ ವೇಣಿಯನ್ನು ಕಟ್ಟುವ ನಾಟಕ ವೆಂದರ್ಥ. ಈ ಸಂಸ್ಕೃತ ನಾಟಕವು ಮೃಗರಾಜ ಲಕ್ಷ್ಮಣಭಟ್ಟ ನಾರಾಯನ ಸಂಕೃತವೆಂದು ಪುಸ್ತಕಗಳಲ್ಲಿ ಬರೆದಿರುವುದು. ಈ ನಾಟಕವನ್ನು ನಮ್ಮ ಪೂರ್ವದ ಶ್ರೀಮನ್ನಹಾರಾಜ ಚಾಮರಾಜೇಂದ್ರ ಒಡೆಯರವರು ಆದ್ಯಂತವಾಗಿ ಕೇಳಿ ಇದಕ್ಕೆ ನೀವೇ ಸರಿಯಾದ ಕರ್ನಾಟಕ ಭಾಷಾಂತರವನ್ನು ಮಾಡಬೇಕೆಂಬುದಾಗಿಯೂ, ಅದು ನಾಟಕವನ್ನು ಆಡುವದಕ್ಕೂ ಅನುಕೂಲವಾಗುವಂತೆಯೂ, ಕರ್ಣಾನಂದಕರವಾದ ಗಾನಪದಗಳನ್ನು ಮಾಡಿ ಸೇರಿಸ ಬೇಕೆಂತಲೂ, ಅಪ್ಪಣೆಯನ್ನು ಕೊಡಿಸಿದರು. ಆ ಮಹಾರಾಜರ ಆಜ್ಞಾನುಸಾರವಾಗಿ ಈ ನಾಟಕವನ್ನು ಮಾಡಿದೆನು'' ( ಪು.೧೪೯-೧೫೦) ಪ್ರಥಮ ಮುದ್ರಣದ ಪೀಠಿಕೆಯಿಂದ.

ಓಜಸ್ಸೆ ಜೀವಾಳವಾಗಿರುವ ರಚನಾ ಶೈಲಿಯ ಮೂಲಕ ಮೂಡಿಬಂದ ವೇಣಿಸಂಹಾರ ನಾಟಕ ಆರು ಅಂಕಗಳನ್ನು ಒಳಗೊಂಡಿದೆ. ಶ್ರೀಕೃಷ್ಣನು ಕೌರವನ ಬಳಿ ಸಂಧಿಗೆ ಹೋಗಿ ವಿಫಲನಾಗಿ ಹಿಂದಿರುಗಿ ಬಂದಿರುವುದರಿಂದ ಮೊದಲುಗೊಂಡು ಭೀಮನು ಕೌರವನ ತೊಡೆಯೊಡೆದು, ದ್ರೌಪದಿಯ ಮುಡಿಗಟ್ಟುವರೆಗಿನ ಭಾರತದ ಕಥೆಯನ್ನು ಇಲ್ಲಿ ವಸ್ತುವಾಗಿ ಸ್ವೀಕರಿಸಿ ಅದನ್ನು ನಾಟಕವಾಗಿ ಪರಿವರ್ತಿಸಿದೆ. ಈ ವಸ್ತುವನ್ನು ಅನೇಕ ನಾಟಕಗಳಿಗೆ ವಸ್ತುವಾಗಿ ಹೊಂದಿಸಿದ್ದಾರೆ ಕವಿಗಳು. ಈ

ವೇಣಿಸಂಹಾರದ ಕಥಾವಸ್ತುವನ್ನು ಕನ್ನಡದ ಅನೇಕ ಕವಿಗಳು ಅನುವಾದಿಸಿಕೊಂಡಿದ್ದಾರೆ. ಪಂಪ-ರನ್ನರೂ ಈ ಸನ್ನಿವೇಶವನ್ನು ಬಳಸಿಕೊಂಡಿದ್ದಾರೆ. ಜಯರಾಯಾಚಾರ್ಯರಯ ಈ ಅನುವಾದವನ್ನು ಕೈಗೊಂಡಬಗ್ಗೆ ಹೆಚ್. ಎಂ. ಶಂಕರನಾರಾಯಣ ರಾವ್ ಹೀಗೆ ಹೇಳುತ್ತಾರೆ; '' ಇಂಗ್ಲೀಷ್ ನುಡಿಗೆ ಪ್ರಾಶಸ್ತ್ಯವಿದ್ದ ಕಾಲದಲ್ಲಿ, ಅದರಿಂದಲೇ ಭಕ್ತಿ ಮುಕ್ತಿಗಳೆಂದು ವಿದ್ಯಾವಂತರು ನಂಬಿದ್ದ ಕಾಲದಲ್ಲಿ ಕೇವಲ ರಾಜಾಶ್ರಯವನ್ನೇ ನಂಬಿ ಜನ ಬದುಕಬೇಕೆಂಬ ಏಕೈಕ ಉದ್ದೇಶದಿಂದಲೇ ಪಂಡಿತರು ಸಂಸ್ಕೃತ ನಾಟಕಗಳನ್ನು ಕನ್ನಡಿಸಿದರು. ವೇಣಿಸಂಹಾರದ ಈ ಕನ್ನಡ ಭಾಷಾಂತರವು ಆ ಗುಂಪಿಗೆ ಸೇರುತ್ತದೆ. ಕನ್ನಡ ಭಾಷೆಯ ಮರ್ಯಾದೆಗಿಂತ ಸಂಸ್ಕೃತ ಭಾಷೆಯ ಮರ್ಯಾದೆಯೇ ಈ ಅನುವಾದದಲ್ಲಿ ಹೆಚ್ಚಾಗಿ ಮೂಡಿದೆ ಎಂದರೆ, ಈ ಕೃತಿಗಳನ್ನು ಕನ್ನಡಿಸಿದವರು ಸಂಸ್ಕೃತದಲ್ಲಿ ವಿಶೇಷವಾದ ಅಭಿಮಾನವುಳ್ಳ ಪಂಡಿತರೆಂದರೆ ಈ ವಿಮರ್ಶೆ ಅದರಲ್ಲಿ ಅಡಗಿಹೋಗುತ್ತದೆ. ಸಂಸ್ಕೃತ ಬಾರದ ಕನ್ನಡಿಗರಿಗೆ ಈ ನಾಟಕಗಳನ್ನು ಪರಿಚಯ ಮಾಡಿಕೊಡಬೇಕೆಂದಿದ್ದ ಇರುವ ಧ್ಯೇಯ ಹಿರಿಯರದು. ಆ ಕಾರ್ಯವನ್ನು ನಿರ್ವಹಿಸಿದ ಇವರು ಪುಣ್ಯಪುರುಷರು'' ( ಹೆಚ್. ಎಂ. ಶಂಕರನಾರಾಯಣರಾವ್. ಮುನ್ನುಡಿ, ಪು.೭).

ಉದಾ : ರಾಯ ಇಲ್ಲಿ ಪಾತ್ರದ ಮುಖದಿಂದ ಎರಡು, ಮೂರು ಕಂದ, ವೃತ್ತಾದಿ ಪದ್ಯಗಳನ್ನು ಹೇಳಿಸಿದ್ದಾರೆ.

ಕಂ॥ ಕುವರಮ ಪತ್ನಿತನತ್ತೀ । ಯವವಯಮಿೂರೆದಾನದಿಂಮಿಕ್ಕಿಹುದಿಂ॥ ದವಧಿಯು
ಮೈತಂದುದು ಸ । ತ್ಯವಿದ ಪರಿತ್ಯಾಜ್ಯಮಧಿಕಕೋಪಿಮುನೀಂದ್ರಂ॥
ಕಂ॥ ವಸುಧಾಮರಸ್ಯಹರಮಾ। ದಸುವನಿದಂಬಿಡುವದಕ್ಕು ಮುತ್ಸಹಿಸೇಂಮುಂ॥
ದೆಸಗುವದಂ ತಿಳಿಯದಮಾ। ನಸಮುಳ್ಳೆನಗಾದುದೆಲ್ಲ ದೆಸೆತಾಂ ಶೂನ್ಯಂ॥
ವೃ ॥ ಪ್ರಾಣಸ್ತಂಭತಪಸ್ಮಾಧಿ ನಿಯಮ ಪ್ರವ್ರಾಜಮುಖ್ಯಂಗಳಿಂ । ಕ್ಷೀಣಾಜ್ಞಾನ ತಮಿಸ್ರ
ರಾಮುದಪರಬ್ರಂಹಜ್ಞರಿಜ್ಜೈಪರೋ॥ಸ್ಥಾಣು
ಪ್ರೀತಿಯಿನಂತ್ಯದಲ್ಲೊರೆವನೋತತ್ತಾರಕಜ್ಞಾನವಂ।
ಪ್ರಾಣತ್ಯಾಗದಿನಿಲ್ಲಿ ಜಂತುವು ಮುಗುಳ್ದುತ್ಪತ್ತಿಯಂ ಪೊಂದದೋ॥ ಮತ್ತುಂ

ವೃ॥ ನರಸುಸಾರಕಠೋರ ಶೃಂಖಲಯಂ ತಾಂಪೋಕುಮಿತಾಣದೊಳ್। ಹರಹಸ್ತಾಜ್ಜದಿ
ನಿಲ್ಲಿಬೀಳ್ದುದು ಸರೋಜೋದ್ಭೂತ ಶೀರ್ಷಂಮಹಾ॥
ದುರಿತಂ ಬ್ರಂಹವಧೋತ್ಥಿತಂತೊಲಗಿದತ್ತಿಲ್ಲೆಂದು
ಮಾಕಾಳಿಯಂ। ವೆರೆಸುತ್ತಿಲ್ಲಿಯೆವಾಸದಂ ವಿರಚಿಪಂ ಶ್ರೀ ವಿಶ್ವನಾಥೇಶ್ವರ ॥

ವೃ॥ ಧನಮಂಗೆಲ್ಪು ಕುಬೇರನಿಂದೆ ತರಲೇಂ ತ್ಯಕ್ತ ಶ್ರೀ ಗೇನಾಜಯೋ ।
ನ್ನನದಿಂದೇ ಳ್ವಧ ರಾಮೆರರ್ಗೆ ಸುಲಭಂದೂಡ ರ್ಥರಾ ಪಾಲಕಂ ।
ಧನ ಲೂಲಂನೆಲದೊಳ್ವಣಿ ಚೈವಸು ಎಲ್ಲಂ ರಿಕ್ತ ನಾವೆನ್ನೊಳೀ । ಯನಿ ತೆಲ್ಲಂ
ಚಿರಕಾಲ ಸಾಧ್ಯಮೆನಗ್ಗಿಂ ಕಾಲದೂದ್ವೆವದಿಂ ॥

ಇದು ಸ್ವಲ್ಪ ನಾಟಕದ ಓಟಕ್ಕೆ ಕಡಿವಾಣ ಹಾಕಿ ರಸಭಂಗಮಾಡುವ ಸಾಧ್ಯತೆ ಇದೆ. ಹಲವಾರು ತಾಳಬದ್ಧವಾದ ಗೀತೆಗಳು ಕಂದ ವೃತ್ತದ ಬದಲಾಗಿ ಉಪಯೋಗಿಸಲು ಅಡಿಯಲ್ಲಿ ಕೊಡಲಾಗಿದೆ. ಬಹುಶಃ ಕಂದ ಪದ್ಯಗಳು ಓದು ಪಠ್ಯಕ್ಕೆ ಮೀಸಲಾಗಿರಬಹುದು.

ಉದಾ: ವೃ ॥ ಮುನಿಪಂಗೀಯತೆ ಭೂಮಿಯಂ ಮುದದೆಸನ್ಯೇರ್ಮ್ಮಲ್ಯಮಂ ತುಳ್ದುದೀ। ಮನವಿಂದಾಂ ಪ್ರದುಕಂಪಮಂ ಸ್ಮರಿಸಿದಲ್ತಿದ್ದಕ್ಷಿಣಾದ್ರವ್ಯಮಂ॥ ಧನಸಂಪಾದನೆ ಮಾಡಲಾಗದು ಗಡುತದ್ನೇದೊಳ್ಳುಶಿಯೇ। ದಿನಿಯಲ್ಲೆಂದೊರೆ ವಿರ್ಪಕಾರಣದೆನಾನಾಕಾಶಿಗೇಡೋದಪೇಂ॥ ಈ ವೃತ್ತವನ್ನು ತಿಳಿಗನ್ನಡ ಪದ್ಯವಾಗಿ, ರಾಗಬದ್ಧವಾಗಿ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ.

॥ ರಾಗಧನ್ಯಾಸಿ ಆದಿತಾಳ ॥

ಏನಮಾಡಲಿಮುಂದಕೆ । ದಕ್ಷಿಣಧನಕೆ ॥ಪ॥ ಮೌನಿಗೆಂತೀವೆ। ಹೀನನಾಗಿರುವೇ ॥ಪ॥ ಧರೆಯನೀಯುತಾ ಮುನಿಗೆ। ಸಂತೋಷವ। ಧರಿಸಿದುದೀಬಗೆಮಿಗೆ। ಸ್ಮರಿಸಲು ದಕ್ಷಿಣೆಯ । ನೆರಕಂಪಿ ಪ್ರದುಕಾಯ । ವಿರಚಿಪ್ರದೇನು। ಮುನ್ನಾನು । ತೆರನಕಾಣೆನು।೧॥ ಮೇದಿನಿಯನು ಬಿಡುತ। ಧನಮನ್ಯುಸಂ ಪಾದಿಸಿಕೊಡುವೆನೆನ್ನುತ ಸಾದರನಾಗಿ ಬಂದೆ। ನೀದಾರಿವಿಡಿದಿಂದೆ । ಖೇದವಾಂತಿಲ್ಲಿ। ಮನದಲ್ಲಿ। ಪೋದಪೆನೆಲ್ಲಿ।೨॥ ಸಾರದೇವನ ನೋಡುತೆ। ಮರಣಾಸಿಯು। ಧಾರಣೆಯಲ್ಲಿ ವೆಸುತೆ। ಧೀರರುಹೇಳಿಹ । ಕಾರಣದಿಂದೆ । ವಾರಣಾಸಿಗೆ । ನಾಹೋಗೆ ಸುರಿದೆ ಹೀಗೆ ।೩॥

ಉದಾ: ವೃ ॥ ಬಲು ಪೆರ್ಚಿರ್ಪಳಿಲಿಂ ನಡುಂಗುದುಟಿಯಂ ತುಳ್ದುರ್ಪನೇ ವತ್ಸನೇ । ಖಲಪಾಪಿಷ್ಠನನಿರ್ದ ಯಾತ್ಮಕನ ನೇಕೆನ್ಯಾಸ್ಯಮು ನೋಡುವೈ ॥ ಪಲಮಂಭಕ್ಷಿ ಪ್ರಮದ ಪಕ್ಕಿಗಳ ವಕ್ರ್ಕಾಲ್ಗೊ ಸಂತರ್ಸುಪ್ರಿಯ । ರ್ನಲೆಕಾದಲ್ಮೆಗೆ ಪುತ್ರರ್ರೈಸೆ ವಧುಗಳ್ ತುಮುಖಗಂಗೆಳ್ಗೆಯುಂ॥

॥ರಾಗೆ ತೋಡಿ ಆದಿ ತಾಳ॥

ಏತಕೆ ನೋಡುತಿರ್ಪೆ । ಬಾಲನೆ ॥ ಪ॥ ಪಾತರೆಯಾದೆನ್ನ ಬಾಲನೆ॥ ಅ॥ ಕೋಪಶೋಕದಿ ತುಟಿಯ । ನೀಪರಿಕುಣಿಸುತ।ಪಾಪಿಯ ಮುಖವನು । ಬಾಲನೆ ।೧॥ ಅರಿಗೌ ದರುಸುಕು। ಮಾರರೊಳ್ ಪ್ರೀತಿಯು । ತೋರದಿರ್ಪ್ರದೆ ಪೇಳು । ಬಾಲನೆ ।೨॥ ಯಾತುಧಾನ ಪಕ್ಷಿ। ಜಾತಿಗಳಿಗೂ ಸತಿಯು । ಪ್ರೀತಿಪಾತ್ರಳಿಲ್ಲವೆ । ಬಾಲನೆ ।೩॥

ಉದಾ:(೧) ॥ರಾಗ ನಾದನಾಮ ಕ್ರಿಯ ಆದಿತಾಳ ॥

ಅಡಿಯಲ್ಲಿರುವ ಗೀತ ಬದ್ಧವಾದ ಪದ್ಯಗಳು ತಿಳಿಗನ್ನಡದಲ್ಲಿದ್ದು ಪ್ರೇಕ್ಷಕರನ್ನು ತಲುಪುತ್ತವೆ. ರಾಗಬದ್ಧವಾಗಿದ್ದರಿಂದ ಸಂಗೀತ ನಾಟಕವನ್ನು ಆಡಲು ಇದು ಯೋಗ್ಯವಾಗಿದೆ.

ರಾಜಾಧಿರಾಜನೆ । ರಾಜಿಸಿ ಲಾಲಿಸು ರಾಜವದನನೆ ॥ ಪಲವಿ॥ ಕೊರವಂದಿಯೂ ಕೋರೆದಾಪೆಯಿಂ। ಧಾರುಣಿಯಕೆದರಿ । ಮುಖವು। ತೋರಿಪ್ಪೆಯೋದರಿ । ವೊದರ। ವಾರಿಯೊಳಗೆವೊಂದು । ತಾರಾಮದತರು। ವಾರವಮುರಿಯುತೇ। ಪಾರುತಲಿರ್ಪುದು ॥೧॥ ಕಾಳಹಂದಿಯದು। ಬಾಳಿಯಮರಗಳ। ಸೇಳುತ ಸುಮವಲ್ಲೀ । ನಾರಸ। ನಾಳವ ಕಡಿದಲ್ಲಿ। ಮುಸ್ತಿಯ । ಕೇಳುತಸನೆ ಳ। ಮೂಲವನುರುಳಿಸಿ। ಹಾಳುಮಾದೆತ್ವೆ। ತಾಳಲಾರೆಮ್ಮಿ ॥ ೨॥

ಉದಾ : (೨) ॥ರಾಗ ಜಲಾಪ್ ಆದಿತಾಳ॥
ಬೇಡುವೆ ನಿನ್ನನು । ಜೋಡಿಸಿ ಕೈಯನು॥ಪ ॥ಗಾಡಿಕಾತಿಯೆದಯೆ। ಮಾಡಲೆಬಾಯೆ॥ ಅ॥ ರಮಣಿ ಮಾಡಿರುವೆ । ನ್ನಮಿತಾಪರಾಧಿಕೆ। ಸಮುಚಿತಶಿಕ್ಷೆಯ । ಪ್ರಮದೆ ನೀ ಮಾಡಂ ॥ ೧॥ ನಲ್ಲೆನೀನೂಹಿಪಂ। ತಲ್ಲನಾನೆಂಬುವ । ಕಿಲ್ಲಿಕುಲವತಿಸಾಕ್ಷಿ।ಯಲ್ಲವೆ ಚಲುವೆ ।೨॥

ಆದರೆ ವೇಣಿಸಂಹಾರದಲ್ಲಿ ಮಾತ್ರ ಯಥೋಚಿತವಾಗಿ ಸಣ್ಣ ಸಣ್ಣ ಕಂದವೃತ್ತಗಳನ್ನು ರಚಿಸಿ ಎಲ್ಲೂ ರಸಭಂಗವನ್ನು ಉಂಟು ಮಾಡದೆ ಓಜಸ್ಸನ್ನು ಕಾಯ್ದುಕೊಂಡಿದ್ದಾರೆ. ಬಹುಶಃ ರಂಗದ ತಮ್ಮ ಮೊದಲಿನ ನಾಟಕವನ್ನು ಅವರು 'ವೇಣಿಸಂಹಾರದಲ್ಲಿ' ತಪ್ಪಿಸಲು ಕಾರಣರಾಗಿದ್ದಾರೆ. ಬದಲಾದ ನೋಡಿ ಹಲವು ದೋಷಗಳನ್ನು ಪ್ರೇಕ್ಷಕರ ಅಭಿರುಚಿಯೂ ಇದಕ್ಕೆ ಕಾರಣವಾಗಿರಬಹುದು.

## ಮೈಸೂರು ಸೀತಾರಾಮಶಾಸ್ತ್ರಿಗಳು :

ಮೈಸೂರು ಸೀತಾರಾಮಶಾಸ್ತ್ರಿಗಳು 'ಕರ್ನಾಟಕ ಪಾರ್ವತಿ ಪರಿಣಯಂ' ಮತ್ತು 'ಕರ್ನಾಟಕ 'ಸ್ನುಷಾವಿಜಯಂ' ಎಂಬ ಎರಡು ನಾಟಕಗಳನ್ನು ಸಂಸ್ಕೃತದಿಂದ ಅನುವಾದಮಾಡಿದ್ದಾರೆ. 'ಪಾರ್ವತಿ ಪರಿಣಯ' ಬಾಣಭಟ್ಟನಿಂದ ರಚಿತವಾಗಿದ್ದರೇ, ಸ್ನುಷಾವಿಜಯ ಸುಂದರರಾಜಕವಿ ಎಂಬವರ ರಚನೆ. ಎರಡು ಅನುವಾದಗಳು ಒಂದು ವರ್ಷದ ಅವಧಿಯಲ್ಲಿ ಪ್ರಕಟಗೊಂಡಿವೆ. 'ಪಾರ್ವತಿಪರಿಣಯಂ' ೧೮೯೬ರಲ್ಲಿ ಪ್ರಕಟವಾಗಿದ್ದರೆ; ಸ್ನುಷಾವಿಜಯಂ೧೮೯೭ರಲ್ಲಿ ಪ್ರಕಟವಾಗಿದೆ.

'ಪಾರ್ವತಿ ಪರಿಣಯಂ ನಾಟಕ ಹಳೆಗನ್ನಡದಲ್ಲಿ ಬರೆಯಲಾಗಿದೆ. ಆದರೆ ಸ್ನುಷವಿಜಯಂನ ಸಂಭಾಷಣೆ ಹೊಸಗನ್ನಡದಲ್ಲಿದೆ. ಪದ್ಯಗಳನ್ನು ಮಾತ್ರ ಹಳಗನ್ನಡದಲ್ಲಿ ಬರೆಯಲಾಗಿದೆ. 'ಪಾರ್ವತಿಪರಿಣಯಂ'ನ್ನು ಹಳಗನ್ನಡದಲ್ಲಿ ಬರೆದಾಗ ಅದು ಉದಾರವಾಗಿ ಸ್ವಿಕೃತವಾಗುತ್ತದೆಯೋ ಇಲ್ಲವೋ ಎಂಬ ಅಳುಕು ಇವೆ. ಹಳಗನ್ನಡ ಸಾಹಿತ್ಯದಿಂದ ಮರೆಯಾಗುವ ಕಾಲ ಪ್ರಾರಂಭವಾಗಿತ್ತೆಂದು ಹೇಳಬಹುದಾಗಿವೆ. ಆದ್ದರಿಂದಲೇ ಅವರು '' ಮುನ್ನುಡಿಯಲ್ಲಿ ಹಳಗನ್ನಡದಲ್ಲಿ ಬರೆದಿದೆ ಎಂದು ಕೇಳಿದ ಮಾತ್ರಕ್ಕೆ ಜುಗುಪ್ಸಿತರಾಗದೆ ಆದರದಿಂದ ಆದ್ಯಂತವಾಗಿ ಪರಿಶೀಲಿಸಿ ಗುನಗ್ರಹಣದಿಂದ ಸಂತೋಷಪಡುವರೆಂದು ನಂಬಿರುವೆನು. ಈ ನಾಟಕವನ್ನು ಬರೆಯುವಾಗ ಅನುವಾದಕರಿಗೆ ಇನ್ನೂ ಹಳಗನ್ನಡದ ವ್ಯಾಮೋಹ ಇರುವುದು ಗೊತ್ತಾಗಿದೆ. ಸಂಭಾಷಣೆ ಹಳಗನ್ನಡದಲ್ಲಿದುದು ಜನರನ್ನು

ತಲುಪಲು ಅಡಿಯಾಗಿದೆ ಎಂದು ಶಾಸ್ತ್ರಿಗಳು ಕಂಡುಕೊಂಡಿದ್ದಾರೆ ಎಂದೆನಿಸುತ್ತದೆ. ಆದ್ದರಿಂದಲೇ ನಂತರದ ನಾಟಕವಾದ 'ಸ್ನುಷಾವಿಜಯಂ' ನಾಟಕದಲ್ಲಿ ಸಂಭಾಷಣೆಗೆ ಹೊಸಗನ್ನಡ ಬಳಸಿಕೊಂಡಿದ್ದಾರೆ. 'ಪಾರ್ವತಿ ಪರಿಣಯಂ' ಪೌರಾಣಿಕ ಕಥಾವಸ್ತು ಆಗಿದ್ದರಿಂದ ದೇವತಾ ಪಾತ್ರಗಳಲ್ಲಿ ಹೊಸಗನ್ನಡಕ್ಕಿಂತ ಹಳೆಗನ್ನಡವು ಮರ್ಯಾದೆಯನ್ನು ತಂದು ಕೊಡುತ್ತದೆ ಎಂದು ಭಾವಿಸಿರಬಹುದು.

ಯಾವುದೇ ಕಾರ್ಯಕ್ಕೆ ಉದ್ದೇಶಾನುಸಾರವಾಗಿ ಮೌಲ್ಯವಿರುತ್ತದೆ. ಆದ್ದರಿಂದಲೇ 'ಸ್ನುಷಾವಿಜಯಂ' ದಂತಹ ಸಾಮಾಜಿಕ ನಾಟಕಕ್ಕೆ ಸುಲಲಿತವೂ, ಸರಳವೂ ಆದಂಥ ಹೊಸಗನ್ನಡದ ಸಂಭಾಷಣೆ ಬಳಸಿದ್ದಾರೆ. ಈ ಕಥೆ ಎಲ್ಲ ಕಾಲಕ್ಕೂ ಅನ್ವಯಿಸುವುದರಿಂದ ಇದು ಸರಿಯಾದುದು ಎಂದು ಅನುವಾದಕರು ಭಾವಿಸಿರಬಹುದಾಗಿದೆ.

'ಸ್ನುಷಾವಿಜಯಂ' ದಲ್ಲಿ ಬರುವ ಹಳಗನ್ನಡ ಪದ್ಯಗಳಲ್ಲಿ ಕೆಲವು ಕಠಿಣ ಶಬ್ದಗಳಿಗೆ ಅಡಿಯಲ್ಲಿ ಟಿಪ್ಪಣಿ ಸೇರಿಸಿದ್ದು ಕೃತಿಯ ಉಪಯುಕ್ತತೆ ಹೆಚ್ಚಿಸಿದೆ. ಇದು ಬದಲಾದ ಅಭಿಪ್ರಾಯದ ಸಂಕೇತವು ಆಗಿದೆ.

ಎರಡೂ ಕೃತಿಯಲ್ಲಿ ಕಂದವೃತ್ತಗಳ ಬಳಕೆಯಾಗಿದೆ 'ಪಾರ್ವತಿ ಪರಿಣಯಂ'ನ ಪದ್ಯಗಳು 'ಸ್ನುಷಾವಿಜಯಂ'ನ ನೋಡಲಾಗಿ ಹೆಚ್ಚು ಸಂಸ್ಕೃತ ಭಯಿಷ್ಠವಾಗಿವೆ.

(ಪಾರ್ವತಿ ಪರಿಣಯಂ)-

ವೃ ॥ ವರ ಕೃಷ್ಣಾಜಿನ ಮಂಸದಲ್ಲಿ ಪೊರವಾರೊಳ್ಮೌಂಜಿಯಾ
ವೇಷ್ಟನಂ ॥ ಕರದೊಳ್ಮುತ್ತುಗಗೋಲ್ದಮಂತು ನೊಸಲೊ
ಳ್ಬಸ್ಮೋಜ್ಜಳಂ ಪುಂಡ್ರತಂ॥ ಪರಮಂ ದರ್ಭಪವಿತ್ರಕಂ ಕ್ರವಣದೊಳ್ಮೆಳೆಯಿಳ್ರು
ಮ್ಯಬಂ। ಧುರ ವಟ್ಟೀಚೆಡೆ ರಾಜಿಕುಂ ಜಪಸರುಂ ಮುಂಗೆಯ್ಯೊಳುಂ ಸ್ಫಾಟಿಕಂ ॥೯॥

ವೃ॥ ಬರುತಂ ಜಾಲದೆ ಮೆಲಮೆಲ್ಲನೊಡಲಂ ಸೊಂಕುತ್ತಿರಲ್ತೆಂಬೆಲ। ರ್ಪರಮಾನಂದ ಮನೀವ ಸುಂದರಮದೊಂದುಂ ಮಂದಿರಂ ಜೀವಿತೇ । ಶ್ವರನಿಂ ಕೂಡಿ ಮದೀಯಬಾಲೆ ಮಲಗಲ್ಕನ್ನಿಂದೆ ನಿರ್ಣಿತವೂ । ಶಿರೆಯೀಪಾಪಿನಿ ಮುನ್ನವೇ ಪ್ರಿಯನ ಸೇದ್ರ್ದತ್ತಲ್ಮಂಗಿರ್ದಪಳ್ ।೧೪॥

ಕಂದಪದ್ಯಗಳು ಮಾತ್ರ ಸುಲಲಿತವಾಗಿ, ಸೊಗಸಾಗಿ ಮೂಡಿಬಂದಿದೆ.

ಪಾರ್ವತಿ - ಕಂ॥ ಎಂದು ಮದಾವನ ಸಿಲ್ಲ

ವ್ವರ್ಣಿಂದಿಸುವ ನ್ನೆಗೀಕದಿಂದೆ ತಲೆವಾಗುತ್ತಂ॥

ಇಂದು ವಿಭೂಷನ ನಾತನ।

ನಿಂದು ವಿನಿಂದಿಸುವ ರಸನೆ ಯಿದು ಸೀಳುವದೇಂ?।೩೦॥

ಚಾರು - ಕಂ॥ ಚಂದಿದ ಮಂದಿರದೊಳಗಾ।

ನಂದದೆ ಕಾದಲನನೊಂದಿ ಸೊಸೆ ಮಲಗಲೊಡಂ॥

ಸುಂದರಿ ವಂಶೋಧ್ಧಾರಕ।

ನೆಂದೆನಿಸುತೆ ತೊಳಪ ಪಾತ್ರನಂ ಪಡೆದವೆ ನೀಂ॥೧೯॥

ಎಲ್ಲ ತರಹದ ಸಾಹಿತ್ಯವು ತನ್ನಿಂದ ಅನುವಾದವಾಗಬೇಕು ಎಂದು ಕವಿಯ ಅಭಿಲಾಷೆಯಾಗಿದೆ. ವಸ್ತುವಿನ ಆಯ್ಕೆಯಲ್ಲಿ ಯಾವುದೇ ಮಡಿಮತಿಕೆ ಅವರು ಪಾಲಿಸಿಲ್ಲ. ಒಂದು ಪೌರಾಣಿಕ ವಾದರೆ ಇನ್ನೊಂದು ಸಾಮಾಜಿಕವಾದುದೇ ಸಾಕ್ಷಿ.

ಆ ಕಾಲದಲ್ಲಿ ಮೈಸೂರ ರಾಜರಾದ ಶ್ರೀ ಚಾಮರಾಜೇಂದ್ರ ಒಡೆಯರ ಅವರು ಪ್ರೋತ್ಸಾಹಿಸಿದ ಪರಿಣಾಮವಾಗಿ ಕನ್ನಡದಲ್ಲಿ ಆನುವಾದ ಸಾಹಿತ್ಯ ಮೂಡಿಬಂದಿತು. ಮದ್ರಾಸ ಯುನಿವರ್ಸಿಟಿ ಕೂಡ ಈ ವಿಷಯದಲ್ಲಿ ಮುಂದೆ ಬಂದು ಕಾರ್ಯ ನಿರ್ವಹಿಸಿತು. ಇವೆರಡು ಮೂಲಗಳನ್ನು ಬಿಟ್ಟರೆ ಉಳಿದಂತೆ, ವ್ಯಕ್ತಿಗಳ ಧನಸಹಾಯದ ಮೇಲೆ ಪ್ರಕಟಣಾಕಾರ್ಯ ಅವಲಂಬಿತ ವಾಗಿರುತ್ತಿತ್ತು. 'ಪಾರ್ವತೀಪರಿಣಯ' ಮತ್ತು ಕರ್ನಾಟಕ 'ಸ್ನುಷಾವಿಜಯಂ' ಈ ಎರಡು ನಾಟಕಕ್ಕೂ ಧನಸಹಾಯ ಸಿಕ್ಕಿದ್ದು ದಾನಿಗಳಿಂದ ಅವರ ಹೆಸರುಗಳನ್ನು ತಮ್ಮ ಪೀಠಿಕೆಯಲ್ಲಿ ಅವರು ಸ್ಮರಿಸಿದ್ದಾರೆ. ಆದ್ದರಿಂದ ಆ ಕಾಲದಲ್ಲಿ ಇದ್ದಂಥ ಪರಿಸ್ಥಿತಿ ನಮಗೆ ಚೆನ್ನಾಗಿ ತಿಳಿಯುತ್ತದೆ. 'ಸ್ನುಷಾ ವಿಜಯಂ'ದಲ್ಲಿ ಸೊಸೆಯ ಸಹನೆ ಅವಳಿಗೆ ವಿಜಯವನ್ನು ತಂದುಕೊಟ್ಟಿದರೇ, 'ಪಾರ್ವತಿ ಪರಿಣಯ'ದಲ್ಲಿ ಪಾರ್ವತಿ ವಿರಹ ಮತ್ತು ತಪಸ್ಸು ಅವಳಿಗೆ ವಿಜಯವನ್ನು ತಂದು ಕೊಟ್ಟಿದೆ. 'ಸ್ನುಷಾವಿಜಯಂ'ನ ಕಥಾಸಂವಿಧಾನ ಸಮಾಜದ ಪ್ರಚಲಿತ ವಿಷಯದ ಪ್ರತಿಬಿಂಬ ಅತ್ತೆ ಮತ್ತು ಸೊಸೆಯರ ತಿಕ್ಕಾಟ ಲೋಕಪ್ರಸಿದ್ಧವಾದುದು. ಆದಕಾರಣ ಇಲ್ಲಿ ಬಳಸಿದ ಭಾಷೆಯೂ ಸ್ವಲ್ಪ ಕರ್ಕಶ ಅಂಥ ಶಬ್ದಗಳು ಇದರಲ್ಲಿ ಅಲ್ಲಲ್ಲಿ ಬಂದಿವೆ.

ಮರಾಶೆ - ಎಲೆ ನೀಚೆ। ಏನು। ಅದಾವಳೋ ಒಬ್ಬಳು

ಹಾಕುವ ಪಿಂಡವನ್ನು ತಿಂದುಕೊಂಡು ದಾಸಿಯಂತೆ ಬಿದ್ದಿರೆಂದು

ಹೇಳುವೆಯೋ? ನೋಡು ನನ್ನ ಜಾಣತನವನ್ನು

ಪಾರ್ವತೀಪರಿಣಯವೂ ಪೌರಾಣಿಕ ನಾಟಕವಾದ್ದರಿಂದ ಅದು ಗಂಭೀರವಾಗಿ ಮೂಡಿಸಲು ಪ್ರಯತ್ನಿಸಿದ್ದಾರೆ. ನಾಟಕವನ್ನು ದೋಷಗಳೆಣಿಸದೆ ಸ್ವಿಕರಿಸಬೇಕೆಂದು ಬಿನ್ನಹ ಮಾಡಿಕೊಳ್ಳಲಾಗಿದೆ. ಕಂ॥ ಪಲಸಿನ ಮಳ್ಗ ವಸಣಿಗೆಯ।

ನುಳಿದೊಳಗಣ ತಯೊಳೆ ನೊಲ್ದು ಕೊಳ್ಳವೊಲಿದ ಕೊಳ್ ॥ ನೆಲಸಿದ ದೋಷಂಗಳ ನುಳಿ।
ದಲಸಬೆ ಗುಣಮಂ ಗ್ರಹಿಕೆ ಕೋವಿದ ರೊಲವಿಂ॥೮॥
ಸ್ವಾರಸ್ಯಕರ ಅಂಶವೆಂದರೆ ಇದನ್ನು ಅವರು 'ಸೂಚನೆ' ಯಾಗಿ ಕೊಟ್ಟಿದ್ದಾರೆ.

ಒಟ್ಟಿನಲ್ಲಿ ತಮ್ಮ ಶೈಲಿಯನ್ನ ಕಥಾವಸ್ತುವಿಗೆ ಅಗತ್ಯವಿದ್ದಂತೆ ಬದಲಾಯಿಸಿ ನಾಟಕದ ಔಚಿತ್ಯವನ್ನು ಸಾಧಿಸಿದ್ದಾರೆ.

## ಬಸವಪ್ಪಶಾಸ್ತ್ರಿಗಳು :

ಬಸವಪ್ಪಶಾಸ್ತ್ರಿಗಳ ಅನುವಾದ ಕಾರ್ಯ ಆರಂಭವಾಗಿದ್ದುದು 'ಶಾಂಕುಂತಲ ನಾಟಕದಿಂದ ಆದ್ದರಿಂದಲೇ ಅವರಿಗೆ ' ಅಭಿನವ ಕಾಳಿದಾಸ' ಎಂಬ ಬಿರುದು ಪ್ರಾಪ್ತವಾಯಿತು. ಅತ್ಯಂತ ಶ್ರೇಷ್ಠವಾದ ಅನುವಾದವೆಂದು ಅವರಿಗೆ ಅದು ಮನ್ನಣೆ ತಂದುಕೊಟ್ಟಿತು. ಕಾಳಿದಾಸನನ್ನು ಅತ್ಯಂತ ನಿಕಟವಾಗಿ ಅನುವಾದಿಸುವಾಗ ಅವರು ಕಾಳಿದಾಸನ ಕಾವ್ಯದ ಬೀಸು, ಶೈಲಿಯನ್ನು ಅನುಸರಿಸಲು ಪ್ರಯತ್ನಿಸಿದರು. ಬಸವಪ್ಪ ಶಾಸ್ತ್ರಿಗಳು ಶಾಕುಂತಲವನಲ್ಲದೆ ಇತರ ನಾಟಕಗಳನ್ನು ಅನುವಾದಿಸಿದ್ದಾರೆ. ಕಾಳಿದಾಸನ ವಿಕ್ರಮೋರ್ವಶಿಯ, ರತ್ನಾವಳಿ(ಶ್ರೀಹರ್ಷ) ಭವಭೂತಿಯ ಉತ್ತರ ರಾಮಚರಿತ, ಮಾಲತೀ ಮಾಧವ, ಕ್ಷೇಮಿಶ್ವರನ ಚಂಡಕೌಶಿಕ ಇವೆಲ್ಲ ಅವರ ಇತರ ಕೃತಿಗಳು .(ಮುನ್ನಿನ ಸಂಸ್ಕೃತ ಕೃತಿಗಿಮ ಕನ್ನಡಿಯೆನೆ ಕನ್ನಡಿಪ್ಪುಹುಚಿತಂ ಕವಿಗಳ್ ಎನ್ನೆರಿವು ನಿತರಿದಾಂ ಕನ್ನಡಿಸಿರ್ವ್ವಂ ಗುಣಜ್ಞರಭಿಮತಿ ಪುದಿವೆಂ ॥) ಬಸವಪ್ಪ ಶಾಸ್ತ್ರಿಗಳು ಭರ್ಕೃ ಹರಿಯ ನೀತಿಶತಕದ ಕನ್ನಡ ಭಾಷಾಂತರ ಪ್ರಸ್ತಾವನಾ ಪದ್ಯದಲ್ಲಿ ತಮ್ಮ ಪ್ರತಿಜ್ಞೆ ಏನು ಎಂಬುದನ್ನು ಸ್ಪಷ್ಟಪರಿಸಿದ್ದಾರೆ. ವಸ್ತು, ರೀತಿಗಳೆರಡರ ಸಾಮರಸ್ಯವನ್ನು ಕಾಯ್ದುಕೊಳ್ಳಬೇಕಾದ ಸ್ಥಿತಿಯನ್ನು ಬಸವಪ್ಪಶಾಸ್ತಿಗಳು ಸಾಧಿಸಿದ್ದಾರೆ.

ಉದಾ: ಗ್ರೀವಾಭಂಗಾಭಿರಾಮಂ ಮುಹ್ರರನುಪತತಿ ಸ್ಯಂದನೇ ದೆತ್ತ ದೃಷ್ಟಿಃ
ಪಶ್ಚಾಧೇನನ ಪವಿಷ್ಟಃ ಶರಪತನ ಭಯಾದ್ಭೂಯಸಾ ಪೂರ್ವ ಕಾಯಂ
ದರ್ಭೈರರ್ಧಾವಲೀಢ್ಯೆಃ ಶ್ರಮ ವಿವೃತ ಮುಖಭ್ರಂಶಿಭಿ: ರೇರ್ಣವರ್ತ್ಮಾ
ಪಶ್ಯೊದಗ್ರಷ್ಣುತತ್ವಾದ್ವಿಯತಿ ಬಹುತರಂ ಸ್ತೋಕ ಮುರ್ದ್ಯಾಂ ಪ್ರಯಾತಿ ॥

ಇದರ ಅನುವಾದ ಹೀಗಿದೆ.

ಕೊರಲಿಂ ತಾಂ ಕೊಂಕುಗೈಯುತ್ತಡಿಗೊಡನ್ನೆತರ್ಪ ತೇರಂಣಂನ
ಟ್ಟಿರೆ ನೋಟಂ ಬಾಣ ಪಾತಕ್ಕಿರವಿರುಕಿಸುತಂ ಪೃಷ್ಠಿಮಂ ಮಾರ್ಗದೊಳ್ತೀ।
ವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವರೆ ಮೆಲ್ದಿರ್ದ ದರ್ಭಾಂಕುರಂಗಲ್
ಧರೆಯಲ್ಲೋರೊರ್ಮೆ ಕಾಲಿಡ್ಡಿಹಹ ನಿರುಕಿಸೈ ಬಾನೊಳೇ ಪಾರಿಪೋಕುಂ॥

"ಈ ಪದ್ಯದಲ್ಲಿ ಜಿಂಕೆಯೊಂದೇ ಅಲ್ಲ ಧರೆಯಲ್ಲೋರೊರ್ಮೆ ಕಾಲಿಟ್ಟು ಬಾನೊಳೇ ಪರಿಪೋಪುದು ಕುಳಿವಾಸನ ಪ್ರತಿಭೆಯೂ ಸಹ ನೆಸಮಾತ್ರಕ್ಕೆ ಭೂವಿಂಭಿತ್ರಿಯನ್ನಾಶ್ರಯಿಸಿ (ಸ್ತೋಕಂ ವಾರ್ದ್ಯಾಂ) ಮಿಕ್ಕಂತೆ ಮುಗಿಲೆತ್ತರದಲ್ಲಿ ವಿಹರಿಸುತ್ತಿದೆ. ಈ ಚಿತ್ರವನ್ನು ಮನೋಭಿತ್ತಿಯ ಮೇಲೆ ಮೂಡಿಸಿಕೊಂಡಾಗ ಆತನ ಸ್ವರ್ಗೀಯ ಪ್ರತಿಭಾ ವಿಲಾಸದ ಅರಿವು ಪರಿಭಾವಿಸುವವರಿಗೆ ಆಗದಿರದು. ಮೂಲದ ಬಂಧೂರ ಛಂದಸ್ಸನ್ನು ಭಾಷಾಂತರಲ್ಲೂ ದೀರ್ಘ ಛಂದಸ್ಸೊಂದರ ಪ್ರಯೋಗಮಾಡಿ ಮೂಲದಅರ್ಥವನ್ನು ಶಾಸ್ತ್ರಿಗಳು ನಿಜವಾಗಿಯೂ ಕನ್ನಡಿಯನೆ (ಕನ್ನಡಿ) ಸಿದ್ದಾರೆ. ಅಭಿರಾಯಂ ಮತ್ತು 'ಉದಗ್ರಷ್ಣುತತ್ವಾತ್' ಎಂಬ ಎರಡು ಶಬ್ದಗಳ ಭಾವಗಳನ್ನು ಸಹ ಕೊಂಕುಗೈಯುತ್ತ ಮತ್ತು 'ಪಾರಿಪೋಕುಂ' ಎಂಬಲ್ಲಿ ಸೆರೆ ಹಿಡಿದಿದ್ದಾರೆ ಎನ್ನಬಹುದು. ಅವುಗಳ ವಾಚ್ಯಾರ್ಥಮಾತ್ರ ಕನ್ನಡದಲ್ಲಿ ಬಂದಿಲ್ಲ"(ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪು.೮೪).

ಶೃಂಗಾರಕ್ಕಾಗಂ ತಾನೆನಿಸಿ ಮೆರೆವ ಶಾಕುಂತಳಾಭಿಖ್ಯಮಾದು
ತ್ತುಂಗಾಲಂಕಾರಮಂ ನಾಟಕಮನೆ ಲಸದುದ್ದಾಮ ಸಾಹಿತ್ಯ ಮುಂ ಮೇಣ್
ಸಂಗೀತ ಪ್ರೌಢಿಯುಂ ಸಂಗಳಿಸೆ ರಚಿಸೆ ಕರ್ಣಾಟ ವಾಗ್ಧಾಡಿಯಿಂದಂ
ರಂಗಾಚಾರ್ಯಾಖ್ಯಾ ಮಂತ್ರಿಪ್ರವರ ಸಭೆಯೊಳೊಲ್ದೋದಿದಂ ಜಾಣ್ಮೆಯಿಂದಂ
ಕರ್ಣಾನಂದಮದಾಗಲ್ । ಕರ್ಣಾಟಕ ಕಾಳಿದಾದನೆಂಬೀ ಬಿರುದಂ
ತೂರ್ಪದಿನಿತ್ತಂ ವಿದ್ದ। ತ್ಪೂರ್ಣ ಸಭಾಮಂಡಲಿಯೊಳಿಗಾ ಮಂತ್ರಿಪಂ॥

ಎಂಬ ಪದ್ಯವೇ ಅವರು ಶ್ರೇಷ್ಠ ಅನುವಾದಕಾರರೆಂಬುದನ್ನು ಸಾಬೀತುಪಡಿಸುತ್ತದೆ. ಆದರೆ ಇದೇ ಬಗೆಯಾದ ಸುರಸತೆ ಉಳಿದ ಅನುವಾದಗಳಲ್ಲಿ ಬಂದಿಲ್ಲ. ಓಥಲೊದಂತಹ ಇಂಗ್ಲೀಷ್ ಕೃತಿಯ ಅನುವಾದ ಭಿನ್ನ ಸಾಂಸ್ಕೃತಿಕ ಪರಿಪ್ರೇಕ್ಷ್ಯದಲ್ಲಿ ಮೂಡಿಬಂದು ಹಿಡಿತಕ್ಕೊಳಗಾಯಿತು. ಆದರೆ ಶಾಕುಂತಲ ಹೊರತುಪಡಿಸಿ ಉಳಿದ ಸಾಂಸ್ಕೃತ ಅನುವಾದಗಳಾದರೂ ಸಾಂಸ್ಕೃತಿಕವಾಗಿ ಹತ್ತಿರವಿದ್ದರೂ ಅಷ್ಟೊಂದು ಪ್ರಭಾವಯುತವಾಗಿ ಮೂಡಿಬಂದಿಲ್ಲವೆನ್ನವದು ಗಮನೀಯ ಅಂಶ.

ಬಸವಶಾಸ್ತ್ರಿಗಳು ಅರುಣೋದಯದ ಮುಂಬೆಳಗಿನಿಂದ ಜನರನ್ನು ಎಚ್ಚರಿಸಿದರು. ಕನ್ನಡಕ್ಕೆ ಸಂಸ್ಕೃತದ ಬೆರೆಕೆಯನ್ನು ವಿರೋಧಿಸುತ್ತಿದ್ದ ಪೂರ್ವಜನರನ್ನು

ಸಕ್ಕಾದಮಂ ಕನ್ನಡಮಂ
ಸಕ್ಕಾಸಮಂ ತಿಳಿದ ವಿಭಿಧರ್ಗರಯಲ್
ಸಕ್ಕಾತೆವೆರಸಿದ ಸವಿ ತಾ
ನಕ್ಕುಂ ಸಕ್ಕಾದಮೆಬೆರೆದ ಕನ್ನಡ ಕಬ್ಬಂ.

ಎಂಬ ಉಕ್ತಿಯಿಂದ ಹೊಸ ಧಾಟಿಯೊಂದನ್ನು ಪಡಿಮೂಡಿಸಿದರು.

ಶಾಕುಂತಲ ನಾಟಕವಾದರೆ ವಿಕ್ರಮೋರ್ವಶೀಯ ತ್ರೋಟಕ ಐದು ಅಂಕಗಳ ರೂಪಕ

ಉದಾ: ವೇದಾಂತೋಷ ಯಮಾಹುರೇಕ ಪುರುಷಂ ವ್ಯಾಪ್ಯಾಸ್ಥಿತಂ ರೋದಸೀ
ಯಸ್ಮಿನೀಶ್ವರ ಇತ್ಯ ನನ್ಯ ವಿಷಯಃ ಶಬ್ದೋ ಯಥಾರ್ಥಾಕ್ಷರಃ।
ಅಂತರ್ಯಶ್ಚ ಮುಮುಕ್ಷು ಭ ರ್ನಿಯಮಿತ ಪ್ರಾಣಾದಿಭಿರ್ಮೃಗ್ಯತೇ
ಸ ಸ್ಥಾಣುಕಿ ಸ್ಥಿರಭಕ್ತಿಯೋಗ ಸುಲಭೋ ನಿಶ್ರೇಯಸಾಯಾಸ್ತು ವಃ ॥

ನಿಗಮಾಂತಗೊಳಾವನಂ ಪುರುಷ್ಯನೇಕಂ ಪೂರ್ನನೆಂದೆಅದುಗುರಿ
ನೆಗಳ್ದಿತ್ತೀಶ್ವಾರನೆಂಬನನ್ಯ ವಿಷಯಂ ಶಬ್ದಂ ದಲಂತಾವನೊಳ್ ।
ಬಿಗೆಯೊಳ್ ಯೋಗ ನಿಮ್ಮೃಗ್ಯೆನಾಪ್ಪ ನಮೃತ ಶ್ರೀಕಾಮರಿಂದಾವನಾ
ನಿಗಚೇಶಂ ನಿಮಗಕ್ಕೆ ಭಕ್ತಿ ಸುಲಭಂ ನಿಶ್ಯೇಯದ ಶ್ರೀಕಾರಂ॥

''ಕಾಳಿದಾಸನ ಶೈಲಿ, ಪದಗುಂಫನಂ ಅವನನ್ನು ಭಾಷ್ಯಾಂತರಿಸುವಾಗ ಶಾಸ್ತ್ರಿಗಳು ಮಹಾಕವಿಯ ಸ್ಥಾನದಲ್ಲಿ ಮಂಡಿಸಿ ಪಡಿನುಡಿದು ವಾಚಕರಲ್ಲಿ ಭಾವತರಂಗಗಳಿನ್ನೆಬ್ಬಿಸುವರು. ಮೂಲದ ಕವಿಯ ಪದಮರ್ಮಗಳನ್ನಾರಿತು ನುಡಿಯುವದರಿಂದ ಶೈಲಿಯ ಸರಳತೆ ಭಾವೋದ್ರೇಕಗಳು ಕಳೆಗೆಡದೆ ಭಾಷಾಂತರದಲ್ಲಿ ಒಡಮೂಡುತ್ತವೆ. ಆಯಾ ಸನ್ನಿವೇಶಗಳ ರಸಾನುಗುಣವಾಗಿ ಕನ್ನಡದಲ್ಲಿಯೂ ಛಂದೋಮೂಲವಾದ ರಸ, ರೀತಿ, ಶಯ್ಯೆಗಳನ್ನು ವಿನ್ಯಾಸ ಮಾಡುವುದು ಬಸವಪ್ಪಶಾಸ್ತ್ರಿಗಳ ಭಾಷಾಂತರದಲ್ಲಿನ ವೈಶಿಷ್ಟ್ಯ. ಈ ಮೇಲಿನ ಉದಾಹರಣೆಯಲ್ಲಿ 'ವ್ಯಾಪ್ಯಸ್ಥಿತಂಗೋದಸೀ' 'ಭೂಮ್ಯಾಕಾಶಗಳನ್ನೂ ವ್ಯಾಪಿಸಿರುವ' ಎಂಬುದನ್ನು ಅರ್ಥಗರ್ಭಿತವಾಗಿ 'ಪೂರ್ಣ'ನೆಂದು ''ಮುಮುಕ್ಷುಭಿರ್ನಿಯಮಿತ ಪ್ರಾಣಾದಿಭಿ:- ಪ್ರಾಣಾಯಾಮ ಪರರೂ ಮುಮುಕ್ಷಾಗಳೂ ಆದವರಿಂದ ಎಂಬುದನ್ನು -ಅಮೃತ ಶ್ರೀಕಾಮರಿಂದ ಯೋಗ(ವಿಮೃಗ್ಯನಿಪ್ಪನ್) ಎಂಬ ಬಾಷ್ಯಾಂತರದಲ್ಲಿ ಸೆರೆಹಿಡಿದಿದ್ದಾರೆ''(ಸಮಗ್ರ ಸಾಹಿತ್ಯ ಚರಿತ್ರೆ : ಪು.೮೫)

ನಾಲ್ಕು ಅಂಕಗಳನ್ನು ಬಸವಪ್ಪ ಶಾಸ್ತ್ರಿಗಳು ನಂಜುಂಡಾರಾಧ್ಯರು ಐದನೇಯ ಅಂಕವನ್ನು ಅನುವಾದಿಸಿದ್ದಾರೆ ಎಂಬುದು ಈ ಮಾತಿನಿಂದ ಸ್ಪಷ್ಟವಾಗುತ್ತದೆ.

''ಮುನ್ನಂ ಬಸವ ಕವೀಂದ್ರಂ। ಕನ್ನಡಿಸಿರೆ ವಿಕ್ರಮೋರ್ವಶೀಯದು ಪೂರ್ಣಂ।
ಸನ್ನುತ ನಂಜುಂಡಾರ್ಯಂ। ಕನ್ನಡಿಸಲ್ ಪಂಚಮೂಂಕ ಮಾದುದು ಪೂರ್ಣ.॥

ಈ ಹಿನ್ನೆಲೆಯಲ್ಲಿ ವಿಕ್ರಮೋರ್ಪಶೀಯ ನಾಟಕವು ಏಕಸೂತ್ರದಲ್ಲಿ ಅಳವಡಿಸಲು ಪ್ರಯತ್ನಿಸಲಾಗಿದೆ. ಬಸವಪ್ಪ ಶಾಸ್ತ್ರಿಗಳು ಎಂದಿನ ಕಂದ ವೃತ್ತಗಳನ್ನು ಇದರಲ್ಲಿ ಅಳವಡಿಸದೆ ಶ್ಲೋಕಗಳನ್ನು ಮಹಾಸ್ರಗ್ಧರೆ, ಚಂಪಕಮಾಲಾ ವೃತ್ತದಲ್ಲಿ ರಚಿದಿಸ್ದಾರೆ. ಮೂಲಕೃತಿಗೆ ನಿಕಟವಾಗುವ ಪ್ರಕ್ರಿಯೆಯನ್ನು ಅವರು ಇಲ್ಲಿಯೂ ಮುಂದು ವರೆಸಿದ್ದಾರೆ.

ಉದಾ: ಮಹಾಸ್ರಗ್ಧರೆ

ಕಲುಷಪ್ರಧ್ವರಿಸಿ ಮಂತ್ರ ಪ್ರಪಠನ ಪರಿಪೂತಂ ಪರಂ ಕ್ಷತ್ರತೇಜ್ಞೋ ಬಲದು ಮೇಣು
ದ್ಯವಪಾಟಕ್ಕುಲಶ ಮನವಿಧಾನ ಕ್ರಿಯಾವೀಷಮಿಮು
ಗಳತೋತಂ ಭೂರಿ ಭೂತಿಪುದ ಮೆನಿಸಿ ವಿಪದ್ವ್ರಾತಮ ಘಾತಿಸುತ್ತ
ಗ್ಗಳಮ ಪ್ಪಾನಂದಮಂ ನೀಡುಗೆ ನಿನಗೆ ಸಹಸ್ರಾಂಶುವಂಶಾಬ್ಧಚಂದ್ರಾ ॥ ೨೭॥

ಚಂಪಕ:

ಮನಿವೆಯದೇಕೆ ನೀಂ ಬರಿವೆ ಮಾನಿನಿ ಬಲ್ವಲಯೆನ್ನೊಳಾವುದಂ ಮನವೆ ವಶಂಲೆಪಾ ನಿಜದಿ ನಾನದನಾಗಿಸಿದಾತನಲ್ತು ಮೇಣ್ । ಇನಿಯಲೇ ದಮಡಿಪಾನೆಯರೆ ದಂಡಿಸು ನಿನೆಲ ಪಂದದಿಂದ ಮೆನ್ನ ನಿಜಕೆ ಕೇಳ್ ಪ್ರಮಾಣಮೆನಿಪರ್ ಕುಂದಾಣ್ಮರೆ ನಿಟ್ಟ ದೇಣೆಕರ್ ।೭೪॥.

ಉತ್ಪಲ:

ಚಂಡಿಯ ಕಾಂಡದೊಳ್ ಪೊರಳ್ಗುಮೇಕೆ ಲಲಾಟದೊಳಿಕ್ಸುಕಾಂಡಕೋ ಮಡಜಯಧ್ವಜಾಂಶುಕ ವಿಲಾಸ ಮನೊಂದಿದ ಕೊಲಕುವುರ್ಪು ತಾಂ । ತೊಂಡೆಯ ಪಣ್ಣ ಚೆಲ್ವುವಡೆದಿಂದುಟಿ ಮಂದ ಸಮೀರ ಚಾಲಿತಾ ಖಂಡ ಜಪಾನುಮಕ್ಕೆ ಪಡಿಯಟ್ಟುದದೇತಕ್ಕೆ ತಳ್ತರಂಪದಿಂ ॥ ೨೩ ॥.

ಗಮಕ ಶೈಲಿಯ ಹಾಡುಗಾರಿಕೆಗೆ ಈ ಮೇಲಿನ ವೃತ್ತಗಳು ಅನುಕೂಲಕರವೆನಿಸುವವು. ಕಾವ್ಯದ ಓಜಸ್ಸು, ಬೀಸು ಹೆಚ್ಚಿಸುವ ಈ ಲಂಬಿತ ಶೈಲಿಯ ವೃತ್ತಗಳು ಕರುಣ ರಸಕ್ಕೆ ಅಳವಡಿಸಲು ಬಸವಪ್ಪಶಾಸ್ತ್ರಿಗಳು ಪ್ರಯತ್ನಿಸಿದ್ದಾರೆ.

ಸಂಭಾಷಣೆಯನ್ನು ಹಿಗ್ಗಿಸದೆ, ಕುಗ್ಗಿಸದೇ ಹಾಗೆಯೇ ಅನುವಾದಿಸುವುದು ಅವರ ಪಾಂಡಿತ್ಯದಿಂದ ಉಂಟಾದ ನಿರ್ದುಷ್ಟತೆ, ಸಂಕ್ಷಿಪ್ತತೆಗೆ ಕಾರಣವಾಗಿದೆಯನ್ನೋ ನಾಟಕದ ಕೊನೆಯಲ್ಲಿ ಲಾಲಿತ್ಯ ಪೂರ್ಣವಾದ ರಗಳೆ ಕೊಟ್ಟಿದ್ದಾರೆ. ಪ್ರಾಸದ ಈ ರಗಳೆ ಆಕರ್ಷಕವಾಗಿದೆ. ಶಾಸ್ತ್ರಿಗಳು ಬರೆದಂಥ ಕನ್ನಡ ರತ್ನಾವಳೀ ನಾಟಿಕೆ ಶ್ರೀಹರ್ಷನ ರತ್ನಾವಳಿಯ ಅನುವಾದ ಚಂಡ ಕೌಶಿಕದಲ್ಲಿದ್ದಂತೆ ಇಲ್ಲಿ ಕೂಡ ಚಂಪಕ, ಮಹಾಸ್ರಗ್ಧರೆ ಇತ್ಯಾದಿ ವೃತ್ತಗಳ ಬಳಕೆ ಆಗಿದೆ. ಆದರೆ ಶಾಸ್ತ್ರಿಗಳ ಈ ವೃತ್ತಗಳನ್ನು ಅತಿಯಾದ ಸಂಸ್ಕೃತ ಬಳಕೆಯಿಂದ ಭಾರವಾಗಿವೆ.

ಉದಾ: ಮಹಾಸ್ರಗ್ಧರೆ:

ಸುರಿಗುಂ ಗಂಡೂಷ ತೇಕಾಸವಕಿದೆ. ವಕುಳಂ ಸಾಸವಂ
ಗಟ್ಟುವೊಳ್ ಪೂ
ಸರಿಯಿಂ ಕೆಂಪಾಗಿ ಕಾಂತಾಮುಖ ಶಶಿಕೆದುರ್ಗಂ ಪೂಗಳಂ ಚಂಪಕಂ
ಮೇಣ್ ।
ಅರುಣಾ ಶೋಕಂಗಳೋಳ್ತಳ್ತೊದವಸಿಯರ
ಸನ್ನೂವುರಾರಾವಮಂ ಷ
ಚ್ಚರಣಂಗಳ್ ಕೇಳ್ದುತಾಮಂತದನನುಕರಿಪಲತಿಂ ಪಿನಿಂ
ಪಾಡುತಿರ್ಕುಂ ॥೧೭ ॥

ಚಂಪಕ :

ಕರಪರಿರೇರ್ಣಮಾವ ಪಟವಾಸದಿನಾಗಿಸದಂಧಕಾರದೊಳ್
ಮಿರುಗುವ ರತ್ನಭೂಷಣ ಗಣದ್ಯುತಿಯಿಂದಿನಿಸಕ್ಷಿಗಳ್ಗಿಗೋ।
ಚಲಿಪಭುಜಂಗ ಸಂಘಮಿದು ಪಾಣಿತಲಾತ್ತ ಫಣಾನುಕಾರಿ ಬಂ
ಧುರತರ ಶೃಂಗದಿಂ ಸಲೆ ರಸಾತಲಮಂ
ಸ್ಮರಿಯಿಕ್ಕುಮೀಕ್ಷಿಸಲ್ ।।೧೧।।

ವೃತಗಳಿಗೆ ಪರ್ಯಾಯವಾಗಿ ಕೆಲವು ಗೀತೆಗಳನ್ನು ರಾಗ ಸಹಿತವಾಗಿ ಅಡಿ ಪುಟದಲ್ಲಿ ಕೊಟ್ಟಿದ್ದಾರೆ. ರಂಗಭೂಮಿಯ ದೃಷ್ಟಿಯಿಂದ ಅವುಗಳನ್ನು ಕೊಟ್ಟಂತೆ ಕಾಣುವುದು. ಸರಳ, ಸರಸ ಶೈಲಿ ಪ್ರೇಕ್ಷಕರನ್ನು ಸೆರೆ ಹಿಡಿಯಬಹುದಾದ ಸಾಧ್ಯತೆ ಇದೆ. ರತ್ನಾವಳಿ ನಾಟಕವನ್ನು ಬರೆಯುವಾಗ ಅದರ ಮೊದಲ ಅನುವಾದವಾದ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ'ವನ್ನು ಅವರು ಅನುಸರಿಸಲು ಹೋಗಿಲ್ಲವೆಂದು ತೋರುತ್ತದೆ. ಶಾಸ್ತ್ರಿಗಳು ಅನುವಾದದಲ್ಲಿ ವಿಧೇಯತಾ ತತ್ವಕ್ಕೆ ಅಂಟಿಕೊಂಡರು ಎಂದು ಹೇಳಬಹುದಾಗಿದೆ.

ಭವಭೂತಿಯ ಉತ್ತರ ರಾಮಚರಿತೆ ಶ್ರೀರಾಮ ರಾವಣ ಸಂಹಾರದ ನಂತರ ಅಯೋಧ್ಯೆಯನ್ನು ಆಳುತ್ತಿದ್ದಾಗಿನಿಂದ ಪ್ರಾರಂಭವಾಗುತ್ತದೆ. ಅದರಲ್ಲಿ ತದನಂತರದ ಸೀತಾ ಪರಿತ್ಯಾಗದ ಘಟನೆಗಳು ನಡೆದಿವೆ. ಬಸವಪ್ಪಶಾಸ್ತ್ರಿಗಳು ಈ ನಾಟಕವನ್ನು ಅತ್ಯಂತ ಸುಲಲಿತವಾದ ಕನ್ನಡದಲ್ಲಿ ಬರೆದಿದ್ದಾರೆ. ಇಲ್ಲಿ ವೃತ್ತಗಳ ಬಳಕೆ ಮಾಡದೆ, ರಾಗಬದ್ಧವಾದ ಹಾಡುಗಳ ಮುಖಾಂತರ ಪದ್ಯಭಾಗವನ್ನು ಬೆಳಗಿದ್ದಾರೆ. ಇಲ್ಲಿ ರಾಮಸೀತೆಯರ ಮಿಲನ ನಡೆದು ನಾಟಕವು ಸುಖಾಂತ್ಯಕಾಣುತ್ತದೆ. ಭಾರತೀಯ ನಾಟಕಗಳ ಪರಂಪರೆಗೆ ತಕ್ಕಂತೆ ರಂಗದ ಮೇಲೆ ಮರಣ ಅಥವಾ ಮರಣ ಸದೃಷ್ಯ ಮರೆಯಾಗುವಿಕೆ ಅಸ್ವಿಕಾರಾರ್ಹವೆಂದು ಪರಿಗಣಿಸಲ್ಪಟ್ಟಿದ್ದರಿಂದ ಸೀತೆ ಭೂಗರ್ಭದಲ್ಲಿ ಅಡಗಿ ಹೋದರೂ ಮತ್ತೆ ಅವಳು ಗಂಗಾ ಮತ್ತು ಪೃಥ್ವೀಯ ಮಧ್ಯಸ್ಥಿಕೆಯಿಂದಾಗಿ ರಾಮನನ್ನು ಕೂದುತ್ತಾಳೆ. ಆದ್ದರಿಂದ ನಾಟಕದ ಅಂತ್ಯ ಮಂಗಳಕರವಾಗಿದೆ. ಲಕ್ಷ್ಮಣ ರಾಮ ದಿಗ್ವಿಜಯದ ಚಿತ್ರಿಕೆಗಳನ್ನು ತಯಾರಿಸಿ, ಪ್ರದರ್ಶನ ಮಾಡುವ ದೃಷ್ಟಿ, ಪ್ರೇಕ್ಷಕರಿಗೆ ರಾಮಾಯಣದ ಪೂರ್ವ ಕಥೆಯನ್ನು ಸಂಕ್ಷೇಪವಾಗಿ ಹೇಳುವ ತಂತ್ರವಾಗಿವೆ. ಈ ನಾಟಕದಲ್ಲಿ ವೃತ್ತಗಳ ಬಳಕೆಯಾಗದೇ ರಾಗಬದ್ಧವಾದ ಗೀತೆಗಳನ್ನು ಸೇರಿಸಿದ್ದಾರೆ. ಗೀತೆಗಳು ಸರಳ ಸುಮಧುರ ಶೈಲಿಯಿಂದ ಬರೆಯಲ್ಪಟ್ಟಿವೆ. ಆದ್ದರಿಂದ ಸಾಮಾನ್ಯರಿಗೆ ಅವು ಅರ್ಥವಾಗಬಲ್ಲವು.

ಉದಾ: (ರಾಗ: ಕಿಮಾಚು)

ಪ್ರಾಣಸಖಿ ಎಲ್ಲಿಗೆ ಯನ್ನಾಣೆ ಶಶಿಮುಖಿ
ಕಾಣದೆ ತಲ್ಲಣಿಪೆ ಕಡು । ಜಾಣ ಜಾನಕಿ ।ಪ।
ತೋರು ಪ್ರಿಯೆ ನಿನ್ನಯ ಮುಖವಾರಿಜಾತವ ।
ನೀರೆ ನೀನಿನ್ನು ಸೈರಿಸಲಾರೆ ತಾಪವ ।೧॥

ಲೋಕ ತೃಪ್ತಿಗೆ ಸಬಿದೆನೆಲೆ । ಕೋರೆಲಾರವೆ,
ಸಾಕುಪೇಳಲೇಂ ಕರವಿಡಿದಾಕೆ ಭಾರವೆ ।೨॥
ಲಲನೆ ನೀನೆನ್ನ ಮನವ ತಿಳಿದು ಮುನಿವುದೆ ।
ಜಳಿಸಬಹುದೆ । ಕಾಂತನ ಬಂದುಳುಹಬಾರದೆ ।೩॥
ಇನ್ನು ನೀನೆನ್ನಯ ತಪ್ಪನು ನೋಡದೆ ।
ಮನ್ನಿಸು ಬಾಬಾ ಗುಣಸಂಪನ್ನದೆ ಕಾಣದೆ ॥೪॥

ಒಟ್ಟಿನಲ್ಲಿ ಹೇಳುವುದಾದರೆ, ಬಸವಪ್ಪಶಾಸ್ತ್ರಿಗಳು ತಮ್ಮ ಅನುವಾದ ಕೃತಿಯಲ್ಲಿ ಮೂಲ ಪಠ್ಯವನ್ನು ನಿಕಟವಾಗಿ ಅನುವಾದಿಸಿದ್ದಾರೆ. ಗದ್ಯ ಶೈಲಿಯ ಸಂಭಾಷಣೆಯಲ್ಲಿ ಯಾವುದೇ ವೈವಿಧ್ಯ ಅವರು ತರಲು ಪ್ರಯತ್ನಿಸಲಿಲ್ಲ. ಆದರೆ ಪದ್ಯಾತ್ಮಕ ವಿವರಣೆಯಲ್ಲಿ ಕೆಲವು ಬದಲಾವಣೆಗಳನ್ನು

ಮಾಡಲು ಪ್ರಯತ್ನಿಸಿದ್ದಾರೆ. ಕೆಲವು ಕೃತಿಗಳಲ್ಲಿ ವೃತಗಳಲ್ಲಿ ಬದಲಾವಣೆ ಮಾಡಿದ್ದಾರೆ. ಕೆಲವು ಸಲ ವೃತಗಳ ಜೊತೆಗೆ ಅಡಿಯಲ್ಲಿ ರಾಗಬದ್ಧವಾದ ಗೀತೆಗಳನ್ನು ಕೊಟ್ಟಿದ್ದಾರೆ. ವೃತಗಳ ಬದಲಿಗೆ ಕೇವಲ ರಾಗಬದ್ಧ ಗೀತೆಗಳ ಬಳಕೆ ಮಾಡಿ - ಉತ್ತರ ರಾಮ ಚರಿತೆಯಂಥ ಕೃತಿಗಳನ್ನು ಬರೆದಿದ್ದಾರೆ.

## ಪಾನ್ಯಂಸುಂದರ ಶಾಸ್ತ್ರಿಗಳು :

ಪಾನ್ಯಂ ಸುಂದರಶಾಸ್ತ್ರಿಗಳು ಕರ್ಣಭಾರ, ದೂತವಾಕ್ಯ, ಅಭಿಷೇಕನಾಟಕಂ, ಪಂಚರಾತ್ರಂ ಎಂಬ ಕೃತಿಗಳನ್ನು ಕನ್ನಡಕ್ಕೆ ಅಳವಡಿಸಿದ್ದಾರೆ. ವಿಶೇಷವೆಂದರೆ ಇವೆಲ್ಲ ಭಾಸನ ನಾಟಕಗಳಾಗಿರುವುದು. ಅನುವಾದದಲ್ಲಿ ಭಾಸಕವಿಯ ನಾಟಕಗಳನ್ನೇ ಆಯ್ದುಕೊಳ್ಳುವ ಮೂಲಕ ಅವರು ಭಾಸಕವಿಗೆ ಮಾರು ಹೊದದ್ದನ್ನು ನೋಡಬಹುದಾಗಿದೆ.

ಕರ್ಣಭಾರ, ಕರ್ಣನ ದುರಂತ ಕಥೆ ಇದು ಆತ್ಮಕಥನದ ರೀತಿಯಲ್ಲಿ ಮೂಡಿಬಂದಿದೆ. ಅಂಗರಾಜನಿಗೆ ಯುದ್ಧಭೂಮಿಗೆ ಹೋಗುವುದು ತನ್ನ ಅಂತಿಮ ಹೋರಾಟ ನಡೆಸಲಿಕ್ಕೆ ಎಂದು ಮನದಟ್ಟಾಗಿದೆ. ಪರಶುರಾಮನ ಶಾಪ ತಾಯಿಯಾದ ಕುಂತಿಗೆ ಕೊಟ್ಟ ವಚನ ಮತ್ತು ಇವುಗಳಿಂದ ಕರ್ಣ ಖತಿಗೊಂಡಿದ್ದಾನೆ. ''ಕರ್ಣನ ದುಃಖವೇ ಕರ್ಣನಿಗೆ ಭಾರವಾಗಿ ಪರಿಣಮಿಸಿತು. ಇದು ಮೂಲತಃ ಒಂದು ಏಕಾಂಕ ನಾಟಕ. ಪಠ್ಯಪುಸ್ತಕವಾಗಿ ಪ್ರಕಟಿಸಲು ಅನುವಾದಿಸಲಾಗಿದೆ ಎನ್ನಬಹುದು. ಸಂಸ್ಕೃತಿ ಶ್ಲೋಕಗಳನ್ನು ಗದ್ಯಾನುವಾದಗೊಳಿಸಲಾಗಿದೆ. ಇಂದ್ರ ಬ್ರಾಹ್ಮಣನವೇಷದಲ್ಲಿ ಕರ್ಣನ ಕವಚ ಕುಂಡಲಗಳನ್ನು ಬೇಡಲು ಬಂದಾಗ ಕರ್ಣ ನಮಸ್ಕರಿಸುತ್ತಾನೆ. ಭವಿಷ್ಯ ಸೂಚಕವಾಗಿ ಬ್ರಾಹ್ಮಣನು 'ದೀರ್ಘಾಯುಷಂತನಾಗು' ಎಂದು ಹರಸದೇ 'ಸೂರ್ಯ, ಚಂದ್ರ ಹಿಮಾಲಯದಂತೆ ನಿನ್ನ ಕೀರ್ತಿಯು ಈ ಲೋಕದಲ್ಲಿ ಶಾಸ್ವತವಾಗಿರಲಿ!' ಎಂದು ಹರಿಸಿ ನಾಟಕಕರ ಕರ್ಣನ ಅವಸಾನವನ್ನು ಪೂರ್ವದಲ್ಲೇ ಸೂಚಿಸುತ್ತಾನೆ. ಕರ್ಣನ ಮನಸ್ಸು ಈಗಾಗಲೇ ಮುಂದಿನ ಅವಸಾನವನ್ನು ಸ್ವೀಕರಿಸಿದ್ದಾನೆ.

ಕರ್ಣ :- ಹೇಗಾದರೂ ಮೂಡಿ ಧರ್ಮವನ್ನು ಗಳಿಸುವುದೇ ಮನುಷ್ಯ ಜನ್ಮವನ್ನು ಎತ್ತಿರುವುದಕ್ಕೆ ಫಲವಲ್ಲವೇ? ನೂರಾರು ಬಗೆಯಿಂದ ಸರ್ವಕಾಲದಲ್ಲಿಯೂ ಧರ್ಮವನ್ನೇ ಗಳಿಸಬೇಕೆಂದಲ್ಲವೇ ಸಕಲ ಶಾಸ್ತ್ರಗಳು ಉದ್ಘೋಷಣ ಮಾಡುವವು! ರಾಜ್ಯಸಂಪದವು ಹಾವಿನ ನಾಲಗೆಯಂತೆ ಚಂಚಲವಾದದು. ಪ್ರಜಾಪರಿಪಾಲನವನ್ನುಳಿದು ಈ ದೇಹಕ್ಕೆ ಮತ್ತಾವ ಧರ್ಮವಿರುವುದು? ಅಂತ್ಯಂತ ಮಲಿನವೂ ಕೃತಜ್ಞವೂ ಎನಿಸಿದ ಈದೇಹಕ್ಕೆ ಗುಣವೆಲ್ಲಿಂದ ಬರಬಲ್ಲುದು? ಸ್ವಾಭಾವಿಕವಾಗಿ ದೇಹವು ಹೇಯವಾದುದು.

ಈ ಮೇಲಿನ ಮಾತುಗಳು ಕರ್ಣಾನ ಮನಸ್ಸು ಆಧ್ಯಾತ್ಮ ಕಡೆಗೆ ಹೋಗುವುದರ ಸ್ಪಷ್ಟ ಸೂಚನೆಯಾಗಿದೆ. ಇಂದ್ರ ಕರ್ಣನಿಂದ ಕವಚಕುಂಡಲವನ್ನು ತೆಗೆದುಕೊಂಡು ಹೋದ ನಂತರ, ಒಬ್ಬ ದೇವದೂತನನ್ನು ಬ್ರಾಹ್ಮಣವೇಷದಲ್ಲಿ ಕಳುಹಿಸಿ ಒಂದು ಶಕ್ತ್ಯಾಯುಧವನ್ನು ಕೊಡಮಾಡುತ್ತಾನೆ.

ಮೊದಲು ನಿರಾಕರಿಸಿದ ಕರ್ಣ ನಂತರ ಬ್ರಾಹ್ಮಣರಿಂದ ಬಂದದ್ದನ್ನು ತಿರಸ್ಕರಿಸಬಾರದು ಎಂದುಕೊಂಡು ಸ್ವೀಕರಿಸುತ್ತಾನೆ. ಆ ಕಾಲದ ಬ್ರಾಹ್ಮಣರ ಪ್ರಭಾವ ಮತ್ತು ಇದರಿಂದ ಅವರ ಬಗೆಗೆ ಇತರ ಜಾತಿಗಳವರ ಮನೋಭಾವ ಕಂಡುಬರುತ್ತದೆ.

ಕರ್ಣಃ ಭಗವನ್! ಕಿಂ ನವಕ್ತವ್ಯಂ ದೀರ್ಘಯುರ್ಭವೇತಿ?
ಅಥವಾ ಏಕದೇವ ಶೋಭನಮ್ । ಕುತಃ।
ಧರ್ಮೋ ೀಹಿಯತ್ನೈಃ ಪುರುಷೇಣ ಸಾಧ್ಯೋ
ಭೂಜಂಗಬೆಹ್ವಾಚಪಲಾ ನೃಪಶ್ರಿಯಃ।
ತಸ್ಮಾತ್ಪ್ರಚಾಪಾಲನಮಾತ್ರಬುದ್ಧ್ಯಾ
ಹತೇಷು ದೇಹೇಷು ಗುಣಾ ಧರಂತೇ ॥

ದೂತವಾಕ್ಯವೂ ಕೂಡ ಕರ್ಣಭಾರದಂತೆ ಏಕಾಂತ ಅನುವಾದದ ಶೈಲಿಯಲ್ಲಿ ಯಾವುದೇ ವ್ಯಾತ್ಯಾಸವಿಲ್ಲ. ಸರಳವಾದ ಗದ್ಯಾನುವಾದವೇ ಇಲ್ಲಿ ಕಾಣುವುದು. ಸಂಭಾಷಣೆಗಳು ಮಾತ್ರ ಸ್ವಲ್ಪ ಉದ್ದವಾಯಿತು ಎಂದು ಅನ್ನಿಸುವ ಹಾಗಿದೆ. ಕೃಷ್ಣ ಪಾಂಡವರ ಶಾಂತಿದೂತನಾಗಿ ಅರ್ಧರಾಜ್ಯವನ್ನು ಬೇಡಲು ಬಂದಿರುವ ಸನ್ನಿವೇಶವೇ 'ದೂತವಾಕ್ಯ' ಠಾ ದುರ್ಯೋಧನ ದ್ರೌಪದಿಯ ವಸ್ತ್ರಾಪಹರಣವ ಚಿತ್ರಿಕೆಯನ್ನು ಮಾಪಿಸಿಟ್ಟಿದ್ದಾನೆ. ಕೃಷ್ಣಬಂದಾಗ ಆ ಚಿತ್ರಿಕೆಯನ್ನು ನೋಡುತ್ತಕೂಡುತ್ತಾನೆ. ಈ ನೆವದಲ್ಲಿಯೇ ಕೃಷ್ಣನಿಗೆ ಅವಮಾನ ಮಾಡುವ ಸಂಚು ಠಾ ಈ ಸನ್ನಿವೇಶವೇ ಮುಂದಿನ ವಾಗ್ವಾದಕ್ಕೆ ಕಾರಣವಾಗುತ್ತದೆ. ನಾಟಕದಲ್ಲಿ ಹಿಂದಿನ ಘಟನೆಗಳೆಲ್ಲವು ಓದುಗರಿಗೆ ಅರಿಕೆ ಮಾಡಲು ಈ ಸನ್ನಿವೇಶವನ್ನು ಬಳಸಿಕೊಳ್ಳಲಾಗಿದೆ. ಕೃಷ್ಣ ದುರ್ಯೋಧನಗಳಿಬ್ಬರು ಒಬ್ಬರನ್ನೊಬ್ಬರು ವಾಕ್ತಟನ? ಮಾಡುವ ನೆಪದಲ್ಲಿ ಹಿಂದಿನ ಪ್ರಮುಖ ಘಟನೆಗಳನ್ನು ಮೆಲುಕು ಹಾಕಿದಾಗ, ಪ್ರಸಕ್ತ ಸನ್ನಿವೇಶ ಅರ್ಥವಾಗಲು ಸಹಾಯಕಾರಿಯಾಗಿವೆ. ಇದೊಂದು ನಾಟಕತಂತ್ರವಾಗಿ ಉಪಯೋಗಿಸಲಾಗಿದೆ. ಏಕಾಂಕದಲ್ಲಿಯೇ ಎಲ್ಲವನ್ನು ಹೇಳುವ ಪ್ರಯತ್ನ ನಾಟಕದ ಸಂಭಾಷಣಾ ಭಾರವನ್ನು ಹೆಚ್ಚಿಸುವ ದೋಷಕ್ಕೆ ಕಾರಣವಾಗಿದೆ. ಕೃಷ್ಣ ಇಲ್ಲಿ ದುರ್ಯೋಧನನ್ನು ಸುಯೋಧನನೆಂದೇ ಸಂಬೋಧಿಸಿದ್ದಾನೆ. ಆದ್ದರಿಂದ ಒಬ್ಬ ದೂತನ ಇತಿಮಿತಿಯಲ್ಲಿಯೇ ಅವನು ಕಾರ್ಯಮಾಡಿದ್ದಾನೆ. ವಿಶ್ವರೂಪದ ಸನ್ನಿವೇಶವನ್ನು ಬಿಟ್ಟರೆ ಕೃಷ್ಣ ಎಲ್ಲಿಯೂ ತನ್ನ ಪಾತ್ರದ ಚೌಕಟ್ಟನ್ನು ಮೀರಿಲ್ಲ. ಕರ್ಣಭಾರ ಕರ್ಣ ಆ ರೂಪ ಪಡೆದಿದ್ದರೆ, ದೂತವಾಕ್ಯ ಪರ ವಿರೋಧದ ಖಂಡನೆ ಮಂಡನೆಗಳಿಂದ ತುಂಬಿದೆ. ಇಬ್ಬರಿಗೂ ಅಂತಿಮ ಪರಿಣಾಮ ಗೊತ್ತಿದ್ದೂ ಮಾತನಾಡುವುದು ವಿಶೇಷವಾಗಿದೆ. ಮೇಲಿನ ಎರಡು ನಾಟಕಗಳು ಒಂದು ದೊಡ್ಡ ನಾಟಕದ ಭಾಗವಾಗಿ ಇರುವವೋ ಏನೋ ಎಂದು ಅನುವಾದಕರೂ ಶಂಕಿಸಿದ್ದಾರೆ. ಮಧ್ಯಮವ್ಯಾಯೋಗ, ದೂತವಾಕ್ಯ, ಕರ್ಣಭಾರ ಮತ್ತು ಊರುಭಂಗ ಎಂಬ ಐದು ನಾಟಕಗಳು ಏಕಾಂಕ ನಾಟಕಗಳಾಗಿವೆ. ಮುನ್ನುಡಿಯಲ್ಲಿ '' ಈ ಐದು ಒಂದೇ ನಾಟಕವಾಗಿ ಇದ್ದಿರಬಹುದೆಂತಲೂ, ಈಚೆಗೆ ಯಾರೋ ಒಂದೊಂದಕ್ಕೂ ಸ್ಥಾಪನೆ(ಪ್ರಸ್ತಾವನೆ) ಭರತವಾಕ್ಯಗಳನ್ನು ಸೇರಿಸಿ ಪ್ರತ್ಯೇಕವಾಗಿ ಮಾರ್ಪಡಿಸಬಹುದೆಂತಲೂ ಕೆಲವರು ಅಭಿಪ್ರಾಯಪಡುವರು.

ಅನ್ಯಭಾಷಾ ಸಾಹಿತ್ಯ ಸಂಗ್ರಹದಿಂದ ಆಯ್ದು ಕೃತಿಗಳನ್ನು ಕನ್ನಡಕ್ಕೆ ತರುವ ಯೋಜನೆಯ ಅಂಗವಾಗಿ ಅಭಿಷೇಕ ನಾಟಕಮ್ ಎಂಬ ಕೃತಿಯನ್ನು ಪಾನ್ಯಂ ಸುಂದರಶಾಸ್ತ್ರಿಗಳ ಕಡೆಯಿಂದ ಬರೆಯಿಸಿದರು. ಭಾಸಕವಿಯ ಮೂಲ ಸಂಸ್ಕೃತ ನಾಟಕವಾದ ಇದನ್ನು ಮನೋಹರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಬಂದು ಸುಗ್ರೀವನೊಂದಿಗೆ ಮೈತ್ರಿ ಬೆಳೆಸಿ ಕೊನೆಗೆ ಅಯೋಧ್ಯ ರಾಜಾಧಿಪತ್ಯದಲ್ಲಿ ರಾಮನು ಲಂಕೆಯಲ್ಲಿರುವಾಗಲೇ ಅಭಿಷೇಕನಾಗುತ್ತಾನೆ. ದಶರಥನು ತನ್ನ ಜೀವಿತ ಕಾಲದಲ್ಲಿ ರಾಮನನ್ನು ರಾಜನಾಗಿ ಅಭಿಷಿಕ್ತನಾಗುವುದನ್ನು ನೋಡಲಿಲ್ಲವಾಗಿ ನಾಟಕದ ಆರನೆಯ ಅಂಕದಲ್ಲಿ ಅಗ್ನಿದೇವನನ್ನು ಮುಂದಿಟ್ಟು ದೇವತೆಗಳ ಮೂಲಕ ತನ್ನ ಇಷ್ಟಾರ್ಥಗಳನ್ನು ಸಫಲಗೊಳಿಸುವದರೊಂದಿಗೆ ನಾಟಕ ಮುಗಿಯುತ್ತದೆ. ಶ್ಲೋಕಗಳನ್ನು ಗದ್ಯಾನುವಾದವಾಗಿ ಅನುವಾದಿಸಲಾಗಿದೆ.

ಕೆಲವು ಕಡೆ ಸಂಗ್ರಹಾನುವಾದ ಮಾಡಿಲಾಗಿದೆ. ಅಲ್ಲಲ್ಲಿ ಮೂಲ ಪಠ್ಯಕ್ಕೆ ಬದ್ಧವಾದ ಅನುವಾದವೂ ಇದೆ. ಹನುಮಂತನು, ರಾಮನಿಗೆ ಕೊಟ್ಟ ಉಂಗುರವನ್ನು ಅಶೋಕವನದಲ್ಲಿರುವ ಸೀತೆಗೆ ಕೊಡುವ ಸನ್ನಿವೇಶ ಇಲ್ಲ. ಅದರಂತೆಯೇ ಸಮುದ್ರದ ಮೇಲೆ ಶ್ರೀರಾಮನು ಸೇತುವೆ ಕಟ್ಟುವ ಪ್ರಸಂಗವನ್ನು ಬದಲಾಯಿಸಲಾಗಿದೆ. ವರುಣನೇ ಸಮುದ್ರವನ್ನು ಇಬ್ಭಾಗಿಸಿ ಹಾದಿಯನ್ನು ಮಾಡಿಕೊಟ್ಟ ಸನ್ನಿವೇಶ ಇಲ್ಲಿ ಚಿತ್ರಿತವಾಗಿದೆ. ಬಹುಶಃ ರಂಗ ಪ್ರಯೋಗದ ಅನುಕೂಲತೆಯ ದೃಷ್ಟಿಯಿಂದ ಈ ಬದಲಾವಣೆ ಮಾಡಿರಬೇಕು. ಹನುಮಂತನು ಮೂಲ ರಾಮಾಯಣದಲ್ಲಿ ಹೇಳಿದಂತೆ ಬ್ರಹ್ಮಾಸ್ತ್ರದಿಂದ ಬಂಧಿತನಾಗುವುದಿಲ್ಲ. ಬದಲಾಗಿ ವಿಭೀಷಣ ಅವನನ್ನು ಕರೆದುಕೊಂಡು ರಾವಣನಲ್ಲಿಗೆ ಹೋಗುತ್ತಾನೆ. ರಾವಣನ ಮಗನಾದ ಮೇಘನಾಥನು ಮೂಲ ರಾಮಾಯಣದಲ್ಲಿದ್ದಂತೆ ಲಕ್ಷ್ಮಣನಿಂದ ಹತನಾಗದೆ, ಶ್ರೀರಾಮನಿಂದಲೇ ಹತನಾಗುತ್ತಾನೆ. ಉದಾಹರಣೆಗೆ '' ರಾಮ (ನಡೆದುಕೊಂಡು ನೋಡಿ) ಓಹೋ! ಸೂರ್ಯದೇವನು ಮುಳುಗುತ್ತಿರುವನು ಈಗ, ಹಸ್ತ ಪರ್ವತದ ತುದಿಯನ್ನು ಸೇರಿ ಕಿರಣಗಳನ್ನೆಲ್ಲಾ ಕುಣಿಸಿ, ಸಂಧ್ಯೆಯಿಂದ ಮಾರ್ಪೊಳೆದ ದೇಹವುಳ್ಳ ಸೂರ್ಯನು ರಕ್ತ ವಸ್ತ್ರವನ್ನು ಹೊದಿಸಿದ ಆನೆಯ ರಂಗಸ್ಥಳದಲ್ಲಿ ಅಪರಂಜಿಯ ಪುಲಕದಂತೆ ಕಂಗೊಳಿಸುವನು.'' ಇದರ ಮೂಲ ಹೀಗಿದೆ .

ಅಸ್ತಾದ್ರಿ ಮಸ್ತಕಗತಃ ಪ್ರತಿಸಂಹೃತಾಂಶುಃ
ಶಂಧ್ಯಾನುರಂಜಿತ ವಪುಃ ಪ್ರತಿಭಾತಿ ಸೂರ್ಯಃ॥
ರಕ್ತೋಚ್ಚ್ವಲಾಂಶುಕ ವೃತೇ ದ್ವಿರದಸ್ಯ ಕುಂಭೇ ।
ಚಾಂಬೂನದೇನ ರಚಿತಃ ಪುಲಕೋ ಯಥೈವ॥

ಈ ರೂಪಕ ಅಲಂಕಾರ ಮೂಲಕ್ಕೆ ನಿಕಟವಾಗಿ ಗದ್ಯಾನುವಾದದಲ್ಲಿ ಮೂಡಿ ಬಂದಿದೆ. 'ಪಂಚರಾತ್ರ' ಭಾಸಕವಿಯ ಮತ್ತೊಂದು ನಾಟಕದ ಅನುವಾದ ದ್ರೋಣರಿಗೆ ದುರ್ಯೋಧನನು ಯಜ್ಞದ ಕೊನೆಯಲ್ಲಿ ಬ್ರಹ್ಮದಾನ ಸ್ವೀಕರಿಸಲು ವಿನಂತಿಸಿದಾಗ ಪಾಂಡವರಿಗೆ ಬರಬೇಕಾದ ಅರ್ಧ ರಾಜ್ಯ

ಬೇಡುತ್ತಾರೆ. ಐದು ರಾತ್ರಿಗಳಲ್ಲಿ ಪಾಂಡವರನ್ನು ಕರೆತಂದರೆ ಅದನ್ನು ಪೂರೈಸುವುದಾಗಿ ಹೇಳುತ್ತಾನೆ. ನಂತರ ನಡೆದ ಉತ್ತರ ಗೋಗ್ರಹಣದಯುದ್ಧದಲ್ಲಿ ಬೃಹನ್ನಳೆಯಾದ ಅರ್ಜುನನಿಂದ ಕೌರವರು ನೋಯುತ್ತಾರೆ. ಅಭಿಮನ್ಯು ಕೌರವರ ಪರವಾಗಿ ಯುದ್ಧ ಮಾಡುವುದು ವಿಶೇಷ. ಅವನನ್ನು ಭೀಮ ಕಂಕುಳದಲ್ಲಿ ಇಟ್ಟುಕೊಂಡು ವಿರಾಟನ ಆಸ್ಥಾನಕ್ಕೆ ಕರೆತರುತ್ತಾನೆ. ಭೀಮಾರ್ಜುನರನ್ನು, ವಿರಟರನ್ನು ಅಭಿಮುನ್ಯು ಅವರ ಗುರುತು ಹಿಡಿಯಲಾರದೆ ಧಿಕ್ಕರಿಸುವರು. ಬಳಿಕ ವಿರಾಟನಿಗೆ ಎಲ್ಲರ ನಿಜರೂಪದ ಪರಿಚಯವಾಗಿ ಉತ್ತರನ ಮುಖಾಂತರ ಸಂದೇಶ ಕಳುಹಿಸಲು ದುರ್ಯೋಧನನು ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡಲು ಸಮ್ಮತಿಸುವನು.

ಅನುವಾದಕರು ಕಡೆ ಪಂಚತಂತ್ರದಲ್ಲಿಯೂ ಕೂಡ ತಮ್ಮ ಎಂದಿನ ಸರಳ ಗದ್ಯಾನುವಾದವನ್ನು ಮುಂದುವರಿಸಿದ್ದಾರೆ. ಪ್ರೇಕ್ಷಕರಿಗೆ ತಿಳಿಯಬೇಕೆಂದು ಅವರು ಕೆಲವು ಆಡುಬಾಷೆಯಲ್ಲಿ ಶಬ್ದಗಳನ್ನು ಬಳಸಿದ್ದರೂ ಪ್ರಸಂಗದ ಖಚಿತತೆಗೆ ಕೆಲವು ಕಡೆ ಕನ್ನಡದ ಗಾದೆಮಾತುಗಳನ್ನು ಯಥಾಯೋಗ್ಯವಾಗಿ ಬಳಸಿದ್ದಾರೆ.

ರಾಜ:- ಭೋ: ! ಕಿಂ ನುಖಲು ದುರ್ಯೋಧನಸ್ಯ ಮಾಮಂತರ್ರೇ ವೈರಮ್?
ಆ ಯಜ್ಞಮನುಭವಿತುಮನಾಗತ ಇತಿ। ಕಥಂ ಅನುಭವಾಮಿ?
ಕೀಚಕಾನಾಂವಿನಾಶೀನ ವಯಮುನ್ನೀತ ಸಂತಾಪಾಃ ಸಾವೃತ್ತಾಃ।
ಅಥವಾ ಪರೋಕ್ಷಮವಿ ಪಾಂಡವಾನಾಂ ಸ್ನಿಗ್ಧ ಇತಿ। ಅಸರ್ವಥಾ ಯೋದ್ಧವ್ಯಮ್।
ಹಾಸ್ತಿನಾಪುರನಿವಾಸಾತ್ ಶೀಲಜ್ಜೇ ಭಗವಾನ್ ದುರ್ಯೋಧನಸ್ಯ।

ಅಥವಾ

ಕಾಯಂ ದುರ್ಯೋಧನಸ್ವೈಷನ ಮೋಷಮಭಿಧಅಸ್ಯತಿ।
ಅರ್ಥಿತ್ವಾದಪರಿಶ್ರಾಂತಃ ಪೃಭ್ಧತ್ರೇವಣಿ ಕಾಹ್ಯವಾನ್ ॥ ೯॥

ಅನುವಾದ -(ಯೋಚಿಸಿ) ದುರ್ಯೋಧನನಿಗೆ ಇಷ್ಟೊಂದುಕೋಪ ಬರುವುದಕ್ಕೆ ಕಾರಣವೇನು? ನನಗೂ ಅವನಿಗೂ ಹಿಂದಣ ವೈರವು ಇಲ್ಲವಲ್ಲ! ಆಹಾ! ತಿಳಿಯಿತು ಅವನ ಯಜ್ಞ ಕಾಲದಲ್ಲಿ ನಾನು ಹೋಗಲಿಲ್ಲವೆಂದೇನಾದರೂ ಮುನಿಸಿರಬಹುದೋ ಏನೋ. ಹೋಗಬೇಕಾಗಿದ್ದಿತು. ಆದರೆ ಹೋಗುವುದು ತಾನೇ ಹೇಗೆ? ಕೀಚಕ ವಧೆಯಿಂದ ಮನಸ್ಸು ಇನ್ನೂ ಕಳವಳಗೊಂಡಿರುವುದು ಅಥವಾ ಪರೋಕ್ಷವಾಗಿ ನಾನು ಪಾಂಡವರ ಕಡೆಯವನೆಂದು ತಿಳಿದೇನಾದರೂ ಕೈ ಮಾಡತೊಡ ಗಿದನೋ? ಹೇಗಾದರೂ ಆಗಲಿ ಯುದ್ಧವನ್ನು ಮಾತ್ರ ಮಾಡಿಯೇ ತೀರಬೇಕು. ಎಷ್ಟು ಮಾತ್ರವೂ ಹಿಂಜರಿಯಬಾರದು ನಮ್ಮ ಆಸ್ಥಾನದಲ್ಲಿರುವ ಪರಿವಜ್ರಾಕೇಶ್ವರನು ಬಹುಕಾರ ಪಾಂಡವ ಆಸ್ಥಾನದಲ್ಲಿದ್ದವನು. ಹಸ್ತಿನಾಪುರ ವಾಸದಿಂದ ದುರ್ಯೋಧನನ ಸಮಾಚಾರವನ್ನೆಲ್ಲಾ ಆತನು ಚನ್ನಾಗಿ ಬಲ್ಲನು. ಒಂದು ವೇಳೆ ''ಈತನನ್ನು ನಾನು ಕರೆಯಿಸಿ ಕೇಳಿದರೂ ದುರ್ಯೋಧನನ ದೋಷಗಳನ್ನೆಲ್ಲಾ ಹೇಳುವನೋ ಇಲ್ಲವೊ?''. 'ಕಾರ್ಯವಾಸಿ ಕತ್ತೆಕಾಲು ಕಟ್ಟು' ಎಂಬಂತೆ ಏನಾದರೂ ಹೇಳಲಿ. ಈಗ

ಕಾರ್ಯವು ಸನ್ನದ್ಧವಾಗಿರುವುದರಿಂದ ಕೇಳಿಯೇ ಬಿಡುವೆನು. ಈಗ ನಾನು ಯೋಜಕನಾದರೂ ಬಾಧಕವಿಲ್ಲ. ಮೇಲಿನ ಅನುವಾದ ಪ್ರೇಕ್ಷಕರಿಗೆ ತಿಳಿಯುವಂತೆ ತಿಳಿಗನ್ನಡದಲ್ಲಿ ಅನುವಾದಿಸಲಾಗಿದೆ. ಕಾರ್ಯವಾಸಿ ಕತ್ತೆಕಾಲು ಕಟ್ಟು ಎಂಬ ಗಾದೆ ಮಾತು ಸಮಯೋಚಿತವಾಗಿ ಮೂಡಿಬಂದಿದೆ. ಈ ಎಲ್ಲಾ ನಾಟಕಗಳನ್ನು ಅವಲೋಕಿಸಿದಾಗ, ರಂಗಭೂಮಿ ಮತ್ತು ಸಾಮಾನ್ಯ ಓದುಗ ಈ ಎರಡೂ ಮಾರ್ಗಗಳನ್ನು ಇಟ್ಟುಕೊಂಡು ಬರೆಯಲಾದ ಅನುವಾದಗಳು. ವೃತ್ತ, ಗೇಯ, ಗೀತೆಗಳ ಅಭಾವ ಇದ್ದು ರಂಗಭೂಮಿಗೆ ಆವಶ್ಯಕತೆಗನುಗುಣವಾಗಿವೆ.

ಪ್ರಸ್ತುತ ಈ ಅಧ್ಯಾಯದಲ್ಲಿ ೧೮-೧೯ನೆಯ ಶತಮಾನದಲ್ಲಿ ಮೂಡಿಬಂದ ಕೃತಿಗಳ ಒಂದು ಸಮೀಕ್ಷೆಯನ್ನು ಕೊಡಲಾಗಿದೆ. ಈ ಕಾಲಘಟ್ಟದಲ್ಲಿ ಸಂಸ್ಕೃತದಿಂದ ಅನೇಕ ಕೃತಿಗಳು ಅನುವಾದಗೊಂಡವು. ಸಂಸ್ಕೃತ ನಾಟಕ ಸಾಹಿತ್ಯದ ದಶರೂಪಕಗಳಾದ ಭಾಣ, ಪ್ರಹಸನ, ವ್ಯಾಯೋಗ ಮೊದಲಾದ ಪ್ರಕಾರಗಳು ಕನ್ನಡಕ್ಕೆ ಬಂದವು. ಅವು ಅನುವದಿತವಾಗಿ ಬಂದರೂ ಕನ್ನಡ ಸಾಹಿತ್ಯ ಚರ್ಚೆಯಿಂದ ಅಷ್ಟೇ ದೂರ ಉಳಿದವು. ಈ ಅಧ್ಯಯನ ಮೂಲಕ ಹಿಡಿದಿಡುವ ಪ್ರಯತ್ನ ಮಾಡಲಾಗಿದೆ. ಚರ್ಚಿತವಾಗುತ್ತಿರುವ ಅಂಶಗಳಾದರೂ ಜನಪ್ರಿಯ ಸಂಸ್ಕೃತ ನಾಟಕಕಾರರ ಅನುವಾದಿತ ಕೃತಿಗಳ ಕುರಿತಾಗಿರುವುದು ಕಂಡುಬರುತ್ತದೆ. ಪ್ರಾಕೃತ ಮೂಲದ ಸಟ್ಟಕವಾದ ಕರ್ಪೂರ ಮಂಜರೀಯಾಗಲಿ, ರೂಪಕ ಪ್ರಕಾರದ ಭಾಣ, ವ್ಯಾಯೋಗಾದಿಗಳ ಕುರಿತಾದ ಚರ್ಚೆ ಕಂಡು ಬರುವುದಿಲ್ಲ. ನಾಟಕ ಎನ್ನುವಲ್ಲಿ ಅಂಕಗಳನ್ನಾಧರಿಸಿದ ತ್ರೋಟಕ, ಪ್ರಕರಣ ಇತ್ಯಾದಿಗಳ ಕುರಿತಾದ ನಿಲುವು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಪ್ರಸಿದ್ಧ ನಾಟಕಕಾರರಾದ ಭಾಸ, ಭವಭೂತಿ, ಕಾಳಿದಾಸ, ಶ್ರೀಹರ್ಷರ ಕೃತಿಗಳು ಪದೇ ಪದೇ ಅನುವಾದಕ್ಕೊಳಗಾದರು. ಅಪರಿಚಿತ ನಾಟಕಗಳ ಕೃತಿಕಾರರನ್ನು ಕನ್ನಡಕ್ಕೆ ಪರಿಚಯಿಸುವ ಉದ್ದೇಶವನ್ನು ಹೊಂದಿದ ಆ ಕಾಲದ ವಿದ್ವಾಂಸರ ಆಶಯಗಳೇನು ? ಆ ಆಶಯಕ್ಕೆ ಅವರು ಬದ್ಧರಾಗಿರುವರೇ ಇತ್ಯಾದಿ ವಿಷಯಗಳನ್ನು ಸಮೀಕ್ಷಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಅಪರಿಚಿತ ಕೃತಿಕಾರರ ಈ ಕೃತಿ ಮತ್ತು ಅನುವಾದಕರ ಪರಿಚಯವನ್ನು ಕೊಡಲಾಗಿದೆ. ಈ ನಾಟಕದ ಕಥಾ ಸಾರಾಂಶವೇನು? ಮತ್ತು ಈ ನಾಟಕವನ್ನು ಅನುವಾದಿಸುವಾಗ ಅನುವಾದಕರುಗಳು ಪೀಠಿಕೆಯಾಗಿ, ಪ್ರಸ್ತಾವನೆಯಾಗಿ, ಮುನ್ನುಡಿಯಾಗಿ ಏನು ಹೇಳಿಕೊಂಡಿದ್ದಾರೆ ಎಂಬ ಅಂಶವನ್ನು ಹೇಳಲಾಗಿದೆ. ಈ ಎಲ್ಲಾ ಅಂಶಗಳನ್ನು ಇಟ್ಟುಕೊಂಡಾಗಲೂ ಅನುವಾದಕ ಹೇಗೆ ಮೂಲವನ್ನು ಆಧರಿಸಿ ಅನುವಾದಿಸಿದ್ದಾನೆ ಎಂಬುದನ್ನು ಮೂಲಗಳು ದೊರೆತ ನಾಟಕಕ್ಕೆ ಅನ್ವಯಿಸಿ ಚರ್ಚಿಸಲಾಗಿದೆ. ಮೂಲಗಳು ಸಿಗದೇ ಇರುವ ತೀರಾ ಅಪರಿಚಿತ, ಆದರೆ ವಸ್ತು ವೈವಿಧ್ಯತೆಯನ್ನು ನಾಟಕಗಳನ್ನು ಪರಿಚಯಾತ್ಮಕ ನೆಲೆಯಲ್ಲಿ ಮಾತ್ರ ಕೊಡಲಾಗಿದೆ. ತೀರ ಅಜ್ಞಾತ ಸ್ಥಿತಿಯಲ್ಲಿರುವ ಈ ನಾಟಕಗಳನ್ನು ಸಮೀಕ್ಷೆಗೆ ಒಳಪಡಿಸುವ ಮೂಲಕ ಅಂತರ್ಯವನ್ನು ಶೋಧಿಸಬಹುದೇ ಎಂಬ ಜಿಜ್ಞಾಸೆ ಇಲ್ಲಿದೆ. ಸಂಕಲ್ಪ ಸೂರ್ಯೋದಯ, ಅನುತಾಪಿಕ ಪ್ರೇಕ್ಷಣಿಕಂ, ಕರ್ಣಾಟಕ ಸ್ನುಷಾ ವಿಜಯ, ಕರ್ಣಾಟಕ, ಪಾರ್ವತಿ ಪರಿಣಯ ನಾಟಕಂ, ಭರ್ತೃ ಹರಿ ನಿರ್ವೇದ ನಾಟಕಂ ಕರ್ಪೂರ ಮಂಜರಿ ಇವೇ ಮೊದಲಾದ ಆಧ್ಯಾತ್ಮಿಕ, ಸಾಮಾಜಿಕ ಸತ್ವಾಂಶಗಳನ್ನುಳ್ಳ ನಾಟಕಗಳನ್ನು ಮೂಲಗಳು ಲಭ್ಯವಾಗದಿರುವು

ದರಿಂದ ಅನುವಾದಿತ ಕೃತಿಗಳನ್ನು ಮಾತ್ರ ಗಮನಿಸಲಾಗಿದೆ. ಇನ್ನು ಭಾಸ ನಾಟಕಗಳಾದ ಕರ್ಣಭಾರ ದೂತವಾಕ್ಯ, ಅಭಿಷೇಕ ನಾಟಕ, ಪಂಚರಾತ್ರಮ್, ಶ್ರೀಹರ್ಷನ ನಾಗಾನಂದ, ಭಟ್ಟ ನಾರಾಯಣನ ವೇಣಿ ಸಂಹಾರ ನಾಟಕಗಳ ಮೂಲವನ್ನು ಇಟ್ಟು ಅನುವಾದ ಕೃತಿಗಳ ಕುರಿತಾಗಿ ಒಂದು ಸಮೀಕ್ಷೆ ಕೈಗೊಳ್ಳಲಾಗಿದೆ. ಇದರಲ್ಲಿ ಈ ಕಾಲಘಟ್ಟ ಅನುವಾದ ಪ್ರಕ್ರಿಯೆಯ ಪ್ರಮುಖ ಲಕ್ಷಣವಾದ ನಿಕಟಾನು ವಾದ ಅಥವಾ ಸಂಸ್ಕೃತಕ್ಕೆ ಬದ್ಧವಾದ ಅನುವಾದ ತೋರಿಬರುತ್ತದೆ. ಆದರೂ ಅಲ್ಲಲ್ಲಿ ಲೇಖಕರು ಮಾಡಿಕೊಂಡ ಸಣ್ಣ ಪುಟ್ಟ ಬದಲಾವಣೆಗಳು ಹಾಗೂ ಸಂಗ್ರಹಾನುವಾದ, ಭಾವಾನುವಾದ, ಸಂಕ್ಷೇಪಗಳಿಸುವಿಕೆ ಗದ್ಯಾನುವಾದ, ಪದ್ಯಾನುವಾದದಲ್ಲಿಯೂ ಅವರು ಬಳಸಿಕೊಂಡ ಮಾರ್ಗ, ಆಶಯ ಗಳನ್ನು ಸ್ಥೂಲವಾಗಿ ಪರಿಶೀಲಿಸಲಾಗಿದೆ. ಇದು ಮೂರನೆಯ ಅಧ್ಯಾಯದ ಪ್ರಥಮ ಘಟ್ಟ ಮತ್ತು ಇದರ ಇನ್ನೊಂದು ಮುಖವೆಂದರೆ; ಒಬ್ಬ ಅನುವಾದಕ, ಒಂದು ಕೃತಿ ಎಂಬ ವರ್ಗೀಕರಣದ ಹಿನ್ನೆಲೆ ಯಲ್ಲಿ ಇದು ಮೂಡಿಬಂದಿದೆ. ಇದೇ ಅಧ್ಯಾಯದ ಎರಡನೆಯ ಘಟ್ಟವಾದ ಒಬ್ಬ ಅನುವಾದಕ ಎರಡು ಕೃತಿಗಳನ್ನು ಅನುವಾದಿಸುವಾಗಿನ ಆತನ ನಿಲುವುಗಳನ್ನು ಕುರಿತದ್ದಾಗಿದೆ. ಉದಾ: ಜಯರಾಯಾಚಾರ್ಯರು ಚಂಡಕೌಶಿಕ ಮತ್ತು ವೇಣಿಸಂವಾರ ನಾಟಕಗಳೆರಡನ್ನು ಅನುವಾದಿಸಿದರು. ಸೀತಾರಾಮಾಶಾಸ್ತ್ರಿಗಳು ಕರ್ಣಾಟಕ ಸ್ನುಷಾ ವಿಜಯಂ ಮತ್ತು ಪಾರ್ವತಿ ಪರಿಣಯ ನಾಟಕಗಳನನು ಅನುವಾದಿಸಿದರು. ಒಬ್ಬ ಅನುವಾದಕನೇ ಒಂದು ನಾಟಕವನ್ನು ಅನುವಾದಿಸುವಲ್ಲಿ ತಳೆದ ನಿಲುವು ಇನ್ನೊಂದು ನಾಟಕಕ್ಕೆ ಭಿನ್ನ ವಾಗಿರುತ್ತದೆ. ಜಯರಾಯಾಚಾರ್ಯರು ಆಸ್ಥಾನ ಪಂಡಿತರಾಗಿದ್ದು, ಚಂಡಕೌಶಿಕ ನಾಟಕವು ಹಳೆಗನ್ನಡ ಲಿಪಿಯಲ್ಲಿದ್ದು, ಅನೇಕ ಕಂದ ,ವೃತ್ತಮಯವಾಗಿ ತುಸು ಭರ್ಜರಿ ಎನಿಸುತ್ತದೆ. ರಂಗ ನಾಟಕದ ಸಾಧ್ಯತೆ ಗಳಿಗಾಗಿ ರಾಗ,ತಾಳ, ನಿಬದ್ಧ ಪದ್ಯಗಳು ಇವೆ. ಜನಸಾಮಾನ್ಯರಿಗಾಗಿ ನಕ್ಷತ್ರಿಕ ನಂತಹ ಪಾತ್ರವನ್ನು ಅವರು ಸೃಷ್ಟಿಸಿದ್ದಾರೆ. ಜನವಾಡಕೆಯಲ್ಲಿ ಹರಿಶ್ಚಂದ್ರನ ಕಷ್ಟಕ್ಕಿಂತ ನಕ್ಷತ್ರಿಕನ ತೊಂದರೆಯಿಂದ ಆತ ಪಡುವ ಪಾಡು ಕರುಣಾರಸದ ಔನ್ನತ್ಯವನ್ನು ಸೃಷ್ಟಿಸುತ್ತದೆ. ಈ ತರ್ಕ ಮನಗಂಡು ಜಯರಾಯಾಚಾರ್ಯರು ಇದನ್ನು ಸೇರಿಸದರು. ಅದೇ ವೇಣಿ ಸಂವಾಹರದ ಅನುವಾದದ ಕಾಲಕ್ಕೆ ಶಿಕ್ಷಣದ ಪ್ರಭಾವ ಪ್ರತಿಯೊಬ್ಬ ಪ್ರಜ್ಞಾವಂತ ನಾಗರಿಕನ ಮೇಲೆ ಬಲವಾಗಿ ಬೇರೂರಿತು. ಆ ಹಂತದಲ್ಲಿ ವಾಚಕರ ಅಭಿರುಚಿಯನ್ನು ತಣಿಸುವ ಕಡೆಗೂ ಲೇಖಕ ಲೋಕದ ಜನರ ಮನಸ್ಸುವಾಲಿ, ಸಾಹಿತ್ಯಿಕ ಚಟುವಟಿಕೆಗಳಿಗೆ ಪೂರಕವಾದಂತಹ ಅನುವಾದಗಳು ಬರತೊಡಗಿದವು. ಎಷ್ಟೋ ಲೇಖಕರು ಇದನ್ನು ಮದ್ರಾಸ್ ಯೂನಿವರಿಸಿಟಿಯ ಪಠ್ಯ ಕ್ರಮಕ್ಕೆ ಅನುಗುಣವಾಗಿ ಬರೆಯಲಾಗಿದೆ ಎಂದು ತಮ್ಮ ತಮ್ಮ ಕೃತಿ ಗಳಲ್ಲಿ ಬರೆದುಕೊಂಡರು ಆ ಹಿನ್ನೆಲೆಯಲ್ಲಿ ನೋಡಿದಾಗ ಅಚ್ಚ ಹೊಸಗನ್ನಡದ ಮಾದರಿಯಲ್ಲಿರುವ ವೇಣಿ ಸಂಹಾರ ನಾಟಕವನ್ನು ನೋಡಿದರೆ, ಆ ಸಾಂದರ್ಭಿಕ ಅಗತ್ಯತೆಯ ಅರಿವಾಗುತ್ತದೆ. ಹೀಗೆ ಒಬ್ಬ ಅನುವಾದಕನನ್ನೇ ನಿಯಂತ್ರಿಸಿದ ಎರಡು ಅನುವಾದ ಕೃತಿಗಳ ಹಿಂದಿರುವ ಸಾಮ್ಯತೆ, ಭಿನ್ನತೆ, ಸಾಂದರ್ಭಿಕ ಒತ್ತಾಸೆ ಇವುಗಳನ್ನು ಸ್ಥೂಲವಾಗಿ ಸಮೀಕ್ಷಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಇನ್ನುಳಿದ ಅಜ್ಞಾತ ನಾಟಕಗಳ ಬಗೆಗೂ ಆಸಕ್ತಿ ಬೆಳೆಯಲು ಈ ಪ್ರಯತ್ನ ಸಾಧನವಾಗಬಹುದೆಂಬ ಆಕಾಂಕ್ಷೆಯೊಡನೆ ಲಭ್ಯ ಕೃತಿಗಳನ್ನು ಮಾತ್ರ ಇಲ್ಲಿ ಅಧ್ಯಾಯನಕ್ಕೆ ಆಯ್ದುಕೊಳ್ಳಲಾಗಿದೆ.

# ಅಧ್ಯಾಯ -೫
# ತೌಲನಿಕ ಅಧ್ಯಯನ

**ಶಾಕುಂತಲ ನಾಟಕಂ:**

ಶಾಕುಂತಲ ನಾಟಕವನ್ನು ಅನೇಕರು ಅನುವಾದಿಸಿದ್ದಾರೆ. ಸುಮಾರು ೨೦ ಅನುವಾದಗಳು ಬಂದಿವೆ. ಆದರೂ ಪ್ರಮುಖವಾಗಿ ಚರ್ಚಿತವಾಗುತ್ತಿರುವ ವಿಷಯ ಚುರುಮುರಿ ಶೇಷಗಿರಿರಾಯರ ಮತ್ತು ಬಸವಪ್ಪಶಾಸ್ತ್ರಿಗಳ ಅನುವಾದ, ಅನುವಾದ ಯುಗದ ಪ್ರಪ್ರಥಮ ಕೊಡುಗೆಯಾಗಿ ಈ ಕೃತಿ ಮೂಡಿಬಂದಿದೆ. ಕ್ರಿ.ಶ. ೧೮೬೯ರಲ್ಲಿ ಚುರುಮುರಿ ಶೇಷಗಿರಿರಾಯರ ಅನುವಾದವೂ ಕ್ರಿ.ಶ. ೧೮೮೧ರಲ್ಲಿ ಬಸವಪ್ಪಶಾಸ್ತ್ರಿಗಳ ಅನುವಾದವೂ ಹೊರಬಂದವು. ಭಿನ್ನ ಪ್ರಾದೇಶಿಕ ಹಿನ್ನೆಲೆಯಲ್ಲಿ ಮೂಡಿಬಂದ ಈ ಅನುವಾದಗಲ ಸಾಂಸ್ಕೃತಿಕ ಪರಿಸರವೂ ವಿಭಿನ್ನ ನೆಲೆಗಳಲ್ಲಿರುವ ಗಮನೀಯ ಸಂಗತಿ. ಆದರೆ ಈ ಎರಡೂ ಅನುವಾದಗಳ ಔಚಿತ್ಯ ಪ್ರಶ್ನೆಗಿಂತ ಸಾಂದರ್ಭಿಕತೆಯ ನೆಲೆಗಟ್ಟು, ಚರ್ಚೆಯಾಸ್ಪದ ವಿಷಯವೆನಿಸಿ, ತೌಲನಿಕ ಅಧ್ಯಯನಕ್ಕೊಂದು ಬಗೆಯ ಸಾರ್ಥಕತೆಯನ್ನು ತಂದುಕೊಡುತ್ತದೆ ಎಂದರೆ ಆಶ್ಚರ್ಯವೇನಿಲ್ಲ. ಬಸವಪ್ಪಶಾಸ್ತ್ರಿಗಳಿಗಿಂತ ಮೊದಲು ಶೇಷಗಿರಿರಾಯರು ಶಾಕುಂತಲವನ್ನು ಭಾಷಾಂತರಿಸಿದ್ದರು. ಆದರೆ ಅದು ವ್ಯಾಖ್ಯಾನಾತ್ಮಕ ಅನುವಾದವಾಯಿತೇ ಹೊರತು ಸಾಹಿತ್ಯಿಕ/ಭಾಷಿಕ ಅನುವಾದವಾಗಿ ಬರಲಿಲ್ಲ. ಸ್ವತಂತ್ರ ನಿರ್ಮಿತಿಯಲ್ಲಿ ಇಲ್ಲದಿದ್ದ ಅವಕಾಶಗಳನ್ನು ಅನುವಾದ ಕ್ರಿಯೆಯಲ್ಲಿ ತೊಡಗಿಸಿಕೊಂಡ ಶ್ರೇಯಸ್ಸು ಬಸವಪ್ಪಶಾಸ್ತ್ರಿಗಳದ್ದು. ಬಸವಪ್ಪಶಾಸ್ತ್ರಿಗಳ 'ಕರ್ಣಾಟಕ ಶಾಕುಂತಲ ನಾಟಕಂ' ಸೃಜನಾತ್ಮಕವಾದ ಕೃತಿಯೆನಿಸಿದರೂ ಕಾಳಿದಾಸನನ್ನು ಕನ್ನಡಕ್ಕಿಳಿಸುವಲ್ಲಿ ಅವರ ಪ್ರಯತ್ನ ಶ್ಲಾಘನೀಯ. ಈ ಅಂಶವನ್ನು ಕನ್ನಡ ವಿಮರ್ಶೆ ತಕ್ಕಷ್ಟು ಗುರುತಿಸಿದೆ. ಕಾಳಿದಾಸನಿಗೆ ನಿಷ್ಠರಾಗಿದ್ದುಕೊಂಡೇ ಮೂಲಕ್ಕಿಂತ ಹೆಚ್ಚು ಪರಿಣಾಮಕಾರಿಯಾಗುವಂತೆ ಅನುವಾದಿಸಿದ್ದಾರೆ.

ಚುರುಮರಿ ಶೇಷಗಿರಿರಾಯರ 'ಶಾಕುಂತಲ' ೧೮೭೦ರಲ್ಲಿ ಪ್ರಕಟವಾಗಿತ್ತು. ಇದು ಹೊಸ ಗನ್ನಡದ ಮೊಟ್ಟಮೊದಲ ನಾಟಕ. ಸಿಂಗಾರಾರ್ಯನ 'ಮಿತ್ರವಿಂದಾ ಗೋವಿಂದ' ನಾಟಕ ರೂಪದಲ್ಲಿ ಬರೆದ ಕಾವ್ಯವಾಗಿದ್ದರೆ. ಇದು ನಾಟಕ, ರಂಗಭೂಮಿಯ ಸಂಭಾವ್ಯತೆಯನ್ನಿಟ್ಟುಕೊಂಡು ಬಂದಿರುವ ನಾಟಕ ಇದೊಂದೇ. ಬಸವಪ್ಪಶಾಸ್ತ್ರಿಗಳು ರಂಗ ಪಠ್ಯ, ಓದು ಪಠ್ಯ ಎಂಬುದಾಗಿ ಎರಡು ರೀತಿಯ ಅನುವಾದಗಳನ್ನು ಕೊಟ್ಟರು. ಒಂದೇ ಅನುವಾದ ನಮ್ಮ ಮುಂದಿದೆ. ಬಹುತೇಕ ಓದು ಪಠ್ಯವೇ ಉಳಿದಿದೆ ಎಂದರೆ ಆಶ್ಚರ್ಯವಿಲ್ಲ.

ಚುರುಮುರಿ ಶೇಷಗಿರಿರಾಯರ 'ಶಾಕುಂತಲ' ಆಡುಭಾಷೆಯಲ್ಲಿನ ಅನುವಾದ. ಕಾಳಿದಾಸ ವಿದುಷಕ ಮಾಢವ್ಯ ಬ್ರಾಹ್ಮಣನಾದರೆ ಶೇಷಗಿರಿರಾಯರು ಹನುಮನಾಯಕನನ್ನಾಗಿಸಿದ್ದಾರೆ. ಹನುಮನಾಯಕನು ಆಡುವ ಹಳ್ಳಿ ಭಾಷೆ ಕಾಳಿದಾಸ ಪ್ರಾಕೃತ ಭಾಷೆಗೆ ಸರಿಯಾಗಿದೆ. ಚುರುಮುರಿ ಶೇಷಗಿರಿರಾಯರ ಅನುವಾದ ಎಂದಿನಂತೆ ಸಾಂಸ್ಕೃತಿಕ ಅನುವಾದ ರಂಗಭೂಮಿ ಪರಿಸರಕ್ಕನುಗುಣವಾದ ಅನುವಾದ ಕಾಳಿದಾಸನನ್ನು ಅನುಸರಿಸಿದೆಯಾದರೂ ಭಾಷಿಕವಾಗಿ ಸಾಮಾನ್ಯ ಹಳ್ಳಿ ಜನರನ್ನು ದೃಷ್ಟಿಯಲ್ಲಿರಿಸಿಕೊಂಡಿದೆ. ಪ್ರಾಕೃತ ಸಂಭಾಷಣೆಗಳನ್ನು ಈ ಆಡುಭಾಷೆ ಓಲೈಸಿದೆಯಾದರೂ ಸಂಸ್ಕೃತ ಶಿಷ್ಟ ಪಾತ್ರವರ್ಗವನ್ನು ಈ ಆಡುಭಾಷೆ ಓಲೈಸಲು ಸಮರ್ಥವಾಗಿಲ್ಲ.

ಸಂಸ್ಕೃತದಲ್ಲಿಯ ವೃತ್ತಗಳನ್ನು ಕೆಲವು ಕಡೆ ವೃತ್ತಿಗಳಲ್ಲಿಯೂ, ಕೆಲವು ಕಡೆ ಗೀತಗಳಲ್ಲಿಯೂ ಅನುವಾದಿಸಿದ್ದಾರೆ. ವೃತ್ತಗಳಿಗಿಂತ ಗೀತಗಳು ಸಮರ್ಥವಾಗಿ ಅನುವಾದಿಸಲ್ಪಟ್ಟಿವೆ. 'ಮುನಿಗಳ ಮಗಳಲ್ಲಿ ತಿಳಿಯೋ', 'ಪೊಡೆಲಾರೆ ಬಾಣವ' ಇವೆಲ್ಲ ಕಾಳಿದಾಸನ ವೃತ್ತಗಳಿಗೆ ಸಂವಾದಿಯಾಗಿ ಬರೆಯಲ್ಪಟ್ಟ ಪದ್ಯಗಳಲ್ಲ. ನಾಟಕದ ಸನ್ನಿವೇಶಕ್ಕೆ ತಕ್ಕುದಾದ ಭಾವವನ್ನು ತೋರಿಸಲು ಬಳಸಿದ ಪದ್ಯಗಳು. ಅಂದು ಉತ್ತರ ಕರ್ನಾಟಕದ ಪರಿಸರದಲಿ ಪ್ರಚಲಿತವಿದ್ದ ಬಯಲಾಟಗಳಲ್ಲಿ ಈ ಬಗೆಯಾದ ಹಾಡುಗಳನ್ನು ಹೇಳುವ ರೂಢಿಯಿತ್ತು. ಶ್ರೀಕೃಷ್ಣ ಪಾರಿಜಾತದಲ್ಲೂ ಈ ಬಗೆಯ ಹಾಡುಗಳನ್ನು ನೋಡಬಹುದಾಗಿದೆ. ಉತ್ತರ ಕರ್ನಾಟಕದ ಪರಿಸರದಿಂದ ಈ ಬಗೆಯ ಗೀತಗಳು ಹುಟ್ಟುತ್ತವೆ. ಚುರುಮುರಿಯವರ ಶಾಕುಂತಲ ವಸಾಹತುಶಾಹಿ ಕಾಲಘಟ್ಟದ ಸಾಹಿತ್ಯ ಪ್ರಪಂಚಕ್ಕೆ ಹೇಗೆ ಹೊಸ ಪರಿಕಲ್ಪನೆ ತಂದುಕೊಟ್ಟಿತೋ, ಅದೇರೀತಿ ರಂಗಭೂಮಿಯ ಇತಿಹಾಸದಲ್ಲೂ ಹೊಸ ಅಧ್ಯಾಯವೊಂದನ್ನು ತೆರೆಯಿತು. ಶಾಕುಂತಲದ ಈ ಅನುವಾದ ಸಾಹಿತ್ಯಿಕ ಕ್ಷೇತ್ರಲ್ಲೂ, ರಂಗಭೂಮಿ ಕ್ಷೇತ್ರದಲ್ಲೂ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ಹಿನ್ನೆಲೆಯಲ್ಲಿಯೇ ನಂತರ ಬಂದ ಪ್ರತಿಯೊಂದು ಅನುವಾದವೂ ಸಾಹಿತ್ಯ ಕೃತಿಯೋ, ರಂಗಕೃತಿಯೋ ಎಂದು ನಿರ್ಧರಿಸಲು ಬಾರದಂತಹ ಸನ್ನಿವೇಶವೊಂದು ನಿರ್ಮಾಣಗೊಂಡಿದೆ. ಹೇಗೆ ಬಸವಪ್ಪ ಶಾಸ್ತ್ರಿಗಳು ಅಭಿನವ ಕಾಳಿದಾಸನೆಂದು ಪ್ರಖ್ಯಾತರಾಗಿದ್ದರೋ ಅದೇರೀತಿ ಚುರುಮುರಿಯವರು ಕನ್ನಡ ಕಾಳಿದಾಸ ಎಂದು ಪ್ರಖ್ಯಾತರಾಗಿದ್ದರು ಎಂಬುದು ಅವರ ಪದ್ಯವೊಂದರಿಂದ ತಿಳಿದುಬರುತ್ತದೆ. ತಮ್ಮ ಕೃತಿ ಕಾಳಿದಾಸನ ಶಾಕುಂತಲದ ರಂಗಕೃತಿ ಯಾಗಿ ಅನುವಾದಗೊಂಡಿದೆ ಎಂಬುದನ್ನು ಅವರು ತಿಳಿಸಿದ್ದಾರೆ.

ಸುಲಭಸಲಿಲಾವಗಾಹಾಃ
ಪಾಟಲಸಂಸರ್ಗಿ ಸುರಭಿವನವಾತಾಃ।
ಪ್ರಚ್ಛಾಯ ಸುಲಭನಿದ್ರಾ
ದಿವಸಾಃ ಪರಿಣಾಮರಮಣೀಯಾಃ॥

ಬಸವಪ್ಪಶಾಸ್ತ್ರಿಗಳ ಅನುವಾದವನ್ನು ಸಾಹಿತ್ಯಿಕ ಅನುವಾದವೆಂದು ಕರೆಯುವುದು ಯೋಗ್ಯವಾಗಿ ೧೮-೧೯ನೆಯ ಶತಮಾನಕ್ಕೆ ಬಂದ ಅನುವಾದಗಳೆಲ್ಲವೂ ತೀರ ಸಾಹಿತ್ಯ ಪಠ್ಯದ ಅನುವಾದವಾಗಿದೆ. ಕೇವಲ ವಸ್ತುವನ್ನು ಬಳಸಿ, ಸ್ವಾತಂತ್ರ್ಯವಹಿಸಲು ಸಾಧ್ಯವಾಗಿಲ್ಲ. ಚುರುಮುರಿ ಶೇಷಗಿರಿರಾಯರದು ಈ ಹಂತದಲ್ಲಿ ಸ್ವಲ್ಪ ಭಿನ್ನವೆನಿಸಿದರೂ ಅದು ರಂಗಭೂಮಿಯ ಆದ್ಯತೆಗೋಸ್ಕರ ಅನುವಾದಿತವಾದ ಕೃತಿಯಾದ್ದರಿಂದ ಅದು ರಂಗಪಠ್ಯವೆನಿಸಿಕೊಂಡಿದೆ. ಅದು ಆ ಕಾಲದ ರಂಗಭೂಮಿಯ ಅಗತ್ಯತೆಗೋಸ್ಕರ ಮೂಡಿ ಬಂದುದು. ಬಸವಪ್ಪಶಾಸ್ತ್ರಿಗಳು ರಂಗಭೂಮಿಯ ಅವಶ್ಯಕತೆಗೋಸ್ಕರವೇ ಅನುವಾದಿಸಿದರೂ ಅದು ಓದು ಪಠ್ಯವಾಗಿಯೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಹಾಗಾಗಿ ಆ ಸ್ಥಾನ ಪಂಡಿತರ ಸಮ್ಮುಖದಲ್ಲಿ ನಾಟಕ ನಡೆಯಬೇಕಾದ್ದರಿಂದ ಅಭಿಜಾತತೆಗೆ ಹೆಚ್ಚಿನ ಮಹತ್ವವಿರುವುದು ಕಂಡುಬರುತ್ತದೆ. ಸಾಹಿತ್ಯವು ಅಭಿಜಾತತೆಗೆ ಹೆಚ್ಚು ಒತ್ತುಕೊಂಡಿರುವುದರಿಂದ ಅನುವಾದ ಪಾಂಡಿತ್ಯಪೂರ್ಣ ಅನುವಾದವಾಗಿ ಅಭಿನವ ಕರ್ತೃತ್ವ ಶಕ್ತಿಯನ್ನು ಪಡೆದಿದೆ.

ಯಾ ಸೃಷ್ಟಿಃ ಸೃಷ್ಟುರಾದ್ಯಾ ವಹತಿ ವಿಧಿಹುತಂ ಯಾ ಹವಿರ್ಯಾ ಚ ಹೋತ್ರೀ
ಯೇ ದ್ವೇ ಕಾಲಂ ವಿಧತ್ತಃ ಶ್ರುತಿ ವಿಷಯಗುಣಾ ಯಾ ಸ್ಥಿತಾ ವ್ಯಾಪ್ಯ ಶಿವಮ್ ।
ಯಾಮಾಹುಃ ಸರ್ವಬೀಜ ಪ್ರಕೃತಿ ರೀತಿ ಯಯಾ ಪ್ರಾಣಿನಃ ಪ್ರಾಣವಂತಃ
ಪ್ರತ್ಯಕ್ಷಾಭಿಃ ಪ್ರಪನ್ನೆಸ್ತನುಭಿರವತು ವಸ್ತಾಭಿರಷ್ಟಾಭಿರೀಶಃ ॥

ಆವುದು ಧಾತೃಸೃಷ್ಟಿಗೆ ಮೊದಲ್ ಹರಿತಹದ್ಯಮನಾಂ ಪುದಾವುದಿ
ನ್ನಾವುದು ಹೋತೃ ಶಬ್ದಗುಣಮಾವುದವಾದುವು ಕಾಲಕರ್ತೃಗಳ್
ಆವುದುಸಿರ್ ಜಗಕ್ಕುಸಿರ್ವ್ವರಾವುದ ಭೂತಕುಲಪ್ರಧಾನಮೆಂ
ದಾ ವೊಡಲೆಂಟರಿಂದ ಮೆರೆವೀಶನೋಡರ್ಚ್ಯ ಗೆ ನಿಮ್ಮ ಭೀಷ್ಟವಂ.

ಎಂದು ಬಸವಪ್ಪಶಾಸ್ತ್ರಿಗಳು ಅನುವಾದಿಸಿದ್ದಾರೆ. ಜೀವನವನ್ನೇ ಸಾಂಕೇತಿಕ ಯಜ್ಞವಾಗಿ ಮೂಡಿ ವರ್ಣಿಸಿದ ಕಾಳಿದಾಸನನ್ನು ಯಥಾವತ್ತಾಗಿ ವರ್ಣಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ನಾಂದಿ ಪದಕ್ಕೆ ಬದಲಾಗಿ ರಂಗಭೂಮಿಯ ಅಗತ್ಯಕ್ಕೆ ತಕ್ಕಂತೆ ಮಂಗಲಾಚರಣೆಯನ್ನು ಹಾಕಿದರೆ ಶೇಷಗಿರಿರಾಯರು ಸ್ವಂತ ಪದ್ಯವನ್ನು ರಚಿಸಿದ್ದಾರೆ.

ತೆಳೆದಿಹ ಪರಾತಪಾರನು ಹರಿ । ನಾಟ್ಯರೂಪಂ ॥
ಜಲಮೇಲರುಮಿಳಿಯು । ತಿಳಿವು ಬೆಳಕು ಬಾಂ ॥
ದಳಂಗಳು ತಾನೆಯಾಗಿ ॥ ಪಲ್ಲ ॥

ತಿಳಿಯ ತಿಳಿವ ಜಡಮಾದಂ। ಜೀವಮಾದಂ।
ಕಲಿವ ತಾ ಕಲಿಸುವನು । ತಾನೆ ಸೋಲುವ ಗೆಲ್ಲುವ ।
ದೀನ -। ನುತಾ । ಧನಿ ತಾ ಸತಿ ಪತಿ ತಾ ।
ದುಃಖಃ । ಸುಖ । ಬಡುವ ಅಳಿವ ಉಳಿವ।
ನಿರುತದೊಳಳುತಲಿ ನಗುತಲಿ ॥

ಸೂತ್ರಧಾರ :- ಆರ್ಯೇ ಅಭಿರೂಪಭೂಯಿಷ್ಠಾ ಪರಿಷದಿಯಮ್ ।
ಅದ್ಯ ಖಲು ಕಾಳಿದಾಸಗ್ರಥಿತ ವಸ್ತುನಾ
ನವೇನಾಭಿಜ್ಞಾನಶಕುಂತಲಾಖ್ಯೇನ
ನಾಟಕೇನೋಪಸ್ಥಾತವ್ಯವಸ್ಮಾಭಿ: ।

ಬಸವಪ್ಪ ಶಾಸ್ತ್ರಿ : ಸೂತ್ರಧಾರ : - ಆರ್ಯೆ ಸಭಾಸದರಿವರು ಸಕಲಕಲಾಪ್ರವೀಣರು. ಈಗ ಕಾಳಿದಾಸ ಮಹಾಕವಿ ರಚಿತವಾದ ಅಭಿಜ್ಞಾನ ಶಾಕುಂತಲವೆಂಬ ನಾಟಕವು ಕರ್ಣಾಟಕ ಭಾಷೆಯಲ್ಲಿ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಯಿಂದ ರಚಿಸಲ್ಪಟ್ಟಿರುವುದು.

ಶೇಷಗಿರಿರಾಯರು : ಆರ್ಯಳೇ, ರಸಜ್ಞತೆಯ ವಿಷಯದಲ್ಲಿ ಮಹಾವಿಖ್ಯಾತನಾದ ವಿಕ್ರಮಾದಿತ್ಯನ ಸಭಾ ಮಂಟಪವಿದು. ಇದರಲ್ಲಿ ಅನೇಕ ವಿದ್ವಜ್ಜನರು ವಿರಾಜಮಾನರಾಗಿದ್ದಾರೆ. ಅವರ ಮುಂದೆ ಈವತ್ತು ಕಾಳಿದಾಸ ಕವಿಯಿಂದ ರಚಿಸಲ್ಪಟ್ಟಂಥ ಅಭಿಜ್ಞಾನ ಶಾಕುಂತಲವೆಂಬ ನಾಟಕವನ್ನು ನಾವು ಪ್ರಯೋಗಿಸಿ ತೋರಿಸತಕ್ಕದ್ದಿರುತ್ತದೆ.

ಕಾಳಿದಾಸನ ಶ್ಲೋಕವನ್ನು ಬಸವಪ್ಪಶಾಸ್ತ್ರಿಗಳು ಕರ್ಣಾಟಕ ಭಾಷೆಯಲ್ಲಿ ಬರೆಯಬೇಕಾಗಿರುವ ಅಗತ್ಯವನ್ನು ಕುರಿತಂತೆ ಅನುವಾದಿಸಿದರೆ ಚುರುಮುರಿ ಶೇಷಗಿರಿರಾಯರು ಸಭಾ ಮಂಟಪವಿದು ಎಂಬ ಮಾತಿನಿಂದ ರಂಗಭೂಮಿಯ ಅಗತ್ಯತೆಯ ಜೊತೆಗೆ ಪ್ರಾಯೋಗಿಕತೆಯನ್ನು ಒತ್ತಿ ಹೇಳಿದ್ದಾರೆ.

ಆ ಬೇಟೆರಾಯ ದೀಕ್ಷಿತರು ಹೀಗೆ ಅನುವಾದಿಸಿದ್ದಾರೆ : ಆರ್ಯೆ , ಈ ಸಭೆಯು ನಾಟಕ ವಿಷಯಕ ಜ್ಞಾನದಿಂದ ಪ್ರಚಾರವಾಗಿದೆ. ಈಗಲಾದರೋ ಕಾಳಿದಾಸ ಗ್ರಥಿತ ವಸ್ತುವುಳ್ಳ ನೂತನ ನಾಟಕಾಭಿನಯದಿಂದ ಸಿದ್ಧರಾಗಿರಬೇಕು.

ಕಾಳಿದಾಸನ ವಾಕ್ಯವನ್ನು ಪದಶ: ಅನುವಾದಿಸಿದ ಪರಿ ಇದಾಗಿದೆ. ಅಭಿರೂಪಭೂಯಿಷ್ಠಾ ಪರಿಷವಿಯಮ್ ಎಂಬುದನ್ನು ಸಭೆಯು ನಾಟಕ ವಿಷಯಕಜ್ಞಾನದಿಂದ ಪ್ರಚಾರವಾಗಿದೆ ಎಂತಲೂ ಅದ್ಯಖಲು ಕಾಳಿದಾಸಗ್ರಥಿತವಸ್ತುನಾ ನವೇನಾಭಿಜ್ಞಾನ ಎಂಬ ಪದವನ್ನು ಬಿಟ್ಟಿದ್ದಾರೆ.

ಸೂತ್ರಧಾರ: - ಆರ್ಯ ಸಾಧು ಗೀತಮ್ ।
ಅಹೋ ರಾಗ ಬದ್ಧ ಚಿತ್ತವೃತ್ತಿರಾಲಿಖಿತ ಇದ ಸಾರ್ವತೋ ರಂಗ: ।
ತದಿದಾನೀಂ.

ಎಂಬುದನ್ನು ಬಸವಪ್ಪ ಶಾಸ್ತ್ರಿಗಳು "ಆರ್ಯೆ ಚೆನ್ನಾಗಿ ಹಾಡಿದೆ ನಿನ್ನೆರಾಗದಲ್ಲಿ ಚಿತ್ತವಿಟ್ಟ ಸಭಾಸದರೆಲ್ಲರೂ ಚಿತ್ರ ಪ್ರತಿಮೆಗಳಂತಾದರು. ಎಂದು ಪದಶಃ ಅರ್ಥವನ್ನು ತಮ್ಮದೇ ಅತ್ಯುಚ್ಚ ಶೈಲಿಯಲ್ಲಿ ಅನುವಾದಿಸಿದ್ದಾರೆ"

ಇದನ್ನೆ ಚುರುಮರಿಯವರು " ಆರ್ಯಳೆ, ಸರ್ವೋತ್ಕೃಷ್ಟವಾಗಿ ಗಾಯನ ಮಾಡಿದಿ ಅಹಾಹಾ ! ನಿನ್ನ ಮನೋರಮ ಸ್ವಂಕಲ್ಪನೆಯಿಂದ ಜನರ ದಿತ್ತವೃತ್ತಿಗಳೆಲ್ಲ ತಲ್ಲೀನವಾಗಿ ತಂಗಭೂಮಿಯು ಚಿತ್ರದಂತೆ ತಟಸ್ಥವಾಯಿತು ನೋಡಿದೆಯಾ ?

ಬೇಟೆರಾಯ ದೀಕ್ಷಿತರು :- ಆರ್ಯೆ, ಚೆನ್ನಾಗಿ ಗಾನಮಾಡಿದಿ, ಚಿತ್ತವೃತ್ತಿಯಾದೀ ಮಂಗಳ ರಂಗವು ಚಿತ್ರದಲ್ಲಿ ಲಿಖಿಸಿದಂತಿರುವದು.

ಈ ಮೂರು ಆನುವಾದಗಳನ್ನು ನೋಡಿದಾಗ ಬಸವಪ್ಪ ಶಾಸ್ತ್ರಿಗಳ ಅನುವಾದ ಪದಶ : ಮೂಡಿಬಂದರೂ ತೂಕ ಮಾಡಿಟ್ಟರುವ ಅವರ ಪದಲಾಲಿತ್ಯ ಅಭಿನವ ಕಾಳಿದಾಸನೆಂಬ ಬಿರುದನ್ನು ಸಾರ್ಥಕ್ಯ ಗೊಳಿಸಿದೆ. ರಂಗಭೂಮಿ ನಾಟಕವಾಗಿ ರಚಿಸಿರುವ ಶೇಷಗಿರಿರಾಯರು "ನಟಿಸಖಿ ಕುಂಜಬಿನದೊಳು ಪೋಗುವ. ವಿಶ್ರಮಗೂಡುವ ಎಂಬ ಪದ್ಯವನ್ನು ಹೇಳಿಸುತ್ತಾರೆ. ಅಷ್ಟೇ ಅಲ್ಲದೇ ಚಿತ್ರಪ್ರತಿಮೆಯನ್ನುವುದನ್ನು ರಂಗಭೂಮಿಯ ಚಿತ್ರವಾಗಿ ಮಾರ್ಪಡಿಸಿದ್ದಾರೆ. ಅಲ್ಲದೆ ಸರ್ವೋತ್ಕೃಷ್ಟ ಮನೋರಮ ಸ್ವರಕಲ್ಪನೆಯೆಂಬ ಶಿಷ್ಟ ಪದಗಳನ್ನು ಬಳಸಿದ್ದಾರೆ. ಬೇಟೆರಾಯ ದೀಕ್ಷಿತರು ಕಾಳಿದಾಸನನ್ನು ತೀರ ಅನುಕರಿಸುವುದರಲ್ಲಿ ಕೆಲವೊಮ್ಮೆ ತೀರಕ್ಲಿಷ್ಟ ಅನುವಾದವನ್ನು ಮಾಡಿದ್ದಾರೆ ಎನಿಸುತ್ತದೆ. ರಾಗಾನುಬದ್ಧ ಚಿತ್ತವೃತ್ತಿರಾಲಿಖಿತ ಎನ್ನುವದು ಕನ್ನಡ ಎನ್ನುವದಕ್ಕಿಂತ ಸಂಸ್ಕೃತಾನುವಾದವೇ ಎಂದರೆ ಉಚಿತವೆನಿಸುತ್ತದೆ. ದುಷ್ಯಂತನು ಜಿಂಕೆಯೊಂದನ್ನು ಬೆನ್ನೆಟ್ಟಿಕೊಂಡು ಬಹುದೂರ ಒಂದು ಜಿಂಕೆಯನ್ನು ಕುರಿತು ಹೀಗೆ ಹೇಳುತ್ತಾನೆ.

ಗ್ರೀವಾಭಂಗಾಭಿರಾಮಂ ಮಹುರನುಪತತಿ ಸ್ಯಂದನೆ ದತ್ತದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟ : ಶರಪತನ ಭಯಾದ್ ಭೂಯಸಾ ಪೂರ್ವಕಾಯಮ್ ।
ದರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭರಂ ಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲು ತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ ॥

ಬಸವಪ್ಪಶಾಸ್ತ್ರಿಗಳು : ಕೊರಲಂ ತಾಂ ಕೊಂಕುಗೈಯುತ್ತಡಿಗಡಿಗೊಡನೈತರ್ಪ ತೇರಲ್ಲಣಂನ
ಟ್ಟಿರೆ ನೋಟಂ ಬಾಣಪಾತಕ್ಕಾಗಿದುರುಕಿರುಸುತಂ ಪೃಷ್ಠಮಂ ಮಾರ್ಗದೊಳ್ ತೀ
ವಿರೆ ನೀಡುಂ ಬಿಧ್ದಿಬಾಯಿಂ ಶ್ರಮದುದಿರ್ವರೆ ಮೆಲ್ದಿರ್ದ ಧರ್ಭಾಂಕುರಂಗಳ್
ಧರೆಯಲ್ಲೋರೊಮ್ಮೆ ಕಾಲಿಟ್ಟಿಹಹ ನಿರುರೆಸೈ ಬಾನೊಳೇ ಪಾರಿಪೋಕುಂ.

ಬೇಟೆರಾಯರಾಯ ದೀಕ್ಷಿತ :

ನೋಡೆಲೋಸೂತನೆ ।ಪೋಡುವದೀಮೃಗ।ಕಾಡಿನೋಳ್ಪಿರಿಪರಿದಾಡುವದೀಗ ।।ಪ।।
ಕಣ್ಣಿಗೆ ಕಾಣಿಸಿ ಫಣ್ಣನೆನೆಗೆಯುತ।ಸಣ್ಣಗೆ ಪೋಪುದು।ಬಣ್ಣಿಸಲಳವೆ ।೧।।
ಹಿಂದಕೆ ತಿರುಗುತ್ತಿರೆ ಧಮನುನೋಳ್ಪುದು ।
ಮುಂದಕೆ ಪೋಪುದು ಬಾಣದ ಭಯದಿಂ।೨।।
ವೃತ್ತರಕಾಯವ ತಗ್ಗಿಸಿ ಭಯದಿಂ । ತತ್ತರಗೊಳ್ಳುತಪೋಪುದು ಭರದಿಂ ।೩।।

ಚುರುಮುರಿ ಶೇಷಗಿರಿರಾಯರು :

ತಿರುತಿರುಗಿ ಹಿಂನೋಡುತ್ತೋಡುತ್ತಲೆಲೆಮ್ಮಯ ತೇರನಂ ।
ತುರುಕುತಿಹುದೈ ಪಶ್ಚಾರ್ಧಂ ಪೂರ್ವಕಾಯದೊಳಳ್ಳಿ ತಾಂ ।।
ಶರಪತನಕಂಜುತ್ತೆಂಜಲದರ್ಬಮರ್ಧವೇ ಕಚ್ಚಿ ಬಿ - ।
ಟ್ಟಿರದೆ ನೆಲದೊಳ್ ಹಾರುತ್ತಾಹಾರುತ್ತೆ ಬಾನಿನೋಳಿರ್ಪುದೈ ।।

ಬಸವಪ್ಪಶಾಸ್ತ್ರಿಗಳು ಕಾಳಿದಾಸನನ್ನು ಅತ್ಯಂತ ನಿಕಟವಾಗಿ ಅನುವಾದಿಸಿದ್ದಾರೆ. 'ಗ್ರೀವಾಭಂಗಾಭಿರಾಮಂ' ಎನ್ನುವುದನ್ನು ಕೊರಲಂ ತಾಂ ಕೊಂಕುಗೈಯುತ್ತ ಮುಹುಃ ಎನ್ನುವುದನ್ನು ಸಮಯೋಚಿತವಾಗಿ ಅಡಿಗಡಿಗೆ ಎಂದಿದ್ದಾರೆ (ಮತ್ತೆ ಮತ್ತೆ ಎನ್ನುವುದನ್ನು) ಶರಪತನಭಯಾದ್ ಭೂಯಸ ಎಂಬಲ್ಲಿ ಬಾಣಪಾತಕ್ಕಾಗಿ ದುರುಕಿರುಸುತಂ ಶಬ್ದಶಃ ಅನುವಾದವೆನಿಸಿದರೂ ಎಲ್ಲೂ ಅರ್ಥ ಸಂದರ್ಭ ವ್ಯತ್ಯಾಸವಾಗಿಲ್ಲ. ಬೇಟೆರಾಯ ದೀಕ್ಷಿತರು ಭಾವಾನುವಾದ ಮಾಡಿದ್ದಾರೆ. ಆಡುಭಾಷೆಯಂತೆಯೇ ತೋರಿಬರುವ ಇದು ಸಂಪೂರ್ಣ ಗದ್ಯಾನುವಾದವಾಗಿದೆ. ಶೇಷಗಿರಿರಾಯರು ಕಾಳಿದಾಸನ ಸಂಸ್ಕೃತ ಪದಗಳನ್ನೇ ಎರವಲಾಗಿ ಪಡೆದು ಈ ಪದ್ಯಾನುವಾದ ಮಾಡಿದ್ದಾರೆ. ಪಶ್ಚಾರ್ಧಂ ಪೂರ್ವಕಾಯ ಶರಪತನ ಹೀಗೆ ಅನೇಕ ಶಬ್ದಗಳನ್ನು ತಮ್ಮ ಶೈಲಿಯಲ್ಲಿ ಜೋಡಿಸಿದ್ದಾರೆ.

ವೈಖಾನಸಃ ಇದಾನೀಮೆದ ಮಹಿತರಂ ಶಕುಂತಲಾಮತಿಥಿ ಸತ್ಕಾರಾಯ ನಿಯುಜ್ಯ ದೈವಮಸ್ಯಾಃ ಪ್ರತಿಕೂಲಂ ಶಮಯಿತುಂ ಸೋಮತೀರ್ಥಂ ಗತಃ ।

ಬೇಟೆರಾಯ ದೀಕ್ಷಿತಃ ಪುತ್ರಿಯಾದ ಶಕುಂತಲೆಗೆ ವರವನ್ನು ಹುಡುಕುವುದಕ್ಕಾಗಿ ಸೋಮತೀರ್ಥಕ್ಕೆ ಹೋಗಿರುವರು.

ಬಸವಪ್ಪಶಾಸ್ತ್ರಿ : ಪುತ್ರಿಯಾದ ಶಕುಂತಲೆಯನ್ನು ಅತಿಥಿ ಸತ್ಕಾರಕ್ಕೆ ನೇಮಿಸಿ ಆಕೆಯ ಪ್ರತಿಕೂಲ ದೈವಶಮನಾರ್ಥವಾಗಿ ಸೋಮತೀರ್ಥಕ್ಕೆ ಈಗ ತಾನೆ ಹೋಗಿರುವರು. ಚುರುಮುರಿ ಶೇಷಗಿರಿರಾಯಃ ಅವರು ತಮ್ಮ ಮೋಹದ ಕನ್ನಿಕೆಯಾದ ಶಕುಂತಲೆಯನ್ನು ಅತಿಥಿ ಸತ್ಕಾರಾರ್ಥವಾಗಿ ಆಶ್ರಮದಲ್ಲಿಟ್ಟು ಅವಳ ದೈವವು ಪ್ರತಿಕೂಲವಾಗಿರುವ ಕಾರಣ ಶಾಂತಿಯನ್ನು ಮಾಡುವಗೋಸ್ಕರ ಸೋಮತೀರ್ಥಕ್ಕೆ ಹೊರಟು ಹೋಗಿದ್ದಾರೆ.

ಬೇಟೆರಾಯ ದೀಕ್ಷಿತರು : ಪ್ರತಿಕೂಲ ದೈವ ಶಮನಾರ್ಥ ಎನ್ನುವುದನ್ನು ವರನನ್ನು ಹುಡುಕುವುದಕ್ಕಾಗಿ ಎಂಬ ಸಂದರ್ಭವನ್ನು ಸೃಷ್ಟಿಸಿದ್ದಾರೆ. ಚುರುಮುರಿಯವರು ಶಾಂತಿಯನ್ನು ಮಾಡುವಗೋಸ್ಕರ ಎಂದು ಸಾಮಾನ್ಯ ತಿಳುವಳಿಕೆಯೊಂದನ್ನು ಬಳಸಿಕೊಂಡಿದ್ದಾರೆ. ಬಸವಪ್ಪಶಾಸ್ತ್ರಿಗಳು ಯಾವುದೇ ಪರಿಸ್ಥಿತಿಯಲ್ಲೂ ಗಾಂಭೀರ್ಯಕ್ಕೆ ಚ್ಯುತಿ ಬರದಂತೆ ಅನುವಾದಿಸಿದ್ದಾರೆ. ತದ್ವತ್ ಎಂಬ ಪದ ಸಾರ್ಥಕ್ಯವನ್ನು ಪಡೆದುಕೊಂಡಿದೆ.

ರಾಜ: (ಸಮಂತಾದ ಲೋಕ್ಯ) ಸೂತ ಅಕಥಿತೋಪಿ ಜ್ಞಾಯತ ಎವ ಯಥಾಯ ಮಾಶ್ರಮಾಭೋಗ ಸ್ತ ಪೋವನಮಸ್ಯೇತಿ।

ಬೇಟೆರಾಯ ದೀಕ್ಷಿತಃ ಸುತ್ತಲು ನೋಡಿ, ಎಲೈ ಸೊತನೇ ! ಆಶ್ರಮ ಪರಿಪೂರ್ಣತೆಯು ಅಜ್ಞಾಯ ಮಾನವಾದರೂ ಜ್ಞಾತವೆ ಆಗಿದೆ.

ಚುರುಮುರಿ : (ಸುತ್ತಲೂ ನೋಡಿ) ಎಲೋ ಸಾರಥಿಯೇ, ನೋಡಿದೆಯ, ಇವೆಲ್ಲಾ ಚಿಹ್ನೆಗಳನ್ನು, ತಪಸ್ವಿಗಳಾಶ್ರಮ ಸ್ಥಾನವೆಂದು ಹೇಳಿದರೆ ತೋರಿಬರುತ್ತದೆ. ಇಲ್ಲಿ.

ಬಸವಪ್ಪ ಶಾಸ್ತ್ರಿ : ( ಎಲ್ಲಾ ಕಡೆಯಲ್ಲಿಯೂ ನೋಡಿ) ಎಲೈ ಸಾರಥಿಯೆ, ಯಾರು ಹೇಳದಿದ್ದರೂ ಇದು ತಪೋವನವೆಂದು ತಿಳಿಯಬಹುದು. ಬೇಟೆರಾಯ ದೀಕ್ಷಿತರ ಅನುವಾದದಲ್ಲಿ ಅಜ್ಞಾಯಮಾನ ವಾದರೂ ಜ್ಞಾತವೇ ಆಗಿದೆ ಎಂಬುದು ಸಂಸ್ಕೃತಾನುವಾದ ಆಡುಮಾತಿನಲ್ಲಿ ಅನುವಾದಿಸಿದರೆ, ಬಸವಪ್ಪ ಶಾಸ್ತ್ರಿಗಳು ಯಥಾವತ್ತಾಗಿ ತದ್ವತ್ ಅನುವಾದ ಮಾಡಿದ್ದಾರೆ.

ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ
ಮಲನಮಪಿ ಹಿಮಾಂಶೋರ್ಲರಕ್ಷ್ಮ ಲಕ್ಷ್ಮೀಂ ತನೋತಿ।
ಈಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವಿ ।
ಕಿಮಿದ ಹಿ ಮಧುರಾಣಾಂ ಮಂಡನಂ ನಾ ಕೃತಿ ನಾಮ್ ॥

ಬಸವಪ್ಪಶಾಸ್ತ್ರಿ : ಶೈವಲದಿಂದೆ ತಾವರೆ ಮುಸುಂಕಿದೊಡಂ ರಮಣೀಯಮಿಂದುವಿಂ
ಗೀವುದು ಕಾಂತಿಯಂ ಮಲಿನಮಾದೊಡಮೇಂ ಕರೆ ವಲ್ಕದಿಂದಿವಳ್
ಪ್ರಾವೃತೆಯಾದೊಡಂ ಬಹುಮನೋಜ್ಞೆ ಮನೋಹರವಾದ ರೂಪುಗ
ಳ್ಗಾಗುವುದು ತಾನೇ ತಾಳಿದೊಡೆ ಭೂಷಣ ಮಾಗದೆ ಪೋಪುದುರ್ದಿಯೊಳ್.

ಬೇಟೆರಾಯ ದೀಕ್ಷಿತಃ ಕಮಲವು ಶೈವಲದಿಂದನುವಿದ್ಧವಾದರೂ ರಮ್ಯವು, ಚಂದ್ರನ ಕಳಂಕವು ಮಲಿನವಾಗಿದ್ದರೂ ಲಕ್ಷ್ಮಿಯನ್ನುಂಟು ಮಾಡುವುದು ಹ್ಯಾಗೋ ಹಾಗೆ ಈ ಕನ್ಯೆಯು ವಲ್ಕಲದಿಂದಲೂ ಪ್ರಕಾಶಿಸುವಳು. ಆದ್ದರಿಂದ ಮನೋಹರಾಕಾರರಿಗೆ ಅಲಂಕಾರದಿಂದೇನು ಪ್ರಯೋಜನವು.

ಚುರುಮುರಿ ಶೇಷಗಿರಿರಾಯರು ಮೋಹದ ವಸ್ತು ತಾ ಮಾಜಲರಿದು । ಮೋಹವೆ ಬಿಡಿಸುವುದು ಪದ್ಯವನ್ನು ರಚಿಸಿದರು ಈ ಶ್ಲೋಕದ ಅನುವಾದವನ್ನು ಮಾಡಿಲ್ಲ. ಬೇಟೆರಾಯ ದೀಕ್ಷಿತರು ಬಹುತೇಕ ಸಂಸ್ಕೃತ ಶ್ಲೋಕಗಳನ್ನೆಲ್ಲಾ ಹಾಗೆಯೇ ಉಳಿಸಿಕೊಂಡಿದ್ದಾರಾದರೂ ಈ ಶ್ಲೋಕದ ಅನುವಾದವನ್ನು ಕೊಟ್ಟಿದ್ದಾರೆ. ಬಹುತೇಕ ತದ್ವತ್ ಗದ್ಯಾನುವಾದವಿದಾಗಿದೆ.

ಚುರುಮರಿ ಶೇಷಗಿರಿರಾಯರು ಮೋಹದ ವಸ್ತು ತಾ ಮಾಜಲಂದು । ಮೋಹವೆ ಬಿಡಿಸುವುದು ಪದ್ಯವನ್ನು ರಚಿಸಿದರು. ಈ ಶ್ಲೋಕದ ಅನುವಾದವನ್ನು ಮಾಡಿಲ್ಲ. ಬೇಟೆರಾಯ ದೀಕ್ಷಿತರು ಬಹುತೇಕ ಸಂಸ್ಕೃತ ಶ್ಲೋಕಗಳನ್ನೆಲ್ಲಾ ಹಾಗೆಯೇ ಉಳಿಸಿಕೊಂಡಿದ್ದಾರಾದರೂ ಈ ಶ್ಲೋಕದ ಅನುವಾದವನ್ನು ಕೊಟ್ಟಿದ್ದಾರೆ. ಬಹುತೇಕ ತದ್ವತ್ ಗದ್ಯಾನುವಾದವಿದಾಗಿದೆ.

ಕವಿಸೇನಾಪತಿ ಕಾವ್ಯಶಾಸ್ತ್ರವನಸಿಂಹಂ ಭೀಮಸೇನಂ ಕಣಾ ।
ನವಪಾಕಕ್ಕೆ ಗುರೋರ್ಗುರುಂ ರಸಿಕ ಮುಖ್ಯರ್ಗೀತನ್ನೆ ಮೇಣು ಮಾ ॥
ನವರೋಳಿಪ್ಪ ಮನಸ್ಸಿನೆಲ್ಲ ಬಗೆದೋರಲ್ ದರ್ಪಣಂ ಸಾಮ್ಯಗಂ
ರಿವಗೀ ಕನ್ನಡ ಕಾಲಿದಾಸ ನಿಗತಿ ಪ್ರಖ್ಯಾತ ಲಕ್ಷ್ಮೀಶಗೆ॥

ತಾವೇಕೆ ಈ ಅನುವಾದವನ್ನು ಕೈಗೊಂಡಿರೆಂಬುದನ್ನು ತಮ್ಮ ಕೃತಿಯಲ್ಲಿ ಹೇಳಿಕೊಂಡಿದ್ದಾರೆ. ತ್ವರಿತವಾಗಿ ಮುಗಿಯಲೆಂದು ತಾವು ಬಳಸಿಕೊಂಡ ವಿಧಾನವನ್ನು ಅವರು ಚರ್ಚಿಸಿದ್ದಾರೆ.

ಕವಿಲೋಲಕ್ಕೆ ನರೇಶ್ವರಂ ನವರಸಂ ಸೂರಲ್ ಮಹಾಮೇಘ ಮಾ।
ಧವ ಮೇಣ್ ಬಲ್ಲ ರಸಜ್ಞಭೃಂಗ ತತಿಗಾ ಗೀರ್ವಾಣ ಭಾಷಾವನಂ॥
ತದೆ ಸೌಂದರ್ಯಕೆ ತಂದ ಚಂದ್ರಮ ಮನೋಭಾವ ಪ್ರಕಾಶಕ್ಕೆ ತಾಂ।
ರವಿಮುನ್ ಪೇಳ್ದನಿದನ್ನು ಸಂಸ್ಕೃತದೊಳಾ ಶ್ರೀಕಾಳಿದಾಸಾಖ್ಯನು॥
ಇದಭಿಜ್ಞಾನ ಶಕುಂತಲಾಖ್ಯಕೃತಿಯುಂ ಭಾಷಾಂತರಂ ತಮ್ಮ ತ-
ಮ್ಮ ದರೋಳ್ಮಾಡಿದರೆಲ್ಲ ನಾಡದ(ಡಿನ) ಜನರ್ ಕರ್ನಾಟಕದೋಳಿಲ್ಲೆಲ್ಲೈ॥
ಮುದಿವಂದಟ್ಟುವದಲ್ಲದೆನ್ನ ಮರಣಂ ಯಾವಾಗಲೊ ಎಂದು ಸಿ-।
ಕ್ಕಿದ ಶಬ್ದಂಗಳನ್ನಿಟ್ಟು ಶೀಘ್ರತರದಿಂದೀ ಕೃತ್ಯಮಂಗೈದೆ ನಾಂ॥.

ಕಾಳಿದಾಸನ ಶಾಕುಂತಲವನ್ನು ಕನ್ನಡದ ಜನರಿಗೆ ಕೊಡಬೇಕೆಂಬ ಉದ್ದೇಶದಿಂದ ನಾಟಕವನ್ನು ಅನುಸರಿಸಿ ಸಂಸ್ಕೃತದ ಕೃತಿಯೊಂದನ್ನು ಕನ್ನಡಿಸುವ ಆಶಯ ಅವರದಾಗಿತ್ತು. ಈವಾಗಲೇ ಪ್ರತಿಯೊಂದು ದೇಶಭಾಷೆಯಲ್ಲಿ ಮಾತ್ರವಲ್ಲದೆ ಯುರೋಪಿನಲ್ಲೂ ಪ್ರಸಿದ್ಧವಾದ ಈ ನಾಟಕ ಕನ್ನಡ ಭಾಷೆಯಲ್ಲಿ ಇಲ್ಲದಿರುವುದು ಕಂಡು ಅವರು ಅದನ್ನು ಪರಿವರ್ತಿಸಿದರು. ನಾಟಕದ ಭಾಷೆ ಜನ ಸಾಮಾನ್ಯರ ಆಡುನುಡಿಯಾಗಿರಬೇಕು ಎಂಬ ತತ್ವಕ್ಕನುಸಾರವಾಗಿ ತಮ್ಮ ಪ್ರಾದೇಶಿಕ ಆಡುನುಡಿಯಲ್ಲಿಯೇ ಬರೆದುದು ಒಂದು ಗಮನಾರ್ಹ ಸಮಗತಿ. ವಿದೂಷಕ ಹಾಗೂ ಮೀನುಗಾರ ಇವೆರಡೂ ಪಾತ್ರಗಳನ್ನು ಹೊರತುಪಡಿಸಿ ಉಳಿದೆಲ್ಲಾ ಪಾತ್ರಗಲು ಶಿಷ್ಟ ಸಮಾಜದಲ್ಲಿ ವಾಡಿಕೆಯಾಗಿರುವ ಭಾಷೆಯನ್ನೇ ಬಳಸುತ್ತವೆ. ಪದಗಳು ಸಾಮಾನ್ಯ ಜನರು ಹೇಳುವ ರಾಗಗಳಂತೆ ಇವೆ. ಕನ್ನಡನಾಡು, ನುಡಿ ಎಂಬ ಚಿಂತನೆಯೇ ಇಲ್ಲದ ಕಾಲದಲ್ಲಿ ಮೂಡಿಬಂದ ಈ ನಾಟಕ ಕನ್ನಡ ಭಾಷೆಯೊಳಗಿನ ಪ್ರಾದೇಶಿಕ ವೈಲಕ್ಷಣ್ಯವನ್ನು ತೋರಿಸಿಕೊಡುತ್ತದೆ.

ಎರಡನೆಯ ಅಂಕದಲ್ಲಿ ವಿದೂಷಕನು ರಾಜನನ್ನು ಕೇಳುತ್ತಾನೆ.

ವಿದೂಷಕ: ಭೋ ವಯಸ್ಸಯ ಯದ್ವೇತಸಃ ಕುಬ್ಜಲೀಲಾಂ ವಿಡಂಬಯತಿ ತತ್ಕಿಮಾತ್ಮನಃ ಪ್ರಭಾವೇಣನನು ನದೀವೇಗಸ್ಯ।

ಬಸವಪ್ಪಶಾಸ್ತ್ರಿ: ಎಲೈ ಮಿತ್ರನೇ, ನೀರಹಬ್ಬೆಗಿಡ ಬಾಗಿರುವುದು ತನ್ನ ಪ್ರಭಾವದಿಂದಲೋ ಅಥವಾ ನದೀವೇಗದ ಪ್ರಭಾವದಿಂದಲೋ ?.

ಆದನ್ನೇ ಚುರಮರಿಯವರು "ನನ್ನ ವಡ್ಯಾ, ನದ್ಯಾಗ ಬೆಳೆದ ನಿಂತ ಹುಲ್ಲು ತನ್ನ ತಾನ ಬಾಗತತ್ಕೋ ಏನ್ ನದಿ ಸೆಳವಿಗೋ ? ಎಂಬುದಾಗಿ ಅನುವಾದಿಸಿದ್ದಾರೆ. ಇಲ್ಲಿ ಬಸವಪ್ಪಶಾಸ್ತ್ರಿಗಳ ಅನುವಾದಕ್ಕಿಂತಲೂ ಚುರುಮರಿಯವರದು ಸರಳ,ಸುಂದರ, ಸುಲಲಿತ ಆಡುಭಾಷೆಯಲ್ಲಿ ಅನುವಾದಿಸಿದ್ದಾರೆ.

ವಿದೂಷಕ: ಕಿಂ ಮೊದಕಖಾದಿಕಾಯಾಮ್ ? ಚುರುಮುರಿಯವರು ವಿದೂಷಕನ ಈ ವಚನವನ್ನು ಹನುಮನಾಯಕನ ಬಾಯಿಂದ ಶಾವಿಗೀ ಉಣ್ಣೋದೇನ ಎನ್ನಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಶಿಷ್ಟ ಸಂಪ್ರದಾಯಕ್ಕನುಗುಣವಾಗಿ ಏನು ಕಡುಬು ಮೆಲ್ಲುವುದರಲ್ಲೋ ? ಎಂದಿದ್ದಾರೆ. ನಾಲ್ಕನೆಯ ಅಂಕದಲ್ಲಿ ಪ್ರಿಯಂದದೆ, ಅನುಸೂಯೆಯರು ಗೆಳತಿಯಾದ ಶಕುಂತಲೆಯ ಸ್ಥಿತಿಯನ್ನು ಕಮಡು ದುಃಖಿಸಿ ಹೇಳುವ ಪದ್ಯ ಪ್ರೇಕ್ಷಕರಿಗೆ ಸೂಚ್ಯವಾಗಿ ಪರಿಸ್ಥಿತಿಯನ್ನು ನಿರ್ಣಯಿಸುವ ಕ್ರಿಯೆಯಲ್ಲಿ ತೊಡಗಿಸುತ್ತದೆ.

ಮೋಸಮಾಡಿ ಪೋದನಮ್ಮಾ । ಆ ರಾಜ ಋಷಿಯು
ಮೋಸ ಮಾಡಿ ಪೋದನಮ್ಮಾ ॥ ವನವಾಸಿ ನಿಮ್ಮ ॥ಪಲ್ಲ॥

ಈ ಸಖಿಯಳ ಮೆರೆವ ಭರಿದ
ಮೀಸಲು ಯೌವನವ ಕಂಡು ।
ಆ ಸಮಯಕೆ ತನ್ನ ಕೆಲಸ
ತಾ ಸಾಧಿಸಿಕೊಂಡು ಎಮ್ಮೊಳು ॥ಅನು ಪಲ್ಲ ॥

ಮೈಸೂರು ಮಹಾರಾಜ ಕಾಲೇಜಿನಲ್ಲಿದ್ದ ಬಿ.ಕೃಷ್ಣಪ್ಪನವರು ಶಾಕುಂತಲವನ್ನು ಅಚ್ಚ ಹೊಸಗನ್ನಡದಲ್ಲಿ ಪಠ್ಯ ಪುಸ್ತಕರೂಪದಲ್ಲಿ ಅನುವಾದಿಸಿದ್ದಾರೆ. ಶ್ಲೋಕಗಳನ್ನು ಸರಳವಾಗಿ ಸಾಮಾನ್ಯರಿಗೂ ಅರ್ಥವಾಗುವಂತೆ ಗದ್ಯಾನುವಾದ ಮಾಡಿದ್ದಾರೆ. ಮೂಲ ಪ್ರತಿಕೃತಿಯಲ್ಲಿ ಇದ್ದಕ್ಕಿದ್ದಂರತೆಯೇ ಸುಮನೋಹರವಾಗಿ ಕನ್ನಡಿಸಿದ್ದಾರೆ.

ಮೊದಲನೆಯ ಅಂಕಿನಲ್ಲಿ ಶಕುಂತಲೆಯನ್ನು ಅಗಲುವಾಗ ಕಾಳಿದಾಸನ ದುಷ್ಯಂತನು ಹಿಗೆ ಹೇಳುತ್ತಾನೆ;

ಗಚ್ಛತಿ ಪುರ ಶರೀರಧಾವತಿ ಪಶ್ವಾತ್ ಅಸಂಸ್ತುತಂ ಚೇತಃ
ಚೀನಾಂಶುಕಮಿದ ಕೇತೋಃ ಪ್ರತಿವಾತಃ ನೀಯಮಾನಸ್ಯ ॥

ಇದನ್ನು ಬಸವಪ್ಪಶಾಸ್ತ್ರಿಗಳು ;

ಮುಂದಕೆ ಪೋಪುದು ತನುವಿದು ।
ಪಿಂದೆಸೆಗೋಡುವುದು ಬಳಿಕೆಗೈಯ್ಯದ ಮನವೇ ॥
ನೆಂದೆಪೆನೋ ಪವನನಿದಿರೊಳ್ ।
ತಂದ ಪತಾಕಿಕೆಯ ಚೀನವಸನ ಮಿದೆಂದೊಲ್ ॥

ಎಂದಿದ್ದಾರೆ. ಬಿ.ಕೃಷ್ಣಪ್ಪನವರು ಇದನ್ನೇ 'ಗಾಳಿಗೆ ಇದಿರಾಗಿ ಚಲಿಸುತ್ತಿರುವ ಧ್ವಜಸ್ತಂಭದ ಹಾಗೆಯೇ ನನ್ನ ಶರೀರವು ಮುಂದೆ ಮುಂದಕ್ಕೆ ಚಲಿಸುತ್ತಿರುವುದು;(ಧ್ವಜಸ್ಥವಾದ) ಚೀನಾಂಶುಕದಂತೆಯೇ ನನ್ನ ಮನಸ್ಸು ಅಸಂಸ್ಥಿತವಾಗಿ ಹಿಂದು ಹಿಂದಕ್ಕೆ ಓಡುತ್ತಿದೆ ಎಂದು ಗದ್ಯದಲ್ಲಿ ಹೇಳಿದ್ದಾರೆ. ಬೇಟೆರಾಯ ದೀಕ್ಷಿತರು ಆನಂಥ ಭೈರವಿ ರಾಗದಲ್ಲಿರುವ ಎಂತು ಪೋಗುವೆನೀಗ ನಗರಕ್ಕೆ । ಸನ್ನಿವೇಶಕ್ಕೆ । ಕಂತುಸರಾಳಿಯ ಚಿಮತೆಯೊಳಿನ್ನು ॥ಪ॥ ಕುಟಿಲನೇತ್ರೆಯ ಭಾವರೀತಿಯಂ । ಚಿತ್ತ ರೀತಿಯಂ॥ ದಿಟ್ಟವಾಗಿಯೆನ್ನೊಳು ಘಟಿಸಿದ ಪರಿಯಂ ।೧॥ ಮತ್ತಸಾಮಜಹಂಸಗತಿಯನ್ನು । ಸ್ಮರಿಸುತಲಿ । ಚಿತ್ತವು ಬಹುತರದಮಾಗಿಹುದು ।೨॥ ರಾಮಣೀಯಕ ಕಾಂತಿರಾಗಿಣಿ । ಮನೋಹಾರಿಣಿ॥ಶ್ಯಾಮಸುಂದರಿದಿವ್ಯಾ। ಲೋಕನಚತುರೆ॥.

ಇಂಥಾ ಸುಂದರಿಯನ್ನು ಬಿಟ್ಟು ನಾನೆಂತು ನಗರಕ್ಕೆ ಹೋಗುವೆನು. ಶಕುಂತಲ ವ್ಯಾಪಾರದಿಂದ ಚಿತ್ತವನ್ನು ಹಿಂತಿರುಗಿಸಲು ಅಸಾಧ್ಯವು ॥ ಈ ರೀತಿಯಾಗಿ ಗದ್ಯ ರೂಪದಲ್ಲಿ ಕನ್ನಡಿಸಿದ್ದಾರೆ.

ಚುರುಮರಿ ಶೇಷಗಿರಿರಾಯರು ಈ ರೀತಿ ಪದವಾಗಿ ರಚಿಸಿದ್ದಾರೆ.

ಬರಲಾರದೆನ್ನಮನ ॥ ಎನ್ನೊಡನೆ ॥ಪಲ್ಲ॥
ಜನುಮದ ಸ್ನೇಹದ । ತನುವಿನೊಳಿರೆ ಪರ ॥
ತನುವಿಯ ಕೋಮಲ । ತನುವ ಬಯಿಸಿ ತಾ ॥೧॥

ಶರೀರ ಮುಂದಕೆಕ ಪೋಗು । ತಿರಲು ರಥದ ಕೇತು ॥
ವಿರದೆ ಹಿಂದಕ್ಕೆ ಜಗ್ಗು । ತಿರುವಾ ತೆರದೊಳು ॥೨॥

ಲಲಿತ ರೂಪದ ಸರ।ದೊಳು ನೇತ್ರಗಳಿನ ॥
ದಳದ ಮೋಹದ ಲತಾ।ವಲಯದಿ ಸಿಲುಕಿ ॥೩॥

ಎರಡನೆಯ ಅಂಕಿನಲ್ಲಿ ದುಷ್ಯಂತನು ಶಕುಂತಲೆಯ ಲಾವಣ್ಯವನ್ನು ವರ್ಣಿಸಿದ್ದಾನೆ.

ಚಿತ್ರೇ ನಿದೇಶ್ಯ ಪರಿಕಲ್ಪಿತಸತ್ವಯೋಗಾ।
ರೋಪೋಚ್ಚಯೇನ ಮನಸಾ ವಿಧಿನಾ ಕೃತಾ ನು॥
ಸ್ತ್ರೀರತ್ನ ಸೃಷ್ಟಿರ್ಪಪರಾ ಪ್ರತಿಭಾತಿ ಸಾ ಮೆ।
ಧಾತುರ್ವಿಭುತ್ವಮನುಚಿಂತ್ಯ ವಪುಶ್ಚ ತಸ್ಯಾಃ॥

ಬಸವಪ್ಪಶಾಸ್ತ್ರಿಗಳು :

ಪ್ರಾಣಂ ಬೋಯ್ದನೊ ಚಿತ್ರಿಸುತ್ತಮವಳಿಂ ಸೌಂದರ್ಯಸಾರಂಗಳಿಂ॥
ಮಣಿವಲ್ಲಭನೋವೊ ನಿರ್ಮಿಸಿದನೋ ಮೇಣ್ ಚಿತ್ತದಿಂಗೆಯ್ದನೋ॥
ಚಾಣಂ ಬ್ರಹ್ಮನ ಮತ್ತುಮಾಕೆಯೊಡಲಂ ನೋಡಲ್ಕದೇನೆಂದಪೆಂ॥
ಕ್ಷೋಣೀ ಭಾಗದೆ ಬೇರೆತೋರ್ಕುಮೆನಗಾಸ್ತ್ರೀರತ್ನ ಸೃಷ್ಟಿಕ್ರಮಂ॥

''ಬ್ರಹ್ಮನ ನಿರ್ಮಾಣ ಸಾಮರ್ಥ್ಯವನ್ನೂ ಆಕೆಯ (ಅನುಪಮ)ಶರೀರವನ್ನು ಪರಿಶೀಲಿಸಲು, ಬ್ರಹ್ಮನು ಮನಸ್ಸಿನಲ್ಲೇ ಸೌಂದರ್ಯಸಾರಗಳಿಂದ ಒಂದು ಚಿತ್ರವನ್ನು ವಿರಚಿಸಿ ಅದಕ್ಕೆ ಪ್ರಾಣಸಾರವನ್ನು ಏನಾದರೂ ಹೊಯ್ದನೋ ಏನೋ ! ನನಗಂತೂ ಆ ಸ್ತ್ರೀರತ್ನದ ಸೃಷ್ಟಿಕ್ರಮವು ಬೇರೆಯೆಂದೇ ತೋರುವುದು' ಎಂದು ಬಿ. ಕೃಷ್ಣಪ್ಪನವರು ಈ ರೀತಿಯಾಗಿ ಪರಿವರ್ತಿಸಿದ್ದಾರೆ.

ಶೇಷಗಿರಿರಾಯರು ಪದರೂಪದಲ್ಲಿ ಈ ರೀತಿಯಾಗಿ ಬರೆದಿದ್ದಾರೆ;

ಬಣ್ಣಿಸಲ್ಹ್ಯಾಂಗಿನ್ನು ॥ ನುಡಿಯಲಿ ಲಾ-
ವಣ್ಯದ ಖಣಿಯನ್ನು ॥ಪಲ್ಲ॥

ಕಣ್ಣೊಳು ಕಟ್ಟಿದಾ ಹೆಣ್ಣಿನ ರೂಪವು।
ಎನ್ನೊಳನಂಗನ ಸನ್ನಿಧಿಯಂತಿರೆ ॥ ಅನು ಪಲ್ಲ॥

ಮೊದಲು ಮನಸುಗೊಳ್ಳು ॥ ವಿಧಿಯು ಚಿತ್ರ॥
ಮುದದಿಂದೆ ಬರೆದಿಟ್ಟು ॥
ಅದರ ಮೈಯೊಳು ಜೀವದ ಕಳೆಯನು ತುಂ।
ಬಿದ ಮ್ಯಾಲಿಳೆಯೊಳಗುದಭವಿಸಿದಳೇನೋ ॥೧॥,

ಕೈನಡಗುವುದೆಂದು ॥ ವಿಧಾತನು ।
ಧ್ಯಾನದೊಳಗೆ ತಂದು ॥
ಮೌನದಿಂದತಿಶಯ ಮೋಹದ ರೂಪವ ।
ಧೇನಿಸಿ ಪಡೆದಿಹ ಮಾನಸ ಪುತ್ರಿಯೋ ॥ ೨ ॥

ಎಂದಿಗೆ ಬರಬೇಕೈ ॥ ಬ್ರಹ್ಮನಿಗಿಂಥ ।
ಸುಂದರ ಕೃತಿ ಸಾಕೈ ॥
ಇಂದಿರಾ ರೂಪವ ಚೆಂದದಿ ಕಲಿತವ।
ಳಂದದೊಳಿಳಿಸಿಹನಿಂದೀವರಾಕ್ಷಿಯ ॥ ೩ ॥

ಮೂರನೆಯ ಅಂಕಿನಲ್ಲಿ ಶಕುಂತಲೆ ಪ್ರೇಮಪತ್ರವನ್ನು ಬರೆಯುತ್ತಿರುವಾಗ ಅವಳನ್ನು ಕಾಳಿದಾದ ಈ ರೀತಿಯಾಗಿ ವರ್ಣಿಸಿದ್ದಾನೆ.

ಬಸವಪ್ಪಶಾಸ್ತ್ರಿಗಳು ಕಂದ ಪದ್ಯವಾಗಿ ಈ ರೀತಿ ರಚಿಸಿದ್ದಾರೆ;

ಮೃದುಪದ ಬಂಧವನೆಸಗುವ ।
ಸುದತಿಯ ನಿಮಿರ್ದೆತ್ತಿದೊಂದು ಪುರ್ವಿಂ ಮೆರೆವೀ ॥
ವದನಂ ಪುಲಕಂಗೊಡಿದ ।
ಕದಪಿಂ ಕನ್ನಡಿ ಪುದೆನ್ನೊಳಿರ್ಪಭಿರತಿಯಂ ॥

ಬಿ.ಕೃಷ್ಣಪ್ಪನವರು ಇದನ್ನೇ ''ಪದ್ಯವನ್ನು ರಚಿಸುತ್ತಿರುವ ಈಕೆಯ ಎತ್ತಿದ ಒಂದು ಭೂಲತೆಯುಳ್ಳ ಮುಖವು ಪುಲಕಿತವಾದ ಕಪೋಲಗಳ ಮೂಲಕ ನನ್ನಲ್ಲಿ (ನೆಲಸಿ)ರುವ ಅನುರಾಗವನ್ನು ಪ್ರಕಟಗೊಳಿಸುವುದು'' ಇದನ್ನೇ ಶೇಷಗಿರಿರಾಯರು ಸಂದರ್ಭವನ್ನು ಕುರಿತು ಪದವನ್ನು ರಚಿಸಿದ್ದಾರೆ.

ಪದವ ರಚಿಸುತಿಹಳು ಚಂದಿರವದನೆ ಮನದೊಳು ॥ ಪಲ್ಲ ॥
ಹೃದಯದಾಸೆದೋರಲು ಬಲು । ಹೆದರಿ ।ಬೆದರಿ।ಚದುರಿ।ಮಧುರಿ ॥ಅನುಪಲ್ಲವಿ॥

ಕರದಿಗಲ್ಲವಿರಿಸಿ ಒಂದೇ ಕಡೆಗೆ ನೋಡುತಾ ।
ಬೆರಳಿನಿಂದೆ ಮೆಲ್ಲನೆ ಮೃದು ತಾಳಮೆಳ್ದುತಾ ॥

ಸಿರಿವನೊಲಿಯೆ ಪಣೆಯೊಳು ಕರಿ ।
ಸುರುಳು ಗುರುಳು ಉರುಳುತಿರಲು ॥೧॥

ತವಕದಿಂದಲುಚಿತ ಸೂಚಿಸಿರಲು ಹಿಗ್ಗುತಾ ।
ಕವನರಸದಿ ಕೆನ್ನೆಯೊಳು ಮುಳ್ಳು ನಾಂಟುತಾ ॥
ಕವಿಯ ಬಾಷ್ಪಕಣ್ಣೊಳುಕ್ಕು - ।
ತಿದೆತನುವತಿ ನಾಟಕ ಯುವತಿ ।೨॥

ಒಂದೇ ಭೂಲತೆಯ ಬಾಲೆ ಮ್ಯಾಲಕೆತ್ತುತಾ ।
ಹೊಂದಿಬರಲು ರಚನೆ ಸಣ್ಣ ಸ್ವರದಿ ನುಡಿಯುತಾ ॥
ಬಂಧನ ಸೌಂದರಿಯದಾ - ।
ನಂದದಿಂದ ಮಿಂದು ಒಂದು ॥೩ ॥

೪. ಪತಿಗೃಹಕ್ಕೆ ಹೊರಡುವಾಗ ಉತ್ಕಾಂಠಿತೆಯಾದ ಶಕುಂತಲೆಯನ್ನು ಕುರಿತು ಕಾಳಿದಾಸನು ಕಣ್ವನು ಹೇಳಿದ ಮಾತನ್ನು ಹೀಗೆ ಹೇಳಿದ್ದಾನೆ.

ಅಭಿಜನವತೋ ಭರ್ತುಃ ಶ್ಲಾಘ್ಯೇ ಸ್ಥಿತಾ ಗೃಹಿಣೀ ಪದೇ ॥
ವಿಭವಗುರುಭಿಃ ಕೃತ್ಯೈಸ್ತಸ್ಯ ಪ್ರಶಿಕ್ಷಣಮಾಕುಲಾ ॥
ತನಯಮಚಿರಾತ್ಪ್ರಾಜೀವಾರ್ಕಂ ಪ್ರಸೂಯ ಚಪಾವನಂ ।
ಮಮವಿರಹಚಾಂ ನತ್ವಂ ವತ್ಸೇ ಶುಚಃ ಗಣಯಿಷ್ಯಸಿ ॥

ಬಸವಪ್ಪಶಾಸ್ತ್ರಿಗಳು :

ಕುವರಿ ಕುಲೀನನಾದ ಪತಿಗೊಪ್ಪುವ ಪಟ್ಟದ ರಾಣಿಯಾಗಿ ವೈ ॥
ಭವಗಳಿನೇಳ್ಗೆವೆತ್ತಿನನ ಕೃತ್ಯದೊಳಾಕುತಿಯಾಗುತಾವಗಂ ॥
ರವಿಯನಮರ್ತ್ಯನಾಥದಿಶೆ ತಾಂ ಪಡೆವಂತೆ ಸಗಾತ್ರ ಪುತ್ರನಂ ।
ತವಕದೆ ಪೆತ್ತು ನೀನೆಣಿಸದಿರ್ಪೆ ಮದೀಯ ವಿಯೋಗ ದುಃಖವಂ ॥

ಬಿ. ಕೃಷ್ಣಪ್ಪನವರು :

'ಕುಲೀನವಾದ ಪತಿಯಿಂದ ಶ್ಲಾಘ್ಯವಾದ ಗೃಹಿಣೀ ಪದವನ್ನು ಪಡೆದವಳಾಗಿ ಆತನ ವಿಭವೋಪೇತವಾದ ಮಹಾ ಕಾರ್ಯಗಳಲ್ಲಿ ಪ್ರತಿಕ್ಷಣವೂ ನಿರತಳಾಗಿರುತ್ತಾ ಪ್ರಾಚೀನ ವನಿತೆಯು ಆದಿತ್ಯನನ್ನು ಪ್ರಸವಿಸುವಂತೆ ನೀನು ಸ್ವಲ್ಪ ಕಾಲದಲ್ಲಿಯೇ ತನಯನನ್ನು ಪಡೆಯುವುದರಿಂದ ನನ್ನ ವಿಯೋಗ ದುಃಖವನ್ನು ನೀನು ಅನುಭವಿಸದಂತಾಗುವುದು''.

ಶೇಷಗಿರಿರಾಯರು :

ಆಗಲಿ ಪೋಗುವುದಕ್ಕೆ ದುಃಖವ್ಯಾಕೆ ॥ ಪಲ್ಲ ॥
ಮಗುವೆ ನಿನ್ನಯ ಪತಿಯು ಜಗದೊಡೆಯನಮ್ಮಾ ॥ ಅನುಪಲ್ಲ ॥

ಅತಿಕುಲೀನನೆ ನಿನ್ನ ಪತಿಯವನ ಮನೆಯೊಳಗೆ
ಸತಿಯಾಗಿ ಬಾಳ್ವುದೆ ಶ್ಲಾಘ್ಯ ನಿನಗೆ
ಮತಿಯೆಲ್ಲ ಮುಳುಗಿ ಸಂತತ ನಿನ್ನ ಮನೆಯ ಬಹು ।
ಕೃತಿಗಳೆಗಳು ತವರ್ಮನೆಯ ಸ್ಮೃತಿಯಾಗದಮ್ಮಾ ॥ ೧ ॥

ಇನನು ಪ್ರಾಚಿಯಳೊದಯವನೆ ಗೈದ ತೆರದನಂತೆ ।
ತನಯ ನಿನ್ನೊಳು ಪುಟ್ಟಲಂಕದೊಳು ॥
ಅನುದಿನದೊಳಿಳ್ದು ಮೋಹದಿ ಮುದ್ದಿಸಲು ಬಂಧು ।
ಜನವಿರಹದಿಂದಾದ ಕಷ್ಟವೆಲ್ಲಹುದು ॥ ೨ ॥

ಪರಿಪರಿಯ ವಿಭವದೊಳು ಪತಿಯೊಡನೆ ಹರುಷದೊಳು ।
ಸರಸ ಸವಿ ಮಾತುಗಳ ಸೌಖ್ಯ ಬಹಳು ॥
ಮರಿಸಿಬಿಡುವುದು ನಮ್ಮ ನರಗಳಿಗೆಯೊಳು ನೀ ತ - ।
ವರ ಮನೆಯ ನೆನಿಸುವದು ಬಹು ದಿನದ ಕನಸು ॥ ೩ ॥

ಕಾಳಿದಾಸನ ಪ್ರಸಿದ್ಧ ಶ್ಲೋಕವಾದ

ಅರ್ಥೋಹಿ ಕನ್ಯಾ ಪರಕೀಯ ಏವ ತಾಮದ್ಯ ಸಂಪ್ರೇಕ್ಷ್ಯ ಪರಿಗ್ರಹೀತುಃ ।
ಜಾತೋ ಮಮಾಯಂ ವಿಶದಃ ಪ್ರಕಾಮಂ ಪ್ರತ್ಯರ್ಪಿತನ್ಯಾಸ ಇವಾಂತರಾತ್ಮಾ ॥

ಬಸವಪ್ಪಶಾಸ್ತ್ರಿಗಳು :

ಕನ್ನೆ ಪೆರರೊಡವೆ ಗಡ ಪತಿ
ಸನ್ನಿಧಿನಿಂದವಳ ಕಳುಹಿ ನಿರ್ಮಲವಾದ
ತ್ತೆನ್ನಯ ಮಾನಸಮಾದಂ
ತನ್ನಯ ಬಳಿಯಿಟ್ಟೊಡವೆಯ ಮಗುಳಿತ್ತನವೊಲ್

ಶೇಷಗಿರಿರಾಯರು :

ಕಂದ ॥ ತಿಣ್ಣಾಗಿಹ ತಲೆ ಹೊರೆಯಿದು
ಹಣ್ಣಾಗಿಹ ಬಾಳೆಗೊನೆ ಗಿಡದ ಬಾಗಿಸುವಾ ॥
ಅನ್ಯರ ಧನವಿದು ಮನೆಯೊಳ್ ।
ಹೆಣ್ಣಿರಬಾರದು ಬಹುದಿವಸ ತವರುಮನೆಯೊಳ್ ।

ಬೇಟೆರಾಯ ದೀಕ್ಷಿತರು :

ಕಂದ ॥ ಕನ್ನೆಯು ಪರಕೀಯಾರ್ಥವು ।
ನಿರ್ಣಯವದನಾನುಕಳುಹಿಕೃತಕಕೃತ್ಯನಸಂ ॥
ಪನ್ನನು ನಿರ್ಮಲನಾದೆನು ।
ಇನ್ನಾತರ ಚಿಂತೆಯನ್ನಪೊಂದವಪರಿಯೋಳ್ ॥

ಪರಕೀಯಾರ್ಥವಾದ ಕನ್ಯೆಯನ್ನು ಪತಿಗೃಹಕ್ಕೆ ಕಳುಹಿಸಿ ನಿರ್ಮಲಾಂತಃ ಕರಣನಾದೆನು. ಆದರೆ ಚುರಮರಿಯವರ ಅನುವಾದ ತುಂಬಾ ಭಿನ್ನವಾಗಿದೆ. ಆದರೂ ಅದು ಬಸವಪ್ಪಶಾಸ್ತ್ರಿಗಳಿಗಿಂತ ಎನ್ನುವ ತರತಮಕ್ಕಿಂತ ಆದರ್ಶ ಅನುವಾದವೆನಿಸಿದೆ. ಕಾಳಿದಾಸನ ಶ್ಲೋಕಗಳನ್ನು ಗರ್ಭೀಕರಿಸಿ ಪದರಚಿಸುವ ಅವರ ಅನುವಾದ ಕ್ರಮ ಗಮನೀಯ ಸಂಗತಿ. ಮುದವೀಡು ಕೃಷ್ಣರಾಯರು ಹೇಳುವಂತೆ ''ಮೂಲ ಶಾಕುಂತಲದಲ್ಲಿರುವ ಅಗಾಧವಾದ ಕಲ್ಪಾನಾ ಚಮತ್ಕೃತಿ, ಅಸದೃಶ್ಯವಾದ ವರ್ಣನಾಚಾತುರ್ಯ, ಅನನ್ಯ ಸಾಧಾರಣವಾದ ಅಲಂಕಾರ ನಿಯೋಜನೆ ಮೊದಲಾದ ಕಾಳಿದಾಸನ ಕಲಾ ವೈಶಿಷ್ಟ್ಯಗಳನ್ನು ಅಚ್ಚಗನ್ನಡತದ ಮುಸಿಯಲ್ಲಿ ಎರಕ ಹೊಯ್ಯುವಾಗ ಶೇಷಗಿರಿರಾಯರು ತಮಗೆ ನಿಸರ್ಗಸಿದ್ಧವಾದ ಕವಿತ್ವ, ಪ್ರತಿಭೆಯ ಪ್ರಭಾವದಿಮದ ಚೆನ್ನಾಗಿ ವಿಕಾಸಗೊಳಿಸಿ ಮೂಲಕೃತಿಯ ಅಂದಚಂದಗಳಿಗೆ ಹೆಚ್ಚಿನ ಸಿಂಗಾರವನ್ನು ತಂದುಕೊಟ್ಟಿದ್ದಾರೆ. ಕಾಳಿದಾಸನ ಸೂತ್ರರೂಪವಾದ ಒಂದೆರಡು ಮಾತುಗಳನ್ನು ವಿಸ್ತಾರಗೊಳಿಸಿ ವಿಶದಪಡಿಸುವಾಗ ಕನ್ನಡ ಕವಿಕುಲದ ಕಲಾಭಿಸಂಧಾನಕ್ಕೆ ಒಪ್ಪುವ ತೆರನಾಗಿ ಭಾಷ್ಯಕಾರನ ಜಾಣ್ಮೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ''.

ಶಾಕುಂತಲವನ್ನು ಕನ್ನಡಿಸುವಲ್ಲಿ ಅನುವಾದಕರೆಲ್ಲರೂ ತಮ್ಮದೇ ಆದ ವಿಶಿಷ್ಟ ಮಾರ್ಗವೊಂದರಿಂದ ಸಾಗಿದ್ದಾರೆ. ಬಸವಪ್ಪಶಾಸ್ತ್ರಿಗಳ ಅರಮನೆ ಪರಿಸರಕ್ಕೂ, ಶೇಷಗಿರಿರಾಯರ ರಂಗಭೂಮಿ ಪರಿಸರಕ್ಕೂ ನಂತರ ಬಂದ ಇನ್ನುಳಿದ ಅನುವಾದಗಳ ಪರಿಸರಕ್ಕೂ ತುಂಬಾ ವ್ಯತ್ಯಾಸವಿದೆ. ಆದರೂ ಈ ಅನುವಾದಗಳನ್ನೆಲ್ಲಾ ನೋಡಿದಾಗಲೂ ಅನುವಾದಕರು ಏಕಸೂತ್ರತೆಯೊಂದನ್ನು ಕಾಯ್ದುಕೊಂಡಿದ್ದಾರೆ. ಮಾರ್ಗಿ ಎನ್ನುವುದಕ್ಕಿಂತ ಅಭಿಜಾತವಾದ ಈ ಪ್ರಕ್ರಿಯೆ

ಯಲ್ಲಿ ಚೆನ್ನಾಗಿ ಕೆಲಸ ಮಾಡಿದೆ (ಬಿ. ಕೃಷ್ಣಪ್ಪನವರ ಅನುವಾದ ಶೈಕ್ಷಣಿಕ ಶಿಸ್ತಿಗೆ ಒಳಪಟ್ಟಿದೆ ಎಂಬುದು ವಿಧಿತ ಸಂಗತಿ). ಚೇಟೆರಾಯ ದೀಕ್ಷಿತರು ಸಂಸ್ಕೃತ-ಕನ್ನಡ ದ್ವಿಭಾಷಾ ಪ್ರೌಢಿಮೆಯಿಂದ ಅನುವಾದ ವನ್ನು ಕೈಗೊಂಡಿದ್ದಾರೆ. ಬಹುತೇಕ ದ್ವಿಭಾಷೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು, ಪಾಂಡಿತ್ಯ ಪ್ರೌಢಿಮೆ ಯಿಂದ ಪ್ರಚುರಪಡಿಸಿದ ಕೃತಿ ಇದಾಗಿದೆ ಎನಿಸುತ್ತದೆ. ಬಿ. ಕೃಷ್ಣಪ್ಪನವರಂತೂ ಸರಳ ಗದ್ಯಾನುವಾದಿಂದ ಕ್ರಮವಹಿಸಿಕೊಂಡರೆ ವೀಕ್ಷಿತರು ಮೊದಲ ಅಂಕುಗಳಲ್ಲಿ ಯಥಾವತ್ತಾಗಿ ಶ್ಲೋಕ ಗಳನ್ನು ಹಾಗೆಯೇ ಇಟ್ಟು ಸಂಭಾಷಣೆಯನ್ನು ತೀರ ಸಂಸ್ಕೃತ ಭೂಯಿಷ್ಠವಾಗಿ ರಚಿಸಿದ್ದಾರೆ. ಇನ್ನು ಕೆಲವು ಅಂಕುಗಳಲ್ಲಿ ಶ್ಲೋಕಗಳನ್ನು ಗದ್ಯಾನುವಾಗಿಸಿದ್ದಾರೆ. ಮತ್ತೆ ಕೆಲವು ಅಂಕುಗಳಲ್ಲಿ ಕಂದಗಳಾಗಿ ಅನುವಾದಿಸಿದ್ದಾರೆ. ಕಾಳಿದಾಸನ ವಿಸ್ತಾರ ಗದ್ಯಪದ್ಯಗಳನ್ನು ಮೊಟಕುಗೊಳಿಸಿ ಸಂಗ್ರಹಾನುವಾದ ವಾಗಿಸಿದ್ದಾರೆ. ಇನ್ನು ತೀರ ಇತ್ತೀಚಿನ ದಶಕಗಳಲ್ಲಿ ಬಂದಿರುವ ರೈನಾಪುರ ಅದರ ಶಾಕುಂತಲ ಅನುವಾದ ಹೊಸಗನ್ನಡದ ರೂಪ ಹೊಂದಿದ್ದು, ಬಸವಪ್ಪಶಾಸ್ತ್ರಿಗಳನ್ನು ಬಹಳಷ್ಟು ಅನುಕರಿಸಿದಂತಿದೆ.

ಉದಾ:- ರೈ -ಕುಲಪತಿಗಳು ಆಶ್ರಮದಲ್ಲಿರುವರೋ.

ಬಸವಪ್ಪಶಾಸ್ತ್ರಿ - ಕುಲಪತಿಗಳಾದ ಕಣ್ವರು ಆಶ್ರಮದಲ್ಲಿರುವರೇ ?

ರೈ - ಮಗಳಾದ ಶಕುಂತಲೆಯನ್ನು ಅತಿಥಿ ಸತ್ಕಾರಕ್ಕೆ ನೇಮಿಸಿ ಆಕೆಯ ಪ್ರತಿಕೂಲ ದೈವ ಶಮನಾರ್ಥವಾಗಿ ಇದೆ. ಈಗ ಸೋಮತೀರ್ಥಕ್ಕೆಕ ಹೋದರು.

ಬಸವಪ್ಪಶಾಸ್ತ್ರಿ - ಪುತ್ರಿಯಾದ ಶಕುಂತಲೆಯನ್ನು ಅತಿಥಿ ಸತ್ಕಾರಕ್ಕೆ ನೇಮಿಸಿ, ಆಕೆಯ ಪ್ರತಿಕೂಲದೈವ ಶಮನಾರ್ಥವಾಗಿ ಸೋಮತೀರ್ಥಕ್ಕೆ ಈಗ ತಾನೇ ಹೋಗಿರುವರು.

ರೈ - ಆಗಲಿ, ಆಕೆಯನ್ನೇ ಕಾಣುವೆನು. ಆಕೆಯು ನನ್ನ ಭಕ್ತಿಯನ್ನು ಮಹರ್ಷಿಗೆ ತಿಳಿಸುವಳು.

ಬಸವಪ್ಪಶಾಸ್ತ್ರಿ - ಆಗಲಿ, ಆಕೆಯನ್ನು ಕಾಣುವೆನು. ಆ ಮಹರ್ಷಿಗೆ ನನ್ನ ಭಕ್ತಿಯನ್ನು ಆಕೆಯೇ ವಿಜ್ಞಾಪಿಸುವಳು.

ಹೀಗೆ ತುಂಬಾ ಸಾಮ್ಯಗಳು ಈ ಎರಡೂ ಅನುವಾದಗಳಲ್ಲೂ ಇರುತ್ತವೆ. ಆದರೂ ವೃತ್ತಗಳನ್ನು ಸ್ವಂತ ಪ್ರತಿಭೆಯಿಂದ ಅನುವಾದಿಸಿರುವುದು ಕಂಡುಬರುತ್ತದೆ.

ಬಸವಪ್ಪಶಾಸ್ತ್ರಿಗಳು : ಆವುದು ಧಾತೃಸೃಷ್ಟಿಗೆ ಮೊದಲ್ ಹುತಹವ್ಯಮನಾಂಪುದಾವುದಿ
ನ್ನಾವುದು ಹೋತೃ ಶಬ್ದಗುಣಮಾವುದವಾವುವು ಕಾಲಕರ್ತೃಗಳ್
ಆವುದುಸಿರ್ ಜಗಕ್ಕೆಲ್ಲಸಿರ್ವರಾವುದ ಭೂತಕಾಲ ಪ್ರಧಾನ ಮೆಂ
ದುವೊಡಲೆಂಟರಿಂದೆ ಮರೆವೀಶನೊಡರ್ಚುಗೆ ನಿಮ್ಮ ಭೀಷ್ಟವಂ.

ಹೀಗೆ ವೃತ್ತಗಳನ್ನು ತನ್ನದೇ ಆದ ಶೈಲಿಯಲ್ಲಿ ರಚಿಸಿದ್ದಾರೆ. ರೈನಾಪುರ ಅವರ ಅನುವಾದವು ಬರಲು ಕಾರಣವನ್ನು ಅವರೇ ಹೇಳುವಂತೆ ''ಚುರಮರಿಯವರ ನಾಟಕದಲ್ಲಿಯ ಪದಗಳು ನೆಟ್ಟಗಿದ್ದರೂ ಅದರೊಳಗಿನ ಕವಿತೆಗಳನ್ನು ಓದಲಿಕ್ಕೆ ಸಾಹಿತ್ಯ ಪ್ರೇಮಿಗಳಿಗೆ ಮನಸಾಗುವುದಿಲ್ಲ. ಯಾಕೆಂದರೆ ಅವುಗಳಲ್ಲಿ ವ್ಯಾಕರಣಕ್ಕೂ ಛಂದಸ್ಸಿಗೂ ವಿರುದ್ಧವಾದ ನೂರಾರು ಪ್ರಯೋಗಗಳಿರುವವು. ಈ ಕಾರಣದಿಂದಲೇ ಕರ್ಣಾಟಕ ಕವಿಚರಿತ್ರೆಯಲ್ಲಿ ಈ ನಾಟಕಕ್ಕೆ ದೊರೆಯಬೇಕಾದ ಸನ್ಮಾನವು ದೊರೆತಿವುದಿಲ್ಲ.

(೨) ಬಸವಪ್ಪಶಾಸ್ತ್ರಿಗಳ ಶಾಕುಂತಲ ನಾಟಕವು ಸರ್ವಮಾನ್ಯವಾಗಿರುವುದು. ಆದರೆ ಅದರಲ್ಲಿ ಕಂದ ಪದ್ಯಗಳೇ ವಿಶೇಷವಾಗಿರುವುದರಿಂದ ಓದುವವರಿಗೆ ಬೇಸರಿಕೆ ಬರುವಂತಿರುವುದು.

(೩) ಸೂಲಿಬೆಲೆ ಡಿ. ಶ್ಯಾಮರಾಯರ ಶಾಕುಂತಲ ನಾಟಕವು ನಾಟಕ ಮಾಡುವ ಜನರಿಗಾಗಿಯೇ ಬರೆದಂತೆ ತೋರುವುದು. ಅದು ಸಂಕ್ಷಿಪ್ತವಾಗಿರುವುದರಿಂದ ಅದರಲ್ಲಿ ಸರ್ವಸ್ವಾರಸ್ಯವು ಬಂದಿರುವುದಿಲ್ಲ. ಮೇಲಾಗಿ ಶ್ಯಾಮರಾಯರ ಕವಿತೆಗಳು ಅಷ್ಟೇನು ಮೋಹಕವಾಗಿಲ್ಲ.

ಆ ಪರಿತೋಷಾದ್ವಿದುಷಾಂ ನ ಸಾಧು ಮನ್ಯೆ ಪ್ರಯೋಗ ವಿಜ್ಞಾನಮ್ ।
ಬಲವದಪಿ ಶಿಕ್ಷಿತಾನಾಮಾತ್ಮನ್ಯ ಪ್ರತ್ಯಯಂ ಚೇತಃ ॥

ಎಂಬ ಕಾಳಿದಾಸನ ವೃತ್ತವನ್ನು ಬಸವಪ್ಪಶಾಸ್ತ್ರಿಗಳು ಕಂದ ಪದ್ಯವಾಗಿದ್ದಾರೆ.

ರಸಿಕರ್ಕಳೊಪ್ಪುವನ್ನೆಂ
ರಸಾಭಿನಯ ಕೌಶಲಂಗಳೊಳ್ಳಿದುವೆನುತಾ
ನುಸಿರೆಂ ವಲಮೋದಿದ ಮಾ
ನಿಸರ್ಗಂ ತಮ್ಮೊಳಗೆ ತಮಗೆ ನಂಬುಗೆಯಿಲ್ಲಂ.

ರೈನಾಪುರ ಅವರು ಅದೇ ಬಗೆಯ ವೃತ್ತಗಳಲ್ಲಿ ಅರ್ಥಾತ್ ಕಾಳಿದಾಸ ಬರೆದಿರುವ ಅನುಷ್ಟುಪ್ ಆರ್ಯಾ ವೃತ್ತಗಳನ್ನು ಕನ್ನಡದಲ್ಲಿ ಯಥಾವತ್ತಾಗಿ ಅನುವಾದಿಸಿದ್ದಾರೆ. ಕನ್ನಡದ ಕ್ವಚಿತ್ ಪ್ರಯೋಗಗಳಲ್ಲಿರುವ ಈ ವೃತ್ತಗಳಲ್ಲಿಯೇ ಅನುವಾದಿಸಿರುವುದು ಅವರ ಪ್ರತಿಭೆಯ ದ್ಯೋತಕ.

ಬಲ್ಲರ್ಗಳ್ ತಣಿವನ್ನಂ। ಚೆಲ್ವೆಂದರಿಯೆಂ ಪ್ರಯೋಗ ವಿಜ್ಞಾನಂ॥
ನಲ್ಲಳೆ, ವಲಮೋದಿದರ್ಗು। ಮಿಲ್ಲಂ ತಮ್ಮೊಳಗೆ ವಿಶ್ವಾಸಂ॥

ಪ್ರಯೋಗ ವಿಜ್ಞಾನಮ್ ಎಂಬುದನ್ನು ರೈನಾಪುರ ಅವರು ಪ್ರಯೋಗವಿಜ್ಞಾನಮ್ ಎಂದು ಉಳಿಸಿಕೊಂಡರೆ ಬಸವಪ್ಪಶಾಸ್ತ್ರಿಗಳು ಅರಮನೆಯ ನಾಟ್ಯಶೈಲಿಗೆ ಅನುಗುಣವಾಗಿ ''ರಸಾಭಿನಯ ಕೌಶಲಂಗಳೊಳ್ಳಿದುವೆನುತ'' ಎಂದಿದ್ದಾರೆ. ಅದನ್ನು ಸುಲಲಿತ ಕಂದ ಪದ್ಯವಾಗಿಸಿದ್ದಾರೆ. ವಿದುಷಾಂ ಎಂಬ ಕಾಳಿದಾಸನ ಪದ ಪ್ರಯೋಗವನ್ನು ರೈನಾಪುರವರು ಹೊಸಗನ್ನಡದ ಧಾಟಿಯಂತೆ ಬಲ್ಲರ್ಗಳ್ ಎಂದರೆ, ಬಸವಪ್ಪಶಾಸ್ತ್ರಿಗಳು ರಸಿಕ ಎಂದಿದ್ದಾರೆ ಶಬ್ದ ಪ್ರಯೋಗದ ವಿಶಿಷ್ಟತೆ ಸಾಂದರ್ಭಿಕತೆಯನ್ನು ಹೇಗೆ ಅನುಸರಿಸುತ್ತದೆ. ಅನುವಾದಕನೊಬ್ಬನಿಗೆ ಹೇಗೆ ಆಯಾ ಪರಿಸರ ಹೇಗೆ ಪ್ರಭಾವ ಬೀರುತ್ತದೆ ಎಂಬುದನ್ನು ಈ ಧೋರಣೆಗಳು ವ್ಯಕ್ತಪಡಿಸುತ್ತವೆ.

ಬಸವಪ್ಪಶಾಸ್ತ್ರಿಗಳು :

ಕೊರಲಂ ತಾಂ ಕೊಂಕುಗೈಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನ
ಟ್ಟಿರೆ ನೋಟಂ ಬಾಣಪಾತಕ್ಕಾಗಿ ದುರುಕಿರುಸುತಂ ಪೃಷ್ಠಮಂ ಮಾರ್ಗದೊಳ್ತಿಂ
ವಿರೆ ನೀಡುಂ ಬಿಟ್ಟಬಾಯಿಂ ಶ್ರಮದುದಿರ್ವರೆಮೆಲ್ದಿರ್ದ ದರ್ಭಾಂಕುರಂಗಳ್
ಧರೆಯಲ್ಲೋರೊಮ್ಮೆ ಕಾಲಿಟ್ಟಿಜಹಹ ನಿರುಕಿಸ್ಯೆ ಬಾನೊಳೇ ಪಾರಿಪೋಕುಂ॥

ಅದಾಗಲೇ ಬಂದ ಅನುವಾದಗಳಲ್ಲಿರುವ ಕೊರತೆಯನ್ನು ಗಮನಿಸಿ ವಿಶಿಷ್ಟ ಬಗೆಯಲ್ಲಿ ರೈನಾಪುರವರು ಅನುವಾದಿಸಿದ್ದಾರೆ. ಆದರೂ ಅವರು ಹೇಳುವಂತೆ ಚುರಮರಿ ಶೇಷಗಿರಿರಾಯರ ಪದಗಳು ವ್ಯಾಕರಣದಿಂದ, ಛಂದಸ್ಸಿನಿಂದ ವಿರುದ್ಧವಾಗಿವೆಯೆಂಬುದು ಎಷ್ಟರಮಟ್ಟಿಗೆ ಉಚಿತ. ಚುರಮರಿಯವರು ಈ ಅನುವಾದ ಪ್ರಕ್ರಿಯೆಯನ್ನು ಹುಟ್ಟು ಹಾಕಿದವರು. ಒಂದು ಹೊಸ ತಂತ್ರವನ್ನು ತಿಳಿಸುಲವಲ್ಲಿ (ಮನಗಾಣಿಸುವಲ್ಲಿ) ಯಾವ ರೀತಿಯ ತೊಂದರೆಗಳಿರುತ್ತವೆಂಬುದನ್ನು ಅಂದಿನ ಸಾಂದರ್ಭಿಕತೆಯನ್ನು ಗಮನಿಸಿದಾಗ ಗೊತ್ತಾಗುತ್ತಿವೆ. ಕನ್ನಡ ಸಾಹಿತ್ಯಕ್ಕೆ ರಂಗಭೂಮಿಗೆ ಅವರ ಕೃತಿ ಎಷ್ಟು ಅಗತ್ಯವಿತ್ತೆಂಬುದನ್ನು ಆಕೃತಿ ನಿರ್ವಹಿಸಿದ ಕಾರ್ಯದಿಂದ ಗೊತ್ತಾಗುತ್ತದೆ. ಅದು ಸಾಮಾನ್ಯ ವರ್ಗವನ್ನು ಎದುರಿಗಿದ್ದು ಬರೆದ ಕೃತಿ. ಪ್ರಾದೇಶಿಕ ಸೊಗಡನ್ನು ಬಿಂಬಿಸುವಂತೆ, ಸಾಮಾನ್ಯ ಪ್ರೇಕ್ಷಕ ವರ್ಗವೊಂದನ್ನು ಸೆರೆ ಹಿಡಿಯುವ ತಂತ್ರವಾಗಿ ಪ್ರಯೋಗಿಸಿದ ಕೃತಿ ಅದು. ಅದು ಮಹಾರಾಷ್ಟ್ರ ರಂಗಭೂಮಿಯನ್ನು ಎಷ್ಟೋ ಕಾಲ ಆಳಿತೆಂಬ ಉಲ್ಲೇಖವನ್ನು ಗಮನಿಸಿದರೆ ಅದರ ಐತಿಹಾಸಿಕ ಮಹತ್ವ ಗೊತ್ತಾಗುತ್ತದೆ.

ಶಾಕುಂತಲದ ವಿವಿಧ ಅನುವಾದಗಳನ್ನು ನೋಡಿದಾಗ ಶೇಷಗಿರಿರಾಯರ ಬಸವಪ್ಪಶಾಸ್ತ್ರಿಗಳ ಅನುವಾದಗಳು ಒಂದು ಬಗೆಯ ಸಾಂಸ್ಕೃತಿಕ ಮುಖಾಮುಖಿಯನ್ನು ಎದುರಿಸುತ್ತಿವೆ. ಏಕಕಾಲಕ್ಕೆ ರಂಗ ಕೃತಿ। ಸಾಹಿತ್ಯ ಕೃತಿ ಎಂಬ ಮುಖಾಮುಖಿಯೊಡನೆ ಹುಟ್ಟಿ ಬಂದ ಈ ಕೃತಿಗಳು ಅಷ್ಟೇ ಮಹತ್ವದ ಸ್ಥಾನ ವನ್ನು ಪಡೆದಿವೆ. ಮೂಲತಃ ಸಂಸ್ಕೃತ ನಾಟಕಕಾರರ ಕೃತಿಗಳು ಉತ್ಸವ । ಮಹೋತ್ಸವಗಳ ಕಾಲಕ್ಕೆ ಮನರಂಜನೆ ಮಾರ್ಗವಾಗಿ ಹುಟ್ಟಿಬಂದಿವೆ. ಹಾಗಾಗಿ ಕಾಳಿದಾಸ। ಭಾಸನ ನಾಟಕಗಳು ಸಾಹಿತ್ಯ ಪಠ್ಯವೇ। ರಂಗಪಠ್ಯವೇ, ಸಾಹಿತ್ಯ ಕೃತಿಯೊಂದು ಆಂಗಿಕ ಅಭಿನಯಗಳಿಂದ ರಂಗವನ್ನೇರಿದಾಗ ರಂಗ ಕೃತಿಯಾಗಿ ಕಲೆ ಎನಿಸಿಕೊಳ್ಳುತ್ತದೆ. ಇದನ್ನೇ ಕೆ.ವಿ. ಸುಬ್ಬಣ್ಣನವರು ಹೀಗೆನ್ನುತ್ತಾರೆ'' ಸಾಹಿತ್ಯ ನಾಟಕವನ್ನು ದೃಶ್ಯವಾಗಿ ರೂಪಿಸುವುದು ಹಾಗೂ ಸಾಹಿತ್ಯ ನಾಟಕವೂ ಸಾಮಗ್ರಿಯಾಗಿ ದೃಶ್ಯ ಕೃತಿಯೊಂದನ್ನು ಸೃಷ್ಟಿ ಸುವುದು ಇವೆರಡರ ನಡುವಣ ಭೇದ ತುಂಬ ಸೂಕ್ಷ್ಮವಾದದ್ದು. ರಂಗಕೃತಿಯೆನ್ನುವುದು ಭಾಷಾ ನಾಟಕದ ಅಮೂರ್ತ ಶಿಲ್ಪವನ್ನು ಆಂಗಿಕವಾಗಿ ಪರಿಕರಸಮೇತ ಮೂರ್ತಗೊಳಿಸುವಂಥದು ಆಗುತ್ತದೆ.

ನಾಟ್ಯಶಾಸ್ತ್ರಕಾರನ ದೃಷ್ಟಿಯಲ್ಲಿ ರಂಗಕೃತಿ ಸಾಹಿತ್ಯ ನಾಟಕ ಮೂಲವಾದ್ದಲ್ಲ. ಪ್ರಯೋಕ್ತೃ ಮೂಲವಾದದ್ದು. ಸಾಹಿತ್ಯ ನಾಟಕವೊಂದರಲ್ಲಿನ ಅನುಭವಗಳೇ ದೃಶ್ಯವಾಗಿ ಪರಿವರ್ತಿಸಲ್ಪಟ್ಟು ರಂಗ ಕೃತಿಯಾಗುವುದಿಲ್ಲ. ಬದಲು ಪ್ರಯೋಗಕಾರನ ಜಾಣ್ಮೆಯ ಮೂಲಕ ಅಭಿನಯ ಮಾಧ್ಯಮದಲ್ಲಿ ಸೃಷ್ಟಿಸಿಕೊಡುವುದು ರಂಗಕೃತಿ. ಭಾರತೀಯರ ಈ ಕಲ್ಪನೆಗೆ ವಿರುದ್ಧವಾದದ್ದು ಗ್ರೀಕ್ ಕಲ್ಪನೆ. ಸಂಸ್ಕೃತದ ಸಾಹಿತ್ಯಕ ನಾಟಕಗಳು ಸಮೃದ್ಧವಾಗಿ ಸೃಷ್ಟಿಗೊಂಡ ಮೇಲೆ ಈ ಕಲ್ಪನೆ ಬದಲಾಗಿರಬಹುದು. ಆನಂತರ ಈ ಸಾಹಿತ್ಯ ನಾಟಕಗಳ ಪ್ರಭಾವ ಹೆಚ್ಚಿರಬಹುದು. ಹಾಗಾಗಿ ಸಂಸ್ಕೃತ ನಾಟಕಕಾರರನ್ನು ಅನುವಾದಿಸಿದ ಕನ್ನಡ ಲೇಖಕರು ಬಹುಶಃ ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ.

ಶಾಸ್ತ್ರಿಗಳ ಶಾಕುಂತಲದ ಅನುವಾದದಲ್ಲೂ ಕೆಲವು ನ್ಯೂನ್ಯತೆಗಳಿವೆ. ಒಟ್ಟಾರೆ ತೊಡಗಿ ಕೊಂಡಿರುವ ಪ್ರಕ್ರಿಯೆಯಲ್ಲಿ ಗೆದ್ದಿದ್ದಾರೆ. ಅಭಿಜ್ಞಾನ ಶಾಕುಂತಲ ಪದ್ಯಗಳನ್ನು ನೋಡಿದಾಗ ಸ್ವರೂಪವೆನ್ನುವುದು ಗೊತ್ತಾಗುತ್ತದೆ.

ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ದತ್ತದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟಃ ಶರಪತನ ಭಯಾದ್ಭೂಯಸಾ ಪೂರ್ವ ಕಾಯಂ
ಶಷ್ಪೈರರ್ಧಾವಲೀಢೈಃ ಶ್ರಮಿವಿತತ ಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ.

ಅನು : ಕೊರುಂ ತಾಂ ಕೊಂಕುಗೈಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನ
ಟ್ಟಿರೆ ನೋಟಂ ಬಾಣಪಾತಕ್ಕಾಗಿ ದುರುಕಿರುಸುತಂ ಪೃಷ್ಠಮಂ ಮಾರ್ಗದೊಳ್ ತೀ
ವಿರೆ ನೀಡುಂ ಬಿಲ್ಪಿಬಾಯಿಂ ಶ್ರಮದುದಿರ್ವರೆಮೆಲ್ಪರ್ನ ದರ್ಭಾಂಕುರಂಗಳ್
ಧರೆಯಲ್ಲೋರೊಮ್ಮೆ ಕಾಲಿಟ್ಟಿಹಹ ನಿರುಕಿಸೈ ಬಾನೊಳೇ ಪಾರಿಪೋಕುಂ

ಅಹಹ ಎಂಬ ಉದ್ಗಾರ ಮೂಲದಲ್ಲಿ ಇಲ್ಲ. ಮೂಲದಲ್ಲಿರುವ ಜಿಂಕೆಯ ನೋಟದ ಅಭಿರಾಮ ಎಂಬ ವಿಶೇಷಣ ಇಲ್ಲಿಲ್ಲ.

ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀ ವೃತ್ತಿಂ ಸಪತ್ನಿ ಜನೇ
ಭರ್ತುರ್ವಿ ಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ
ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇವಂ ಗೃಹಿಣೀ ಪದಂ ಯುವತಯೋ ವಾಮಾಃ ಕುಲಸ್ಯಾಧಯಃ.

ಅನು : ಪಿರಿಯರ್ ಸೇವೆಗೆಯ್ ಸವತಿಯರ್ಕರೊಳಿಷ್ಟವಯಸ್ಯೆಯಂದದಿಂ
ದಿರು ಪತಿ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದೆಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದರನ್ವಯಕಾಧಿಯನ್ನುಂಟು ಮಾಳ್ವರಾ.

''ಭಾಗ್ಯೇಷ್ವನುತ್ಸೇಕಿನೀ'' ಎಂಬುದನ್ನು 'ಭಾಗ್ಯದೆಬಾಗಿರು' ಎಂದು ಕನ್ನಡಿಸಿರುವುದು, 'ಗೃಹಿಣಿ' ಗರತಿಯಾದುದು ಸಮುಚಿತ. ಆದರೆ 'ವಾಮಾಃ ಕುಲಸ್ಯಾಧಯಃ' ಎನ್ನುವಲ್ಲಿ 'ವಾಮಾಃ' ಎಂಬುದನ್ನು 'ಇಂತಿರದರ್' ಎಮದು ಅನುವಾದಿಸಿರುವುದು ನ್ಯೂನತೆಯೆನಿಸಿದೆ. 'ವಾಮಾ' ಶಬ್ದಕ್ಕೆ ವಿರುದ್ಧ ಎಂಬ ಅರ್ಥ ಮಾತ್ರವಲ್ಲದೆ, 'ಕೆಟ್ಟ' ಎಂಬ ಅರ್ಥವೂ ಇದೆ. ಇಂತಿರದರ್ ಎನ್ನುವಲ್ಲಿ ನೇತ್ಯಾತ್ಮಕವಾದ ಒಂದು ಅರ್ಥವನ್ನು ಮಾತ್ರ ಗ್ರಹಿಸಿದ್ದಾರೆ. ಇತ್ಯಾತ್ಮಕವಾದ ಅರ್ಥವನ್ನು ಹಿಡಿದಿಲ್ಲ.

ಕೇವಲ ನ್ಯೂನತೆಗಳಷ್ಟೇ ಅಲ್ಲದೇ ಮೂಲಕ್ಕಿಂತ ಸುಭಗ, ಸುಂದರ ಅನುವಾದವೂ ಬಸವಪ್ಪಶಾಸ್ತ್ರಿಗಳ ಅನುವಾದದಲ್ಲಿ ಮೂಡಿಬಂದಿದೆ.

ಉದಾ : ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ ಸಂಸ್ಪೃಷ್ಟಮುತ್ಕಾಂಠಯಾ
ಕಂಠಸ್ತಂಭಿತ ಬಾಷ್ಪವೃತ್ತಿ ಕಲುಷಶ್ಚಿಂತಾಜಡಂ ದರ್ಶನಂ
ವೈಕ್ಲವ್ಯಂ ಮಮ ತಾವದೀದೃಶಮಿದಂ ಸ್ನೇಹಾದರಣ್ಯೌಕಸಃ
ಪೀಡ್ಯಂತೇ ಗೃಹಿಣಃ ಕಥಂ ನು ತನಯಾ ವಿಶ್ಲೇಷ ದುಃಖೈರ್ನವೈಃ

ಅನು : ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದಪಳೆಂದು ಕಂಠಮು
ಮ್ಮಳಿಸುವುದೊತ್ತು ವಶ್ರುಭರದಿಂ ಜಡಮಾದುದು ದೃಷ್ಟಿ ಚಿಂತೆಯಿಂ
ದಳಲಿನಿತಾಗೆ ಕಾಡ ಮನುಜಂಗೆನಗಂ ಕಡುನೇಹದಿಂದ ಮಿ
ನ್ನುಳಿದ ಗೃಹಸ್ಥರಾತ್ಮ ಭವೆಯಂ ಕಳುಪುತ್ತಕಡೆಂತಳಲ್ವರೋ

ಹೃದಯಂ ಸಂಸ್ಪೃಷ್ಟ ಎನ್ನುವುದನ್ನು ಕಳವಳವಾಂತುದೆನ್ನೆರ್ದೆ ಎಂಬುದು ಎಷ್ಟು ಸಮಯೋಚಿತವೆನಿಸುತ್ತದೆ. ಉತ್ಕಂಠಯಾ ಕಂಠಸ್ತಂಭಿತ ಬಾಷ್ಪವತ್ತಿ ಎನ್ನುವುದನ್ನು ಕಂಠಮುಮ್ಮಳಿಸುವುದೊತ್ತು ಅಶ್ರುಭರವಿಂ ಎಂದು ಅನುವಾದಿಸಿದ್ದಾರೆ. ''ಯಾಸ್ಯತ್ಯದ್ಯ'' ಎಂಬ ಪದ್ಯದಲ್ಲಿರುವುದು ಒಂದು ಉತ್ಕಟ ಕರುಣ ಸಂದರ್ಭ ಆದರೆ ಕಾಳಿದಾಸನ ಶೈಲಿ ಅದಕ್ಕೆ ಅನುರೂಪವಾಗಿರದೆ, ಮಹಾಪ್ರಾಣಾಕ್ಷರ, ಮೂರ್ಧನ್ಯಾಕ್ಷರ, ಸಂಯುಕ್ತಾಕ್ಷರಗಳಿಂದ ನಿಬಿಡವಾಗಿ ಸ್ವಲ್ಪ ಕರ್ಕಶವೆನಿಸಿದರೆ ಬಸವಪ್ಪ ಶಾಸ್ತ್ರಿಗಳ ಅನುವಾದ ಸಮಯೋಚಿತ ಮಾರ್ದವ ಲಾಲಿತ್ಯಗಳನ್ನೊಳಗೊಂಡಿದೆ.

ಮಹಾಪ್ರಾಣಾಕ್ಷರ, ಮೂರ್ಧನ್ಯಾಕ್ಷರ, ಸಂಯುಕ್ತಾಕ್ಷರಗಳಿಂದ ಕಾಳಿದಾಸನ ಶೈಲಿ ತುಸು ಪೌರುಷವೆನಿಸುತ್ತದೆ. ಬಸವಪ್ಪಶಾಸ್ತ್ರಿಗಳ ಶೈಲಿ ಮಾರ್ದವ ಲಾಲಿತ್ಯಗಳನ್ನು ತಳೆದು ಪ್ರಸಂಗೋಚಿತವಾಗಿದೆ. 'ಳ' ಕಾರ 'ಲ'ಕಾರಗಳನ್ನು ಗಮನಿಸಿದಾಗ ಶಬ್ದಾಲಂಕಾರವೆಂದು ಜೋಡಿಸಿಟ್ಟ ಬಂಧವೆನಿಸದೆ ಸ್ಫುರಣೆಗೊಂಡ ಪ್ರತಿಭಾ ಶಕ್ತಿ ಎಂದು ಗೋಚರಿಸುತ್ತದೆ. ಕಣ್ವರ ಆಶಯವನ್ನು ಶಾಸ್ತ್ರಿಗಳ ಶೈಲಿ ಯಶಸ್ವಿಯಾಗಿ ಸಂವಾದಿಯಾಗಿಸಿದೆ. ಆದರೆ ಈ ಅನುವಾದದಲ್ಲೂ ಒಂದು ಲೋಪವಿದೆ. ''ಯಾಸ್ಯತ್ಯದ್ಯ'' ಎನ್ನುವಲ್ಲಿನ ' ಅದ್ಯ' (ಇಂದು) ಎಂಬುದನ್ನು ಶಾಸ್ತ್ರಿಗಳು ಕೈಬಿಟ್ಟಿದ್ದಾರೆ. ಶಕುಂತಲೆ ಎಂದೋ ಹೋಗುವುದಾಗಿದ್ದರೆ ಕಣ್ವರಂಥ ಸಂಯಮಿಗೆ ಅಷ್ಟೊಂದು ದುಃಖವಾಗುತ್ತಿರಲಿಲ್ಲ. ಅವಲೂ ಇಂದೇ ಹೋಗುತ್ತಿರುವದರಿಂದ ಅವಿರಗೂ, ಅಳಲು, ಕಟ್ಟಿಕೊಂಡದ್ದೆಲ್ಲ ಕಟ್ಟೆಯೊಡೆದು ಹೊಮ್ಮುವುದು ಕಡೆಯ ಗಳಿಗೆಯಲ್ಲಿ ತಾನೆ. ಆದ್ದರಿಂದ ' ಅದ್ಯ' ವರ್ಜಿತವಾದುದು ಸಾಧುವಲ್ಲ''.

ಪಾತುಂ ನ ಪ್ರಥಮಂ ವ್ಯವಸ್ಯತಿ ಜಲಂ ಯಷ್ಮಾ ಸ್ವಪೀತೇಷು ಯಾ
ನಾಧತ್ತೇ ಕ್ರಿಯಮಂಡನಾಪಿ ಭವತಾಂ ಸ್ನೇಹೇನ ಯಾ ಪಲ್ಲವಮ್
ಆದ್ಯೇ ವಃ ಕುಸುಮ ಪ್ರಸೂತಿ ಸಮಯೇ ಯಸ್ಯಾ ಭವತ್ಯುತ್ಸವಃ
ಸೇಯಂ ಯಾತಿ ಶಕುಂತಲಾ ಪತಿಗೃಹಂ ಸರ್ವೈರನುಜ್ಞಾಯತಾಮ್.

ಅನು : ಜಲವನದಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುದಂ
ತಳಿರ್ಗಳಿ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ
ಅಲರ್ಗಳ ನೀವು ತಾಳೆ ಮೊದಲುತ್ಸವವಾಂತಪಳಾವಳು ಶಕುಂ
ತಳೆ ಪತಿಸದ್ಮ ಕೈವಿದ ಪಳಾಕೆಗನುಜ್ಞೆಯ ನೀವುದೆಲ್ಲರುಂ.

ಇಲ್ಲಿ ಕರುಣರಸ ಪ್ರತಿಪಾದ್ಯ. ಕರ್ಕಶವರ್ಣಗಳಿಗಿಂತ ಕೋಮಲ ವರ್ಣಗಳೇ ಇಲ್ಲಿ ಅರಸನನ್ನು ಸುಮಧುರವಾಗಿ ಪೋಷಿಸುತ್ತವೆ. ಬಸವಪ್ಪಶಾಸ್ತ್ರಿಗಳ ಅನುವಾದದಲ್ಲಿ ತಳಿರ್ಗಳ, ಅಲರ್ಗಳ ಎಂಬ 'ಲ' ಕಾರ 'ಳ' ಕಾರಗಳ ಸಂಯೋಗದಿಂದ ವರ್ಣ ವ್ಯವಸಾಯ ಚೆನ್ನಾಗಿ ಪೋಷಣೆ ಪಡೆದಿದೆ. ಚಂಪಕಮಾಲಾ ವೃತ್ತದ ಲಯವನ್ನು ಹೊಂದಿದೆ. ಈ ಅನುವಾದದಲ್ಲೂ ಒಂದು ಕೊರತೆಯಿದೆ. ''ಮೊದಲ ಪಾದವನ್ನು ಶಾಸ್ತ್ರಿಗಳು ಬದಲಾಯಿಸಿಬಿಟ್ಟಿದ್ದಾರೆ. ನೀವು ಕುಡಿಯದೆ, ಯಾರು ನೀರು ಕುಡಿಯಲು ಯತ್ನಿಸಲಿಲ್ಲವೋ'' ಎಂಬುದು ವಾಸ್ತವವಾಗಿ ಅದರ ಅರ್ಥ. ಗಿಡಗಳೂ ನೀರು ಕುಡಿಯುತ್ತವೆ. ಶಕುಂತಲೆಯ ಪಾಲಿಗೆ ಅವೂ ಜೀವಂತ ವ್ಯಕ್ತಿಗಳೇ ಶಾಸ್ತ್ರಿಗಳು ಶಕುಂತಲೆಯ ಬಗೆಗೆ ಮಾತ್ರ ಅದನ್ನಿಟ್ಟು ಕೊಂಡಿದ್ದಾರೆ. ' ಎರೆದಲ್ಲದೆ ಪಾತೆಗಂಬುದಂ' ಎಂದಿದ್ದಾರೆ. ಮೂಲದಲ್ಲಿ ಪಾತೆಯ ಪ್ರಸಕ್ತಿಯೇ ಇಲ್ಲ.

ಜಲವನದಾವಳೀಂಟಳೆರೆದಲ್ಲದೆ ಎಂಬ ಪದ್ದ್ಯದಲ್ಲಿ 'ಳ' ಕಾರ, 'ಲ'ಕಾರಗಳ ಪ್ರಾಚುರ್ಯವಿದೆ. ಅದು ಪ್ರಜ್ಞಾಪೂರ್ವಕ ಶಬ್ದಾಲಂಕಾರಾವಲ್ಲ. ತನ್ಮಯತೆಯ ಫಲ ಈ ಶೈಲಿ ಕೋಮಲ ಭಾವ ವ್ಯಂಜಕವಾಗಿದ್ದು, ಪ್ರಸಾದಗುಣ ಗರ್ಭಿತವಾಗಿದೆ. ಬಸವಪ್ಪಶಾಸ್ತ್ರಿಗಳ ಭಾಷಾಂತರ ಮೂಲಕ್ಕಿಂತ ಹೆಚ್ಚು ಸಮರ್ಥವಾಗಿ ಸಂವಹನಗೊಳ್ಳುತ್ತದೆ.

ಬಸವಪ್ಪಶಾಸ್ತ್ರಿ ಹಾಗೂ ಚುರಮರಿಯವರ ಅನುವಾದಗಳೆರಡನ್ನೂ ಗಮನಿಸಿದಾಗ ಅನುವಾದಕರ ಧೋರಣೆಗಳು ವ್ಯಕ್ತವಾಗುತ್ತವೆ. ಎಲ್ಲಾ ಅನುವಾದಗಳು ಅವುಗಳದ್ದೇ ಆದ ಕೆಲವು ನ್ಯೂನ್ಯತೆಗಳನ್ನು ಎದುರಿಸುತ್ತಿವೆ. ಕರ್ನಾಟಕದ ಕವಿಚರಿತ್ರೆಯಲ್ಲಿ ಪಾಲನ್ನು ತೆಗೆದುಕೊಳ್ಳದೇ ಹೋದರೂ ಐತಿಹಾಸಿಕವಾಗಿ ಪ್ರಪ್ರಥಮ ಅನುವಾದಿತ ಕೃತಿಯೆಂಬ ದಾಖಲೆಯಿದೆ. ಆ ಹಿನ್ನೆಲೆಯಲ್ಲಿ ಈ ಅನುವಾದಗಳ ತೌಲನಿಕ ಅಧ್ಯಯನವೇ ಪ್ರಾಮುಖ್ಯವನ್ನು ಪಡೆಯುತ್ತದೆ.

ಶೇಷಗಿರಿರಾಯರ ಅನುವಾದ ಮೂಲಕ್ಕಿಂತ ವಿಸ್ತಾರವಾಗಿದೆ. ಅತಿಯಾದ ಗಮಕ ಪ್ರಾಸ ಅರ್ಥ ಸುಭಗತೆಗೆ ಅಡ್ಡಿಯಾಗಿದೆ. ಬಸವಪ್ಪಶಾಸ್ತ್ರಿಗಳ ಅನುವಾದದಲ್ಲಿ ಅರ್ಥಸ್ಪಷ್ಟತೆ ಪ್ರೌಢಿಮೆ ಮತ್ತು ಸಂಕ್ಷೇಪ ಎದ್ದು ಕಾಣುತ್ತವೆ. ಬಸವಪ್ಪಶಾಸ್ತ್ರಿಗಳ ಹಳಗನ್ನಡ ವೃತ್ತದಲ್ಲಿದ್ದರೆ, ಶೇಷಗಿರಿರಾಯರದು ನಡುಗನ್ನಡ ಷಟ್ಪದಿಯಲ್ಲಿದೆ.

ಅಲಕ್ಷ್ಯದಂತಮಕುಲಾನನಿಮಿತ್ತ ಹಾಸ್ಯೈ
ರ ವ್ಯಕ್ತ ವರ್ಣ ರಮಣೀಯ ವಚಃ ಪ್ರವೃತ್ತೀನ್
ಅಂಕಾಶ್ರಯ ಪ್ರಣಯಿಸಸ್ತನಂಯಾನ್ ವಹಂತೌ
ಧನ್ಯಾಸ್ತದಂಗ ರಜಸಾ ಮಲಿನೀ ಭವಂತಿ

ಬಸವಪ್ಪಶಾಸ್ತ್ರಿ :

ಮೊಳೆವಲ್ ಶೋಭಿಸೆ ನಿರ್ನಿಮಿತ್ತ ಹಸಿತಂ ಚೆಲ್ವಾಗೆ ಲಾಲಾಜಲಂ
ತುಳುಕಲ್ ಬರ್ಪ ತೊದಳ್ ಮನಂಗೊಳಿಸಲಂಕಾರೋಹಕ್ಕಿಚ್ಛಪ ಮ-
ಕ್ಕಳಿನಿರ್ಕೆಗಳಿನೆತ್ತಿಕೊಂಡು ನಲವಿಂ ತದ್ದೇಹ ಚಂಚದ್ರಜೋ
ಮಳಿನಾಂಗರ್ಕಳೆನಿಪ್ಪ ಮಾನವರೆ ತಾಂ ಧನ್ಯರ್ ವಲಂ ಧಾತ್ರಿಯೊಳ್.

ಶೇಷಗಿರಿರಾಯ :

ತೋರಲೆಳೆಯಳೆ ದಂತಪಂಕ್ತಿಯು
ಕಾರಣೆಲ್ಲದೆ ನಗುವ ನುಡಿಗಳು
ಬಾರದಲೆ ತೊದಲಾಡಿ ಸವಿಯುಣಿಸುವ ಕಿವಿಗೆ ಮುದ್ದು
ಮೋರೆ ಮೇಲ್ಮಾಡುತಲಿ ಕರಕೊಂ-
ಡೇರು ಮಾಳಿಗೆಯೆಂದು ಕಣ್ಣೀರ್
ತಾರದಳುವರ್ಭಕನ ಮೈಮಣ್ ತಾಳ್ವಿರೇಂ ಕೃತರೊ.

ಶೇಷಗಿರಿರಾಯರ ಅನುವಾದ ಮೋರೆ ಮೇಲ್ಮಾಡುತಲಿ ಕರಕೊ।ಡೇರು ಮಾಳಿಗೆಯೆಂದು ಕಣ್ಣೀರ್ ತಾರದಳುವ ಎಂಬು ಮೂಲಕ್ಕಿಂತಲೂ ಕಾಳಿದಾಸನೂ ಚಿತ್ರಿಸಿದ ಬಾಲಕನಿಗಿಂತಲೂ ಹೆಚ್ಚು ಎನಿಸುತ್ತದೆ. ಲಾಲಾಜಲಂ ತುಳುಕಲ್ । ಇರ್ಕೆಗಳನ್ನೆತ್ತಿಕೊಳ್ಳುವ ಹೆಚ್ಚಿನ ಅಂಶಗಳು ಬಸವಪ್ಪಶಾಸ್ತ್ರಿಗಳ ಅನುವಾದದಲ್ಲೂ ಕಂಡುಬರುತ್ತವೆ. 'ತದಂಗರಜಸು ಮಲಿನೀಭವಂತಿ' ತದ್ವೇಹ ಚಂಚದ್ರಜೋಮಳಿನಾಂಗರ್ಕಳ್ ಎಂಬುದು ದುಸ್ತರ ಅನುವಾದವೆನಿಸಿದೆ.

ಉನ್ನಮಿತ್ಯೈಕ ಭ್ರೂಲತಾಮಾನನಮಸ್ಯಾಃ ಪದನಿರಚಯಿಂತ್ಯಾಃ
ಕಂಟಕಿತೇನ ಪ್ರಥಯತಿಮಯ್ಯನುರಾಗಂ ಕಪೋಲೇನ ॥

ಬಸವಪ್ಪಶಾಸ್ತ್ರಿ :

ಮೃದುಪಾದ.......

ಶೇಷಗಿರಿರಾಯ :

ಪದವ ರಚಿಸುತಿಹಳು..

ಕಾಳಿದಾಸನ ಕಲ್ಪನೆಯನ್ನು ಹಾಡಿನ ರೂಪದಲ್ಲಿ ವಿಸ್ತರಿಸಿದ್ದಾರೆ. ಕರವಿಗಲ್ಲವಿರಿಸಿ ಎನ್ನುವಲ್ಲಿ ಪ್ರೇಮ ಕವನ ಬರೆದಂತೆ ತೋರುತ್ತದೆ.

ಶೇಷಗಿರಿರಾಯ :

ಏನ್ ನನ್ನ ಕರ್ಮಪ್ಪಾ ! ಈ ಅರಸಿನ ಬ್ಯಾಟೀ ಕಾಲಾಗ ನಾ ನನಕಾ ದಣದ ಹೋದ್ನಿ. ಕವವ ಚಿಗರಿ ! ಕವವ ಕಾಡಂದಿ ! ಕವವ ಹುಲಿ ! ಅಂತ ವದರಾಡಿಕೊಂತ, ಚೀರಾಡಿಕೊಂತ, ಈ ಅಡವ್ಯಾಗಿಂದಾ ಆ ಅಡವಿ, ಆ ಅಡವ್ಯಾಗಿಂದೀ ಅಡವಿ ಓಡಿ.... ಓಡಿ ಸಾಕತ್ಯೋ ನಮ್ಮಪ್ಪಾ ! ಬಿಸಿಲಂತಿ ಆಸಾಡಮಾಸ ಕೇಳೋದೇನ್ನೈತಿ, ರಣರಣ ಕುಟ್ಟೀ ಕುಟ್ಟೆತತಿ; ಮದ್ಯಾಣದ್ಹೊತ್ತಿನ್ಯಾಗ ವಂದ ಜರಾ ಗಿಡದ ಬುಡಕ ಕುಂತೇನಂದರ ನೆಳ್ಳಾರ ಅತೆ? ಅದು ಇಲ್ಲ. ನೀರಡಸಾಣಾ ತೊಪ್ಪಲ ಬಿದ್ದ ಕೊಳಿತ ಹಳಿದಾಗ ನೀರ ಕುಡ್ಯಾಣಾ, ಹಸುವಾಗಾಣಾ ಹೊತ್ತಲದ್ಹೊತ್ತಿನ್ಯಾಗ ಹಸೆ ಖಂಡಾ ತಿನ್ನಾಣಾ ! ಇವನ ಕುದರೀ ಹಿಂದ ಓಡಿ ಓಡಿ ಕೈ-ಕಾಲೆಲ್ಲಾ ಸಂದದಪ್ಪಿ ಹೋದವು. ರಾತರಿನ್ಯಾಗ ಕಣ್ಣ ತುಂಬಾ ನಿದ್ದ್ಯಾರ ಆಕ್ಕೈತೆ ? ಅಮಾ ಇಲ್ಲ. ಒಂದ ಜರಾ ಜಂಪ ಹತ್ತಿತ್ಯೋ ? ಇಲ್ಲ. ಆಟರಾ ಬ್ಯಾಟೀ ಆಡೋ ಮಮ್ಮಕ್ಕಳು ವದರಾಡಿಕೊಮತ ಬಂದಕ್ಯಾಸ ಎಬ್ಬಿಸಿದರ !.

ಬಸವಪ್ಪಶಾಸ್ತ್ರಿ :

ಅಯ್ಯೋ ದೈವವೇ! ಬೇಟೆಯಲ್ಲ್ಯೋ ಆಸಕ್ತನಾದ ಈ ರಾಯನ ಸ್ನೇಹದಿಂದ ಕೆಟ್ಟೆನಲ್ಲಾ ! ಇದೋ ಹುಲ್ಲೆ ! ಇದೋ ಹಂದಿ ! ಇದೋ ಹುಲಿ ! ಎನ್ನುತ್ತಾ ಮಧ್ಯಾಹ್ನದಲ್ಲಿಯೂ ಬೇಸಗೆಯಿಂದ ದಟ್ಟವಾಗಿ ಮರದ ನೆರಳಿಲ್ಲದ ಅಡವಿಗಳಲ್ಲಿ ಸುತ್ತಿ ಸಾಕಾಯಿತು. ಉದುರಿದೆಲೆಗಳಿಂದ ಒಗರಾಗಿ ಬೆಚ್ಚಗಿರುವ ಬೆಬ್ಬದ ಜೋಗಿನ ನೀರುಗಳನ್ನೆಲ್ಲಾ ಕುಡಿದುದಾಯಿತು. ಇದು ಹೊರತಾಗಿ ಹೊತ್ತು ಗೊತ್ತಿಲ್ಲದ ಸುಟ್ಟ ಮಾಂಸವೇ ಹೆಚ್ಚಾಗಿರುವ ಆಹಾರವು ಭುಂಜಿಸಲ್ಪಟ್ಟಿತು. ಕುದುರೆಯ ಹಿಂದೋಡಿ ಶರೀರದ ಕೀಲುಗಳೆಲ್ಲಾ ಸಡಲಿ ನೋವಿನಿಂದ ರಾತ್ರಿಯಲ್ಲಿಯೂ ನಾನು ಚೆನ್ನಾಗಿ ಮಲಗಲಿಲ್ಲ. ಆ ಮೇಲೆ ಬೆಳಕು ಹರಿಯುವದಕ್ಕಿಂತ ಮುಂಚೆಯೇ ಅರಣ್ಯವನ್ನು ಆಕ್ರಮಿಸುವ ತೊತ್ತಿನ ಮಕ್ಕಳಾದ ಹಕ್ಕಿಯ ಬೇಟೆಗಾರ ಕಲಕಲ ಧ್ವನಿಯಿಂದ ಎಚ್ಚರವಾಯಿತು.

''ಇವುಗಳಲ್ಲಿ ಒಂದು ಬಳಕೆ ಮಾತಿನ ಗ್ರಾಮ್ಯ ಭಾಷೆಯಾಗಿದೆ. ಮೂಲದಲ್ಲಿ ವಿದೂಷಕನು ಕೆಳದರ್ಜೆಯ ಪಾತ್ರವಾಗಿ ಪ್ರಾಕೃತದಲ್ಲಿ ಮಾತಾಡುವನಾದ್ದರಿಂದ ಅಂಥ ಸಂದರ್ಭಗಳಲ್ಲಿ ಬಳಕೆಯ ನುಡಿಯಿಂದಲೇ ಸಂಭಾಷಣೆಯ ಸೊಗಸು ಹೆಚ್ಚುವುದೆಂದು ಶೇಷಗಿರಿರಾಯರು ಭಾವಿಸಿದ್ದರು. ಇತ್ತ, ಬಸವಪ್ಪಶಾಸ್ತ್ರಿಗಳದು ಶುದ್ಧ ಗ್ರಾಂಥಿಕ ಭಾಷೆ''.

ಶೇಷಗಿರಿರಾಯರು ಮತ್ತು ಬಸವಪ್ಪಶಾಸ್ತ್ರಿಗಳು ಸಂಸ್ಕೃತ-ಕನ್ನಡ ದ್ವಿಭಾಷಾ ಪಂಡಿತರಾಗಿದ್ದು, ಶಾಕುಂತಲದ ಸಾರಸರ್ವಸ್ವವನ್ನು ತಿಳಿದಿದ್ದಾರೆ. ಬಸವಪ್ಪಶಾಸ್ತ್ರಿಗಳು ಮೂಲವನ್ನು ಅನುಸರಿಸುವುದರ ಕಡೆಗೆ ಹೆಚ್ಚು ಗಮನವಿತ್ತಿದ್ದಾರೆ. ತಮ್ಮ ಪ್ರೌಢ ಕವಿತ್ವ ರಚನೆಯಿಂದ ಅಭಿಜಾತ ಸಾಹಿತ್ಯವನ್ನು ನೀಡಿದ್ದಾರೆ. ಶೇಷಗಿರಿರಾಯರು ಮೂಲಭಾವದ ವಿಸ್ತರಣೆ, ಪ್ರೇಕ್ಷಕರನ್ನು ಮೆಚ್ಚಿಸುವ ದೃಷ್ಟಿ ಮತ್ತು ಸಂಗೀತ ಪ್ರಿಯತೆ ಮುಖ್ಯ ಲಕ್ಷಣಗಳಾಗಿವೆ. ಮುಂಬಯಿ, ಪುಣೆಗಳಲ್ಲಿನ ನಾಟಕಗಳಿಂದ ಪ್ರಭಾವಿತರಾಗಿ

ರಂಗ ಪ್ರಯೋಗದ ಕುರಿತೇ ಬರೆದಿದ್ದಾರೆ. ಶೇಷಗಿರಿರಾಯರ ಅನುವಾದದಲ್ಲಿ ಗದ್ಯ ಸಂಭಾಷಣೆ, ಆಡು ಮಾತಿನಿಂದ ಯುಕ್ತವಾಗಿ ಸತ್ವಯುತವಾಗಿದೆ. ಮೀನುಗಾರನು ಕೊತವರಿನು!? ಕೇಳಿದಾಗ 'ದೇವರೂ, ಅಜ್ಜ ಅರತೆಲಿ, ಮುತ್ಯ ಮುರತೆಲಿ ಇದೇ ವ್ಯಾರೇನೇ ಮಾಡತ ಬಂದೀವರಿ' ಎಂಬ ಮಾತು ದೇಸೀ ಶೈಲಿಯಲ್ಲಿ ಸತ್ವಯುತವಾಗಿ ಮೂಡಿಬಂದಿದೆ.

'ಈ ಎರಡೂ ಅನುವಾದಗಳನ್ನು ಕುರಿತು ಈ ರೀತಿ ಹೇಳಬಹುದು. ಮೂಲವನ್ನು ಕಟ್ಟುನಿಟ್ಟಾಗಿ ಅನುಸರಿಸುವುದು ಅತಿಯಾದಾಗ ಬಸವಪ್ಪಶಾಸ್ತ್ರಿಗಳ ಅನುವಾದವೂ, ಪ್ರೇಕ್ಷಕರ ದೃಷ್ಟಿಯಿಂದ ಭಾವವನ್ನು ವಿಸ್ತರಿಸ ಹೋದಾಗ ಶೇಷಗಿರಿರಾಯರ ಅನುವಾದವೂ ಅಲ್ಲಲ್ಲಿ ಅಸಮರ್ಪಕವಾಗಿವೆ. ಬಸವಪ್ಪಶಾಸ್ತ್ರಿಗಳು ಪದ್ಯಗಳನ್ನು ಉತ್ಕೃಷ್ಟ ರೀತಿಯಲ್ಲಿ ಅನುವಾದಿಸಿದರು. ಶೇಷಗಿರಿರಾಯರು ಆ ಪದ್ಯಗಳಲ್ಲಿ ಕಾಲಾಂಶದಷ್ಟನ್ನು ಹಾಡಿನ ರೂಪಕ್ಕೂ ತಿರುಗಿಸಿ, ಟಿಪ್ಪಣಿಯೆಂದು ಕೊಟ್ಟು, ರಂಗ ಪ್ರಯೋಗದ ದೃಷ್ಟಿಯನ್ನು ವ್ಯಕ್ತಪಡಿಸಿದ್ದರೂ; ಗದ್ಯ ಸಂಭಾಷಣೆಗಳತ್ತ ಆ ರೀತಿ ಗಮನವನ್ನು ಕೊಡಲಿಲ್ಲ. ಸಹ, ಸಜೀವ ಸಂಭಾಷಣೆಗಳನ್ನು ನಾವು ಶೇಷಗಿರಿರಾಯರಲ್ಲಿ ಯಥೇಚ್ಛವಾಗಿ ಕಾಣುತ್ತೇವೆ. ಹೀಗೆ ಒಬ್ಬರ ದೃಷ್ಟಿಯು ಮೂಲದ ಸಾಹಿತ್ಯ ಗುಣದ ಕಡೆಗಿದ್ದರೆ, ಇನ್ನೊಬ್ಬರದು ಅದರ ರಂಗ ಪ್ರಯೋಗದ ಕಡೆಗೆ ಹೆಚ್ಚಾಗಿ ವಾಲಿದೆ. ಅವರಿಬ್ಬರ ದೃಷ್ಟಿ ಕೋನವೇ ಬೇರೆಯಾದುದರಿಂದ ಯೋಗ್ಯತೆಯಲ್ಲಿ ಒಂದು ಹೆಚ್ಚು, ಇನ್ನೊಂದು ಕಡಿಮೆ ಎಂದು ತೀರ್ಮಾನಿಸ ಹೋಗುವುದೆಂದರೆ; ಮಲ್ಲಿಗೆ ಮತ್ತು ಸಂಪಿಗೆಗಳಲ್ಲಿ ಯಾವುದು ಹೆಚ್ಚು ಚಂದ ಎಂದು ಹೇಳಿದಂತೆಯೇ ಸೈ''.

ಶೇಷಗಿರಿರಾಯರು ಕಾಳಿದಾಸನ ೧೯೦ ಶ್ಲೋಕಗಳಲ್ಲಿ ೧೨೦ ಪದ್ಯಗಳನ್ನು ಕಂದ, ಷಟ್ಪದಿ ಹಾಗೂ ವಿವಿಧ ಅಕ್ಷರ ವೃತ್ತಗಳಲ್ಲಿ ಅನುವಾದಿಸಿದ್ದಾರೆ (ಅಮೃತ ಧ್ವನಿ, ಮದಿರಾ, ವಿಭಾವರಿ, ಪ್ರಹರ್ಷಿಣಿ, ಕಾಮದೆ, ಯೂಥಿಕಾ) ಅಕ್ಷರ ಗಣಗಳ ಜೊತೆಗೆ ಮಾತ್ರಾಗಣವೂ ಸೇರಿಕೊಂಡು, ಗೇಯತೆಯ ಗುಣ ಪಡೆದುಕೊಂಡಿದೆ. ಅಮೃತಧ್ವನಿ ವೃತ್ತದ ಒಂದು ಪದ್ಯ ಹೀಗಿದೆ.

ಚಿಕ್ಕಯ್ಯ ಕೇಳ್ ನಿನಗೆ ತಕ್ಕದೇ ಕಾರ್ಯವು ಇದಕ್ಕಾಗಿ ನಿಮ್ಹಿರಿಯರು
ಸೊರ್ಕಿರ್ದ ರಕ್ಕಸರ ಕಕ್ಕೌಂಚಿ ಕೊಂದು ನೆಲಕ್ಕಿಕ್ಕುತ್ತ ಬಂದರವರು
ಕುಕ್ಕಿಂಗೆ ಬಚ್ಚಿಡುತಲಕ್ಕರ್ತೆಯಿಂ ಬಡವರಂ ಕಾಯ್ದುದೆಜ್ಜ ವಿದಕೆ
ದಿಕ್ಕೀಯೆ ಪೌರವ ಕುಲಕ್ಕಿನ್ನದೇಂಬಹುದು ಮಿಕ್ಕಾದ ಭೂಪಜನಕೆ.

ಈ ಪದಗಳು ಉತ್ತರ ಕರ್ನಾಟಕದ ಮನೆಮನೆಗಳಲ್ಲಿ, ಸಾರ್ವಜನಿಕ ಉತ್ಸವ-ಜಾತ್ರೆಗಳಲ್ಲಿ ಕೇಳಿ ಬರುವಷ್ಟು ಜನಜನಿತವಾಗಿದ್ದವು. ಎರಡನೆಯ ಅಂಕಿನಲ್ಲಿ ದುಷ್ಯಂತನು ಅರಣ್ಯ ಕುಸುಮ ಮಾಲೆ ಗಳನ್ನು ಧರಿಸಿದ ಯವನ ಪರಿಚಾರಿಕೆಯೊಂದಿಗೆ ಪ್ರವೇಶಿಸುವನು. ಕಾಳಿದಾಸ ಯವನಿಭಿಃ ಎಂದಿರು ವುದನ್ನು ಬಸವಪ್ಪಶಾಸ್ತ್ರಿಗಳು ಯವನ ಸ್ತ್ರೀಯರು ಎಂದಿದ್ದಾರೆ ಚುರಮರಿಯವರು. ಬೇಡರನ್ನು

ಉದ್ದೇಶಿಸಿ ಅಡವಿಚಿಂಟೇರು ಎಂದು ನೈಜವಾಗಿ ಅನುವಾದಿಸಿದ್ದಾರೆ. ಶಕುಂತಲೆ ಬರೆದ ಪತ್ರವನ್ನು ದೇವ ಪ್ರಸಾದ ವ್ಯಪದೇಶೇನ ಎಂದು ಪ್ರಿಯಂವದೆ ಹೇಳಿದಂತೆ ಕಾಳಿದಾಸ ಹೇಳಿದರೆ ಚುರಮರಿಯವರು ಮಾಧ್ವ ಸಂಪ್ರದಾಯದ ಪ್ರಭಾವದಿಂದ ದೇವರ ನಿರ್ಮಾಲ್ಯವೆಂಬ ನಿಮಿತ್ಯದಿಂದ ಹೂವಿನಲ್ಲಿ ಮುಚ್ಚಿ ಆತನಿಗೆ ತಲ್ಪಿಸುತ್ತೇನೆ ಎಂದು ಅನುವಾದಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಆತನಿಗೆ ಇವಳು ಅನುರಾಗ ಪತ್ರಿಕೆಯನ್ನು ಬರೆಯಿರಿ, ಅದನ್ನು ಹೂವಿನಿಂದ ಮುಚ್ಚಿ ದೇವತಾ ಪ್ರಸಾದದ ನೆವದಿಂದ ಆ ರಾಜನ ಹಸ್ತವನ್ನು ಸೇರಿಸುವೆನು ಎಂದಿದ್ದಾರೆ.

ರಮ್ಯದ್ವೇಷ್ಟಿ ಯಥಾಪುರಾ ಪ್ರಕೃತಿಭಿರ್ನಪ್ರತ್ಯಹಂ ಸೇವ್ಯತೇ
ಶಯ್ಯೋಪಾಂತವಿವರ್ತನೈರ್ವಿಗಮಯತ್ಯುನಿದ್ರಏವಕ್ಷ ಪಾಃ
ದಾಕ್ಷಿಣ್ಯೇನವದಂತಿ ವಾಚಾಮುಚಿತಾಮಂತಃ ಪುರೇಭ್ಯೋಯದು
ಗೋತ್ರೇಷು ಸ್ಖಲಿತಸ್ತದಾ ಭವತಿಚವ್ರೀಡಾ ವಿಲಕ್ಷಿಶ್ಚಿರಮ್.

ಚುರಮರಿ :

ಬ್ಯಾಸರದಿರುವಾ । ಬದುಕನು ಸುಖಿಯನು ಭೋಗಿಸಿ ಜರಿದಕೆ ಬಳಿರಿ ಬೆಂದಿರುವಾ ।।ಪಲ್ಲ।।
ಮನೋಹರ ವಸ್ತುಗ।ಳನು ತಾಂಜರಿದು । ತನುವಿನ ಸೇವಕ ।ರನು ಬ್ಯಾಡೆನುವಂ ।।೧।।
ಇರುಳೆಲ್ಲನು ಜಾಗರದೊಳು ಕಳಿದು ।ಪರಿಯಂಕವಿಬಲ।ಹೊರಳುತ।ಲಿರುವಾ ।। ೨ ।।
ಬಲು ಎಚ್ಚರದಿಂದಲಿ ಮಾತಾಡುವಾ।ಲಲನೆಯರನು ಶಕುಂ।ತಲೆಯೆಂ।ದು ಕರಿವಾ ।೩।।
ಮೊಗಮುಚ್ಚಳುವಾ ಬಿಗಿದು ವಸ್ತರವಾ । ನಗಲು ಸಖಿಯರು । ನಾ।ಚಗೆಯೊಳು ಬರುವಾ ।೪।।

ಬಸವಪ್ಪಶಾಸ್ತ್ರಿ :

ವೃತ್ತ ।। ಎಳಸಂ ರಮ್ಯ ಪದಾರ್ಥಮಂ ಪ್ರಜೆಗಳಿಂ
ಸಂಭಾವಿಸಂ ಮುನ್ನಿನಂ ತೆಳಲಿಂ ರಾತ್ರಿಯ
ನೊಂಕುವಂ ಪೊರಳುತೆಂ ಶಯ್ಯಾಂತದೋಳೆಚ್ಚರಿಂ ।।
ದಳಿಪಿಂ ತನ್ನಯ ರಾಣಿವಾಸದವರೊಳ್
ಪೆಸರ ತೆಳೆಯಲ ಪಲ್ಲಟಮಂ ಸಮಂತೊಗೆದ
ನಾಣಿಂ ಸಮ್ಮನಿರ್ಪಂನೃಪಂ ।।

ರಾಜಸ್ತ್ರೀಯರನ್ನು ಹೆಸರಿಸುವಾಗ ದುಷ್ಯಂತನು ತಬ್ಬಿಬ್ಬಾಗುವುದನ್ನು ಕಾಳಿದಾಸನು 'ಗೋತ್ರಸ್ಖಲನ' ಶಬ್ದವನ್ನು ಉಪಯೋಗಿಸಿರುವನು. ಚುರಮರಿಯವರು ''ಲಲನೆಯರನ್ನು ಶಕುಂತಲೆ ಯೆಂದು ಕರೆವಾ, ಮೊಗಮುಚ್ಚಿ ಅಳಿಂದಾ''.

ಕಾಳಿದಾಸ : ಅಸ್ಮಾತ್ಪರಂಬತ ಯಥಾ ಶ್ರುತಿ ಸಂಭೃತಾನಿ, ಕೋನಃ
ಕುಲೇ ನಿವಪನಾನಿ ಕರಿಷ್ಯತೀತ ॥
ನೂನಂ ಪ್ರಸೂತಿ ವಿಕಲೇನ ಮಯಾಪ್ರಸಿಕ್ತಂ
ಧೌತುಶ್ರು ಶೇಷಮುದಕಂ ಪಿತರಂ ಪಿಬಂತಿ ॥

ಚುರಮರಿ : ಭಾಮಿನಿ ॥ ಅಂತು ಮಾಡಿದನೆಮ್ಮ ಕುಲದುಷ್ಯತ
ನೀತನಹಿಂದೆ ನಾವಿನ್ನೆಂತು ಕಾಂಬೆವು
ಶ್ರುತಿ ಸದುಕ್ತಿಗಯತರ್ಪಣಾದಿಗಳಿ
ಂತು ಶಕೆಯೊಳಿರ್ದು ಪಿತರಾಂ।
ಸಂತತಿಗಳಿಲ್ಲೆಂಬ ಕಷ್ಟದಿ । ಸಂತತದೊಳಶ್ರುಗಳ
ಸುರಿಸಲವನ್ನೆಗುಟುಕಿಪರು ॥

ಬಸವಪ್ಪಶಾಸ್ತ್ರಿ :

ಕಂದ ॥ ಕಂಬಿನಿಯೊಲ್ಮೆ ಕುಲದೆ ತಿ
ಲಾಂಬುವಮುಂದಕಟ ಕುಡುವನಾವನೆನುತತ್ತುಂ ॥
ನಾಂ ಬಿಡೆ ಪುತ್ರ ವಿಹೀನಂ । ಕಂಬನಿದೊಳೆದುಳಿದ
ಜಲದ ಪಿತೃಗಳ ಪೀರ್ವರ ॥

ಮುಮ್ಮಡಿ ಕೃಷ್ಣರಾಜರು ಶಾಕುಂತಲ ಟೀಕೆಯಲ್ಲಿ ಹೇಳಿರುವ ಅಥವನ್ನೇ ಬಸವಪ್ಪಶಾಸ್ತ್ರಿಗಳು ದುಷ್ಯಂತನ ಕಣ್ಣೀರನ್ನೇ ಅವನ ಪಿತೃಗಳು ತರ್ಪಣೋದಕವೆಂದು ಕುಡಿಯಬೇಕಾಯಿತೆಂಬ ಅರ್ಥದಲ್ಲಿ ಹೇಳಿದ್ದಾರೆ. ಚುರುಮರಿ ಶೇಷಗಿರಿರಾಯರು ಸಾಮಾನ್ಯನೊಬ್ಬನಿಗೂ ಪ್ರಸಂಗದ ಭಾವಾರ್ಥವಾಗುವಂತೆ ನಿಪುತ್ರಿಕನಿದ್ದ ದುಷ್ಯಂತನ ದುಃಖದಿಂದ ಕಣ್ಣೀರು ಸುರಿಸುತ್ತ ಕೊಡುವ ತರ್ಪಣೋದಕದಿಂದ ಅಷ್ಟೇ ದುಃಖಿತರಾದ ಆವನ ಪಿತೃಗಳು, ತಮ್ಮ ಕಣ್ಣುಗಳನ್ನು ಒರಿಸಿಕೊಂಡು ಉಳಿದುದನ್ನು ಕುಡಿದು ಅಷ್ಟರಿಂದಲೇ ತೃಪ್ತರಾಗಬೇಕಾಯಿತೆಂಬುದು ಸರಿಯಾದ ಅರ್ಥದಲ್ಲಿ ತಿಳಿಸಿಕೊಟ್ಟಿದ್ದಾರೆ.

ಶಾಕುಂತಲಾ ನಾಟಕವನ್ನು ಕೇಂದ್ರವನ್ನಾಗಿ ಮಾಡಿಕೊಂಡು, ಚುರಮುರಿ ಶೇಷಗಿರಿರಾಯರಿಂದ ಹಿಡಿದು ಪ್ರಮುಖರಾದ ಬಸವಪ್ಪಶಾಸ್ತ್ರಿ, ಚೇಟೆರಾಯ ದೀಕ್ಷಿತ, ಬಿ. ಕೃಷ್ಣಪ್ಪ, ಸೂಲಿಬೆಲೆ ಶ್ಯಾಮರಾಯ ಇವರ ಅನುವಾದಗಳೊಡನೆ ಪರಸ್ಪರ ಹೋಲಿಕೆ ನೋಡಲಾಯಿತು. ಈ ಹೋಲಿಕೆಗಳು ಆಯಾ ಅನುವಾದಕರ, ಅನುವಾದದ ಗುಣ, ಅನುವಾದದ ದೃಷ್ಟಿ, ಅನುವಾದದ ಪರಿಕಲ್ಪನೆ ಮತ್ತು ಓದುಗ ಹಾಗೂ ನೋಟಕ ಇವರಿಬ್ಬರ ಬಗೆಗೆ ಅನುವಾದಕರು ಇಟ್ಟುಕೊಂಡ ಬಗೆಗಳು ಚರ್ಚಿತಗೊಂಡಿವೆ. ಈ ಬಗೆಯ ಚರ್ಚೆ ವ್ಯಾಪಕವಾಗಬೇಕು. ಈ ಅಧ್ಯಾಯದಲ್ಲಿ ಆ ಬಗೆಯ ಚರ್ಚೆಯ ಮುಖ್ಯ ನೆಲೆಗಳನ್ನು ಪ್ರಸ್ತಾಪಿಸಲಾಗಿದೆ.

## ರತ್ನಾವಳಿ/ ಮಿತ್ರವಿಂದಾಗೋವಿಂದ :

ಹರ್ಷನ ರತ್ನಾವಳಿ ನಾಟಕವನ್ನು ಬಸವಪ್ಪಶಾಸ್ತ್ರಿಗಳು ೧೮೭೫ ರಲ್ಲಿ ಪ್ರಕಟಿಸಿದರು. ಇದರ ಮೊದಲ ಅನುವಾದವನ್ನು ೧೭ನೇ ಶತಮಾನಕ್ಕೆ ಕಾಣಬಹುದಾಗಿದೆ. ಚಿಕ್ಕದೇವರಾಯನ ಆಸ್ಥಾನಕವಿಯಾಗಿದ್ದ ಸಿಂಗರಾರ್ಯನು ರತ್ನಾವಳಿ ನಾಟಕವನ್ನು ಮಿತ್ರವಿಂದಾಗೋವಿಂದ ಎಂಬುದಾಗಿ ಪರಿವರ್ತಿಸಿದರು. ಈ ನಾಟಕದ ವಿಷಯವಾಗಿ ಡಿ.ವಿ. ವೆಂಕಟಾಚಲ ಶಾಸ್ತ್ರಿಗಳು ಹೀಗೆ ಹೇಳುತ್ತಾರೆ. ''ನಾಟಕದ ಭಾಷೆ ಹಳೆಗನ್ನಡ; ವಸ್ತು ಪೌರಾಣಿಕ. ಇಲ್ಲಿಯ ಹಳೆಗನ್ನಡ, ಚಿಕ್ಕದೇವರಾಜರ ಕಾಲದಲ್ಲಿ ತಿರುಮಲಾರ್ಯ ಮೊದಲಾದ ಚಂಪೂಕವಿಗಳು ತಮ್ಮ ಕೃತಿಗಳಲ್ಲಿ ಬಳಸುತ್ತಿದ್ದ ಹೊಸಕಾಲದ ಭಾಷೆ ಶೈಲಿಗಳ ಧೋರಣೆಗೆ ಅನುಗುಣವಾದ್ದು; ವುಸ್ತು, ಆ ಕವಿಗಳಿಗೆ ವಿಶೇಷವಾಗಿ ಪರಿಚಿತವೂ ಪ್ರಿಯವೂ ಆಗಿದ್ದ ಭಾಗವತ, ವಿಷ್ಣುಪುರಾಣಗಳಂತಹ ಗಂಥಗಳಲ್ಲಿ ನಿರೂಪಿತವಾದದ್ದು; ಆದರೆ ಶ್ರೀಹರ್ಷನ (೫೯೦-೬೪೮) 'ರತ್ನಾವಳಿ'ಯನ್ನು ನಾಟಕೆ'ಯ ವಸ್ತುವಿನಲ್ಲಿ ಎರಕವಾಗಿ ನವೀನರೀತಿಯಲ್ಲಿ ಪ್ರಕಟವಾದದ್ದು. ವಸ್ತು ಸಾದೃಶ್ಯವಿರುವ 'ರತ್ನಾವಲಿ'ಯನ್ನು ಕಥೆಯ ದೃಷ್ಟಿಯಿಂದ ಬಲುಮಟ್ಟಿಗೆ ಯಥಾವತ್ತಾಗಿ ಕನ್ನಡಿಸಿ, ಅಲ್ಲಿಯ ಪಾತ್ರಗಳ ಸ್ಥಾನದಲ್ಲಿ ಭಾಗವತದ ವಾಸುದೇವ ಮಿತ್ರವಿಂದೆಯರ ಪರಿಣಯದ ಸಂಬಂಧವಾಗಿ ಬಂದಿರುವ ಕೆಲವು ಪಾತ್ರಗಳನ್ನು ಸಂಯೋಜಿಸಿ, ಇನ್ನುಕೆಲವನ್ನು ಕಲ್ಪಿಸಿ, ಸಿಂಗರಾರ್ಯ ತನ್ನ ಕನ್ನಡ ನಾಟಕವನ್ನು ರಚಿಸಿದ್ದಾನೆ. 'ಮಿತ್ರವಿಂದಾಗೋವಿಂದದಲ್ಲಿ' ನಾಲ್ಕು ಅಂಕಗಳಿದೆ. ಈ ನಾಟಕ ಪ್ರಾಚೀನ ಪ್ರಸಿದ್ಧ ಸಂಸ್ಕೃತ ನಾಟಕಗಳಂತೆ ಗದ್ಯ ಪದ್ಯ ಸಮ್ಮಿಶ್ರಿತವಾಗಿದೆ. ಹಂಚಿಕೊಂಡ ಗದ್ಯಭಾಗಗಳ ನಡುವೆ ನೂರೊಂದು ಪದ್ಯಗಳು ಹಾಸುಹೊಕ್ಕಾಗಿ ಬಂದಿದೆ. ಈ ಪದ್ಯಗಳು ಹಳಗನ್ನಡ ಚಂಪೂಕಾವ್ಯಗಳಲ್ಲಿ ಸುಪರಿಚಿತವಾದ ವೃತ್ತಕಂದಗಳೇ ಆಗಿವೆ. ಈ ಗದ್ಯಪದ್ಯಗಳ ಭಾಷೆಯ ಶಬ್ದಭಂಡಾರ, ಶೈಲಿಯ ಪ್ರೌಢಿಮೆ ಇವು ಒಬ್ಬ ಪಂಡಿತಕವಿ ಎನ್ನುವದನ್ನು ಸಾರುವಂತಿದೆ''. (ಪೀಠಿಕೆ ಹೊಸಗನ್ನಡ ಮಿತ್ರವಿಂದ ಗೋವಿಂದ - ಡಾ.ಟಿ.ವಿ. ವೆಂಕಟಾಚಲಶಾಸ್ತ್ರಿ, ಗೀತಾಬುಕ್ ಹೌಸ್ ಮೈಸೂರು ೧೯೮೧)

ಸಿಂಗರಾರ್ಯನ ಮಿತ್ರವಿಂದ ಗೋವಿಂದ ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. ಆದರೆ ಕಥೆ ಮಾತ್ರ ಚಾಚೂ ತಪ್ಪದಂತೆ ಹರ್ಷನ ರತ್ನಾವಳಿಯನ್ನು ಅನುಸರಿಸಿದ ಅನುವಾದವಾಗಿದೆ. ಬಸವಪ್ಪ ಶಾಸ್ತ್ರಿಗಳ ಅನುವಾದ ತೀರ ಹೊಸಗನ್ನಡ ಶೈಲಿಯಲ್ಲಿದ್ದರೆ, ಸಿಂಗರಾರ್ಯನದು ಸ್ವಲ್ಪ ಗಡಸು ಎನ್ನಬಹುದಾದ ಹಳೆಗನ್ನಡದಲ್ಲಿದೆ. ಆದರೆ ಶೈಲಿಯ ರೀತಿಯಲ್ಲಿ ಇಬ್ಬರೂ ಅನುವಾದಕರಲ್ಲೂ ತುಂಬ ವ್ಯತ್ಯಾಸಗಳಿವೆ. ಆದರೆ ಕಥಾವಸ್ತು ಮತ್ತು ಸಂಭಾಷಣೆಯ ಅನುವಾದಗಳಲ್ಲಿ ೧೭ ಮತ್ತು ೧೯ ನೆಯ ಶತಮಾನಕ್ಕೆ ತುಂಬ ಸೌಮ್ಯತೆಯನ್ನು ನಾವಿಲ್ಲಿ ಗುರುತಿಸಬಹುದಾಗಿದೆ. ಬಸವಪ್ಪಶಾಸ್ತ್ರಿಗಳ ತೀರ ಯಾಂತ್ರಿಕ ಅನುವಾದಕ್ಕಿಂತ ಸಿಂಗರಾರ್ಯನ ಅನುವಾದದಲ್ಲಿ ನಾವೀನ್ಯತೆಯ ಪ್ರಾಚುರ್ಯವಿದ್ದು, ಸರಸಭರಿತವಾಗಿದೆ ಎನಿಸುತ್ತದೆ. ಕೆಲ ವಿದ್ವಾಂಸರ ರೀತಿಯಲ್ಲಿ ಇದೊಂದು ರೂಪಾಂತರ ಆದರೆ ರೂಪಾಂತರ ಎನ್ನುವದನ್ನು ಕೇವಲ ಹೆಸರನ್ನು ಅದಲು ಬದಲು ಮಾಡಿದ ಮಾತ್ರದಿಂದ ಹೇಳಬಹುದೇ? ಎನ್ನುವದು ಪ್ರಶ್ನೆ ನಾಟಕವನ್ನು ಸಂಪೂರ್ಣ ಗಮನಿಸಿದಾಗ ಮೂಲಪಠ್ಯ ಮತ್ತು ಬಸವಪ್ಪಶಾಸ್ತ್ರಿಗಳಿಂದ ಅನುವಾದಿತವಾದ ಕೃತಿ ಮಿತ್ರವಿಂದ ಗೋವಿಂದದಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ. ಇದು ಕೂಡ ಕಾಳಿದಾಸಾದಿಗಳ ಅನುವಾದಿತ ಕೃತಿಯಂತೆ ನಿಕಟ ಅನುವಾದವಾಗಿದೆ. ಅಥವಾ ಆಗಿರಲು ಪ್ರಯತ್ನಿಸಿದೆ. ಇಲ್ಲಿ ಬಿ. ಎಂ. ಶ್ರೀಯವರು ಅಜಾಕ್ಸನನ್ನು ಅಭಿಮನ್ಯುವಾಗಿಸಿದ ಬಗೆಯಾಗಲಿ, ಪಾಶ್ಚಾತ್ಯ ಸಂಸ್ಕೃತಿಯನ್ನು ನಮ್ಮ ಸಂಸ್ಕೃತಿಯಾಗಿಸಲು ಪಟ್ಟ ಪರಿಶ್ರಮವಾಗಲೀ ಮಿತ್ರವಿಂದ ಗೋವಿಂದದಲ್ಲಿ ಇಲ್ಲ. ಒಂದು ರೀತಿಯಲ್ಲಿ ಹರ್ಷನ ನಾಟಕದ ನೇರ ಅನುವಾದವಾಗಿರುವ ಈ ಕೃತಿಯಲ್ಲಿ ಪಾತ್ರಗಳ ಹೆಸರುಗಳಷ್ಟೆ ಬದಲಾಗಿವೆ.

ಕಂ॥ ಶೌರಿಯ ಚರಿತದ ಕಥೆಯ।
ಧಾರದೆ ಕಿವಿಗಿಂಪುಗ ವ ಸಿಂಗರದಿರವಂ॥
ಏರೂಪಕಂ ನಿರೂಪಿಕಂ।
ಮಾರೂಪಕಮಂ ನಿರೂಪಿಸಿಂದೊಲವಿಂದಂ॥

ಈ ಪದ್ಯದಿಂದ ಕವಿ ಇದನ್ನು ಕೃಷ್ಣಕಥೆಯಾಗಿಸಲು ಪ್ರಯತ್ನಿಸಿದ್ದಾನೆ ಎನ್ನುವದು ಗೊತ್ತಾಗುತ್ತಿದೆ.

ಭಾಗವರಧರ್ಮಿಯನಾದ ಸಿಂಗರಾರ್ಯ ಶ್ರೀಕೃಷ್ಣನನ್ನು ಆರಾಧ್ಯ ದೈವವಾಗಿಸಿ ಬರೆಯಲು ಪ್ರಯತ್ನಿಸಿದ್ದಾನೆ. ಆದರೆ ಭಾಗವತ ಧರ್ಮದ ಯಾವುದೇ ಸನ್ನಿವೇಶಗಳೂ ಇಲ್ಲಿಲ್ಲ. ಹೆಸರು ಮಾತ್ರ ವಾಸುದೇವ, ರುಕ್ಮಿಣಿಯಾಗಿದೆ. ಇಡೀ ಕಥೆ ರತ್ನಾವಳಿಯನ್ನು ಹೆಜ್ಜೆ ಹೆಜ್ಜೆಗೂ ಅನುಸರಿಸಿದೆ. ಈ ನಾಟಕವನ್ನು ಭಾಗವತ ಧರ್ಮದ ನೆಲೆಯಲ್ಲಿ ವ್ಯಾಖ್ಯಾನಿಸಲು ಕವಿ ಪ್ರಯತ್ನಪಟ್ಟಿರುವದು ಕೇವಲ ಹೆಸರಲ್ಲಿ. ೧೬-೧೭ ನೆಯ ಶತಮಾನದಲ್ಲಿ ಭಕ್ತಿಚಳುವಳಿಯ ಪ್ರೇರಣೆ ಪ್ರಭಾವ ಕವಿಯ ಮೇಲಿದೆ ಎಂಬುದು ಇದರಿಂದ ಗಮ್ಯವಾಗುತ್ತದೆ.

ಪುರಾಣಗಳಲ್ಲಿ ವಾಸುದೇವ-ಮಿತ್ರವಿಂದೆಯರ ಪರಿಣಯದ ಕಥೆ ಹೀಗಿದೆ.

"ಕೃಷ್ಣನ ಅಷ್ಟ ಮಹಿಷಿಯರಲ್ಲಿ ಮಿತ್ರವಿಂದೆಯು ಒಬ್ಬಳು. ಈ ವಿಷಯ ತುಂಬ ಸಂಕ್ಷೇಪವಾಗಿ ಭಾಗವತ ಪುರಾಣ, ವಿಷ್ಣುಪುರಾಣ, ಮತ್ಸ್ಯಪುರಾಣ, ಮಯುಪುರಾಣ ಮೊದಲಾದ ಪುರಾಣ ಗ್ರಂಥಗಳಲ್ಲಿ ನಿರೂಪಿತವಾಗಿದೆ. ಇಲ್ಲಿಯ ನಿರೂಪಣೆಗಳಲ್ಲಿ ಭಾಗವತದ ಈ ಭಾಗವೇ ಪ್ರಸ್ತುತಕ್ಕೆ ತುಂಬ ಮುಖ್ಯವಾದ್ದು, ವಿವರವಾದ್ದು;

ವಿಂದಾನು ವಿಂದುವಾವಂತ್ಯೌ ದುರ್ಯೋಧನ ವಶಾನುಗೌ
ಸ್ವಯಂವರೇ ಸ್ವಭಗಿನೀಂ ಕೃಷಷ್ಣೇ ಸತ್ತಾಂ ನ್ಯಷೇಧತಾಂ॥
ರಾಜಾಧಿ ದೇವ್ಯಾಸ್ತನಯಂ ಮಿತ್ರವಿಂದಾಂ ಪಿತೃಶ್ವಸಂ
ಪ್ರಸಹ್ಯ ಹೃತವಾನ್ ಕೃಷ್ಣೋ ರಾಜನ್ ಸಂಜ್ಞಾಂ ಪ್ರಪಶ್ಯತಾಂ॥

ಪೂರ್ವಾಪರ ವಿವರಗಳಿಂದ ಕೂಡಿದ ಈ ಕಥಾಭಾಗ ಹೀಗೆ; ಮಿತ್ರವಿಂದೆ ಆವಂತೀದೇಶದ ದೊರೆ ಜಯತ್ಸೇನನಿಗೆ ರಾಜಾಧಿದೇವಿ ಎಂಬವಳಲ್ಲಿ ಜನಿಸಿದ ರಾಜಪುತ್ರಿ. ರಾಜಾಧಿದೇವಿ ಕೃಷ್ಣನ ತಂದೆ ವಸುದೇವನಿಗೆ ತಂಗಿಯೇ ಆದ್ದರಿಂದ, ಮಿತ್ರವಿಂದೆ ಯಾದವರ ಬಂಧು ವರ್ಗಕ್ಕೆ ಸಂಧವಳು. ಈಕೆಗೆ ವಿಂದ ಅನುವಿಂದ ಎಂಬ ಇಬ್ಬರು ಸೋದರರು. ಇವರು ದುರ್ಯೋಧನನಿಗೆ ಬೇಕಾದವರು, ವಶವರ್ತಿಗಳು, ಮಿತ್ರವಿಂದೆಗೆ ಸ್ವಯಂವರದ ಏರ್ಪಾಡು ನಡೆಯಲು ಅಲ್ಲಿ ಆಕೆ ಕೃಷ್ಣನನ್ನು ವರಿಸಲು ಅಪೇಕ್ಷಿಸಿದಳು. ಆದರೆ ಸೋದರರು ಅದನ್ನು ಒಪ್ಪದೆ, ಅಡ್ಡಿಪಡಿಸಿದರು. ಆಗ ಕೃಷ್ಣನು ಇವರನ್ನು ಲಕ್ಷ್ಯ ಮಾಡದೇ, ನೆರೆದ ರಾಜಪುತ್ರರನ್ನೆಲ್ಲ ಸೋಲಿಸಿ, ಆಕೆಯನ್ನು ದ್ವಾರಾವತಿಗೆ ಅಪಹರಿಸಿಕೊಂಡು ಹೋದನು.

ಕೃಷ್ಣನಿಗೆ ಮಿತ್ರವಿಂದೆಯಲ್ಲಿ ವೃಕ, ಹರ್ಪ, ಅನು, ಗೃಧ್ರ, ವರ್ಧನ, ಅನ್ನದ, ಮಹಾಶ, ಪಾವನ, ಕ್ಷುಧಿ ಎಂಬ ಮಕ್ಕಳು ಹುಟ್ಟಿದರು (೧೧.೬೧೧-೧೬) ಒಮ್ಮೆ ದ್ರೌಪದಿ ಕುಂತಿಯ ಪ್ರೇರಣೆಯಿಂದ ಕೃಷ್ಣನ ಅಷ್ಟಮಹಿಷಿಯರನ್ನು ವಸ್ತ್ರಾಭಾರಣಗಳಿಂದ ಸತ್ಕಾರಿಸಿ, ಅವರ ವಿವಾಹ ವೃತ್ತಾಂತಗಳನ್ನು ಕೇಳಿಬಯಸಿದಳು. ಮಿತ್ರವಿಂದೆ, ಕೃಷ್ಣನು ತನ್ನ ಸ್ವಯಂವರದಲ್ಲಿ ರಾಜಪುತ್ರರನ್ನು ಸೋಲಿಸಿ ತನ್ನ ಸೋದರರನ್ನೂ ತಿರಸ್ಕಾರಿಸಿ ತನ್ನನ್ನು ದ್ವಾರಾವತಿಗೆ ಕರೆದೊಯ್ದನೆಂದು ಹೇಳಿ, ಆತನೇ ಮುಂದೆಯೂ ತನಗೆ ಪತಿಯಾಗಬೇಕೆಂದು ಹಾರೈಸಸಿದಳು ( ೧೦.೭೧-೪೩; ೧೦.೮೩-೧೨)

ವಿಷ್ಣು, ಮತ್ಸ್ಯ ಮತ್ತು ವಾಯುಪುರಾಣಗಳಲ್ಲಿ ಮಿತ್ರವಿಂದೆಯ ಹೆಸರು, ಆಕೆಯ ಮಕ್ಕಳ ಹೆಸರುಗಳು ಇವು ಮಾತ್ರವೇ ಬಂದಿರುವಂತೆ ತೋರುವುದು. ( ವಿಷ್ಣು ಪು. ೫.೨೮-೩, ಮತ್ಸ್ಯ ಪು. ೪೭-೧೪; ವಾಯು ಪು. ೩೪-೨೩೪) ಇಲ್ಲೆಲ್ಲ ಕಾಲಂದಿ ಎಂಬವಳ ಹೆಸರಿನ ಜೊತೆಗೆ ಮಿತ್ರವಿಂದೆಯ ಹೆಸರು ಕಾಣಿಸಿಕೊಂಡಿದೆ. ಮತ್ಸ್ಯಪುರಾಣದಲ್ಲಿ ಈಕೆಗೆ ಮಿತ್ರವಾನ್, ಮಿತ್ರವಿಂದ ಎಂಬ ಇಬ್ಬರು ಪುತ್ರರ ಹೆಸರುಗಳನ್ನು ಬೇರೆಯಾಗಿ ಹೇಳಿರುವುದು (೪೭-೧೯) ಒಂದು ವಿಶೇಷ.( ಪೀಠಿಕೆ)

ಶ್ರೀಹರ್ಷನು ಸೂತ್ರಧಾರನಿಂದ ' ಆರ್ಯೇ ರತ್ನಾವಲೀ ದರ್ಶನೋತ್ಸುಕೋಲಿಯಂ ರಾಜಲೋಕ ; ಎಂದು ಹೇಳಿಸಿದ ಬಸವಪ್ಪಶಾಸ್ತ್ರಿಗಳು ''ಆರ್ಯೇ ಈ ಅರಸುಗಳು ರತ್ನಾಗಳೀ ನಾಟಕೆಯನ್ನು ನೋಡಲು ಆಸಕ್ತರಾಗಿರುವರು'' ಎಂದಿದ್ದಾರೆ. ಸಿಂಗರಾರ್ಯನು 'ಆರ್ಯೆ ಇವಲ್ತೆ ಮಿತ್ರವಿಂದಾಗೋವಿಂದವೆಂಬ ನಾಟಕಂ' ಸಿಂಗರಾರ್ಯನು ಪ್ರಸ್ತಾವನೆಯಲ್ಲಿನ ಸೂತ್ರಧಾರ ನಡಿಯ ಸಂಭಾಷಣೆಯನ್ನು ತನ್ನದೇ ಸ್ವಂತರಚನಾಕೃತಿಯಂತೆ ದೀರ್ಘವಾಗಿ ಬರೆದಿದ್ದಾನೆ. ಅಲ್ಲದೇ ಸೃಜನಶೀಲವಾಗಿ ವೃತ್ತ, ಕಂದಗಳನ್ನು ರಚಿಸಿದ್ದಾನೆ.

ವೃ ॥ ಶ್ರೀ ಮತ್ಸೌಮ್ಯನೃಸಿಹ್ಮಸೂರಿತನಯಂ ಶ್ರೀತಿರ್ಮಲಾರ್ಯಾನುಜಂ।
ಶ್ರೀ ಮತ್ಸೌಶಿಕ ಸಿಂಗರಾರ್ಯನುಸಿರ್ದಂ ತಾನೆಮ್ಮೊಳಿರ್ಪ್ಪೊಲ್ಮೆಯಿಂ॥
ಈ ಮಾಚಾರ್ಯನ ಕಬ್ಬಮೈಸೆ ಮಧುಮ ಸೂಸುತ್ತ ಮಾಮೋದದಿಂ ।
ದಾಮಂದಾರದ ಪೊದೊಡಂಬೆಯೆನಿಕುಂ ಸೊಂಪಿಂ ಸುಧೃಕ್ಕಾರ್ಣದೊಳ್ ॥(ಪು.೨)

ವೃ ॥ ಕಳೆಯಿಂದಂ ಪೊಳೆವಚ್ಚಬಣ್ಣದೊದವಿಂ, ಸದ್ವೃತ್ತ ಸಂಪತ್ತಿಯಿಂ । ಬೆಳಗಿಂದಂದದೆ ನುಣ್ಣೆನಿಂದೆರ್ದೆಗೆ ವರ್ಪುದ್ಯದ್ಗುಣಶ್ಲೇಷದಿಂ ॥ಲಳಿತಾಲಂಕ್ರಿಯೆ ಗಾಢ್ಯದೂಗಿ ಸೊಗಸಿಂ ಕಂಠಕ್ಕೆ ಕಣೇಕ್ಕೆ ಸೈ। ತಳಿವಡ್ಡಿರ್ಪುವು, ಸಿಂಗರಾರ್ಯರುಸಿರ್ದೀ ಶ್ರೀ ಸೂಕ್ತಿ ಮೂಕ್ತುಳಿಗಳ್ ॥೮॥

ವೃ ॥ ಅಂದಂಬೆತ್ತ ವದಕ್ರಮಂಗಳಿನನೇಕಾಲಂಕ್ರಿಯಾಭಿಖ್ಯೆಯಿಂ । ಚಂದಂ ಮುಂಬಿವೊಂದು ಭಾವತತಿಯಿಂ ಚಂಚದ್ರಸಸ್ಫೂರ್ತಿಯಿಂ ॥ ಒಂದೇ ರೀತಿಯೊಳೊಂದಿ ಬರ್ಪವೆನಿಯಿಂದಾಹ್ಲಾದಮಂ ಮಾಮ್ಮಿಕಾಮಾ ನಂದಂ ಕೈಮಿಗೆ ಸಿಂಗರಾರ್ಯರೊರೆದೀಕಾರ್ಣಟಕಂ ನಾಟಕಂ (ಪು.೩)

ಈ ಪ್ರಸ್ತಾವನೆಯಿಂದ ಸಿಂಗರಾರ್ಯನು ಕರ್ನಾಟಕ ಭಾಷೆಯಲ್ಲಿ ರಚಿಸಿರುವದಾಗಿ ಹೇಳಿಕೊಂಡಿದ್ದಾನೆ. ಅದೊಂದು ಅನುವಾದ ಎನ್ನುವದಕ್ಕಿಂತ ಸೃಜನ ಕೃತಿಯಾಗಿ ಅದನ್ನು ಅಭಿವ್ಯಕ್ತಿಗೊಳಿಸಿದ್ದಾನೆ. ಅಲ್ಲದೇ ಮೈಸೂರಿನ ಒಡೆಯರ ವರ್ಣನೆಗಳು ಬರುತ್ತವೆ. ''ಶ್ರೀ ಮನ್ಮಹಾರಾಜಾಧಿರಾಜರಾಜ ಪರಮೇಶ್ವರ ಪ್ರೌಢಪ್ರತಾಪ ಬಿರುದಂತೆಂಬರ ಗಂಡನ ಪ್ರತಿಮೆ ಲೋಕೈ ಕವೀರಮಹೀಶೂರನರಪತಿ ಶ್ರೀ ಚಿಕದೇವಮಾರಾಯನ ನಿ ಗೆವಡೆವಕಡುನೇಹಕ್ಕೆ ನೆಲೆವನೆಯುಮ

ಶೇಷಕಲಾ ನಿಧಿಯುಮೆನಿಸಿ ನೆಗಳ್ದಿ ತಿರುಮಲಾರ್ಯರ ಕೃಪೆಯಿಂದೆಣಿಕೆಗಳಿವಡದ ಪೆಲವುಂ ಬಿಜ್ಜೆಗಳಿಂ ನೆರವಣಿಗೆಗೊಂಡು ರಸಿಕರೆ ಯರೆನಿಸಿ ಚದುರಿಂ ಚಾಣಿಂಜಗದೊಳ್ಚಿದಮಂ ಪಡೆದವರ್ಗೆ ಕವಿತೆಯೊಳ್ಪ್ರವೀಣತೆಯೆಂ ಬಣ್ಣಿವುದೇಂ?'' (ಪು.೨)

ಅಲ್ಲದೇ ಕಥೆಯ ವಸ್ತುವನ್ನು, ಮಾಡಿಕೊಮಡ ಬದಲಾವಣೆಗಳನ್ನು ಸೂಚ್ಯವಾಗಿ ತಿಳಿಸುತ್ತಾನೆ. ''ವೃ ॥ ಸರಸಂ ಶ್ರೀಸಿಂಗರಾರ್ಯಂ ಕವಿ ಸಭೆಯನಿತು ಸದ್ಗುಣಗ್ರಾಹಿ ಕಟ್ಟ । ಚ್ಚರಿವೆತ್ತೀ ವಾಸುದೇವಂ ಕೃತಿಗೆಮದರ್ೊಡೆಯಂ ನಾಟ್ಯದೊಳ್ದಿಕ್ಷರಾಮುಂ॥ ಬೆರೆದಿಲ್ಲೀ ವಸ್ತುವೊಂದೊಂದೆಳಿಸಿದದ ಪ್ರರುಳಿಂ ಬೀವಿವೊಳ್ದಾಣಮಿನ್ನೇ । ನೊರೆಮೆ ಭಾಪೆನ್ನ ಪುಣ್ಯೋದಯದೆ ಶುಭಗುಣಗ್ರಾಮವೇ ಪೊಣ್ಮೆತೆಲ್ಲಂ॥''

ಸಿಂಗರಾರ್ಯನು ವಿಷ್ಕಂಭದಲ್ಲಿ :

''ಅಬ ಕ್ಕೆ ವಸಂತೋತ್ಸವಕ್ಕೆ ತಕ್ಕಾ ಪಸದನಂಗೆಯ್ದು, ವಿದೂಷಕನೊಡವೆರೆದು ಪಟ್ಟವಣೆಯೊಳಿಟ್ಟಳಿಸಿಯೋಲಗಂಗೊಳಲ್ಬಂದಂ ವಾಸುದೇವಂ'' ರಾಜನನ್ನು ವಾಸಂದೇವನನ್ನಾಗಿಸಿದ್ದಾನೆ.

ಶ್ರೀಹರ್ಷನ ರತ್ನಾವಲಿ ನಾಟಕವನ್ನು ೧೭ನೇ ಶತಮಾನದಲ್ಲಿ ಸಿಂಗರಾರ್ಯನು ಮಿತ್ರವಿಂದಾಗೋವಿಂದ ಎಂಬುದಾಗಿ ಅನುವಾದಿಸಿದ್ದಾನೆ. ಬಸವಪ್ಪ ಶಾಸ್ತ್ರಿಗಳು ರತ್ನಾವಳಿಯಾಗಿ ಅನುವಾದಿಸಿದ್ದಾರೆ, ೧೭ನೇ ಶತಮಾನದ ಸಿಂಗರಾರ್ಯನ ಕಾವ್ಯ ಸೃಜನಶೀಲ ಕೃತಿಯಾಗಿ ಸಾಂಸ್ಕೃತಿಕ ಅಗತ್ಯತೆಯನ್ನು ಬಿಂಬಿಸಿದರೆ ಬಸವಪ್ಪ ಶಾಸ್ತ್ರಿಗಳು ಕನ್ನಡೀಕರಣವೆಂಬರ್ಥದಲ್ಲಿಯೇ ರತ್ನಾವಳಿಯನ್ನು ಅನುವಾದಿಸಿದ್ದಾರೆ.

ಬಸವಪ್ಪ ಶಾಸ್ತ್ರಿಯಿಂದಿದೆ
ಪೊಸತೆನೆ ಕನ್ನಡದೊಳುಸಿರ್ದ ರತ್ನಾವಳಿಯಂ।
ರಸಿಕರ್ಕಳೆನಿಸಿದೀ ಸಾ
ಧುಸಭಾಸದರೊಲ್ದು ಮೆಚ್ಚುಲಾನಭಿಬಯಿಪೆಂ॥

ಎಂದಿದ್ದಾರೆ. ಶ್ರೀಹರ್ಷನ ರತ್ನಾವಳಿ ನಾಟಕ, ಸಿಂಗರಾರ್ಯನ ಮಿತ್ರವಿಂದ ಇವೆರಡೂ ಬಸವಪ್ಪ ಶಾಸ್ತ್ರಿ ಮುಂದಿದ್ದವು. ಆದರೂ ಬಸವಪ್ಪ ಶಾಸ್ತ್ರಿಗಳ ಅನುವಾದ ಮೂಲಕ್ಕೆ ನಿಷ್ಠವಾಗಿ ಮೂಡಿಬಂದಿದೆ. ಸಿಂಗರಾರ್ಯನು ಶ್ರೀ ಹರ್ಷನಿಗೆ ನಿಕಟವಾಗಿ ನಡೆದರೂ ಸಾಂದರ್ಭಿಕತೆಯ ಒತ್ತಾಸೆಗೆ ಅಲ್ಲಲ್ಲಿಕೆಲ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ.

ಶ್ರೀಹರ್ಷ:- ಸೂತ್ರಧಾರ: ಅದ್ಯಾಹಂ ವಸಂತೋತ್ಸವೇ ಸಬಹುಮಾನ ಮಾಹೂಯ ನಾನುದಗ್ದೇಶಾಗತೇನ ರಾಜ್ಞ: ಶ್ರೀ ಹರ್ಷ ದೇವಸ್ಸೆ ಅಪೂರ್ವವಸ್ತು ರಚನಾಲಂಕೃತಾ ರತ್ನಾವಲೀ ನಾಮನಾಡಿಕೃತಂ। ಸಾ ಚಾಸ್ಮಾಭಿ: ಶ್ರೋತ್ರಪರಂಪರಯಾ ಶ್ರುತಾ ನ ತು ಪ್ರಯೋಗತೋ ದೃಷ್ಟ। ತತ್ತಸ್ಸೈವ ರಾಜ್ಞಾ: ಸಕಲಜನಹೃದಯಾಹ್ಲಾವಿನೋ ಬಹುಮಾನ ದಸ್ಮಾಸು ಚಾನುಗ್ರಹಬುದ್ಧ್ಯಾ ಯಥಾವತ್ ಪ್ರಯೋಗೇಣತ್ವಯಾ ನಾಟಯಿತವ್ಯಾ ಇತಿ। ತದ್ಯಾವದಿದಾನೀಂ ನೇಪಥ್ಯರಚನಾಂ ಕೃತ್ವಾ ಯಥಾಭಿಲಷಿತಂ ಸಂಪಂದಯಾಮಿ । (ಪರಿಕ್ರಮ್ಯ ಅವಲೋಕ್ಯ ಚ) ಆಯೇ ಆವರ್ಚಿತಾನಿ ಸಕಲ ಸಾಮಾಜಿಕುನಾಂ ಮನಾಂ ಸೀತಿ ಮೇ ನಿಶ್ಚ ಯ । ಕುತ:।

ಬಸವಪ್ಪ ಶಾಸ್ತ್ರಿಗಳು : ಈ ಗಳೀವಸಂತೋತ್ಸವದಲ್ಲಿ ರಾಜೊತ್ರಮನಾದದ ಶ್ರೀ ಹರ್ಷದೇವನ ಪಾದಪದ್ಮೋಪಜೀವಿಗಳೆನಿಸಿದನೇಕದೇಶಾಗತರಾದ ಅರಸುಗಳು ಬಹುಮಾನ ಪೂರ್ವಕವಾಗಿ ನನ್ನನ್ನು ಕರೆಯಿಸಿ ನಮ್ಮ ಸ್ವಾಮಿ ಯಾದ ಶ್ರೀಹರ್ಷದೇವನು ಅಪೂರ್ವವಸ್ತುರಚನಾಲಂಕೃತವಾಗಿ ರತ್ನಾವಳೀ ನಾಟಕೆಯನ್ನು ಮೂಡಿರ್ಪನೆಂದು ಕೇಳಿರುವೆವಲ್ಲದೆ ಆಡಿದುದನ್ನು ನೋಡಿಲಿಲ್ಲವು. ಆದುದರಿಂದ ಅಖಿಲ ಹೃದಯಾಹ್ಲಾದದದಕಾರಿಯಾದ ಶ್ರೀ ಹರ್ಷದೇವನ ದೆಸೆಯ ಬಹುಮಾನದಿಂದಾಗಲೀ ಅಥವಾ ನಮ್ಮೊಳನುಗ್ರಹ ಬುದ್ಧಿಯಿಂದಲಾಗಲಿ ನೀನಾಡಿಸಬೇಕೆಂದು ಹೇಳಿರುವರು. ಅದರಿಂದ ನೇಪಥ್ಯರಚನೆಯನ್ನು ಮಾಡಿಕೊಂಡು ಅವರ ಅಭಿಲಾಷೆಯನ್ನು ನೆರವೇರಿಸುವೆನು. ಸಕಲ ಸಾಮಾಜಿಕರ ಮನಸ್ಸೂಗಳೂ ಸೆಳೆಕೊಳಿಲ್ಪಡ್ಡುವೆಂದು ನಿಶ್ಚಯಿಸಿರುವೆನು.

ಸಿಂಗರಾರ್ಯ : ಈಗಳೀ ವಸಂತೋತ್ಸವದೊಳ್ಪಿಲನಾಡುಗಳಿಂ ಪಶ್ಚಿಮ ಶ್ರೀರಂಗರಾಜನಾಡಿದುದರೆಯಂ ಸೇವಿಸಲ್ಬಂದು ಸಂದಣಿಸಿ ಸಭೆಯಂ ಸಿಂಗರಿಸುವೀ ಬಿಜ್ಜೆವಳಿರೇಶಯರೆನ್ನಂ ಕರೆಬಂತು ನಿರವಿಸಿದರ್ ಅಹೋ ಪರಾಂ ಕೋಡಮಧಿರೋಹತಿ ಪ್ರಮೋದ : ಪೌರಾಣಾಮ್ । ತಥಾ ಹಿ। ಎಂಬ ಮಾತನ್ನು ಬಸವಪ್ಪಶಾಸ್ತ್ರಿಗಳು ಆಶ್ಚರ್ಯ ! ಪುರಜನದ ಉತ್ಸಾಹವು ಉನ್ಮಸ್ತಕವಾಗಿರ್ಪುದು. ಸಿಂಗರಾರ್ಯು ಅಚ್ಚರಿ! ಅಚ್ಚರಿ! ಪೊವಿಲಿ ಚರುಕ್ಕೆ ವದುಮ್ಮಹಂ ಮಿಕ್ಕು ಮಂಡೆಯಂ ಮೀ ಪರಿವೃತ್ತಿದೆ ಅಂತಪ್ಪುದೆತ್ತಿ ಎಂಬುದಾಗಿ ಹಳೆಗನ್ನಡದಲ್ಲಿ ಅನುವಾದಿಸಿದ್ದಾನೆ.

ಧಾರಾಯಂತ್ರವಿಮುಕ್ತ ಸಂತತ ಪಯ : ಪೂರ ಪ್ಲುತೇ ಸರ್ವತೆ:
ಸದ್ಯ : ಸಾಂದ್ರವಿಮರ್ದಕರ್ದಮಕೃತೆ ಕ್ರೀಡೇ ಕ್ಷಣಂ ಪ್ರಾಂಗಣೇ।
ಉದ್ದಾಮಪ್ರಮದಾ ಕಪೋಲನಿಪತತ್ ಸಿಂಧೂರರಾಗುರಣೈ :
ಸ್ಸೈಂಧೋರೀಪ್ರಿಯತೇ ಜನೇನ ಚರಣನ್ಯಾಸ್ಯೆ : ಪುರ : ಕುಡ್ಡಿಮಮ್ ॥
(ಪು. ೨೪೩ ಹರ್ಷಮಹಾಸಂಪುಟ)

ಮಹಾಸ್ರಗ್ಧರೆಯಲ್ಲಿ ಅನುವಾದಿಸಿದ ಬಸವಪ್ಪ ಶಾಸ್ತ್ರಿಗಳ ಅನುವಾದ ಹೀಗಿದೆ.

ಜಳಿಯಂತೋನ್ಮುಕ್ತ ಧಾರೋದಕದೆ ನೆನೆದು ಸಂಮರ್ದದಿಂದಂಗಳಿಂಪಂ
ಕಿಳಿಭಾವಂಬೆತ್ತು ಕಾಂತಾಜನದ ಕದದಪಿನಿಂ ಬೀಳ್ವಸಿಂದೂರ ಧೂಳೀ।
ಕುಳಿದಿಂ ಕೆಂಪಾಗಲಿಲ್ಲಿಂ ಪರಿವಚನ ಪದನ್ಯಾಸದಿಂ ಕುಟ್ಟಿಮಂ ಕಂ
ಗೊಳಿಕುಂ ಲಾಕ್ಷನುಲೇಪಂ ಬಡೆದು ಸೊಗಯಿಪೊಂದಂದದಿಮ ನೋಳ್ಪೊಡೆತ್ತಂ ॥
ಎಂಬುದಾಗಿ ಬಸವಪ್ಪಶಾಸ್ತ್ರಿಗಳು ಅನುವಾದಿಸಿದ್ದಾರೆ.

ಸಿಂಗರಾರ್ಯನು ವಿಷ್ಕಂಭದಲ್ಲಿ ರತ್ನಾವಳಿಯನ್ನು ಬದಲಾಯಿಸಿಕೊಂಡಿದ್ದಾನೆ.(ತತ: ಪ್ರವಿಶತಿ ಯೌಗಂಧರಾಯಣ:)

ಯೌಗಂಧರಾಯಣ : ಏವಮೇತತ್ । ಕ: ಸಂದೇಹ । (ದ್ವಿಪಾದನ್ಯಸ್ಮಾದಿತಿ ಪುನ ಪಠಿತ್ವಾ) ಅನ್ಯಥಾಕ್ವ ಸಿದ್ಧಾದೇಶ ಪ್ರತ್ಯಯ ಪ್ರಾರ್ಥಿತಾಯಾ : ಸಿಂಹಲೇಶ್ವರ ದುಹಿತು: ಸಮುದ್ರೇ ಯಾನಭಂಗಭಗ್ನೋತ್ಥಿತಾಯಾ: ಫಲಕಾಸಾದನಂ ಕ್ವಚ ಕೌಶಾಂಬಿಯೇನ ವಣಿಚಾ ಸಿಂಹಲೇಭ್ಯ: ಪ್ರತ್ಯಾಗಚ್ಛತಾ ತದವಸ್ಥಾಯಾಃ ಎಂಬುದನ್ನು ಬಸವಪ್ಪಶಾಸ್ತ್ರಿಗಳು

(ಅನಂತರ ಸಂತೋಷಿಯಸದ ಯೌಗಂಧರಾಯಣನು ಪ್ರವೇಶಿಸುವನು).

''ಹಾಗೆಯೇ ಸರಿ. ಆದಕ್ಕೆ ಸಂದೇಹವೇನು? ಹಾಗಲ್ಲದಿದ್ದರೆ ಸಿದ್ದ ಪುರುಷನು ಹೇಳಿದುದನ್ನು ನಂಬಿ ನಮ್ಮ ಮಹಾರಾಜನಿಗಾಗಿ ನಾನು ಪ್ರಾರ್ಥಿಸಿದ ಸಿಂಹಳೇಂದ್ರ ಪ್ರತಿಯು ಹಡಗೊಡೆದು ಸಮುದ್ರದಲ್ಲಿ ಮುಳುಗುವಷ್ಟರರಲ್ಲೇ ಆಕೆಗೆ ಹಲಗೆ ಸಿಕ್ಕುವುದೆಂದರೇನು? ಸಿಂಹಳ ದೇಶದಿಂದ ಹಿಂತಿರುಗಿ ಬರುತ್ತಿರುವ ಕೌಶಾಂಬಿಯ ವರ್ತಕನು ಹಲಗೆಯ ಮೇಲೆ ತೇಲುತ್ತಿದ್ದ ಆಕೆಯನ್ನು ಕಂಡು ರತ್ನಮಾಲಿಕೆಯ ಗುರುತಿನಿಂದರಿತು ಇಲ್ಲಿಗೆ ಕರೆತರುವವುದೆಂದರೇನು? (ಹರ್ಷದಿಂದ) ಸರ್ವಪ್ರಕಾರದಿಂದಲೂ ಅಭ್ಯುದಯಗಳು ನಮ್ಮ ಸ್ವಾಮಿಯನ್ನು ಸೇರುತ್ತಿರುವೆವು. ಆಕೆಯನ್ನು ನಾನು ದೇವಿಯ ಹಸ್ತಕ್ಕೆ ಸಮರ್ಪಿಸಿದ್ದು ಯುಕ್ತವಾದ ಕಾರ್ಯವನ್ನು ಮಾಡಿದಂತೆಯೇ ಆಯಿತು. ಇದಲ್ಲದೆ ನಮ್ಮ ಬಾಭ್ರವ್ಯನೆಂಬ ಕಂಚುಕಿಯು ಸಿಂಹಳೇಂದ್ರನ ಮಂತ್ರಿಯಾದ ವಸುಭೂತಿಯೊಡನೆ ಅತಿ ಕಷ್ಟಪಟ್ಟು ಸಮುದ್ರವನ್ನು ಉತ್ತರಿಸಿ ಬಂದು ಕೋಸಸಲ ದೇಶದ ಕೊಳ್ಳೆಗೆ ಹೋದ ಋಮಣ್ವಂತನೆಂಬ ಸೇನಾಪತಿಯೊಡನೆ ಸೇರಿದನೆಂದು ಕೇಳಿದೆನು. ಮುಖ್ಯವಾಗಿ ನಮ್ಮ ಪ್ರಭು ಪ್ರಯೋಜನವು ನೇರವೇರಿದ್ದಾದಗಿದ್ದರೂ ನನಗೆ ಸಂತುಷ್ಟಿಯನ್ನು ಮಾಡದಿರುವುದು. ಇದನ್ನೇ ಸಿಂಗರಾರ್ಯನು ಹೀಗೆ ಹೇಳಿದ್ದಾನೆ.

(ಬಮಿರ್ರೈ ಮುನ್ನಿರವಿಸಿದ ಪರಿಯಿಂದುದ್ಧವಂ ತೆರಿಯತ್ತಣಿಂ ಪೊರೆಮಟ್ಟು ಬಂದು)

ಉದ್ಧವಂ: ಅದಂತಪ್ಪದಪ್ಪುದು ಇದಕ್ಕೆ ಸಂದೆಯಮಿಲ್ಲ. ( ಎಂದು ಕಡಲ ನಡುದುದೊಡೇಂ-ಮಿ ಎಂದು ಮೊದದಲಾದುದದಂ ನುಡಿದು) ಅಂತಲ್ಲದಿರ್ದೊಡಾಪಶ್ವಂ ಬಂದೊರೆದ ಕಜೆದಿರವಂ ನಂಬಿಯ ಮತೀದೇಶದರಸನಂ ಪ್ರಾರ್ಥಿಸುವವಿನು; ಅವಂ ತನ್ನ ಕುವರರಿರ್ವರುಮಪಿಯದಂತಾ ಕನ್ನೆಯಂ ಕಡಲ ಬಳಿವಿಡಿದು ಕಡುವೇಗದಿಂ ದ್ವಾರಕೆ ಗೊಡಗೊಂಡೊಯ್ಯಿಮೆಂದು ಪಡಂಗನೇಮಿಸಿ ಕಳಿಪ್ರವುದುಂ; ಅರಾಯಗುವರಿಯನಾಂ ಮುನ್ನೀವ ದಾ ನಿಡಿದೆಮ್ಮೂರ್ಗೆ ತರುತ್ತಮಿರೆ, ರನ್ನದಿವಿಯ ಸನಿಯದೊಳ್ ನಡುಗಡಲೊಳಿರ್ವಗಿರಿಯ ನೆಡಹಿಯಾಪಡಂಗೊಡೆದು ಕಡಲೊಳ್ಪಡೆ; ಅಕುವರಿಗಾಧಅರಮಾಗಿಯಾ ಗಳೊಂದು ಪಲಗೆ ಸಿಕ್ಕುವದೆಂತು ! ಅರಿತು ಸಿಲ್ಮಿದಾಪಲಗೆಯಾಳ್ ತೇಲುತ್ತಿರ್ಪಿನಂ, ಆಗಳಾದ್ವಾರುವತೀ ಪುರದ ಪರದದನೊರವಂ ರನ್ನದಿವಿಗೆ ಪೋಗಿರ್ದು ಮರಳ್ದಾದಪಿವಿಡಿದು ಬರುತ್ತು ಮಾತೆಪಿದೊಳಿರ್ಪಾಕುವರಿಯಂ ಕಂಡು, ಕಡ್ಡಾಣಿಮುತ್ತಿನ ತಾರಾವಳಿಯ ಕು ಪಿನಿಂದ ದ್ದಾರಕಿಗೆ ತರ್ಪುದೆಂತುಟು ! ಆದರೆಂದೆಮ್ಮಾಳ್ದಿಂಗೆಲ್ಲ ತೆರೆದಿಂದದ ಮುಕ್ಕೆವಂಗಳ್ ನಿಕ್ಕುವಮಾಗಗಿ ತ (ಮುತ್ತ ಮಳೋಚಿಸಿ) ಅನುಮೀಕುವರಿಯ ನರಸಿಯ ಕೈಯೊಳಿತ್ತು ಕಜ್ಜಮಂ ಸಜ್ಜುಗೊಳಿಸಿದೆಂ.

ಮತ್ತ ಮೀಗಳೀ ಸುಭದ್ರನೆಂಬ ವೆಡಿಯರಂ ಆವಂತಿದೇಶದರಸನ ಆಮಾತ್ಯನಾದ ಸುನಂದ ನೊಡವೆರೆದಾ ಕಡಲೆಡೆ ಯೊಳೆನೊತೋ ಕಡ್ಡಾಯ ಸಂಬಟ್ಟಲ್ಲಿಂ ಪೊ ಮಟ್ಟು ಸಾಭಪುರಂಧಿ ಪತಿಯಂ ಮಡಿವಲ್ಕೆ ಪೋಗಿರ್ಪೆದ್ಮು ಯುವರಾಜನಾದ ಪ್ರದ್ಯಂಮಾನೊಡನೆ ಕೂಡಿರ್ಕುಮೆಂದೊಂದು ವೃತ್ತಾಂತಮಂ ಕೇಳ್ದೆಂ. ಇಂತಿನಿತುಂ ಕೈಸಾರ್ದಂತಿರೆಯುಮೆನ್ನ ಮನಕ್ಕೆ ಅಳಿದುದೋ ದು. ಮೂಲ ನಾಟಕದ ಯೌಗಂಧರಾಯಣ ಇಲ್ಲಿ ಉದ್ಧವನಾಗಿದ್ದಾನೆ. ಸಿದ್ಧ ಪುರುಷ ಬ್ರಾಹ್ಮಣನಾಗಿದ್ದಾನೆ. ಸಿಂಹಳದೇಶದ ರಾಜ ಆವಂತಿ ರಾಜನಾಗಿದ್ದಾನೆ. ಕೌಶಾಂಬಿಯ ವರ್ತಕನು ದ್ವಾರಾವತೀಪುರದ ವ್ಯಾಪಾರಿಯು ರತ್ನದ್ವೀಪಕ್ಕೆ ಹೋಗಿದ್ದು, ರಾಜಕುವರಿಯನ್ನು ಹರ್ಷ ರತ್ನಮೂಲಿಕೆಯ ಗುರುತಿನಿಂದ ಎಂದರೆ ಸಿಂಗರಾರ್ಯ ಕಟ್ಟಾಣಿ ಮುತ್ತಿನ ನಕ್ಷತ್ರ ಮಾಲೆ ಗುರುತಿನಿಂದ ಎಂದಿದ್ದಾನೆ. ಬಾಭ್ರವ್ಯನೆಂಬ ಕಂಚುಕಿಯು ಸಿಂಹಳೇಂದ್ರನ ಮಂತ್ರಿಯಾದ ವಸುಭೂತಿಯೊಡನೆ ಅತಿಕಷ್ಟಪಟ್ಟು ಸಮುದ್ರವನ್ನು ಉತ್ತರಿಸಿ ಬಂದು ಕೋಸಲದೇಶದ ಕೊಳ್ಳೆಗೆ ಹೋದ ಋಮಣ್ವಂತೆನೆಂಬ ಸೇನಾಪತಿಯೊಡನೆ ಸೇರಿದನೆಂದು ಬಸವಪ್ಪ ಶಾಸ್ತ್ರಿಗಳು ಹೇಳಿದರೆ. ಸಿಂಗರಾರ್ಯನು ಸುಭದ್ರನೆಂಬ ದ್ವಾರಪಾಲಕನು ಆವಂತಿದೇಶದ ಅಮಾತ್ಯನಾದ ಸುನಂದನ ಜೊತೆ ಸೇರಿ ಆ ಸಮುದ್ರ ಪ್ರದೇಶದಲ್ಲಿ ಬಹುವಾಗಿ ಕಷ್ಟಪಟ್ಟು, ಅಲ್ಲಿಂದ ಹೊರಟು, ಸೌಭಪುರದ ರಾಜನನ್ನು ಕೊಲ್ಲಲೆಂದು ಹೋಗಿರುವ ನಮ್ಮ ಯುವರಾಜ ಪ್ರದ್ಯುಮ್ನನನ್ನು ಸೇರಿಕೊಂಡನೆಂದು ಹೇಳಿದ್ದಾನೆ. ಬಹುಶಃ ಇದೊಂದೇ ಇಡೀ ಅನುವಾದದಲ್ಲಿ ಸಿಂಗರಾರ್ಯನು ಮಾಡಿಕೊಂಡ ಬದಲಾವನೆ ಎನಿಸುತ್ತದೆ. ವಿಷಂಭದಲ್ಲಿ ಹೇಳಿರುವ ಶ್ಲೋಕವೊಂದರಲ್ಲಿ ಎರಡೂ ಅನುವಾದಗಳಲ್ಲಿ ಸಾಮ್ಯತೆಯಿದೆ

ರಾಜ್ಯಂ ನಿರ್ಜಿತಶತ್ರು ಯೋಗ್ಯಸಚಿದೇ ನ್ಯಸ್ತ: ಸಮಸ್ತೋ ಭರ :<br>
ಸಮ್ಯಕ್ಪಾಲನ ಲಾಲಿತಾ: ಪ್ರಶಮಿತಾಶೇಷೋಪಸರ್ಗಾ: ಪ್ರಜಾ:।<br>
ಪ್ರದ್ಯೋತಸ್ಯ ಸುತಾ ವಸಣತಸಮಯಸ್ತ್ವಂ ಚೇತಿನಾಮ್ನಾ ಧೃತಿಂ

ಕಾಮ: ಕಾಮಮುಪೈತ್ವಯಂ ಮಮ ಪುನರ್ಮನ್ಯೇ ಮಹಾನುತ್ಸವ:।
ಬಸವಪ್ಪಶಾಸ್ತ್ರಿಗಳು ಹೀಗೆ ಹೇಳಿದ್ದಾರೆ.
ಮ: ಅರಿಗಳ್ ನಿರ್ಜಿತರಾದರೆನ್ನ ಭರವೆಲ್ಲಂ ಸಜ್ಜನಾಮಾತ್ಯನೋ
ಳಿರಿಸ್ಪಟ್ಟುದು ಸಾಧುಪಾಲನೆಯಿ ನಿಮ್ಮಿ ನಾಡಿಗರ್ ನಮ್ಮಾಳು।
ದರಮಾಂತಿರ್ಪರು ದೇವಿಯಂ ಸಖನೆ ನೀನುಂ ಚೈತ್ರನುಂ ಸಾರ್ದಿರ
ಲೇರದೀಯುತ್ಸವಮೆನ್ನದತ್ತಿ ಮದನಂ ತೋಷಿಕ್ಕೆ ತಾಂ ನಾಮದಿಂ॥
ಮಿತ್ರವಿಂದಾ ಗೋವಿಂದಲ್ಲಿ ರಾಜನು ವಾಸುದೇವನಾಗಿದ್ದಾನೆ. ವಸಂತಕ
ಮೇಲಿನ ಶ್ಲೋಕಕ್ಕೆ ಸಿಂಗರಾ ರ‍್ಯನು ಹೀಗೆ ಹೇಳಿದ್ದಾನೆ.

ಜಿತಲೋಕಂಮಿಗೆ ಶಾಂತವಿಗ್ರಹನುದಾರಂ ಸರ್ವಸಂಭಾವಿತಂ ಸತತಂ ಸಂಭೃತ ಸಾಮನಸ್ಯಭರನಾತ್ಮಾ ರಾಮನಾರಯ್ಯ ಲ॥ ಪ್ರತಿಮಂ ತನ್ನ ಮಹೋತ್ಸವಾತಿಶಯವಂ ನೋಡಲ್ಕೆ ಕಾಮಂಬೊಲಾ। ವೃತನಾಗಿಂತುಟು ವಾಸುದೇವನಿದೆಕೊಳ್ ಸಾರ್ತಂದನಾನಂದದಿಂ ಅನಮೆನ್ನ ಮನೆಗೆಯ್ದಿ ಕಾರ್ಯಶೇಷಮನಾಳೋಚಿಪೆಂ

**ವಿದೂಷಕ:** (ವಿಲೋಕ್ಯ) ಇದಮಪಿ ತಾಪತ್ ಸುವಿದಗ್ಧ ಜನಭರಿತಶೃಂಗಕಜಲ ಪ್ರಹಾರ ಮುಕ್ತ ಸೀತ್ಕಾರ ವಾರ ವಿಲಾಸಿನೀಜನ ಮಸಿತಮಮ ಲೋಕಯತು ಪ್ರಿಯವಯಸ್ಯ:।

ಬಸವಪ್ಪ ಶಾಸ್ತ್ರಿಗಳು: (ನೋಡಿ) ''ಮಿತ್ರನೆ, ಇದೆ ಚಮಲ ವಿಟನಜಂರಯ್ಯ ಮೆಸೆ ಕೈಯೆತ್ತಿ ಪೊಯ್ಯೆ ಸುರಿದ ಕೆಂಬಿನಂಡೆಗಳ ತಣ್ಣುವೆತ್ತ ತುಂತುರ್ವೆಳೆಯ ಧಾರೆಯಿಂನಾಂದು ನಡಗು ವಾರವಿಲಾಸಿನೀವಾರದ ವಿಲಾಸದನವಲೋಕಿಸಾ'' ಬಸವಪ್ಪ ಶಾಸ್ತ್ರಿಗಳ ಈ ಅನುವಾದ ತುಂಬ ಕ್ಲಿಷ್ಟವಾಗಿದ್ದು ಅದು ಕನ್ನಡಾನುವಾದವೇ ಎನಿಸುತ್ತವೆ. ಸಿಂಗರಾರ‍್ಯನು ಇದನ್ನೆ ಸರಳ, ಸುಂದರ ಶೈಲಿಯಲ್ಲಿ ಹೀಗೆ ಹೇಳುತ್ತಾನೆ ''ವಿವಚಿನಂ ಪಿಡಿದ ಜೀರ್ಕೊಳವೆಗಳಿಂ ವನ್ನಿರ್ಲಳಿಂ ಬೆಲೆಪಣ್ಣಳ್ ಮೇಲೆ ಸೂಸುವಿನಂ, ಅವರದ ತಣ್ಣನಿಂ ಜೀಂಗವೆವ ಬಿನದಮಂ ನೋಡಾ.

ಮದನಿಕೆ ಚೂತ ಲತಿಕೆಯರು ಕಲಾವತಿ, ಕನಕಾಂಗಿಯರಾಗಿದ್ದಾರೆ ಮಿತ್ರವಿಂದ ಗೋವಿಂದದಲ್ಲಿ ಹೆಸರುಳ್ಳ ವ್ಯತ್ಯಾಸ ಹೊರತು ಪಡಿಸಿದರೆ ಸಂಭಾಷಣೆ, ಅಥವಾ ಕಥಾವಸ್ತುವಿನಲ್ಲಿ ಯಾವುದೇ ವ್ಯತ್ಯಾಸವಿಲ್ಲ ಎನ್ನುವುದನ್ನು ಇಲ್ಲಿ ನೋಡಬಹುದು.

ವಿದೂಷಕ: ( ನಸುನಗೆಯಿಂದ) ಮಿತ್ರನೇ, ಅಲಂಕೃತರಾದ ಈ ಪೆಣ್ಗಳಿ ನಡುವೆ ನಾನೂ ಸ್ವಲ್ಪ ಕುಣಿದು ಕುಣಿದು ಹಾಡಿ ಮದನ ಮಹೋತ್ಸವಕ್ಕೆ ಮನ್ನಣೆ ಮಾಡಿ ಬರುವೆನು.

ಸಿಂಗರಾರ್ಯ: ಜೀಯ್ಯಾ, ಆನುಮೀಕುಣಿದಾಡುವ ಬಿಡುವೆಣ್ಗಳ್ ನಡುವೆ ಪೆಕ್ಕಣಂಗೆಯ್ದು ನೆನೆವಿಲ್ಲನುಕ್ಕೆವಮಂ ಪೆರ್ಚಳಿಂಗೊಳಿಸುವೆಂ

ರಾಜ (ಮುಗುಳು ನಗೆಯಿಂದ) ಹಾಗೆ ಮಾಡು

ವಾಸುದೇವ: ಎಲೆ ಸಬ್ಬವಕಾಲನೆ ಅಂತಕ್ಕೆ

ವಿದೂಷಕ: (ನೀನು ಹೇಳಿದಂತೆಯೇ ಆಗಲಿ) ( ಎದ್ದು ಹೋಗಿ ಚೇಡಿಯರ ನಡುವೆ ಕುಣಿಯುತ್ತಾ) ಎಲೆ, ಮದನಿಕೆ ಎಲೆ ಚೂತಲತಿಕೆ, ಈ ಚರ್ಚರಿಯನ್ನು ನನಗಿನಿಸು ಕಲಿಸಿಕೊಡು.

| | | |
|---|---|---|
| **ವಿದೂಷಕಂ** | : | (ಇಲೆದು ಉತ್ತರಿಗೆಯಂ ನಡುವಿಂಗೆ ಸುತ್ತಿ ಆ ಚೇದಿಯರಿರ್ತರದೊಳ್ ಸ್ವಾಂತೆ ತಾಂ ನೆಲೆಗೊಂಡು ಕೊಂಕುಗುಣಿತಂ ಗುಣಿಯುತ್ತೆ ಬರ್ದ್ವಳಿಂ ನೋಡಿ ಎಲೆ ಕಲಾವತಿ, ನೀನಿಚರ್ಚರಿಯನೆನಗಿನಿಸು ಕಲಿಸು. |
| **ಮದನಿಕೆ** | : | ( ನಕ್ಕು) ಎಲೆ ಮಗ್ಧನೆ, ಇದು ಚರ್ಚರಿಯಲ್ಲ |
| **ಕಲಾವತಿ** | : | ಎಲೆ ಎಗ್ಗನೆ, ಇದು ಚರ್ಚರಿಯಲಲ್ತು |
| **ವಿದೂಷಕ** | : | ಹಾಗಾದರಿನ್ನೇನು? |
| **ವಿಮಾ** | : | ಮತ್ತಿದೇಂ |
| **ಚೇಡಿ** | : | ಇದು ದ್ವಿಪದೀ ಖಂಡವೂ |
| **ಕಲಾವತಿ** | : | ಇದು ದ್ವಿಪದೀಖಣ್ಣಮೆಂಬ ಗಾನಂ ಹೀಗೆ |

ಸಾಗರಿಕೆಯನ್ನು ಸಿಂಗರಾಯ್ಯ ಸಾರಸ್ವತಿಯಾಗಿದ್ದಾನೆ. ಕಾಂಚಮಾಲೆ ಸೌದಾಮಿನಿ, ಸಾರಿಕೆಯನ್ನು ಶಾಲಿಕೆಯಾಗಿ, ಸುಸಂಗತೆಯನ್ನು ಚಂದ್ರಲೇಖೆಯಾಗಿಸಿದ್ದಾನೆ. ಸಿಂಗರಾರ್ಯ ವಾಸುವದತ್ತೆದೇವಿಯಾಗಿದ್ದಾಳೆ. ಮದನೋತ್ಸವ ಮನ್ಮಥನ ಪೂಜೆಯನ್ನು ಪ್ರದ್ಯುಮ್ನನನ್ನಾಗಿಸಿದ್ದಾನೆ. ವಾಸುವದತ್ತೆ ರುಕ್ಮಿಣಿಯಾಗಿದ್ದಾಳೆ.

ರಾಜನು ದೇವಿಯನ್ನು ನೋಡಿ ಹೇಳುವ ಶ್ಲೋಕ ಹೀಗಿದೆ
ದೇವಿ ತ್ವನ್ಮುಖಪಂಕಜೇನ ಶಶಿನ: ಶೋಭಾ ತಿರಸ್ಕಾರಿಣಾ
ಪಶ್ಯಾಭ್ಜಾನಿ ವಿನಿರ್ಜಿತಾನಿ ಸಹಸಾ ಗಚ್ಛಂತಿ ವಿಚ್ಛಾಯತಾಮ್।
ಶ್ರುತ್ವಾ ತ್ವತ್ಪರಿವಾರವಾರ ವನಿತಾಗೀತಾನಿ ಭೃಂಗಾಂಗನಾ

ಬಸವಪ್ಪಶಾಸ್ತ್ರಿಗಳು :

ಲೀಯಂತೇ ಮುಕುಲಾಂತರೇಷು ಶನಕೈ: ಸಂಜಾತಲಜ್ಜಾ ಇವೆ॥
ಅರಸಿ ಸುಧಾಂಶುವಂ ಜರಿವ ನಿನ್ನ ಮುಖಾಂಬುರುಹಕ್ಕೆ ಸೋಲ್ತು ತಾ
ವರೆ ಕಳೆಗುಂದುತಿರ್ದಪ್ಪುದು ನೋಡು ಭವತ್ಪರಿವಾರ ವಾರಸುಂ।
ದರಿಯರ ಸೀಯೆನ್ನಿಪ್ಪ ಪೊಸೆಗೇಯಮನಾಲಿಸಿ ಲಜ್ಜೆವತ್ತು ಷ
ಟ್ಚರಣವಧೂರಣಂ ಪುರುವುದಂಬುಜಿನೀ ಮುಕುಳಾಂತರಾಳಿಮಂ॥

ಸಿಂಗರಾರ್ಯ

ವೃ॥ ಅರನೇ ನಲ್ಲಳಿಯೊಂದಿ ಕುಂದುಗಳೆದೀ ನಿನ್ನಾಸ್ಯ ಪೂರ್ಣೇನ್ದು ವಿಂ।
ದರವಿನ್ದಂ ಕಡುಕಂದಿಕುಂದಿ ಪೊಳೆಪಂ ಬೀಳ್ಕೊಟ್ಟು ಸಂಕೋಚ ಮಾ॥
ನ್ತಿರೆ ನಿನ್ನೊಳಿಗವೆಣ್ಗಳಿಂಪಿನೊರೆ ವೊಳ್ವಾಡಂದಮಂಮ ಕೇಳ್ದಾ ನಾ:
ಣ್ಬೆರೆದಂತಲ್ಲಿ ಯಡಂಗುತಿರ್ಕುಮುಲಾದಿಂ ಪೆಣ್ದುಂಬಿಗಳ್ ನಿಡ್ಡಿ ಸಾ॥

ಎರಡು ಅನುವಾದಗಳಲ್ಲಿ ಸಾಕಷ್ಟು ಹೋಲಿಕೆಯಿದೆ. ದ್ವಿತಿಯಾಂಕದಲ್ಲಿ ನಿಪುಣಿಕೆ, ಸುಸಂಗತೆಯನ್ನು ಕುರಿತು ಹೇಳಿರುವದು ಮೂಲದಲ್ಲಿನಕ್ಕಿಂತ ಸಿಂಗರಾರ್ಯನಲ್ಲಿ ಬದಲಾವಣೆಗೊಂಡಿದೆ. ಮೂಲದಲ್ಲಿ ಅದು ಹೀಗಿದೆ. ನಿಪ್ರಣಿಕಾಃ ಕಥಂ ಸುಸಂಗತಾಃ ಹಲಾ ಸುಸಂಗತೇ ಸುಷ್ಠತ್ವಯಾ ಜ್ಞಾತಮ್। ಎತತ್ ಖಲು ಮಮ ವಿಸ್ಮಯಸ್ಯ ಕಾರಣಮ್। ಅದ್ಯ ಕಿಲಭರ್ತಾ ಶ್ರೀ ಪರ್ವತಾದಾಗತಸ್ಯ ಶ್ರೀ ಖಂಡದಾ ಸನಾಮಧೇಯಸ್ಯ ಧಾರ್ಮಿಕಸ್ಯ ಸಕಾಶಾದಕಾಲ ಕುಸುಮ ಸಂಜನನ ದೋಹದಂ ಶಿಕ್ಷಿತ್ವಾತ್ಮನೆ: ಪರಿಗೃಹೀತಾಂ ನವಮಾಲಿಕಾಂ ಕುಸುಮಸಮೃದ್ಧಿ ಶೋಭಿತಾಂ ಕರಿಷ್ಯತೀತಿ। ತತ್ಸೈತಂ ವೃತ್ತಾಂತಂ ಜ್ಞಾತುಂ ದೇವ್ಯಾಪ್ರೇಷಿತಾಸ್ಮಿ। ತ್ವಂ ಪುನ: ಕುತ್ರ ಪ್ರಸ್ಥಿತಾ।

ಬಸವಪ್ಪಶಾಸ್ತ್ರಿಗಳು ಇದಕ್ಕೆ ನಿಕಟಾನುವಾದ ರೂಪದಲ್ಲಿ ಹೀಗೆ ಕೊಟ್ಟಿದ್ದಾರೆ. ಈಗ ಮಹಾರಾಜನು ಮೋಹಳವಿದ್ಯೆ'' ಯನ್ನು ಕಲಿತು ತಾನು ಪರಿಗ್ರಹಿಸಿರುವ ನಾದಮಾಲಿಕಾ ಲತೆಗೆ ಕುಸುಮ ಸಮೃದ್ಧಿಯನ್ನು ಮಾಡುವೆನೆಂಬ ವೃತ್ತಾಂತವನ್ನು ತಿಳುಯುವದಕ್ಕಾಗಿ ದೇವಿಯು ನನ್ನನ್ನು ಕಳುಹಿಸಿದ್ದಳು.

ಇದಕ್ಕೆ ಸಿಂಗರಾರ್ಯನು ಹೆಸರು ಬದಲಾಯಿಸುವ ಮೂಲಕ ಹೀಗೆ ಹೇಳುತ್ತಾನೆ ವೈದಿಕ ಧರ್ಮದ ಪ್ರಾಚುತ್ಯತೆ ಇತನಲ್ಲಿ ಕಾಣುವದರಿಂದ ಶ್ರೀಶೈಲದ ಬದಲಾಗಿ ಬದಲಿಕಾಶ್ರಮವಾಗಿದೆ. ಶ್ರೀಖಂಡದಾಸ ಸಿದ್ಧಪುರುಷನಾಗಿದ್ದಾನೆ. ನೀಪ್ರಣಿಕೆ ಕಾದಂಬರಿಯಾಗಿದ್ದಾರೆ.

ಕಾದಂಬಿನಿ: ಎಲೆಲೆ ಚಂದ್ರಲೇಖೆ ಆಂ ಕಾಣದೆ ನಡೆಯುತಿರ್ದೆಂ ಎಲೆ ಚಂದ್ರಲೇಖೆ ಅದಂತಪ್ರಯೆ ಈ ಯಮ್ಮಹೆಕ್ಕೆ ಕಾರಣಮುಂಜು ನೀಂ ಚೆನ್ನಾಗಿ ತಿಳಿದೆಯ ಆದೆಂತೆನೆ ಈಗಳ್ಬಿದರಿಕಾಶ್ರಮ ದತ್ತಣಿಂ ರಾಮನುಂದನೆಂಬ ಪೆಸಮಿಳ್ಳಿ ಸಿದ್ದಪುರುಷ ನೂರ್ವಂ ಬಂದು ಆವನಿಂದ ಕಾಲ ದೂಳ್ಳು ಸುಮಂಗಳನೂರೆಯಿಸುವ ದೂಹಳಿದ ಬಿಜ್ಜೆಯಂ ಕಲ್ತು, ಮಾರಾಯಂ ತಾಂ ಪತಿಕರಿಸಿದ ನಾದಮಾಲಿಕೆಗೆ ಈದಳೇ ಕುಸುಮಸಮೃದ್ಧಿಯಂ ಮಾಪ್ಪಿನೆಂಬೀ ವೃತ್ತಾಂತಮಂ ತಿಳಿಯಲ್ಕೆಂದೆನಂ ದೇವಿಯರ್ ಕಳುಪಿದರ್.

ಭಾಗವತದಲ್ಲಿ ಕೃಷ್ಣ ಮಿತ್ರವಿಂದೆಯರ ಪರಿಣಯದ ಪ್ರಸಂಗಕ್ಕೆ ಸಂಬಧಿಸಿ, ಗಣ್ಯ ಘಟಿಗಳು ಯಾವುವೂ ಇಲ್ಲವೆಂಬುದನ್ನು ಹಿಂದೆಯೇ ಗಮನಿಸಿದೆ ಹೇಗಿದ್ದರೂ ಆ ಪ್ರಸಂಗವನ್ನು ' ರತ್ನಾವಲಿ' ಗೆ ಹೊಂದಿಸಲು ಈ ಕವಿಗೆ ಹೇಗೆ ಸಾಧ್ಯವಾಯಿತು ? ರತ್ನಾವಲಿಯ ಉದಯನನ ಪತ್ನಿ ವರಿದ ದತ್ತೆಯ ಬಂಧುವರ್ಗಕ್ಕೆ ಸೇರಿದವಳು ಎಂಬುದು ಮಿತ್ರವಿಂದೆ ಕೃಷ್ಣನ ಬಂಧುವರ್ಗಕ್ಕೆ ಸೇರಿದವಳು ಎಂಬುದೂ ಗಣವಾದ ಸಮಾನಕಥಾಂಶಗಳು. ಇಷ್ಟು ಹೊರತು, ಮಿತ್ರವಿಂದೆಯ ಕಥೆಗೆ ಸಂಬಂಧಿಸಿದ ಸ್ವಯಂವರ ಸಂದರ್ಭ,,ಕನ್ಯಾಪಹರಣ ಮುಂತಾದ ಯಾವ ಕಥಾ ಸಂಗತಿಗಳು 'ರತ್ನಾವಲಿಯಲ್ಲಿ ಬರುವುದಿಲ್ಲ.

ಹಾಗೆ ನೂಡಿದರೆ, 'ರತ್ನಾವಲಿ'ಯ ಕಥೆಗೂ 'ಮಿತ್ರವಿಂದಾ' ಗೋವಿಂದ ಕತೆಗೂ ಯಾವ ಹೂಲಿಕೆಯೂ ಇಲ್ಲವೆಂದು ಓಟ್ಟಿನಲ್ಲಿ ಹೇಳಿಬಿಡಬಹುದು ಹೇಗೆ ವೆಂಕಟಾಚಲಶಾಸ್ತ್ರಿಗಳು ಹೇಳಿಕೂಳ್ಳುತ್ತಲೇ ಮತ್ತೆ ಬೇರೂಂದು ಅಭಿಪ್ರಾಯಕ್ಕೆ ಬರುವದು ಪ್ರಸ್ತುತ ಚರ್ಚಗೆ ಪೂರಕವಾಗುವುದಿಲ್ಲ. ಅರ್ಥಾತ್ ಮಿತ್ರವಿಂದಾ ಗೂವಿಂದ- ಕರ್ಣಾಟಕ ಕಾವ್ಯ ಮಂಜರಿಯಾಗಿದೆಯೇ ಹೂರತು ಬಹುತೇಕ ಉಲ್ಲೇಖವಾಗಿರುವಂತೆ ರೂಪಾಂತರ ಅಥವಾ ಹರ್ಷ ನಾಟಕದ ಛಾಯೆ ಎನ್ನುವದು ಸರಿಯಲ್ಲ ಮಿತ್ರವಿಂದಾ, ಗೋವಿಂದ ಹರ್ಷ ಕೃತಿ ನಾಟಕದ ನಿಕಟ ಅನುವಾದ ಹೆಸರುಗಳನ್ನು ಹೊರತುಪಡಿಸಿ. ಅದೇ ವೆಂಕಟಾಚಲ ಶಾಸ್ತ್ರಿಗಳು 'ಸಿಂಗರಾರ್ಯನಿಗೆ 'ರತ್ನಾವಲಿ' ಯೇ ಕಥಾವೃಷ್ಟಿಯಿಂದ ಮುಖ್ಯವಾದ ಮಾತೃಕೆ. ಆದರೆ ಆತ ಆ ನಾಟಕವನ್ನು ಯಥಾವತ್ತಾಗಿ ಅನುವಾದಿಸಲು ಹೋಗಿಲ್ಲ. ಪ್ರತಿಯಾಗಿ ಆತನಿಗೆ ಪ್ರತಿಯಾಗಿ ಆತನಿಗೆ ಪ್ರಿಯವಾಗಿದ್ದಿರಬಹುದಾದ ಭಾಗವತ ಪುರಾಣದ ಮಿತ್ರವಿಂದೆಯ ವಿವಾಹದ ಕಥಾ ಸಂದರ್ಭವನ್ನು ಎತ್ತಿಕೊಂಡು 'ರತ್ನಾವಲಿ' ಗೆ ಅದನ್ನು ಹೊಂದಿಸಿದ್ದಾನೆ'' ಎನ್ನುವದು ತುಸು ಗೊಂದಲವೆನಿಸುತ್ತದೆ . ಅವರ ಮಾತುಗಳಲ್ಲಿಯೇ ಹೇಳುವದಾದರೆ ಭಾಗವತದಲ್ಲಿ ಕೃಷ್ಣ-ಮಿತ್ರವಿಂದೆಯರ ವಿವಾಹ ನಡೆಯುವ ರೀತಿಯನ್ನು ಕೈಬಿಟ್ಟು, 'ರತ್ನಾವಲಿ' ಯಲ್ಲಿ ಉದಯ-ರತ್ನಾವಲಿಯರ ವಿವಾಹ ನಡೆಯುವ ರೀತಿಯಲ್ಲಿ ಅದನ್ನು ಸಿಂಗರಾರ್ಯ

ನಿರ್ವಹಿಸಿ, ವಸ್ತು ನಿರ್ವ ಹಣೆಯಲ್ಲಿ ಹೊಸತನವನ್ನು ಮೆರೆಸಿದ್ದಾನೆ ಇದು ಕೃಷ್ಣನ ಕಥೆಗೆ ಬರೆದ ದ್ರೋಹವೋ, ಕವಿಸ್ವಾತಂತ್ರ್ಯವೆಂದು ತಿಳಿಯುವುದು ಉತ್ತಮಪಕ್ಷ. ಹಾಗಾಗಿ ಇಲ್ಲಿ ಸಮರ್ಥನೀಯ ಅಂಶವೆಂದರೆ ಸಿಂಗರಾರ್ಯನ ಕೃತಿ ನಿಕಟ- ಪ್ರಬುದ್ಧ ಅನುವಾದ ಸುಲಲಿತ ಸುಭಗ ಶೈಲಿಯ ಅನುವಾದ ಓದುಪಠ್ಯ -ರಂಗ ಪಠ್ಯವಾಗಿ ಜನರಂಜನೀಯವಾಗಿದೆ.'' ಭಾಗವತದ ಕಥಾಂಶವಷ್ಟನ್ನೇ ಬಳಸಿ, ವಿಸ್ತಾರಗೊಳಿಸಿ, ಸ್ವತಂತ್ರವಾಗಿ 'ಮಿತ್ರವಿಂದಾ ಪರಿಣಯ'ವೆಂಬ ನಾಟಕವನ್ನು ಸಿಂಗರಾರ್ಯ ರಚಿಸಬಹುದಾಗಿತ್ತು. ಆದರೆ ಹರ್ಷನ 'ರತ್ನಾವಲಿ' ಯ ವಸ್ತುವಿನ್ಯಾಸ, ಪ್ವನ್ಯರ್ಥಗಳು ಸೊಗಸು ಆದರ ಮನಸ್ಸನ್ನು ತುಂಬ ಹಿಡಿದಿತ್ತೆಂದು ತೋರುತ್ತವೆ. ಭಾಗವತದ ಪಾತ್ರಗಳನ್ನು 'ರತ್ನಾವಲಿ'ಯ ಸಂವಾದಗಳನ್ನು ಇಟ್ಟುಕೊಂಡು, ಕೆಲವು ಹೊಸ ಪಾತ್ರಗಳನ್ನು ಕಟ್ಟಿಕೊಂಡು ಪರಿಣಯದ ಈ ಕಥೆಗೆ ಆತ ಭಾಗವತದ ಜಾಡು ಬಿದ್ದಾ, 'ರತ್ನಾವಲಿ'ಯ ಜಾಡು ಹಿಡಿದನು. 'ರತ್ನಾವಲಿ;ಯ ಕಥೆಯನ್ನು ಯಥಾರೀತಿಯಲ್ಲಿ ಓಪ್ಪಿದರೂ ಕೃಷ್ಣನ ವ್ಯಕ್ತಿತ್ವಕ್ಕೆ ಅದು ಹೊಂದಿಕೊಳ್ಳಬಲ್ಲದು ಎಂದು ಅವನು ಪ್ರಾಯ: ಭಾವಿಸಿರಬೇಕು.''

ಇನ್ನು ಸಿಂಗರಾರ್ಯ ಅನುವಾದದಲ್ಲಿ ವ್ಯತ್ಯಾಸವಾಗಿ ಕಾಣಿಸುವದು ೪ ನೇ ಅಂಕಾದಲ್ಲಿ ಮಾತ್ರ ''ಐಂದ್ರಜಾಲಿಗನು ಇಂದ್ರಜಾಲವಿದ್ಯಾದೇವತೆಗಳಿಗೆ ನಮಸ್ಕರಿಸಿದ ವಿಷಯ ಮೂಲದಲ್ಲಿ ಒಂದು ಗೀತೆಭಾಗವಾಗಿ ಬಂದಿದ್ದರೆ, ಅನುವಾದದಲ್ಲಿ ಸ್ವಲ್ಪ ವ್ಯತ್ಯಾಸದೊಂದಿಗೆ ಗದ್ಯಭಾಗವಾಗಿ ಬಂದಿದೆ. ಹಾಗೆಯೇ ಆಟವನ್ನು ನೋಡುತ್ತಿದ್ದ ಕೃಷ್ಣನನ್ನು ಸಂದರ್ಶಿ ಸಿದ ಅಮಾತ್ಯ ಸುನಂದನು ವಾಸುದೇವನ ವೃಭವ ವಿಲಾಸಗಳಿಗೆ ವಿಸ್ಮಿತನಾದುದನ್ನು ವರ್ಣಿಸುವಾಗ, ಸಿಂಗರಾರ್ಯ ಪ್ರಾಯಶ ಸಪ್ಪೆಯಾಗಿ ಕಾಣುವ ಮೂಲದ ಒಂದು ಪದ್ಯವನ್ನು ಪೂರ್ತಿಯಾಗಿಯೇ ಬಿಟ್ಟು. ತನ್ನ ಕೃಷ್ಣಭಕ್ತಿಗೆ ಒಪ್ಪುವಂತೆ ಮೂರು ವೃತ್ತಗಳನ್ನು, ಎರಡು ಕಂದಗಳನ್ನು ಹೊಸದಾಗಿಯೇ ಬರೆದಿದ್ದಾನೆ. ಅವು ನಿಜವಾಗಿ ಚೆನ್ನಾಗಿವೆ. ಮೂಲದಲ್ಲಿಯೇ ಇವನ್ನು ಪರಸ್ಪರವಾಗಿ ಹೋಲಿಸಿ ನೋಡಬಹುದು.''

ಇವಳೆ ನಾಟಕವನ್ನು ಆಮೂಲಾಗ್ರವಾಗಿ ಅಭ್ಯಾಸ ಮಾಡಿದ ಸಿಂಗರಾರ್ಯನಿಗಾ ಭಾಗವತದದ ಕಥೆಯನ್ನು ಇದಕ್ಕೆ ಕಸಿಮಾಡಬಹುದು ಎಂದು ತೋರಿದರು ಬರೀ ಪಾತ್ರಗಳ ಹೆಸರನ್ನು ಮಾತ್ರ ಬದಲಾಯಿಸಿದ್ದಾನೆ. ಎನ್ನಬಹುದು. ಮಿತ್ರವಿಂದಾ ಗೋವಿಂದಾ ನಾಟಕಕ್ಕೆ ರತ್ನಾವಳಿಯ ನಾಟಕ ಇಲ್ಲಿ ಆಧಾರ. ಅಲ್ಲಿ ಮತ್ಯರಾಜ, ಇಲ್ಲಿ ವಾಸುದೇವ: ವಾಸವದತ್ತ ಇಲ್ಲಿ ರುಕ್ಮಿಣಿದೇವಿ; ಅಲ್ಲಿಯ ವಿದೂಷಕ ಇಲ್ಲಿ ಕುಚೇಲ; ನಾಗರೀಕ ಸಾರಸ್ವತಿ; ಮೃಗಂಧರಾಯಣ ಇಲ್ಲಿ ಉದ್ಭವ ಹೀಗೆ ಮುಖ್ಯ ಪಾತ್ರದಲ್ಲಿ ಪರಸ್ಪರ ಹೋಲಿಕೆಯನ್ನು ಗುರುತಿಸಬಹುದು. ಭಾಗವತದ ನಾಯಕ ವಾಸುದೇವ ಧೀರೋದಾಪ್ತವಾಗಿದ್ದರೆ; ಇಲ್ಲಿ ಅವನು ಧೀರಲಲಿತನಾಗಿದ್ದಾನೆ.

ಈ ನಾಟಕದ ಬಗ್ಗೆ ಹಲವಾರು ವಿಮರ್ಶೆಗಳು ಬಂದಿವೆ. ಡಾ: ರಂ ಶ್ರೀ ಮುಗಳಿದುವಿರು (ಕನ್ನಡ ಸಾಹಿತ್ಯ ಚರಿತೆ-೧೯೬೦, ಪುಟ ೩೧೭) "ಕೃಷ್ಣನನ್ನು ನಾಯಕನೆಂದು ಇಟ್ಟುಕೊಂಡಿದ್ದಾನೆ. ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲದೆ ಮೂಲವನ್ನು ಬಿಟ್ಟುಬಿಡದೆ ಕನ್ನಡಿಸಿದ್ದರು ಇದು ಸ್ವತಂತ್ರ ಕೃತಿಯೊಂದು ತೋರುವಂತೆ ಮಾಡಿದ್ದು ಕೃತಿಚಾರ್ಯದ ಮಾದರಿಯೇ ಸರಿ ಕಥಾನಕದಲ್ಲಿ ಮಾಡಿಕೊಂಡ ಒಂದೆರಡು ವ್ಯತ್ಯಾಸಗಳಿಂದ ಭಾಷಾಂತರಕ್ಕೆ ಕಳೆಬರುವ ಬದಲು ಕಲಂಕ ತಟ್ಟಿದೆ. ಕ್ವಚಿತ್ತಾಗಿ ಮೂಲಕ್ಕಿಂತ ಹೆಚ್ಚಿನ ಸೊಗಸು ಬಂದಿದೆ. ನಾಟಕವು ತೀರ ಸಾಮನ್ಯವಾದರೂ ಇದರ ಗುಣಭಾಗವೆಲ್ಲ ಭಾಷಾ ಶೈಲಿ ಯಲ್ಲಿದೆ ಎಂದು ನಮಗೆ ತೋರುತ್ತದೆ". ಇಲ್ಲಿ ಕೃತಿಚಾರ್ಯದ ಆರೋಪವಿದ್ದರೂ ಗುಣಗಳು ಇವೆ ಎಂದು ಅಭಿಪ್ರಾಯಪಟ್ಟಿದ್ದು ನೋಡಿದರೆ ಸಿಂಗರಾರ್ಯನ ಪ್ರತಿಭೆ ಬಗ್ಗೆ ಸಂಶಯವಿಲ್ಲವೆಂದು ತೋರುತ್ತದೆ.

ಡಾ: ಎ.ಆರ್. ಕೃಷ್ಣಶಾಸ್ತ್ರಿಗಳು 'ಮಿತ್ರವಿಂದಾ ಗೋವಿಂದಕ್ಕೆ ಭಾಷಣ ಬರಬೇಕಾದರೆ ರತ್ನಾವಳಿಯಿಂದಲೇ. ಇದು ರತ್ನಾವಳಿಯ ಭಾಷಾಂತರವೆಂದು ಸಿಂಗರಾರ್ಯನು ಹೇಳಿಕೊಂಡಿಲ್ಲ. ಆತನ ಕೆಲದಲ್ಲಿ ಆ ಉದಾರ ಪದ್ದರಿ ಇತ್ತೋ ಇಲ್ಲವೋ ಪ್ರಾಯಶಃ ಇರಲಿಲ್ಲವೆಂದು ತೋರುತ್ತದೆ.

(ನಾಟಕದಲ್ಲಿ) ಮಾತುಗಳ ಕೊನೆಯಲ್ಲಿ ' ಎನೆ' ....' ಎಂಬುದು ' ಎಂಬ ಶಬ್ದಗಳು ಬಂದು ಇದು ನಿಜವಾಗಿಯೂ ರೂಪಕವೇ ದೃಶ್ಯಕಾವ್ಯವೇ ಎಂದು ಭ್ರಾಂತಿಯುಂಟಾಗುತ್ತದೆ...... ಇದು ರತ್ನಾವಳಿಯ ಅಕ್ಷರ; ಮಾಡಿದ ಭಾಷಾಂತರವಿಲ್ಲ ಅಲ್ಲಲ್ಲೇ ಏನೇನು ಕಾರಣದಿಂದಲೋ ಸ್ವಲ್ಪ ಸ್ವಲ್ಪ ವ್ಯಾತ್ಯಾಸವಾಗಿವೆ. ವ್ಯತ್ಯಾಸವಿರುವ ಕಡೆಯಲ್ಲೆಲ್ಲ ಆಭಾಸವೇ. ಈ ನಾಟಕಕ್ಕೆ ಈ ಭಾರವಾದ ಲೊಡಬಡ ಶೈಲಿಯು ಒಪ್ಪುವಂತೆ ತೋರುವುದಿಲ್ಲ" (ಭಾಷಣಗಳು ಮತ್ತು ಲೇಖನಗಳು-೧೯೬೦ ಪುಟ ೩೩೪-೩೩೬).

ಇಲ್ಲಿ ಕವಿ ಕೃತಿಚಾರ್ಯ ಮಾಡಿದ ಆರೋಪಕ್ಕಿಂತಲೂ ತಾನು ಯಾರಿಂದ ಉಪಕೃತನಾದೆ ಎಂಬುದನ್ನು ಸಿಂಗರಾರ್ಯ ಹೇಳದೇ ಇರುವುದು ಒಬ್ಬ ಪ್ರತಿಭಾಸಂಪನ್ನ ಕವಿಯ ಮಟ್ಟಿಗೆ ಕುಂದನ್ನು ತರುತ್ತದೆ ಎಂಬ ಅಭಿಪ್ರಯವಿದ್ದಂತೆ ಕಾಣುತ್ತದೆ. ಮೇಲೆ ಹೇಳಿದ ರೀತಿ ಒಂದು ಕೃತಿಯನ್ನು ಇನ್ನೊಂದಕ್ಕೆ ಕಸಿ ಮಾಡಿ ಒಂದು ಕೃತಿಯನ್ನು ರಚಿಸುವುದು ಸಾಮಾನ್ಯ ಪ್ರತಿಭೆಯ ಕೆಲಸವಿಲ್ಲ. ಇಷ್ಟಕ್ಕೊ ಸಿಂಗರಾರ್ಯನದು ಇದು ಚೊಚ್ಚಲ ಕೃತಿ ಮತ್ತು ಕನ್ನಡದ ಮೊದಲ ನಾಟಕ ಎಂಬ ಮಾನದಂಡದಿಂದ ನೋಡಿದಾಗ ಈ ಕೃತಿಯಲ್ಲಿ ಎಷ್ಟೇ ದೋಷವಿರಲಿ ಇದು ಸತ್ಯ.

## ಶೂದ್ರಕನ ಮೃಚ್ಛಕಟಿಕ ಪ್ರಕರಣಂ:

ದಶರೂಪಕಗಳಲ್ಲಿ ಒಂದೆನಿಸಿದ ಮೃಚ್ಛಕಟಿಕ ಪ್ರಕರಣವನ್ನು ಶೂದ್ರಕ ರಚಿಸಿದನು. ಇದು ಸಾಂಸ್ಕೃತ ರೂಪಕಗಳಲ್ಲೆ ಒಂದು ವಿಧವಾದ ಪ್ರಾಮುಖ್ಯತೆಯನ್ನು ಪಡೆದಿದೆ ಬಹುತೇಕ ರಾಮಾಯಣ. ಮಹಾಭಾರತವನ್ನಾ'ಧರಿಸಿದ ಕಥೆಗಳೇ ಬೇರೆ ಬೇರೆ ರೂಪಗಳಲ್ಲ ಬೇವತಳೆಯುತ್ತಿದ್ದ ಆ ಕಾಲದಲ್ಲಿ ಸಾಮಾಜಿಕ ಸಮಸ್ಯೆಯೊಂದನ್ನು, ರಾಜಕೀಯದ ಜೊತೆ ತಳುಕುಹಾಕಿ ಅ ಕಾಲದ ಸಾಂಸ್ಕೃತಿಕ ರಾಜಕಾರಣ ವನ್ನು ಕವಿ ನಾಟಕ ರೂಪದಲ್ಲಿ ಬರೆದಿದ್ದಾನೆ. ಅಂತಹ ನಾಟಕವೊಂದರ ಹಲವಾರು ಅನುವಾದಗಳು ೧೯ ನೇ ಶತಮಾನದ ಕೊನೆಗೆ ಬಂದಿದೆ. ಈಗಲೂ ಬರುತ್ತಿವೆ. ಅನುವಾದದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ವಸಾಹತು ಶಾಹಿ ರಾಜಕಾರಣದಿಂದುಂಟಾದ ಸಾಂಸ್ಕೃತಿಕ ಪಲ್ಲಟವನ್ನು ಈ ಕೃತಿಯಲ್ಲಿ ಸಮದೂಗಿಸಿಸಲು ಅಥವಾ ಜಾಗ್ರತೆಯನ್ನು ಂಟು ಮಾಡಲು ಅನುವಾದಗೊಂಡಿರುವ ಸಾಧ್ಯತೆಯನ್ನು ನಾವು ಸೂಕ್ಷ್ಮವಾಗಿಯಾದರೂ ಗುರುತಿಸಬಹುದು. ಈ ಕೃತಿಯನ್ನು ಅನುವಾದಿಸಿರುವವರು ಹೇಳಿದ್ದಾರೆ. ನಮಗೆ ಲಭ್ಯವಿರುವ ನಂಜನಗೂಡು ಸುಬ್ಬಾಶಾಸ್ತ್ರಿ, ಗರಣಿ ಕೃಷ್ಣಾಚಾರ್ಯರ ಕೃತಿಗಳನ್ನು ಮೂಲ ಶೂದ್ರಕನ ಕೃತಿಯೊಂದಿಗೆ ತೂಗಿನೋಡುವ ಕಲನಿಕ ಅಧ್ಯಯನವನ್ನು ಇಲ್ಲಿ ಕೈ ಕೊಳ್ಳಲಾಗಿದೆ. 'ಕರ್ನಾಟಕ ಮೃಚ್ಛಕಟಿಕ ಪ್ರಕರಣಂ' ಎಂಬ ಶೀರ್ಷಿ ಕೆಯಡಿಯ'ಲ್ಲಿ ಬರುವ ಈ ಕೃತಿಗಳು ತಮ್ಮದೆ ಅನುವಾದ ಉದ್ದೇಶವೊಂದನ್ನು ಹೊಂದಿದೆ ಗರಣಿ ವೈ ಕೃಷ್ಣಾಚಾರ್ಯರು ವಿಜಾಪನೆಯಲ್ಲೀ ರೀತಿ ಹೇಳಿಕೊಂಡಿದ್ದಾರೆ.

ಕಂ. ಮೃಚ್ಛಕಟಿಕ ಪ್ರಕರಣಂ  
ತುಚ್ಛರ ದುರ್ಗು ಣಗಳಿಂ ಸುಚಿನಸುಗುಣಗಳಿಂ  
ದಚ್ಛಾತ್ಮರನಾಗಿಸುಗುದು  
ವಿಚ್ಛಿನ್ನಂತನ್ನನೊಲ್ದು ಪರಕಿಚಿನರಂ  
ಕಂ. ಶ್ರೀಮತ್ಕೃಷ್ಣ ಪದಾರ್ಚಕ  
ಭೂಮಿಸುರವರ್ಯ ಗರಣಿಕೃಷ್ಣಾರ್ಯ ಂ ಶ್ರೀ  
ಛಾಮೇಂದ್ರ ಕೃಪೆಯನೆಳಿಸು  
ತ್ತೀ ಮೃಛ್ಛಕಟಿಕಮನಿಂತು ತಾಂ ಪ್ರಕಟಿಸಿದಂ.

ಸಹೃದಯರಿಗೆ ಸಂತೋಷಕರವಾದ ಕಾವ್ಯವು ದೃಶ್ಯವು ಎಂದೆರಡು ಬಗೆಯಾಗಿರುವುದಲ್ಲವೇ ಅದರಲ್ಲಿ ದೃಶ್ಯಕಾವ್ಯವು '' ನಾಟಕಂ, ಸಪ್ರಕರಣಂ, ಭಾಣ, ಪ್ರಹಸನಂ, ಡಿಮ, ವ್ಯಾಯೋಗ, ಸಮವಾಕಾಕ, ವೀದ್ಯಂ, ಅಂಕೀ, ಈಹಾಮೃಗಾ, ದಶ ಎಂದು ಹತ್ತು ಬಗೆಯಾಗಿರುವುದು ಅದರೊಳಗೀ ಕಾವ್ಯವು ವಿಕಾಸನಯವಾದ ಪ್ರಕರಣವೆನಿಸುವುದು. ಅದರ ಲಕ್ಷಣವೆನೆಂದರೆ-''ಅಥಪ್ರಕರಣೇ ವೃತ್ತ ಮುತ್ಪಾದ್ಯಂ ಲೋಕ ಸಂಶ್ರಯಾಂ ಅಮಾತ್ಯ ವಿಪ್ರವಣಿಜಾಮೇಕಂ ಕುರ್ಯಾಚ್ಚ ನಾಯಕಂ ,ಧೀರ ಪ್ರಶಾಂತಂ ಸಾಪಾಯಂ ಧರ್ಮ ಕಾಮಾರ್ಥ ತತ್ಪರಂ ಶೇಷಂ ನಾಟಕವತ್ಸಂಧಿ ಪ್ರವೇಶಕಾರಸಾವಿಕಂ ನಾಯಿಕಾತುದ್ವಿಧಾವೇಶಾಂತಂ ಸಪಾಯಂ ಧರ್ಮ ಕಾಮಾರ್ಥ ತತ್ಪರಂ ಶೇಷ ನಾಟಕವತ್ಸಂಧೀ ಪ್ರವೇಶಕರ ಸಾವಿಕಂ ನಾಯಿಕಾತುದ್ವಿಧಾನೇತು ಕುಲಸ್ತ್ರೀಗಣಿಕಾ ತಥಾ ಕ್ವಚಿದೇ ಕ್ವೈಕುನಚಾವೇಶ್ಯಾಕ್ವಾಪಿದ್ವಯಂ ಕ್ವಚಿತ್ ಕುಂಚಾಭ್ಯಂತರಾಚಾಹ್ಯಾ ವೇಶ್ಯಾನಾತಿಕ್ರಮೋನಯೋ

ಅಭಿಪ್ರಕರಣಂ ತ್ರೇಧಾ ಸಂಕೀರ್ಣ ತ್ರೇಧಾ ಸಂಕೀರ್ಣ ಧೂರ್ತ ಸಂಕುಲಂ ಎಂದು ಅಲಂಕಾರಿಕರು ಹೇಳಿರುವುದರಿಂದ ಈ ಪ್ರಕರಣವು ಉತ್ಪದ್ಯೇತಿ ವೃತ್ತವೆನಿಸಿ ಮ್ಯಾತಕರಶಕಾರಾದಿ ಧೂರ್ತ್ಸಂಕುಲವಾಗಿ ಬ್ರಾಹ್ಮಣಿಗೆ ವೇಶ್ಯಾಸಂಬಂಧವನ್ನು, ವಾಣಿಜ್ಯ ವರ್ಣ ಸಿರುವುದರಿಂದ ಸಂಕೀರ್ಣ ಪ್ರಕರಣವೆಂದೆನಿಸಿರುವುದು.

ಈ ಗ್ರಂಥದ ನಾಯಕರು ವಿಪ್ರವಂಶಾವತಂಸನಾದ ಧೀರಶಾಂತ ನಾಯಕ ಗುಣ ಗುಣಾಲಂಕೃತನಾದ ಚಾರುಚರಿತ್ರನಾದ ಚಾರುದತ್ತನೆಂಬುವನು. ''ಅವನು ವೈಶ್ಯರಿಗೆ ವ್ಯಾಪಾರ ಮಾಡಿಸುತ್ತಾ ಬಹುದ್ರವ್ಯಾರ್ಜನೆಯಂ ಮಾಡಿ ಉಜ್ಜಯಿನಿಯಲ್ಲಿ ವಾಸಿಸುತ್ತಾ, ಅನೇಕ ಸರೋವರೋಪವನ ದೇವಾಲಯ ಪ್ರಪಾವಿಶ್ರಮಾಯತನಾದಿ ಲೋಕೋಪಕಾರ ಕಾರ್ಯಗಳಿಂದ ದೇಶವನ್ನೇ ಅಲಂಕರಿಸುತೆ, ತಾನುದಾರನಾದುದರಿಂದ ಬಡವರಿಗೆ ಬೇಡಿದುದಂ ಕೊಟ್ಟು ಕಡೆಗೆ ತಾನೆ ಬಡವನಾದನು. ಅಂತಾದರೂ ಸೂಳೆಯ ಜಾತಿಯಲ್ಲಿ ಹುಟ್ಟಿದ ಗುಣಗಾಹಿಯಾದ ಗುಣಗ್ರಾಹಿಣಿಯಾದ ವಂಸತಸೇನೆಯೆಂಬ ವೇಶ್ಯಾಂಗನೆಯು ಪವಿವ್ರತೆಯಂತೆಯೇ ಆ ಚಾರುದತ್ತನಲ್ಲಿ ಅನುರಾಗವಂ ಮಾಡುತ್ತಿದ್ದು ಅನೇಕ ವಿಪತ್ತುಗಳಿಂ ಕಳೆದುಳಿದು ಕಡೆಗೆ ವಧುವೆನಿಸಿಕೊಂಡಳು'' ಎಂಬ ಕಥೆಯನ್ನಿಟ್ಟುಕೊಂಡು ಕವಿಯು ಅತ್ಯದ್ಭುತ ಬುದ್ಧಿ-ಬಲದಿಂದ ಲೋಕೋತ್ತರ ವಚನ ರಚನಾ ಚಾತುರ್ಯವಂ ತೋರಿಸುತೆರಸ ಭಾವಲಂಕಾರಂಗಳಿಂದಲಂಕರಿಸಿ; ಅನೇಕ ಕೋಕನ್ಯಾಯಗಳನ್ನೂ, ಭವಿತವ್ಯತಾ ಪ್ರಭಾವವಾದಿಗಳನ್ನೂ ಸ್ಪಷ್ಟಪಡಿಸಿರುವನು. ಆದುರಿಂದ ಅಪೂರ್ವವಾದ ಕಥಾ ಶರೀರವನ್ನು ಆಮೂಲಾಗ್ರವಾಗಿ ಒಂದು ಸಲವಾದರೂ ನೋಡುವ ರಸಿಕರ ಹೃದಯಕ್ಕೆ ವಿಲಕ್ಷಣಾ ನಂದವೂ ಸತ್ಯಧರ್ಮ ಸಾಧುಗುಣಗಳಲ್ಲಿ ಪಕ್ಷಪಾತವೂ ಉಂಟಾಗದಿರಲಾರದೆಂದು ದೃಢವಾಗಿ ನಂಬಿರುವೆನು.

ಇಂತಹ ಕಾವ್ಯದ ರಸಾನುಭವವು ನಮ್ಮ ನಾಡಿಗರಿಗೂ ಆಗುವುದಕ್ಕೆ ಇದನ್ನು ಕನ್ನಡಿಸಿದರೆ ಚೆನ್ನಾಗಿರುವುದೆಂದು ಕೆಲವರಿಂ ಪ್ರೋತ್ಸಾಹಿತನಾಗಿ ಬಹುಪುಸ್ತಕ ಸಂಪ್ರತಿಪತ್ತಿಯಿಂದ ಪ್ರಕ್ಷಿಪ್ತ ಪಾಠ ಭೇದನವನ್ನು ಕೊಡಬಿಡದೆ ಉತ್ತಮ ನೀಚ ಪಾತ್ರಗಳೇಗೆ ಯೋಗ್ಯವಾದ ಸಂಸ್ಕೃತ ಪ್ರಾಕೃತ ಸ್ಥಾನಂಗಳಿಗೆ ತಕ್ಕ ಹಳೆಗನ್ನಡ ಹೊಸಕನ್ನಡಗಳನ್ನಿರಿಸಿ ಪ್ರಾಯಿಕವಾಗಿ ಪದ್ಯಕ್ಕೆ ವೃತ್ತಬವನ್ನು ಗದ್ಯಕ್ಕೆ ವಚನವನ್ನು ರಚಿಸಿರುವೆನು. ಇದರಲ್ಲಿ ಕೆಲವು ಕಡೆ ಪ್ರತಿಪದಾರ್ಥವೂ, ಕೆಲವು ಕಡೆ ಮುಖ್ಯ ತಾತ್ಪರ್ಯಾರ್ಥವೂ ಮತ್ತು ಕೆಲು ಕಡೆ ಪ್ರತಿಪದಾರ್ಥವೂ, ಕೆಲವು ಕಡೆ ಮುಖ್ಯ ತಾತ್ಪರ್ಯರ್ಥವೂ ಮತ್ತು ಕೆಲವುಕಡೆ ಇನ್ನೂ ವಿಶೇಷಾರ್ಥವೂ, ಗ್ರಹಿಸಲ್ಪಟ್ಟಿರುವುದಲ್ಲದೆ; ಅತ್ಯಂತಾಸಂಬದ್ಧ ಪ್ರಲಾಪಿಯೆನಿಸಿದ ಶಕಾರನೆಂಬ ನೀಚ ಪಾತ್ರದ ಭಾಷೆಯಲ್ಲಿ ಸಾಧಾರಣವಾಗಿ ಎಲ್ಲ ದೋಷಗಳಿಗೂ ಉದಾಹರಣೆ ಸಿಕ್ಕುವಂತೆ ಗ್ರಾಮ್ಯ ಭಾಷೆ ಯನ್ನೇ ಬರೆದಿರುವೆನಾದರೂ- ಕೆಲವು ಕಡೆ ವಾಚಕರಿಗೆ ಅರ್ಥವಾಗದೆ ಹೋಗುವುದೆಂಬ ಶಂಕೆಯಿಂದ ಆದರೆ ನಂ. ಸುಬ್ಬಾಶಾಸ್ತ್ರಿಗಳು ಈ ಬಗೆಯಾದ ಹೇಳಿಕೆ, ಪೀಠಿಕೆಗಳನ್ನಲ್ಲದೆ, ನೇರವಾಗಿ ಪ್ರಸ್ತಾವನೆ ಬರೆದಿದ್ದಾರೆ. ಪ್ರಸ್ತಾವನೆಯನೆಯಲ್ಲಿ ಇವರು ಕಂದಪದ್ಯದಲ್ಲಿ ;

॥ ಸೆಳಮಿಂಚಿನಂತೆ ಗೌರಿಯ ।
ತೊಳಗುವ ನೀಲಾಂಬುಧ ನಿಭ ।
ಗಳಿಮದು ಪಾಲಕ್ಕೆ ನಿಮ್ಮ ನೆಂದು ಶುಭದಿಂ ॥

ರಾಗ ॥ ತಾಳ ॥

ಶಿಖರಿನಂದಿನಿ । ಶ್ರಿತಜನತಾಜನನಿ ॥ಪ॥
ಮುಖವಿಹಸಿತ ಚಂದ್ರರುಚೆ । ಮಧುತರನೀಲಕಚೆ ॥ ಅ ॥
ಕರುಣಾಸಾರಮಯ । ಕುವಲಯನಿಭನೇತ್ರ ಕಲಿತೆ ।
ಸುರವರವನಿತಾಚೆಕುರ । ಸುಮಮಹಿತಾಂ ಘ್ರಿಯುತೆ ॥೧ ॥
ವಿವಿಜಾರಾತಿ ಮದದಮನ ಚತುರೆ ಪಾಹಿಲಲತೆ ।
ನವ ಜಲದ ಸತ್ಕಾಬಿರಿ । ನಳಿನಭವಾದಿನುತೆ ॥ ೨ ॥
ಸಕಲಾಧಾರ ನಿಜಚರಣ ಸಹಜ ಕೃಪಾಶಾಲಿನಿ ಶಿವೆ ।
ಸುತಮಿಸಿತ ಚಾಮನ ಪ ಸಹೃದಯಹೃದಂಬುಧವೆ ॥ ೩॥

ಎಂದು ಗೌರಿಯ ಸ್ತುತಿ ಮಾಡಿದ್ದಾರೆ. ಆದೆ ಇಬ್ಬರೂ ಅನುವಾದಕರು ಆಗ ನಮ್ಮ ನಾಡನ್ನು ಆಳುತ್ತಿದ್ದ ಚಾಮರಜೇಂದ್ರರನ್ನು ಸ್ಮರಿಸಿರುವುದು ಒಂದು ವಿಶೇಷ. ಇದೊಂದು ಅತ್ಯುತ್ತಮ ಹೋಲಿಕೆ ಸಾಮಾಜಿಕ ಕುತೂಹಲವನ್ನು ಭಂಗ ಪಡಿಸುವ ಈ ಕಾಲಹರಣಿದಿಂದೇನು ಪ್ರಯೋಜನ ? ಸಭಾಸದರಿಗೆ ನಮಸಕ್ಕರಿಸಿ ಹೀಗೆ ಬೇಡಿಕೊಳ್ಳುವೆನು. ಅಯ್ಯಾಸಭಾಸದರೆ ! ಶೂದ್ರಕ ಮಹಾಕವಿಯಿಂದ ವಿರಚಿತವಾದ ಮೃಚ್ಛಕಟಿಕವೆಂಬ ಪ್ರಕರಣವನ್ನು ಆಸ್ಥಾನ ಕವಿ ನಂಜನಗೂಡು ಸುಬ್ಬಾಶಾಸ್ತ್ರಿಗಳು ಕರ್ಣಾಟಕ ಭಾಷೆಯಲ್ಲಿ ವಿರಚಿಸಿರುವರು. ಅದನ್ನು ಅಭಿನಯಿಸಬೇಕೆಂದು ನಿಮಗೆ ಬಹಳ ಕುತೂಹಲವಿರುವುದು ಏಂದರೆ; ಗರಣಿ ವೈ. ಕೃಷ್ಣಾಚಾರ್ಯರು ಕಂದ ಪದ್ಯದಲ್ಲಿ ;

॥ ಕರಿಗೊರಲನ ಕಾರ್ಮುಗಿಲುಂ
ತಿರೆತೊಳಗುವ ಗೊರಚ ಪೊರೆಗೆ ನಿಚ್ಚಂ ನಿಮ್ಮಂ ॥
ಗಿರಿಜಾತೆಯ ತೋಳ್ವಳ್ಳಿಯೆ
ಮೆರೆದ ಪ್ರದಾವಡೆಯೊಳಿರ್ದ್ದ ಮಿಂಚಿನಗೆರೆಪೋಲ್ ॥

ಎಂದು ಹೇಳಿದ್ದಾರೆ. ಕಂದಪದ್ಯ, ನಂಜನಗೂಡು ಸುಬ್ಬಾಶಾಸ್ತ್ರಿಗಳ ಕಂದಪದ್ಯಗಳಲ್ಲಿ ಸ್ವಲ್ಪ ಸಾಮ್ಯತೆಯಿದೆ. ನಂತರ ವೃತ್ತದಲ್ಲಿ;

।ಕೃಷಕ್ಕ್ಮಾಪನ ನಾಡೊಳಿರ್ಪ್ಪ ಗರಣಿ ಗಾಮಾತ್ತ ಸೂಕ್ಷ್ಮಾಂಕ್ಯ ನಿಶಂ।
ಕೃಷ್ಣಾಂರ್ರಾಭಿಧನಿಂದೆ ನಾಡ ವಿನುತಂ ಶ್ರೀಸತ್ಯಭಾಮಾಯುತಂ।
ಕೃಷ್ಣಂ ಕೃಷ್ಣ ನರೇಂದ್ರಭವ್ಯ ಸುತನಂ ರಕ್ಷಕ್ಕೆ ಚಾಮೇಂದ್ರನಂ ॥

ಸೂತ್ರ:- ಸಾಮಾಜಿಕರ ಕುತೂಹಲಕೆ ವಿಘ್ನಮಂಮಾಳ್ವೀ ಪರಿಶ್ರಮಂ ಸಾಲ್ಗುಂ. ಆನಿಂತು ಮಾನ್ಯ ಮಣಿದು ಬೆಸಗೊಂಡಪೆಂ. ಅದೆಂತೆನೆ ಈಗಳಾಂ ಮೃಚ್ಛಕಟಿಕಮೆಂಬ ಪ್ರಕರಣಮಂ ಪ್ರಯೋಗಿಸಲುಜ್ಜು ಸಿರ್ಪ್ಪೆಂ. ಇದರ ಕವಿಯಾದೊಡೆ ಕ್ಷತ್ರ್ಯಿ ಶ್ರೇಷ್ಠನಾದ ಶೂದ್ರಕನೆಂಬರಾಯಂ. ಈತಂ ಸುಂದರಮಾದ ಮೈಯುಳ್ಳಂ, ಗಾಂಭೀಯಾಂದಿಗುಣಗಳಿಂ ಸುಪ್ರಸಿದ್ಧಂ, ಕಲ್ಪಕನುಂ ಆಗಿ; ಋಕ್ಸಾಮ ವೇದಂಗಳಿಂ, ಗಣಿತಂ, ಚತುಷ್ಪಷ್ಟಿ ಕಲೆಗಳಿಂ, ಗಜಶಾಸ್ತ್ರಮೆ ಮುಂತಾದವುಗಳಿಂ ಕಲ್ತು; ಶಿವಾನುಗ್ರಹದಿಂ ಜ್ಞಾನಿಯಾಗಿರ್ದೊಡಂ ಪ್ರಮಾದಮಿಲ್ಲದೆ.

ಯುದ್ಧಾಭಿನಿವೇಶಮುಳ್ಳವನಾಗಿ, ಇಳೆಯಂಪೊರೆದು, ಅಶ್ವಮೇಧಮಂ ಮಾಡಿ ಮಗಗೆ ಪಟ್ಟಮಂ ಕಟ್ಟಿ, ತಪಸ್ವಿಯಾಗಿ ಶತವರ್ಷಮುಂ ಪತ್ತುದಿನಮುಂ ಬೇಡಿ ಕಡೆಯೊಳಗ್ನಿ ಪ್ರವೇಶಮಂ ಮಾಡಿದಂ ಎಂದು ಗ ವೈ. ಕೃಷ್ಣಾಚಾರ್ಯರು ಶೂದ್ರಕ ಕವಿ ಹಾಗೂ ಕೃತಿ ಪರಿಚಯವನ್ನು ಕೊಟ್ಟರೆ, ನಂ ಸುಬ್ಬಾಶಾಸ್ತ್ರಿಗಳು ಸ್ವವಿವರವನ್ನು ಹೇಳಿಕೊಂಡಿದ್ದಾರೆ. ಈತನ ಕೃತಿಯೊಳ್, 'ಆವಂತಿಪುರಿ'ಯೆಂಬ ಉಜ್ಜಯಿನೀ ಪಟ್ಟಣದಲ್ಲಿ ದ್ವಿಜರಲ್ಲಿ ವಾಣಿಜ್ಯ ವ್ಯವಸಾಯಿಯಾಗಿ ಧನದನೆನಿಸಿರ್ದ್ದು ಹರಯದೊಳ್ ಕಡುಬಡವನಾದ ಚಾರುದತ್ತನೆಂಬಂ ನಾಯಕಂ. ಆತನ ಗುಣಂಗಳೊಳನುರಕ್ತೆಯಾದ ವಸಂತಸೇನೆ ಯೆಂಬ ವಾರನಾರಿಯುಂ, ವಸಂತಕಾಂತಿಯಂತೆ ವೊಳ್ ವಸಿಸುತ್ತಿರ್ದ್ದರ್, ಆವರೀರ್ವರ ಸತ್ಸಂತೋಷ ವೈಭವಮುಂ ಭವಿತವ್ಯತಾ ಪ್ರಭಾವಮುಂ, ಇದೆಲ್ಲ ಮುಂದರ್ಣಿತ ಮಾಗಿರ್ಪುದು. ಇಂತಹಪ್ಪುದನೀಗಳ್;

ಕಂ॥ ಹರಿಗುರುಭಕ್ತಂವೈಯಾ
ಕರಣಂ ಕೃಷ್ಣಾಖ್ಯ ನೊರೆದ ನೊಳ್ಗನ್ನಡ ದಿಂ
ವರ ಕರ್ಣಾಟಕ ದೇಶೀ
ಯವರು ಮೊಳ್ಪಿಂ ತಿಳಿಯೆ ಲೋಕನೀತಿ ಸ್ಥಿತಿಯಂ।೪॥.

ಎಂದಿದ್ದಾರೆ. ವಿದೂಷಕ, ಚಾರುದತ್ತನ ಸಂವಾದವನ್ನು ಕೊಡುತ್ತಾ ಶೂದ್ರಕನು ;

ಸುಖಂ ಹಿ ದುಃಖಾನ್ಯನುಭೂಯ ಶೋಭತೇ ಧನಾಂಧಕಾರೆಷ್ವೀವ ದೀಪದರ್ಶನಮ್।
ಸುಖಾತ್ತ ಯೋ ಯಾತಿ ನರೋ ದರಿದ್ರತಾಂ ಧೃತಃ ಶರೀರೇಣ ಮೃತಃ ಸ ಜೀವತಿ ॥

ನಂ. ಸುಬ್ಬಾಶಾಸ್ತ್ರಿಗಳು ಇದರ ಸುಂದರಗದ್ಯಾನುವಾದವನ್ನು ಕೊಟ್ಟಿದ್ದಾರೆ.

ಕತ್ತಲೆಯಲ್ಲಿದ್ದು ದೀಪದ ಬೆಳಕಿಗೆ ಬಂದಂತೆ ದುಃಖದಲ್ಲಿದು ಸುಖ ಪಡೆಬಹುದು. ಲೋಕದಲ್ಲಿ ಯಾವ ಮನುಷ್ಯನು ಸುಖಪಟ್ಟ ಬಳಿಕ ದುಃಖಕ್ಕೆ ಗುರಿಯಾಗುವನೋ ಅವನು ಬದುಕಿದ್ದರೂ ಸತ್ತವನಂತೆಯೇ ಸರಿ.

ಗರಣಿ. ವೈ. ಕೃಷ್ಣಾಚಾರ್ಯರು ಕಂದ ಪದ್ಯದಲ್ಲಿ ಹೀಗೆ ಹೇಳಿದ್ದಾರೆ.

ಕಂ॥ ಮೆರೆಗುಂ ಸುಖಮದು ದುಃಖಮ
ನುರೆತಿಳಿದೊಡೆ ದೀಪದಂತೆ ಕೆಗ್ಗಳ್ತಿತಿಯೊಳ್ ॥
ಅರಿದುಂ ಧನದಿಂದ ಸುಖಮಂ
ದರಿದ್ರನಾದೊಡೆ ಬಳಿಕಾ ಜೀವನ್ಮೃತನ್ಶೈ ॥ ೨ ॥.

ಈ ಎರಡೂ ಅನುವಾದಗಳನ್ನು ನೋಡಿದಾಗ ಕೃಷ್ಣಾಚಾರ್ಯರ ಕಾಲಕ್ಕೆ ಜನಪರಿಯವಾಗಿದ್ದ ಕಂದ ಪದ್ಯಗಳಲ್ಲಿಯೇ ಅನುವಾದಿಸಿದ ಬಗೆ. ಪಠ್ಯ ಪುಸ್ತಕ ಅಥವಾ ಶೈಕ್ಷಣಿಕ ಚಟುವಟಿಕೆಯ ಹಿನ್ನೆಲೆಯಲ್ಲಿ ಬಂದಂತಹ ಸುಬ್ಬಾಶಾಸ್ತ್ರಿಗಳ ಅನುವಾದ ರೀತಿ ಸ್ಪಷ್ಟಗೋಚರವಾಗುತ್ತವೆ.

ಶಕಾರ ॥ ವಸಂತಸೇನೆ ! ನಿಲ್ಲು! ರಾವಣನಿಗೆ ಕುಂತಿಯಂತೆ ನಂಗೆ ಅನಂಗ ಮನ್ಮಥ ಕಾಯ ವಿಕಾರಗಳನ್ನು ಹೆಚ್ಚಿಸುತ್ತ, ದಯವಿಲ್ಲದ ರಾತ್ರಿಗೆ ನನ್ನ ಹಾಸಿಗೆಯಲ್ಲಿ ಕಾಲಿಡುದಿ । ಭಯದಿಂದೆಡವುತ್ತಾಯೇಕೆ ಹೋಗುತ್ತೀಯೆ ?.

ವಿವಃ ವಸಂತಸೇನೆ

ಕಿಂ ತ್ವಂ ಪದೈರ್ಮಮ ಪದಾನಿ ವಿಶೇಷಯಂತೀ
ವ್ಯಾಲೀವ ಯಾಸಿ ಪತಗೇಂದ್ರಭಯಾಭಿಭೂತಾ ।
ವೇಗಾದಹಂ ಪ್ರವಿಸೃತಃ ಪವನಂ ನಿರುಧ್ಯಾಂ
ತ್ವನ್ನಿಗ್ರಹೇ ತು ವರಗಾತ್ರಿ ನಮೇ ಪ್ರಯತ್ನಃ ॥

ವಿವಃ: ವಸಂತಸೇನೆ !

ಕಂ॥ ಚರಣಕ್ರಮದಿಂ ಮೀರು
ತ್ತುರಗಾಶಂಗಳ್ಳಿ ಮರಗಿಯೋಲೀಂ ನಡೆದೇಂ ?
ಭರದೆಲರ ತಿಡೆವೆನಾದೊಡ
ಮುಹಗುಣವತಿ ನಿನ್ನ ಪಿಡಿಯಲಾನುಜ್ಜುಗಿಸೆಂ ।೧೫।।

ಶಕಾರ : ಭಾವ ಭಾವ

ಎಷಾ ನಾಣಕಮೋಷಿಕಾಮಕಶಿಕಾ ಮತ್ಸ್ಯಾಶಿಕಾ ಲಾಸಿಕಾ
ನಿರ್ನಾಂಸಾ ಕುಲನಾಶಿಕಾ ಅವಶಿಕಾ ಕಾಮಸ್ಯ ಮಂಜೂಷಿಕಾ ।
ವಿಷ್ಟ್ವೇಶವಧೂಃ ಸುವೇರ್ಶಾನಲಯಾ ವೇಶಾಂಗನಾ ವೇಶಿಕಾ
ಏತಾನ್ಯಾಸ್ಯಾದಶ ನಾಮಕಾನಿ ಮಯಾ ಕೃತಾನ್ಯದ್ಯಾಪಿ ಮಾಂ ನೇಚ್ಛತಿ ।೨೩॥

ಶಕಾರ ॥ ಭಾವ! ಭಾವ! ವೃ॥ಕಳ್ಳರಹೆಣ್ಣೇ, ಕಾಮದಭರಣಿ
ಕುಣಿವಳೇ, ಗಣಿಕೆಯೇ, ಕುಲನಾಶಿಯೇ
ಅವಶಳೆ, ಸೂಳೇ, ವೇಶ್ಯಾಂಗನೆಯೇ
ವೇಷದ ಮನೆಯೇ, ಸುಳ್ಳಿನ ಕಣೆಯೇ.

ಹೀಗೆ ಹತ್ತು ಹೆಸರುಗಳನ್ನು ನಾನು ಮಾಡಿದರೂ ಇನ್ನೂ ನನ್ನನ್ನು ಬಯಸಲಿಲ್ಲವಲ್ಲಾ ?

ವಿಟ : ಪ್ರಸರಸಿ ಭಯಿವಕ್ಲಮಾ ಚಿಟುರ್ಥಂ ಪ್ರಚಲಿತಕುಂಡಲ ದೃಷ್ಟಿಗಂಡಪಾರ್ಶ್ವಾಂ ।
ವಿಟಜನನ ಘಟ್ಟತೇವ ವೀಣಾ ಜಲಧರಗರ್ಜಿತ ಭೀತ ಸಾರಸೀವ ॥

ವಿಟಂ- ಮುಗಿಲಮೊದಗಿಂದಳಿದ ಸಾರಸಿಯಂತೆಯರಿಂ, ವಿಟರುಗುರಿಂ ಪೊಯ್ದುಲಿದ ವೀಣೆಯಂತೆಯುಂ
ಕುಂಡಲದಿಂ ಪೊಳೆವ ಕದಪುಗಳಿಂ ಮೆರೆಯುತೆ, ಯೇಕೆ ಭಯದಿಂದ ನಡೆದಪಯ್ ?
ವಸಂತಸೇನೆಯೇ !ನಿಲ್!

ಇದಿಷ್ಟು ಭಾಗ ನಂ.ಶಾಸ್ತ್ರಿಗಳ ಕೃತಿಯಲ್ಲಿ ಇಲ್ಲದಿರುವುದು ಗಮನೀಯ ಸಂಗತಿ. ಇದೇ ರೀತಿಯಾಗಿ ಇನ್ನು ಕೆಲವು ಶ್ಲೋಕ ಭಾಗಗಳ ಅನುವಾದವಿಲ್ಲ.

ವಿಟ : ಭವತಿ ವಸಂತಸೇನೆ.
ಕಿಂತ್ವಂ ಕವೇತಟನಿವೇಶಿತ ಮುದ್ವಹರಿತೀ
ತಾರಾವಿಚಿತ್ರರುಚಿರಂ ರಶನಾಕಲಾಪಮ್ ।

ಚಾರುದತ್ತ : ವಯಸ್ಸಯ।ನ ಮಮರ್ಥಾನ್ ಪ್ರತಿ ದೈನ್ಯಮ್ । ಪಶ್ಯ
ಎತತ್ತು ಮಾಂ ದಹತಿ ಯದ್‌ಗೃಹಮ ಸ್ಮವೀಯಂ
ಕ್ಷೀಣಾರ್ಥಮಿತ್ಯ ತಿಥಯಃ ಪರಿವರ್ಜಯಂತಿ ।
ಸಂಶುಷ್ಕಸಂದ್ರಮದಲೇಖದಿಂದ ಭ್ರಮಂತಃ
ಕಾಲಾತ್ಯಯೇ ಮಧುಕರಾಃ ಕರಿಣಃ ಕಪೋಲಮ್ ॥

ಗ.ವೆ.ಕೃಷ್ಣಚಾರ್ಯರು :

ವಯಸ್ಸಯನೇ! ಎನಗೆ ಪಣಮಂ ಕುರಿತು ಬಡನಮಿಲ್ಲ ನೋಡು
ಮುದಿತನದೊಳ್ ಒಣಗಿದ ಮದಲೇಖೆಯುಳ್ಳಾನೆಯ ಕೆನ್ನೆಯಂ ತುಂಬಿಗಳ್ಪಡುವಂತೆ
ಅತಿಥಿಗಳನ್ನೆ ಮನೆಯಂ ಧನಹೀನಮೆಂದು ತಿಳಿದು ಬಿಡುವರ್.

ಇಲ್ಲಿ ಅನುವಾದಕರು ಸಂಸ್ಕೃತ ಶ್ಲೋಕವನ್ನು ಕಂದ ಪದ್ಯವಾಗಿಸದೇ ಗದ್ಯಾತ್ಮಕ ಹಳಗನ್ನಡ ಅನುವಾದ ಮಾಡಿದ್ದಾರೆ. ಶ್ಲೋಕಗಳನ್ನೆಲ್ಲಾ ಕಂದ ಪದ್ಯಗಳಲ್ಲಿ ಎಂದು ಹೇಳುವ ದ್ವಂದ್ವ ಪರಿಸ್ಥಿತಿ ಇಲ್ಲಿದೆ. ಕೆಲವೊಮಮ್ಮೆ ಗದ್ಯಾನುವಾದ, ಕೆಲವೊಮ್ಮೆ ಕಂದಪದ್ಯವಾಗಿಸಿದ್ದಾರೆನ್ನಬಹುದು.

ನಂ. ಸುಬ್ಬಾಶಾಸ್ತ್ರಿ ಮಿತ್ರನೇ, ದ್ರವ್ಯ ಹೋಯಿತೆಂದು ನಾನು ವ್ಯಸನ ಪಡುವುದಿಲ್ಲ. ಮಮೋಕವಿಲ್ಲದ ಆನೆಯ ಗಂಡಸ್ಥಲವನ್ನು ಭ್ರಮರಗಳು ಅನುವಾದರಿಸುವಂತೆ ತನ್ನನ್ನು ದರಿದ್ರನೆಂದು ತಿಳಿದು ಅತಿಥಿಗಳು ಬಾರದೇ ಹೋದಾರಲ್ಲಾ ಎನ್ನುವ ದುಃಖವೊಂದೇ ನನ್ನನ್ನು ಬಾಧಿಸುವದು.

ಇಲ್ಲಿ ಅನುವಾದಕರು ಸುಲಭ ಶೈಲಿಯಲ್ಲಿ ಅನುಸರಿಸಿರುವುದು ಸ್ಪಷ್ಟ. ಪಠ್ಯ ಪುಸ್ತಕದ ಆದ್ಯತೆ ಯೊಡನೆ ಇದನ್ನು ನಾಟಕವಾಗಿಯೂ ಅಭಿನಯಿಸುವಂತೆಯೂ ಇಲ್ಲಿ ತೋರಿಬರುತ್ತದೆಯಾದರೂ ರಂಗ ಕೃತಿಯ ಯಾವುದೇ ಹಾವಭಾವಗಳು ಇಲ್ಲಲ್ಲದಿರುವುದರಿಂದ ಇದೊಂದು ಶುದ್ಧ ಶೈಕ್ಷಣಿಕ ಅಗತ್ಯ ವನ್ನು ಹೊಂದಿರುವುದು ಸ್ಪಷ್ಟವೆನಿಸುತ್ತದೆ. ಕೆಲವು ಭಾಗದ ಅನುವಾದ ನಂ. ಶಾಸ್ತ್ರಿಗಳಲ್ಲಿ ಕಾಣಬರು ವುದಿಲ್ಲ ಎಂಬುದನ್ನು ನೋಡಬಹುದು.

ವಿಟ : ವಸಂತಸೇನೇ ತಿಷ್ಠ ತಿಷ್ಠ ।
ಕಿಂಯಾಸಿ ಬಾಲಕದಲೀವ ವಕಂಪಮಾನಾ
ರಕ್ತಾಂಶುಕಂ ಪವನಲೋಲದಶಂ ವಹಂತೀ
ಟಂಕೈರ್ಮನಃ ಶಿಲಗೃಹೇವ ವಿದಾರ್ಯಮಾಣಾ ।೩೦॥

ವಿಟಂ - ವಸಂತಸೇನೆ । ನಿಲ್ ! ನಿಲ್ ! ಬಾಳೆಯಂತೆ ಚಲಿಸುತ್ತೆ, ಎಲರಿಂದೊಲೆವ ಕರೆಯುಳ್ಳ ಕೆಂದುಗುಲಮ ನುಟ್ಟು, ಕೆಂದಾವರೆ ಮೊಗ್ಗೆಯಂ ತಟಿಯಿಡುತೆಯೇಕೆ ಪೋದಪೇ ?

ಶಕಾರ :- ತಿಷ್ಠ ವಸಂತಸೇನೆ ತಿಷ್ಠ
ಮಮ ವದನಮನಂಗೆಂ ಮನ್ಮಥಂ ವರ್ಧಯಂತೀ
ನಿಶಿಚ ಶಯನಕೇ ಮಮ ನಿದ್ರಾಂ ಪಕ್ಷಪಂತೀ ।
ಪ್ರಸರಸಿ ಭಯಭೀತಾ ಪ್ರಸ್ಖಲಂತೇ ಸ್ಖಲಂತೇ
ಮಮ ವಶಮನುಯಾತಾ ರಾವಣಸ್ಯೇವ ಕುಂತೀ ॥

ವಕ್ತ್ರೇಣ ನಿರ್ಮಥಿತಚೂರ್ಣಮನಃ ಶೀಲೇನ
ತ್ರಸ್ತಾ ದ್ರುತಂ ನಗರದೈವತ ವತ್ಪ್ರಯಾಸಿ ॥

ಶಕಾರ: ಅಸ್ಮಾಭಿಶ್ಚಂಡಮಭಿಸಾರ್ಯಮಾಣಾ ವಮೇ ಶೃಗಾಲೀವ ಕುಕ್ಕುರೈಃ।
ಪಲಾಯಸೇ ಶೀಘ್ರಂ ತ್ವರಿತಂ ಸವೇಗಂ ಸವೃತ್ತಂ ಮಮ ಹೃದಯಂ ಹರರಿಶೀ ॥

ಕೃಷ್ಣಾಚಾರ್ಯರು ಇದನ್ನು ಹೀಗೆ ಅನುವಾದಿಸಿದ್ದಾರೆ;

ಕಂ॥ ಉಡುವಿಭಮಣಿಜಿತರಶನೆಯ
ನಡುವೊಳ್ವೋತ್ತೊಪ್ಪಿ ಚೆಲ್ವಿನೇಕೋಡಿದಪಯ್ ॥
ಉಡುಪನಿಭಾಸ್ಯದೆನರುಗಂ
ಪಡಿದಿರೆನೀ ನಳ್ಳಗೊಂಡು ಪುರ ದೇವತೆವೊಲ್ ॥.

ಶಕಾರ : ಕಾಡಿನಲ್ಲಿ ನಾಯಿಗಳು ನರಿಯನ್ನು ಹಿಡಿಯುವಂತೆ ನಾವು ಎಷ್ಟು ಬೇಗನೆ ಶೀಘ್ರವಾಗಿ ಪಕ್ಕನೆ ಹಿಂಬಾಲಿಸಿ ಬಂದರೂ ಸಿಕ್ಕದೆ ನಮ್ಮ ಮನಸ್ಸನ್ನೂ ಕೂಡ ತೆಗೆದುಕೊಂಡು ಓಡಿಯೋಡಿ ಹೋಗುವೆಯಾ ?.

ಗ.ವೆ. ಕೃಷ್ಣಾಚಾರ್ಯ : ಕಂ॥ ಬೆಲೆವೆಣ್ಣಳೆ ತರುಣರ್ಗೊ
ಳ್ಳೆಲೆಯೆನೆಸಾಮಾನ್ಯೆಯಾದೆ ಸರಣಿ ಜಲತೆವೋಲ್
ಬೆಲೆಗನುವೊಡ ಲಾಂತಿರ್ದ್ದಪೆ
ಲಲನೆಯೆ ಸಮವೊಂದು ರಸಿಕ ನುದು ನರಸಿಕನಂ ॥.

ನಂ. ಸುಬ್ಬಾಶಾಸ್ತ್ರಿ : ಕಂ॥ ಅರಯೆ ಮಾರ್ಗ ಲತೆಗಳ್।
ವಾರಾಂಗನೆಯರ್ಕಳಿವರೊಡಲ್ ಧನಲಭ್ಯಂ ॥
ಆರಾದಪಡೇನೊ ಧನಮಂ।
ಸೂರೆಯನಿತ್ತವನನಾದರಿಪ್ಪುದೆ ಧರ್ಮಂ ॥.

ನಂತರ ಶಕಾರನು ವಸಂತಸೇನೆಯ ಬೆನ್ನು ಬಿದ್ದು, ಹೊರಟಿರುವಾಗ ಅವಳು ಎಲ್ಲೋ ಕತ್ತಲೆಯಲ್ಲಿ ಮಾಯವಾಗುತ್ತಾಳೆ. ''ಭಾವ ಭಾವ ಬಲೀಯಸಿ ಖಲ್ವಂಧಕಾರೆ ಮಾಷರಾಶಿ ಪರವಿಷ್ಟೇವ ಮಸಿಗಟಿಕಾ ದೃಶ್ಯಮಾನ್ಯೆವ ಪ್ರನಷ್ಟಾವಸಂತಸೇನಾ ।'' ಇದನ್ನು ಕೃಷ್ಣಾಚಾಯರ್ಯರು ಕತ್ತಲೂ ಬಲವಾಯಿತು. ಮಾಷರಾಶಿಯಲ್ಲಿ ಬ್ದಿ ಮಸೀಗಳಿಗೆಯಂತೆ ವಸಂತಸೇನೆ ಕಾಣಿಸುತ್ತಲೇ ಓಡಿಹೋದಳು. ಮಾಷರಾಶಿಯಲ್ಲಿ ಎನ್ನುವ ಪದವನ್ನು ಹಾಗೆಯೇ ಇಟ್ಟಿದ್ದಾರೆ. ಆದೇ ಬಸವಪ್ಪಶಾಸ್ತ್ರಿ ಗಳು ಉದ್ದಿನ ರಾಶಿಯಲ್ಲಿ ಬಿದ್ದ ಇದ್ದಲು ತುಂಡಿನಂತೆ ವಸಂತಸೇನೆ ಎಲ್ಲೋ ಮಾಯವಾದಳು ಎಂದು ಹೇಳಿದ್ದಾರೆ. ನಂ. ಸುಬ್ಬಾಶಾಸ್ತ್ರಿಗಳ ಅನುವಾದದ

ಕಾಲಘಟ್ಟದಲ್ಲಿ ಕನ್ನಡ ಭಾಷೆ ಒಂದು ಹಂತವನ್ನು ತಲುಪುತ್ತಿತ್ತು. ಕೃಷ್ಣಾಚಾರ್ಯರ ಕಾಲಕ್ಕೆ ಅದು ಸಂಸ್ಕೃತ ಭೂವಿಷ್ಠದಿಂದ ಹಳೆಗನ್ನಡ;

ಲಿಂಪತೀವ ತಮೋಂಗಾನಿ ವರ್ಷತೀವಾಂಜನಂ ನಭಃ।
ಪುರುಷಾಧಮ ಸೇವೆಯ ವೋಲ್
ನೆರೆ ಫಲಿಸದೆ ಪೋದುದೆಲ್ಲ ಜನದೃಷ್ಟಿಗಳುಂಯುವಂ॥

ಎಂದು ಅನುವಾದಿಸಿದ್ದಾರೆ. ಇದು ಲಿಂಪತೀವ ಶ್ಲೋಕಕ್ಕೆ ಸಮರ್ಥವಾಗಿ ಮೂಡಿಬಂದಿದೆ.

ಶಕಾರ: ಅರೇರೇ ದುಷ್ಟವಟುಕ ಭಣಿಷ್ಯಸಿ ಮಮ ವಚನೇನ ತಂ ಧರಿದ್ರ ಚಾರುದತ್ತಕಮ್-ವಿಷಾ ಸಸುವರ್ಣಾ ಸಹಿರಣ್ಯಾ ನಟ ನಾಟಕದರ್ಶನೋತ್ಥಿತಾ ಸೂತ್ರಧಾರೀವ ವಸಂತ ಸೇನಾ ನಾನು ಗಣಿಕಾದಾರಿಕಂ ಕಾಮದೇವಾಯತನೋದ್ಯಾನಾತ್ಪ್ರಭೃತಿ ತ್ವಾಮನುರಕ್ತಾಸ್ಮಾಭಿರ್ಬಲಾತ್ಕಾರಾನು ನೀಯಮಾನು ತವಗೇಹಂ ಪ್ರವಿಷ್ಟಾ। ತದ್ಯದಿ ನಮಮ ಹಸ್ತೇ ಸ್ವಯಮೇವ ಪ್ರಸ್ಥಾಪ್ಯೈನಾಂ ಸಮರ್ಪಯಿಸಿ ತತೋಧಿಕರಣೇ ವ್ಯವಹಾರಂಖ ವಿನಾ ಲಘು ನಿರ್ಯಾತಯತಸ್ತವ ಮಯಾಬದ್ಧಾ ಪರೀತಿರ್ಭವಿಷ್ಯತಿ। ಅಥವಾ ನಿರ್ಯಾಂತಯತೋ ಮರಣಾಂತಿಕಂ ವೈರಂ ಭವಿಷ್ಯತಿ। ಅಪಿಚ ಪ್ರೇಕ್ಷಸ್ವ ಪ್ರೇಕ್ಷಸ್ವ। ಈ ಭಾಗದ ಅನುವಾದವನ್ನು ನಂ.ಸುಬ್ಬಾಶಾಸ್ತ್ರಿಗಳಲ್ಲಿ ಇಲ್ಲ. ಶಕಾರನ ಈ ಮಾತನ ನು ವಿದೂಷಿಕನಿಂದ ಸಂಗ್ರಹ ರೂಪದಲ್ಲಿ ಹೇಳಿಸಿದ್ದಾನೆ. ವಿದೂಷಕ - ' ಈ ವಸಂತಸೇನೆಯು ನಾನು ಎಷ್ಟು ಬಲಾತ್ಕರಿಸಿದರೂ ಸ್ವಾಧೀನಳಾಗದೆ, ನಿಮ್ಮ ಮನೆಗೆ ಬಂದಿರುವಳು. ಅವಳನ್ನು ನನಗೆ ಒಪ್ಪಿಸಿದರೆ ಸರಿ. ಇಲ್ಲದಿದ್ರೆ ನಿನಗೂ ನನಗೂ ಅಮರಣಾಂತವಾಗಿ ದ್ವೇಷವು ತಪ್ಪದು ಇತ್ಯಾದಿ... ಅಲ್ಲದೇ ಯಾವ ಭಾಗವನ್ನು ಸರಿಯಾಗಿ ತಿಳಿಸದೇ ಒಮ್ಮೆಲೇ ಆಭರಣಗಳನ್ನು ನ್ಯಾಸವಾಗಿಡಲು ವಸಂತಸೇನೆ ಕೇಳುತ್ತಾನೆ. ಆದರೆ ಕೃಷ್ಣಾಚಾರ್ಯರು ಈ ಭಾಗವನನು ಚಾಚೂ ತಪ್ಪಚೇ ಸಮರ್ಥವಾಗಿ ಅನುವಾದಿಸಿ ದ್ದಾರೆ. ಅದು ಹೀಗಿದೆ;

ಗ.ವೈ.ಕೃ - ದ್ವಿತಿಯಾಂಕದ ಮೊದಲಲ್ಲಿ ಮೂಲಪಠ್ಯದಂತೆ ವಸಂತಸೇನೆಯ ಮನೆಯನ್ನು ವರ್ಣಿಸುತ್ತಾ ವಸಂತಸೇನೆ ಹಾಗೂ ಮದನಿಕೆಯ ಸಂಭಾಷಣೆಯನ್ನು ಕೊಡುತ್ತಾ ಸಂಭಾಷಣೆಯ ಮುಂದುವರಿಕೆಯಾಗಿ ನೇಪಥ್ಯದ ಸಂಭಾಷಣೆಯನ್ನು ಹೇಳಿಸುತ್ತಾರೆ. 'ಅರೇ ಭಟ್ಟಾರಕ ದಶಸುವರ್ಣಸ್ಯ ರುದ್ಧೋ ದ್ಯೂತಕರಃ ಪ್ರಪಲಾಯಿತಃ ಪ್ರಪಲಾಯಿತಃ। ತದ್ ಗ್ರಹಣ, ಗ್ರಹಣ। ತಿಷ್ಠ ತಿಷ್ಠ। ದೂರಾತ್ಪ್ರದೃಷ್ಟೋಽಸಿ। (ತೆರೆಯಲ್ಲಿ) ಓ ಭಟ್ಟಾರಕನೆ। ಜೂಜುಗಾರನು ಹತ್ತು ಹಣಕ್ಕೂ ಸುಗಪೇ ಹಿಡಿದರೂ ನಿಲ್ಲದೇ ಓಡಿದನು, ಓಡಿದನು, ಹಿಡಿ! ಹಿಡಿ!ನಿಲ್ಲೋ! ನಿಲ್ಲೋ! ಬಹುದೂರಕ್ಕೆ ಕಾಣಿಸಿದೆ ಎನ್ನುತ್ತಾರೆ. ನಂ ಸುಬ್ಬಾಶಾಸ್ತ್ರಿಗಳು, ದ್ವಿತೀಯಾಂಕದ ಪ್ರಾರಂಭದಲ್ಲಿಯೇ ಸಂವಾಹಕ ಅರ್ಥಾತ್ ಜೂಜುಗಾರನೊಬ್ಬ ಪಣವನ್ನು ಸೋತು ಪಡುತ್ತಿರುವವನು ಮಾತನಾಡುವುದನ್ನೇ ಅಂಕದ ಪ್ರಾರಂಭದಲ್ಲಿ ಹೇಳಿದ್ದಾರೆಜ. ಇದು ಮಹತ್ತರ ಬದಲಾವಣೆ, ಮೂಲದಲ್ಲಿ ವಸಂತಸೇನೆ ಮತ್ತು ಮದನಿಕೆಯ ಸಂಭಾಷಣೆಯೊಡನೆ ಸಂವಾಹಕನ ಪ್ರವೇಶವಾಗುತ್ತದೆ. ಶಾಸ್ತ್ರಿಗಳು ಮೊದಲು ಸಂವಾಹಕನು ಪ್ರವೇಶಿಸುವುದನ್ನು ಹೇಳಿ ನಂತರ ವಸಂತ ಸೇನೆ ಮದನಿಕೆಯ ಸಂಭಾಷಣೆಯನ್ನು ಹೇಳು ತ್ತಾರೆ. ಸಂವಾಹಕನು ಜೂಜಿನಲ್ಲಿ ಸೋತು ದೇವಸ್ಥಾನವೊಂದರಲ್ಲಿ ಸಿಕ್ಕಿಬೀಳುತ್ತಾನೆ. ಆಗ ಹಣ

ಕೊಡೆಂದು ಮಾಥುರ ಮತ್ತು ಸಭಿಕರು ಹಣಕೊಡುವಂತೆ ಒತ್ತಾಯಿಸಿ ಸಂವಾಹಕನನ್ನು ಹೊಡೆಯುವರು ದರ್ದುರಕನೆಂಬುವನು ಮಧ್ಯ ಪ್ರವೇಶಿಸಿ ಸಂವಾಹಕನು ಓಡಿಹೋಗುವಂತೆ ಪ್ರೇರೇಪಿಸುವನು. ಆಗ ಸಂವಾಹಕ ವಸಂತಸೇನೆಯ ಮನೆ ಪ್ರವೇಶಿಸುವನು. ಸಭಿಕ ಮತ್ತು ಮಾಥುರರಿಂದ ತಪ್ಪಿಸಿಕೊಂಡು ವಸಂತಸೇನೆಯ ಮನೆ ಪ್ರವೇಶ ಸನ್ನಿವೇಶದಲ್ಲಿ ಎರಡೂ ಅನುವಾದಗಳಲ್ಲೂ ಸಾಮ್ಯತೆಯಿದೆ.

ಸುಬ್ಬಾಶಾಸ್ತ್ರಿಗಳು ಇಲ್ಲಿ ಕರ್ಣ ಪೂರಕನ ಪ್ರವೇಶವನ್ನು ಹೇಳಿಯೇ ಇಲ್ಲ. ಕೃಷ್ಣಾಚಾರ್ಯರು (ಬಳಿಕ ಕರ್ಣಪೂರಕನೆಂಬ ಮಾವುತನು ವಿಕಾರ ವೇಷವುಳ್ಳವನಾಗಿ ತೆರೆಯನ್ನು ಹಾರಿಸಿಕೊಂಡು ಬರುವನು) ಎಂಬ ಸನ್ನಿವೇಶವನ್ನು ಅನುವಾದಿಸಿದ್ದಾರೆ ಮೂಲದಲ್ಲಿಯೂ (ತತಃ ಪ್ರವಿಶತ್ಯಪಟೀ ಕ್ಷೇಪೆಣ ಪ್ರಹೃಷ್ಟೋ ವಿಕಟೋಜ್ವಲ ವೇಷಿಃ ಕರ್ಣ ಪೂರಕಃ।) ಎಂಬುದಾಗಿ ಸನ್ನಿವೇಶವೊಂದಿದೆ.

ನಂ. ಸುಬ್ಬಾಶಾಸ್ತ್ರಿಗಳು ಸಂವಾಹಕನು ಜೂಜುಗಾರರ ಅವಮಾನದಿಂದ ಜೈನ ಸನ್ಯಾಸಿಯಾಗುತ್ತೇನೆಂಬ ವಾಕ್ಯವನ್ನು ಬರೆದಿದ್ದಾರೆ. ಆದರೆ ಮೂಲದಲ್ಲಿ ಹಾಗೂ ಗ.ವೈ. ಕೃಷ್ಣಾಚಾರ್ಯರು ಸಂವಾಹಕನು ಬೌದ್ಧ ಸನ್ನ್ಯಾಸಿಯಾಗುತ್ತಾನೆ ಎಂದು ಅಂದಿದ್ದು ಬಂದಿದೆ. ಬಹುಶಃ ನಂ.ಸುಬ್ಬಾಶಾಸ್ತ್ರಿಗಳು, ಕನ್ನಡಿಗರಿಗೆ ಬೌದ್ಧ ಸನ್ಯಾಸಿಗಿಂತ ಜೈನ ಸನ್ಯಾಸಿ ಹೆಚ್ಚು ಪರಿಚಿತವವೆಂದು ಅನ್ನಿಸಿರಬೇಕು. ಕರ್ಣಪೂರಕ ಮಾವುತನ ಪ್ರಸಂಗವನ್ನು ಶಾಸ್ತ್ರಿಗಳೂ ಕೈಬಿಟ್ಟಿದ್ದಾರೆ. ಕರ್ಣಪೂರಕವೆಂಬ ಮಾವುತನು ವಸಂತಸೇನೆಗೆ ಭೇಟಿಯಾಗುತ್ತಾನೆ. ತನಗೆ ಇಂದು ತಾನು ತೋರಿದ ಪರಾಕ್ರಮ ಏನು ಹೇಳುತ್ತಾನೆ. ಅವನ ಕುಂಟಿಮೋಟವೆಂಬ ಆನೆಯು ಮದವೀರಿ ಉಜ್ಜಯಿನಿ ಪಟ್ಟಣವನ್ನು ಈ ದ್ವಂಸ ಮಾಡುತ್ತಾ ಹೋಗುತ್ತದೆ. ಹಿಂದೆ ಜುಜುಖೋರನಾಗಿದ್ದು, ಈಗ ಯತಿಯಾಗಿರುವ ಒಬ್ಬ ವ್ಯಕ್ತಿಯನ್ನು ತನ್ನ ಕೋರೆಹಲ್ಲಿನೊಳಗೆ ಹಿಡಿಯುತ್ತದೆ. ಆಗ ಮಾವುತನು ಒಂದು ಅಂಗಡಿಯಿಂದ ಕಬ್ಬಿಣದ ಕೋಲನ್ನು ತಂದು ಆ ಆನೆಯನ್ನು ತಹಬಂದಿಗೆ ತರುತ್ತಾನೆ. ಆವಾಗ ಎಲ್ಲರೂ ಹೊಗಳುತಿರಲು, ಯಾವನೋ ಒಬ್ಬ ಮನುಷ್ಯನು ಒಡವೆಗಳ ನಿಟ್ಟ ಸ್ಥಳವನ್ನು ಮುಟ್ಟಿ ನೋಡಿಕೊಂಡು ಆ ಬಟ್ಟೆಯನ್ನು ಯಾವುತನ ಮೇಲೆ ಎಸೆಯುತ್ತಾನೆ. ವಸಂತಸೇನೆ ಅದು ಚಾರುದತ್ತನೆಂದು ಗುರುತು ಹಿಡಿದು ಅದನ್ನು ಮಾವುತನಿಂದ ಬೇಡಿ ಧರಿಸುತ್ತಾಳೆ. ವಸಂತಸೇನೆಯೂ ಚಾರುದತ್ತನನ್ನು ನೋಡಲು ಉಪ್ಪರಿಗೆಗೆ ಹೋಗುತ್ತಾಳೆ. ಒಟ್ಟಿನಲ್ಲಿ ನಂ. ಸುಬ್ಬಾಶಾಸ್ತ್ರಿಗಳ ಅನುವಾದ ನಾಟಕದ ಎಷ್ಟೋ ಮಾತುಗಳನ್ನು ಕೈಬಿಟ್ಟು ಸಂಗ್ರಹ ರೂಪದಲ್ಲಿ ಸೇರಿಸಿ ಕೊಟ್ಟಿರುವಂತಿದೆ. ಪಠ್ಯ ಪುಸ್ತಕದ ಅಗತ್ಯತೆಗಾಗಿ ಇದನ್ನು ಅನುವಾದಿಸಿರುವಂತೆ ಕಂಡು ಬರುತ್ತದೆ. ತೃತೀಯಾಂಕದಲ್ಲಿ ಬರುವ ಈ ಸಂಭಾಷಣೆಗಳನ್ನು ಮೀರಿಸಿ ಸಂಗ್ರಹಾನುವಾದವೊಂದು ಬಂದಿದೆ.

ವರ್ಧಮಾನಕ - (ಪ್ರವೇಶಿಸಿ) ಸಂಗೀತವನ್ನು ಕೇಳುವುದಕ್ಕಾಗಿ ಹೋದ ಆರ್ಯ ಚಾರುದತ್ತನು ಅರ್ಧ ರಾತ್ರಿ ಸಮಯವಾದರೂ ಏಕೆ ಬರಲಿಲ್ಲ ? ಹಾಸಿಗೆಯನ್ನು ಸಿದ್ಧಪಡಿಸಿರುವೆನು (ನೋಡಿ) ಓಹೋ ? ಆರ್ಯ ಚಾರುದತ್ತನು ಮೈತ್ರೇಯನೊಡನೆ ಬರುತ್ತಿರುವನು.

ಚಾರುದತ್ತ - (ವಿದೂಷಕನೊಡನೆ ಪ್ರವೇಶಿಸಿ) ಅಯ್ಯಾ ಮೈತ್ರೇಯನೆ, ವಿದ್ವಾಂಸನಾದ ರೇಭಿಲನು ಬಲು ಚೆನ್ನಾಗಿ ಗಾನ ಮಾಡಿದನು. ಪುರುಷನು ಗಾನ ಮಾಡಿದರೆ ಇಷ್ಟು ಮನೋಹರವಾಗಿರಲಾರದು. ಆದುದರಿಂದ ಪುರುಷವೇಷನ್ನು ಧರಿಸಿದ ಸ್ತ್ರೀಯೇ ಇರಬಹುದೆಂದು ತೋರುವುದು.

ವಿದೂಷಕ - ಮಿತ್ರನೇ, ನಿನಗೆ ಸಂಗೀತದ ಯೋಚನೆ; ನನಗೆ ನಿದ್ರೆಯ ಯೋಚನೆ. ಅಂಗಡಿ ಬೀದಿಯಲ್ಲಿ ನೋಡಿದರೆ, ನಾಯಿಗಳೆಲ್ಲಾ ಮಲಗಿ ನಿದ್ರೆ ಮಾಡುತ್ತಿವೆ. ಇದೋ ಈ ಚಂದ್ರನೂ ಕೂಡ ಕತ್ತಲಿಗೆ ಅವಕಾಶವನ್ನು ಕೊಡುತ್ತಾ ಅಂತರಿಕ್ಷವೆಂಬ ಉಪ್ಪರಿಗೆಯಿಂದ ಇಳಿಯುತ್ತಿರುವನು.

ಚಾರುದತ್ತ - (ನೋಡಿ) ಅಹುದು, ಬಲು ಚೆನ್ನಾಗಿ ಹೇಳಿದೆ (ಕಾಲನ್ನು ತೊಳೆದು ಕೊಂಡು ಬಂದು) ಏನಯ್ಯಾ ? ಮೈತ್ರೇಯನೆ, ಕಾಲು ತೊಳೆಯದೆ ಆಗಲೇ ಮಲಗಿದೆ ?.

ವಿದೂಷಕ - ನನಗೇನು ? ಮಂಚವೇ ? ಹಾಸಿಗೆಯೇ ? ಕತ್ತೆಯ ಹಾಗೆ ನೆಲದ ಮೇಲೆ ಹೊರಳುಪುವ ನಾನು ಕಾಲು ತೊಳೆದುಕೊಳ್ಳಬೇಕೆ ?.

ವರ್ಧಮಾನಕ : (ವಿದೂಷಕನನ್ನು ಕುರಿತು) ಇದೋ, ಒಡವೆಯ ಗಂಟು, ನಾನು ಹಗಲು ಕಾದಿರಬೇಕು. ನಾನು ರಾತ್ರಿ ಕಾದಿರಬೇಕೆಂದಲ್ಲವೆ. ಆರ್ಯ ಚಾರುದತ್ತನು ಆಜ್ಞಾಪಿಸಿರುವುದು ? ಆದುದರಿಂದ ತೆಗೆದುಕೋ.
ವಿದೂಷಕ - (ತೆಗೆದುಕೊಂಡು) ಈ ಹಾಳೂ ಒಡವೆ ಇನ್ನೂ ಇದೆ. ಇಷ್ಟು ದೊಡ್ಡ ಪಟ್ಟಣ ದಲ್ಲಿ ಒಬ್ಬ ಕಳ್ಳನೂ ಗತಿಯಿಲ್ಲವೇ ? ನಾನು ನಿದ್ದೆ ಮಾಡುವಾಗ ಯಾವನಾದರೂ ಕದ್ದುಕೊಂಡು ಹೋಗಬಾರದೆ ? ಇದು ನನ್ನ ಕೈ ತಪ್ಪಿದ ಹೊರತು ನನಗೆ ಚೆನ್ನಾಗಿ ನಿದ್ರೆ ಬರಲವಕಾಶವಿಲ್ಲ. ಅಯ್ಯಾ, ಈ ಒಡವೆಯ ಗಂಟನ್ನು ಒಳಗಣ ತೊಟ್ಟಿಯಲ್ಲಿಡುವೆನು. ಹೀಗೆ ಎಷ್ಟೋ ವಿಷಯಗಳನ್ನು ಹೇಳುವ ಸಂಭಾಷಣೆಯನ್ನು ಸಂಗ್ರಹಿಸಿ ಕೊಟ್ಟಿದದ್ರೆ. ಆ ಎಲ್ಲಾ ಸಂಭಾಷಣೆಯನ್ನು ಗ.ವೈ. ಕೃಷ್ಣಾಚಾರ್ಯರು ಕೊಟ್ಟಿದ್ದಾರೆ. ಅದು ಈ ಕೆಳಗಿನಂತಿದೆ; ಚಾರುದತ್ತನ ಪತ್ನಿಯಾದ ಧೂತಾದೇವಿಯು ರತ್ನಷಷ್ಠೀ ವ್ರತೋಪವಾಸವನ್ನು ಮಾಡಿ ಬ್ರಾಹ್ಮಣನಿಗೆ ಹಾರವನ್ನು ದಾನ ಮಾಡುವುದಕ್ಕೋಸ್ಕರ ವಿದೂಷಕನಿಗೆ ರತ್ನ ಹಾರವನ್ನು ಕೊಡುತ್ತಾಳೆ. ವಿದೂಷಕ ಅದನ್ನು ಚಾರುದತ್ತನಿಗೆ ಕೊಡುತ್ತಾನೆ.

ಆಗ ಚಾರುದತ್ತನು ಹೇಳುವ ಮಾತನ್ನು ನೋಡುವಾಗ ಇಬ್ಬರೂ ಅನುವಾದಕರಲ್ಲೂ ಸಾಮ್ಯತೆ ಕಂಡುಬರುತ್ತದೆ. ನಂ. ಸುಬ್ಬಾಶಾಸ್ತ್ರಿಗಳು - ಏನು ! ದೇವಿಗೆ ನನ್ನಲ್ಲಿ ದಯೆಯುಂಟಾಯಿತೆ? ಈಗಲೀಗ ನಾನು ನಿಜವಾಗಿಯೂ ದರಿದ್ರನಾದೆನು. ಲೋಕದಲ್ಲಿ ತನ್ನ ಸಂಪತ್ತನ್ನು ಹಾಲೂ ಮಾಡಿಕೊಂಡಿ, ಸ್ತ್ರೀ ದ್ರವ್ಯವದಿಂದ ಜೀವಿಸುವನು. ಪುರುಷನಾದರೂ ಸ್ತ್ರೀಯೇ ಸರಿ ಅಥವಾ ನಾನು ದರಿದ್ರನಲ್ಲ ಏಕೆಂದರೆ;

ಕಂದ ॥ ಸಿರಿಯಂ ಪರಿಗಣಿಸದ ಸತಿ ।
ವರಮಿತ್ರಂ ಕಷ್ಟಮೆಣಿಸದಂ ನಿನ್ನನ್ನಂ ॥
ಸುರುಚಿತ ಸತ್ಯವ್ರತಮುಂ ॥

ದರಿದ್ರನಾದಂಗದೆಂತು ಕರವಶಮಕ್ಕುಂ ॥

ಗ.ವೈ. ಕೃಷ್ಣಾಚಾರ್ಯರು ಎಂ ಬ್ರಾಹ್ಮಣಿಯೆನ್ನಂದಯೆ ಗೆಯ್ದಪಳೊ ? ಕಷ್ಟಂ ಈಗಳಾಂ ದರಿದ್ರನಾದಪೆಂ.

ಎಂತೆನೆ - ಕಂ॥ ಕರಗಲ್ ತನ್ನಯ ಪುಣ್ಯದಿ
ನುರುಧನಮಾ ಬಳಿಕೆ ಬಾಳ್ದೊಡಬಲಾ ಧನದಿಂ
ಪುರುಷನೆಮಡದಿಯೆ ನಿಕ್ಕುಂ
ಕರಮರ್ಥದಿನೆಂತೋ ಅಂತು ಮಡದಿಯೇ ಪುರುಷಂ
ಮೇಣಾಂ ದರಿದ್ರನಲ್ಲಂ ಎನಗಾದೊಡೆ.

ಕಂ॥ ಸಿರಿಗನು ಸಾರಿಣಿಯಾದಳ್
ವರವಧು, ನೀಂ ಗೆಳೆಯನಾದೆ ಸುಖದುಃಖಗಳೊಳ್;
ತೊರೆದಿಲ್ಲಂ ಸತ್ಯಮುಮಂ
ದರಿದ್ರರಲ್ಲದುವೆ ನಾಡೆ ದುರ್ಲಭಮಲ್ತೆ ॥

ಇದರ ಮೂಲ ಹೀಗಿದೆ ;

ಚಾರುದತ್ತ : ಕಥಂ ಬ್ರಾಹ್ಮಣೀ ಮಾಮನುಕಂಪತೇ । ಕಷ್ಟಮ್ । ಇದಾನೀಮಸ್ಮಿ ದರಿದ್ರಃ ।
ಆತ್ಮ ಭಾಗ್ಯಕ್ಷತ ದ್ರವ್ಯಃ ಸ್ತ್ರೀದ್ರವ್ಯೇಣಾನುಕಂಪಿತಃ ।
ಅರ್ಥತಃ ಪುರುಷೋ ನಾರೀ ಯಾ ನಾರೀ ಸಾರ್ಥತಃ ಪ್ರಮಾನ್ ॥
ಅಥ ವಾ। ನಾಹಂ ದರಿದ್ರಃ । ಯಸ್ಯಮಮ.

ವಿಭವಾನುಗತಂ ಭಾರ್ಯಾ ಸುಖದುಃಖ ಸಂಹೃದ್ಭವಾನ್ ।
ಸತ್ಯಂ ಚ ನ ಪರಿಭ್ರಷ್ಟಂ ಯದ್ದರಿದ್ರೇಷು ದುರ್ಲಭಮ್ ॥

ಮೈತ್ರೇಯ ಗಚ್ಛ ರತ್ನಾಲೀ ಮಾದಾಯ ವಸಂತಸೇನಾಯಾಃ ಸಕಾಶಮ್ । ವಕ್ತವ್ಯಾ ಚ ಸಾ ಮದ್ವಚನಾತ್ । ಯತ್ಖಲ್ವಸ್ಮಾಭಿಃ ಸುವರ್ಣ ಭಾಂಡ ಮಾತ್ಮೀಯಮಿತಿ ಕೃತ್ವಾ ವಿಸ್ರಂಭಾದ್ ದ್ಯೂತೇ ಹಾರಿತಮ್ । ತಸ್ಯ ಕೃತೇ ಗೃಹ್ಯತಾಮಿಯಂ ರತ್ನಾವಲೀ ತಿ ॥ ಎಂಬ ಮಾತನ್ನು ನಂ. ಸುಬ್ಬಾಶಾಸ್ತ್ರಿಗಳು ಹೀಗೆ ಅನುವಾದಿಸಿದ್ದಾರೆ. ಮೈತ್ರೇಯನೆ, ಈ ರತ್ನಹಾರವನ್ನು ತೆಗೆದುಕೊಂಡು ಹೋಗಿ ನೀನಿಟ್ಟಿದ್ದ ಗಂಟನನ್ನು ನಮ್ಮದೆಂದು ತಿಳಿದು ಜೂಜಿನಲ್ಲಿ ಸೋತುಬಿಟ್ಟೆವು. ಆದುದರಿಂದ ಅದಕ್ಕೆ ಪ್ರತಿಯಾಗಿ ಈ ರತ್ನಹಾರ ವನ್ನು ಕೊಟ್ಟುಬಾರೆಂದು, ಚಾರುದತ್ತನು ಹೇಳಿರುವನು ಎಂದು ಆ ವಸಂತಸೇನೆಗೆ ಹೇಳಿ, ಹಾರವನ್ನು ಕೊಟ್ಟು ಬಾ. ಇದನ್ನೇ ಗ.ವೈ. ಕೃಷ್ಣಾಚಾರ್ಯರು, ಮೈತ್ರೇಯನೇ ! ನೀನೀ ರತ್ನಾವಳಿಯಂ ತೆಗೆದುಕೊಂಡು, ವಸಂತಸೇನೆಯ ಬಳಿಗೆ ಪೋಗಿ, ತಾಂ ಪೇಳ್ದಂತೆ ''ಜೂಜಾಟದೊಳಾ ಯಲಂಕಾರಂಗಳ್ ಮ್ಮುಡೆಂದು ತಿಳಿದೊಲವಿಂ ಪಣಮಿಟ್ಟು ಪೋದುದು. ಅದಕೆ ಪಡಿಯಾಗಿ ರತ್ನಾವಳಿಯಂ ನೀಂ ತೆಗೆದುಕೊಳ್ಳಲ್ಕಿಕ್ಕುದು'' ಎಂದು ಸಿರ್ಪೆ. ಈ ಎರಡೂ ಅನುವಾದಗಳನ್ನು ಸುಬ್ಬಾಶಾಸ್ತ್ರಿಗಳು ಕಥೆ ಹೇಳುವ ತಂತ್ರದಲ್ಲಿ, ತಮ್ಮದೇ ಕೆಲ ಮಾತನ್ನು ಸೇರಿಸಿ ಬರೆದಿದ್ದಾರೆ.

ಕೃಷ್ಣಾಚಾರ್ಯರು ನಿಕಟವಾಗಿ ಮೈತ್ರೇಯ ಗಚ್ಛ ರತ್ನಾವಲೀ ಮಾದಾಯ ವಸಂತಸೇನಾಯಾಃ ಸಕಾಶಮ್ ಎನ್ನುವುದನ್ನು ಮೈತ್ರೇಯನೇ! ನೀನೀ ರತ್ನಾವಳಿಯಂ ತೆಗೆದುಕೊಂಡು, ವಸಂತಸೇನೆಯ ಬಳಿಗೆ ಪೋಗಿ ಎಂದು ಹೇಳಿದ್ದಾರೆ. ಇಲ್ಲಿ ಕೃಷ್ಣಾ ಚಾರ್ಯರು ಅನುವಾದಿಸಿದ ಕಾಲದ ಅಗತ್ಯತೆ ಸುಬ್ಬಾಶಾಸ್ತ್ರಿಗಳ ಕಾಲಕ್ಕೆ ಬದಲಾಗಿದೆ. ಅವರ ಅನುವಾದ ರಂಗಭೂಮಿಯ ಅಗತ್ಯಕ್ಕಿಂತ ಹೆಚ್ಚಾಗಿ, ಶೈಕ್ಷಣಿಕ ಅಗತ್ಯತೆ ಪಠ್ಯ ಪುಸ್ತಕವನ್ನು ಆಧರಿಸಿದೆ. ಇಡೀ ಅನುವಾದವನ್ನು ಗ್ರಹಿಸಿದಾಗ ಈ ವಿಷಯ ವ್ಯಕ್ತವಾಗುತ್ತದೆ. ವಿದೂಷಕನು ವಸಂತ ಸೇನೆಗೆ ರತ್ನಹಾರವನ್ನು ತೆಗೆದುಕೊಂಡು ಅವಳ ಮನೆಗೆ ಬಂದಾಗ ಮನೆಯ ಒಂದೊಂದು ಭಾಗವನ್ನು ಯಥಾವತ್ತಾಗಿ ವರ್ಣಿಸುತ್ತಾ ಹೋಗುತ್ತಾನೆ. ಶೂದ್ರಕ ಅದನ್ನು ಕೃಷ್ಣಾಚಾರ್ಯರು ಯಥಾವತ್ತಾಗಿ ಹೇಳಿದ್ದಾರೆ. ಆದರೆ ಈ ಯಾವ ವಿವರಣೆಯು ಸುಬ್ಬಾಶಾಸ್ತ್ರಿಗಳಲ್ಲಿ ಇಲ್ಲದಿರುವುದರಿಂದ ಅದು ಅಪೂರ್ಣ ಎಂದು ಭಾಸವಾಗುತ್ತದೆ. ಕೊನೆಯಲ್ಲಿ ಮತ್ತೆ ಕೃಷ್ಣಾಚಾರ್ಯರು ಈ ಕೃತಿಯನ್ನು ಕನ್ನಡಿಸುವುದನ್ನು ಈ ರೀತಿಯಾಗಿ ಹೇಳಿದ್ದಾರೆ;

ಕಂ ॥ ಕಲಿಯಳ್ ತ್ರಿಸಹಸ್ರಾಬ್ದಂ
ಕಳೆಯಲ್ ಶೂದ್ರಕನೃಪಾಲ ನೊಗೆವೀಕೃತಿಯಂ
ಇಳೆಯೊಳ್ ಲೌಕಿಕವಿರದಂ
ತಿಳಿಪಲ್, ಸದಸದ್ವಿವೇಕ ಮುಣ್ಮಲ್ವೇಳ್ದಂ ॥

ಕಂ ॥ ಸಿರಿಯರಸನ ಪದಕಮಲದೊ
ಳಿರಿಸಿ ಶ್ರೀಚಾಮರಾಜದಯೆಯಂ ಬಯಸ
ತ್ತೊರೆವೀ ಕನ್ನಡ ಗಬ್ಬವ
ನುರೆ ತಣಿದಂ ತಾಂ ಗರಣಿ ಕೃಷ್ಣಾಚಾರ್ಯರು.

## ಉತ್ತರಾಮಚರಿತ :

"ನಾನು ಸನ್ ೧೮೭೮ನೇ ಇಸವಿಯಲ್ಲಿ ಧಾರವಾಡ ಹೈಸ್ಕೂಲಿನ ಕನ್ನಡ ಅಧ್ಯಾಪಕನಾಗಿರುವಾಗ ಮೇಲಿನ ವರ್ಗದ ವಿದ್ಯಾರ್ಥಿಗಳು ಸಂಸ್ಕೃತ ನಾಟಕಗಳನ್ನೋದುವದನ್ನು ಕಂಡೆನು. ಅದರಿಂದ ನಾಟಕಗಳನ್ನು ಓದಬೇಕೆಂಬ ಹಂಬಲವು ನನಗೆ ಉಂಟಾಯಿತು. ಹೈಸ್ಕೂಲಿನ ಪುಸ್ತಕ ಸಂಗ್ರಹದಲ್ಲಿ ಸಂಸ್ಕೃತ ಭಾಷೆಯ ಹೆಸರಾದ ನಾಟಕಗಳೆಲ್ಲ ಓದುವವರಿಗೆ ಸಿಗುತ್ತಿರುವದರಿಂದ ನನ್ನ ಮನೋರಥಕ್ಕೆ ಮಾರ್ಗ ದೊರೆದಂತಾಗಿ ನಾನು ಪ್ರಸನ್ನರಾಘವ, ವೇಣೀಸಂಹಾರ, ಉತ್ತರರಾಮಚರಿತ್ರ, ಮೃಚ್ಛಕಟಿಕ, ಮುದ್ರಾರಾಕ್ಷಸ, ಪಾರ್ವತೀಪರಿಣಯ, ಮಾಲತೀಮಾಧವ, ಶಾಕುಂತಲ, ವಿಕ್ರಮೋರ್ವಶೀಯ ಮುಂತಾದ ನಾಟಕಗಳನ್ನು ವಿದ್ವಜ್ಜನರ ಸಹಾಯದಿಂದ ಓದಿ ಅರ್ಥವನ್ನು ತಿಳಿದುಕೊಳ್ಳುತ್ತಿದ್ದೆನು. ಎಲ್ಲ ಸಂಸ್ಕೃತ ನಾಟಕಗಳು ಬಹುಶಃ ರಮ್ಯವಾಗೇ ಅವೆ. ಅದರಿಂದ ಅವು ಓದುವವರ ಮನಸ್ಸಿಗೆ ಬಹು ಪ್ರಿಯವಾಗುತ್ತವೆ. ಅದರಂತೆ ನನಗೂ ಆಯಿತು.

ಹೀಗೆ ಕೆಲವು ದಿವಸಗಳಾದ ಬಳಿಕ ನಮ್ಮ ಕನ್ನಡನುಡಿಯಲ್ಲಿ ಒಂದಾದರೂ ಇಂದಾ ನಾಟಕವಿಲ್ಲದ್ದು ಕನ್ನಡಿಗರಿಗೆ ನಾಚಿಕೆಯೇ ಸರಿ ಎಂದು ಎಣಿಸಿ, ಮೊದಲು ಉತ್ತರರಾಮಚರಿತ್ರವನ್ನು ಕನ್ನಡಿಸುವ ಕೆಲಸದಲ್ಲಿ ತೊಡಗಿದೆನು.

ಈ ಉತ್ತರ ರಾಮಚರಿತ್ರವು ಬಲು ಸೊಗಸಿನ ಸೋಜಿಗದ ರಚನೆಯುಳ್ಳ ಕರುಣಾರಸದ ನಾಟಕವಾಗಿದೆ. ಇದರಲ್ಲಿ ಕವಿಯು ಎಷ್ಟೋ ಅನುಭವದ ಮಾತುಗಳನ್ನೂ, ನೀತಿಗಳನ್ನೂ ಯಥಾರ್ಥವಾಗಿ ಬಣ್ಣಿಸಿದ್ದಾನೆ. ಅವುಗಳಲ್ಲಿ '' ಈ ಸಂಸಾರವು ಅಸ್ಥಿರವಾಗಿದೆ, ಇದರಲ್ಲಿ ಆಗಿಂದಾಗ್ಗೆ ಇಷ್ಟಜನರ ವಿಯೋಗವಾಗಿ ಮನಸ್ಸಿಗೆ ವ್ಯಥೆಯಾಗುತ್ತದೆ. ಇದರಿಂದ ಸಾಧುಗಳು ನಿರ್ವಿಣ್ಣರಾಗಿ ವಿರಕ್ತಿಯನ್ನು ವಹಿಸಿದ್ದಾರೆ'' ಎಂಬ ಮಾತು ಮುಖ್ಯವಾದದ್ದದೆ. ಈ ನಾಟಕದ ಕವಿಯು ಭವಭೂತಿ ಎಂಬಾತನು.

ಈತನು ಉತ್ತರರಾಮಚರಿತ್ರ, ಮಾಲತೀಮಾಧವ, ಮಹಾವೀರಚರಿತ್ರ ಎಂಬ ಮೂರು ನಾಟಕಗಳನ್ನು ಬರೆದಿದ್ದಾನೆ. ಈ ಮೂರರಲ್ಲಿ ಉತ್ತರರಾಮ ಚರಿತ್ರೆಯೇ ಮೇಲಾದದ್ದು. ಇದರಲ್ಲಿ ಕರುಣಾರಸವು ಎಷ್ಟಿರುತ್ತದೆಂದರೆ:- ಇದನ್ನು ಓದುವಾಗ್ಗೆ ಒಂದೊಂದು ಕಡೆಯಲ್ಲಿ ಕರುಣಾರಸದ ಹೆಚ್ಚುವಿಕೆಯಿಂದ ಕಣ್ಣಲ್ಲಿ ನೀರು ಬಂದು, ಕಣ್ಣು ಕಾಣಿಸದಂತೆ ಆಗುತ್ತದೆ. ಬಾಯಿಂದ ಶಬ್ದಗಳಂತೂ ಹೊರಡುವುದೇ ಇಲ್ಲ.

ಈ ಪ್ರಕಾರದ ಉತ್ಕೃಷ್ಟ ರಚನೆಯನ್ನು ಭವಭೂತಿಯು ಈ ನಾಟಕದಲ್ಲಿ ಸಾಧಿಸಿದ್ದಾನೆ, ಆದರೆ ಈ ನಮ್ಮ ಕನ್ನಡದ ಭಾಷಾಂತರವು ಯಾವ ಪ್ರಕಾರದ್ದಿರುತ್ತದೆಂಬುದನ್ನು ಇನ್ನು ಮೇಲೆ ವಾಚಕರೇ ಓದಿ ಮನಗಾಣುವರು.

ಮೂಲಗ್ರಂಥದೊಳಗೆ ಪದ್ಯವಿದ್ದಲ್ಲಿ ಪದ್ಯವನ್ನೂ, ಗದ್ಯವಿದ್ದಲ್ಲಿ ಗದ್ಯವನ್ನೂ ಬಹುಶಃ ರಚಿಸಿ ಬರೆದಿದ್ದೇನೆ. ಇದರಿಂದ ಇದು ಚಂಪೂಗ್ರಂಥವಾಗಿರುತ್ತದೆ. ಇದರಲ್ಲಿ ಶ್ರೀರಾಮನು ರಾವಣನನ್ನು ಕೊಂದು ಅಯೋಧ್ಯೆಗೆ ಬಂದ ಮೇಲೆ ನಡೆದ ಇತಿಹಾಸದ ವರ್ಣನೆ ಇರುವದರಿಂದ ಇದಕ್ಕೆ ಉತ್ತರ ರಾಮಚರಿತ್ರವೆಂಬ ಹೆಸರು ಬಿತ್ತು.

ನಾನು ಇದನ್ನು ಆರೇಳು ತಿಂಗಳುಗಳಲ್ಲಿ ಕನ್ನಡಿಸಿ, ಸನ್ ೧೮೭೬ ನೇ ಇಸವಿ ಸೆಪ್ಟಂಬರ್ ತಿಂಗಳಿಗೆ ಮುಗಿಸಿದೆನು.

॥ ಧಾಟ "ಸ್ಮರಣೆಯೊಂದೇ ಸಾಲದೆ" ಎಂಬಂತೆ ॥

ಏನೇನಾಡುವಿರಿ । ಮಕ್ಕಳಿರಾ । ಏನೇನು ಮಾಡಿದಿರಿ ॥ ಏನಾಡುವಿರೆಲೆ ।
ನಾ ನಿಮ್ಮ ತಾಯಲ್ಲೇ । ಸೂನುಗಳಿರಾ ಎನ್ನ । ಧ್ಯಾನವ ತೊರೆದಿರಿ ॥ ಪಲ್ಲ ॥

ಆರನುಡಿಗಲಿಯುವಿರಿ । ಎನ್ನೊಳು ನೀವು। ಬಿರುನುಡಿಯುಡಿಯುವಿರಿ ।
ಮರೆದು ಕನ್ನಡ ತಾಯಿೞ । ಗುರುತನ್ನೆ ನಿರುತದಿ । ಪರಭಾಷೆಯ
ಮರೆಹೊಕ್ಕು ಬಾಳ್ವರೆ? ॥೧ ॥

ಸುಜನೋತ್ತಂಸಕನು । ಹೊನ್ನನು ಹಂಪ । ಗಜಗನು ಗುಣನಂದಿಯು ॥
ಸುಜನಕೇಶಿರಾಜವಿಜಯಾದಿಸುತರೆನ್ನ।ಭಜಿಸಿ ತಮ್ಮ ಯ ಕೀರ್ತಿ।ಧ್ವಜವ ನಿಲ್ಲಿಸಲಿಲ್ಲೇ।೨।

ವೀರಷಡಕ್ಷರಿಯು । ಭೀಮನು ದೇವ । ನೂರಲಕ್ಷ್ಮೀಪತಿಯು ॥ ಚಾರು
ಮತಿಯೊಳೆನ್ನ । ಸಾರಿ ಸೇವಿಸಿ ಕೀರ್ತಿಯೂರಿ ನಿಮ್ಮ ಯ ಕಯ್ಗೆ ಸೇರಿಸಿದರು ಎನ್ನ ॥೩॥

ಇಂತಿಂತವರ ಕುಲದಿ । ಮಕ್ಕಳಿರಾ । ಎಂತವರುದಿಸಿರಿ ॥ ಸಂತಾನ
ಬೇಕೆಂದು । ಚಿಂತಿಸಲೇಕಿನ್ನು । ಕಾಂತಾರದೊಳು ತಾಯಿ । ನಿಂತಳುತಿ ಹೊಡೆ ॥ ೪ ॥

ಹಿರಿಯರು ಬರೆದೋದಿಟ್ಟ । ನಾಟಕ ಚಂಪೂ । ಸುರಸ ಕಾವ್ಯಾದಿ
ಗಳು ॥ ಮರೆಗೆ ಬಿದ್ದವು ನಿಮ್ಮ । ಹುರುಳಿಲ್ಲದಿರುವಿಗೆ । ಜಿರಿಹುಳಹುಪ್ಪುಡಿ ।
ಹರಿದು ಹಾಳಾದವು ॥೫॥

ಸವೆದು ಹೋಯ್ತುಭಿಮಾನವು । ನಿಮ್ಮೊಳು ನೀವೆ । ತವೆ ಜರೆದಾಡುವಿರಿ ।
ಸವತಿಮಕ್ಕಳಿಗೆನ್ನ । ಭವಣೆಗೆ ಕೊಟ್ಟರಿ । ಅವರು ಸುಲಿದು ಕುಟ್ಟ ಕವರಿಕೊಂ
ಬರು ನಿಮ್ಮ ॥೬॥

ಕನ್ನಡಿಗರು ನೀವೆಲ್ಲಾ । ಕಣ್ದೆರೆಯಿರಿ । ಇನ್ನಾದರೂ ಬೇಗನೆ ॥ ಕನ್ನಡ
ಮಾತೆಯ । ಮನ್ನಿಸಿ ಕೀರ್ತಿಯ । ಸನ್ನುತಧ್ವಜವನು ಮುನ್ನಿನಂತಿರಿಸಿರಿ ॥೭॥

ಕನ್ನಡದೇಶದಲ್ಲಿ । ಕನ್ನಡನುಡಿ । ಚೆನ್ನಾಗಿ ಬೆಳೆಯುವಂತೆ ॥ ಕನ್ನಡಿಗರಿ
ಗೆಲ್ಲ ಮುನ್ನಬುದ್ಧಿಯನಿತ್ತು । ಪನ್ನಂಗಶಾಯಿ । ಕಾರುಣ್ಯದಿ ಪೊರೆಯಲಿ ॥೮॥

ಉತ್ತರರಾಮಚರಿತವನ್ನು ವಾಗ್ಭೂಷಣದ ೨೭ ನೆಯ ಸಂಪುಟವಾಗಿ ಪ್ರಕಟಿಸಲ್ಪಟ್ಟಿದೆ. ಇದು ಕರ್ನಾಟಕ ವಿದ್ಯಾವರ್ಧಕ ಸಂಘದವರ ಪ್ರಕಟಣೆಯಾಗಿದ್ದು, ವಿದ್ಯಾವರ್ಧಕ ಸಂಘದವರ ಯೋಜನೆಗಳಲ್ಲ ಇದು ಒಂದು. ಈ ಕಾರ್ಯಕ್ರಮದ ಅಡಿಯಲ್ಲಿ ಈ ಅನುವಾದ ಮೂಡಿಬಂದಿರುವ ಸಾಧ್ಯತೆಯಿದೆ. ಇಲ್ಲಿ ಅನುವಾದಕಾರನ ಕುರಿತಾದ ಪದ್ಯವೊಂದಿದೆ.

ಪ್ರಥಮಕ್ಕುತ್ತರ ರಾಮಚಂದ್ರಚರಿತಂ ಗೀರ್ವಾಣ ಸದ್ವಾಣಿಯಿಂ ।
ದತಿರಮ್ಯಂ ಭವಭೂತಿಯಿಂ ವಿರಚಿತಂ ವಿದ್ವಜ್ಜನಾಹ್ಲಾದಕಂ ॥
ನುತಕರ್ನಾಟಕ ಭಾಷೆಯಿಂ ರಚಿತಮಂ ।
ಶತಸಂಖ್ಯಾತ ಶಕಂಬ ಭಾದ್ರಪದದೊಳ್ ತೇಚೋನ್ನಸಿಂಹಖ್ಯನಿಂ ॥

ಈ ಅನುವಾದ ಕೃತಿಯಲ್ಲಿ ಅನುಕ್ರಮಣಿಕೆಯೊಂದು ಬಂದಿದೆ ಅದರಲ್ಲಿ ಅಂಕವಾರು ವಿಷಯ ಕ್ರಮಣಿಕೆ ಮೂಡಿಬಂದಿದೆ. ಸೂತ್ರಧಾರನ ಪ್ರವೇಶದ ಮೊದಲು ಶ್ಲೋಕವಿದ್ದರೆ ;

ಇದಂ ಕವಿಭ್ಯಃ ಪೂರ್ವೇಭ್ಯೋ ನಮೋವಾಕಂ ಪ್ರಶಾಸ್ಮಹೆ ।
ವಿಂದೇಮ ದೇವತಾಂ ವಾಚಮಮೃತಾಮಾತ್ಮನಃ ಕಲಾಮ್ ॥

ದೋ...ನರಸಿಂಹ ಮುಳಿಬಾಗಲರು ಅಷ್ಟಪದಿಯಿಂದ ಮಂಗಲಾಚರಣವನ್ನು ಹೇಳಿದ್ದಾರೆ.

ಶ್ರೀವರ ಗೌರೀ ಜಯಮುರವೈರೀ ಜಯಮಂಗಳಕರ ದೇವಾ ॥
ಪಾವನ ಶೀಲಾ, ಜಯ ನತಪಾಲಾ ಜಯ ಮುನಿಜನಕೃತಸೇವಾ
ಶ್ರೀವನಮಾಲೀ ಕರುಣಾಶಾಲೀ ವೃಂದಾವನಕೃತಕೇಳೀ ॥
ಗೋದ್ರಜಧೂಳೀ ಶೋಣಕಪೊವೀ ಜಯತು ಜಯತು ! ಕಮಲಾಳೀ

ಅದೇ ಬಸವಪ್ಪ ಶಾಸ್ತ್ರಿಗಳು ಶ್ರೀ ಚಾಯರಾಜೇಂದ್ರ ಕರ್ಣಾಟಕ ನಾಟಕ ಕಂಪೆನಿಯವರ ಅಪೇಕ್ಷೆಯಂತೆ ಬಸವಪ್ಪಶಾಸ್ತ್ರಿಗಳು ಐದು ಗಂಟೆಗಳ ಕಾಲದಲ್ಲಿ ಆಡುವುದಕ್ಕೆ ಅನುಕೂಲವಾಗುವಂತೆ ಕೆಲವು ವರ್ಣನಾಂಶಗಳನ್ನು ಒಟ್ಟು ಸಂದರ್ಭಾನುಗುಣವಾದ ಹಾಡುಗಳನ್ನು ಸೇರಿಸಿ ಸಂಕ್ಷೇಪಿಸಿ ರಚಿಸಿದೆ ಪ್ರತಿ. ಬಸವಪ್ಪ ಶಾಸ್ತ್ರಿಗಳು ನಾಂದಿ ಪದ್ಯವನ್ನು ಹೀಗೆ ಹೇಳಿದ್ದಾರೆ.

ಶಾ ||ವಾಮಾಂಕ ಸ್ಥಿಕ ಶೈಲರಾಜತನಯಾ ಕರ್ಣಾವತಂಸೋತ್ಪಲಂ
ಶ್ಯಾಮಂ ಮಾರ್ಪೊಳೆದಂತೆ ತೋರೆ ಕೆರೆ ಕಂಬುಗ್ರೀವದೊಳ್ ವಿಶ್ವರ।
ಕ್ಷಾಮೂತಾತ್ಮ ಮನಪ್ಪಗೈದ ಕರುಣಾವಾರಕರಂ ಶ್ರೀ ಪುರೀ
ಧಾಮಂ ರಕ್ಷಿಕೆ ಚಾಮಭೂಮಿಪತಿಯಂ ಶ್ರೀಕಂಧರಂ ಶಂಕರಂ ||

ಇದನ್ನು ಗೀತ ಪದ್ಯವಾಗಿಸಿ ಕಂಪನಿ ನಾಟಕದವರಿಗಾಗಿ ಬರೆದಿದ್ದಾರೆ.

ಅಮರೀ ಕಬಿಲೀ ಭ್ರಮರೀ। ರಮಣೀಯಾಂಘ್ರಿ ಪದ್ಮೇ || ಪ||
ಗೌರಿ ಗೌರಿಸಹೋದರಿ। ಮಾರಾರಿಸುಂದರಿ।
ತಾರೆಯಾಂಬ ಶಿಖರಿ ಕುಮಾರಿ ||೧ ||

ನೃತ ಲೋಕ ಕಾಮಿತ। ನಂದನೆ ದಲ್ಲರಿ।
ಶ್ರಾತಿ ಶಿರೋವಿಪಿನ। ಮಯೂರಿ || ೨ ||

ತಾಮಾರಸಾಂಬಕೆ। ಚಾಮುಂಡಂಬಿಕೆ।
ಚಾಮರಾಜ ವರದಾಯಿಕೆ ||೩||

ಮೂಲಪತ್ಯದಲ್ಲಿ ಸೂತ್ರಧಾರನು ಅಧ್ಯಖಲು ಭಗವತಃ ಕುಲಪ್ರಿಯಾನಾಥಸ್ಯ ಯಾತ್ರಾಯಾರ್ಯ ಮಿಶ್ರಾನ್ವಿಜ್ಞಾಪಯಾಮಿ । ಏವಮತ್ರಭವಂತೋ ವಿದುಂಕುರ್ವಂತು । ಅಸ್ತಿಖಲು ತತ್ರಭವಾನ್ಕಾ ಶ್ಯಪಃ ಶ್ರೀಕಂಠಪದಲಾಂಛನಃ ಪದವಾಕ್ಯ ಪ್ರಮಾಣಜ್ಞೋಭವಭೂತಿರ್ನಾಮ ಜತುಕರ್ಣಿಪುತ್ರಃ।

ಯಂ ಬ್ರಹ್ಮಾಣ ಮಿಯಂ ದೇವಿ ವಾಗ್ವಶ್ಯೇವಾನುವರ್ತತೆ।
ಉತ್ತರಂ ರಾಮಚರಿತಂ ತತ್ಪ್ರಣೀತಂ ಪ್ರಯೋಕ್ಷ್ಯತೇ ||

ಈ ರೀತಿ ಹೇಳಿದರೆ, ಬಸವಪ್ಪಶಾಸ್ತ್ರಿಗಳು ಎಲೈ ಸಕಲಕಾಲವಿದರಾದ ಸಭಾಸದರೆ ನನ್ನ ವಿಜ್ಞಾಪನೆಯಲ್ಲಿ ಚಿತ್ತವಿಡಬೇಕು.

ವರವಾಗ್ದೇವತೆಯ ಪಿಶೀ
ಕರಿಸಿದ ಭವಭೂತಿಯಿಂದೆ ವಿರಚಿತವಾದು।
ತ್ತರ ರಾಮ ಚರಿತ್ರವನ
ಚ್ಚರಿಮಿಗೆ ಕರ್ಣಾಟ ಭಾಷೆಯಿಂದಾಡಿಸುವೆಂ ||

ಮುಳಿಬಾಗಿಲರು ನಿಕಟಾನುವಾದ ಮಾಡಿದ್ದಾರೆ.

ಸೂತ್ರಧಾರಕ :- ಈವೊತ್ತು ಶ್ರೀಮನ್ಮಹಾಕಾಲೇಶ್ವರನ ಯಾತ್ರೆಗಾಗಿ ಕೂಡಿದ ರಸಿಕ ಶ್ರೇಷ್ಠರಿಗೆ ನಾನು ಬಿನ್ನವಿಸುತ್ತೇನೆ. ಅವರು ದಯಮಾಡಿ ನನ್ನ ಬಿನ್ನಹಕ್ಕೆ ಚಿತ್ತಕೊಡಲಿ ಪೂಜ್ಯನಾದಂಥ, ಕಾಶ್ಯಪ ಗೋತ್ರದಲ್ಲಿ ಹುಟ್ಟಿದಂಥ, ಶ್ರೀಕಂಠನೆಂಬ ಬೇರೆ ಹೆಸರುಳ್ಳಂತ ಭವಭೂತಿಯೆಂಬ ಕವಿಯು ಹೆಸರಾಗಿದ್ದಾನೆ.

ಆ ವಿಪ್ರವರ್ಯನಿಗೆ ವೆಂಚ್ಚಿದ ಚೆಲ್ವೆಯಮತೀ।
ಶ್ರೀವಾಣೀ ಕೂರ್ತು ಕುಣಿವೃತ್ತಿಹಳಾತನಿಂದೇ ॥
ಶ್ರೀವೀರರಾಮಚರಿತಂ ರಚಿತಂ ಸುರಮ್ಯಂ ।
ನಾವಾ ಸುನಾಟಕವನಾಡಿಯೆ ತೋರ್ಪೆವೀಗಳ್ ॥

ಸೂತ್ರಧಾರ : ಮಾರಿಷೆ,

ಸರ್ವಥಾ ವ್ಯವಹರ್ತವ್ಯಂ ಕುತೋ ಹ್ಯವಚನೀಯತು ।
ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋಜನಃ॥

ಮುಳಿಬಾಗಿಂರು ಃ ಗೋರರದನ ಪವಾದವಂ ವ್ಯವ।
ಹಾರದೊಳೆಲ್ಲಂದದಿಂದೆ ನೋಡಿದೊಡೆ ॥
ನಾಡಿಯರೊಳ್ವಿಂ ಕುಜನರ್ ।
ದೂರುವರಾಪರಿ ಸದುಕ್ತಿಯಂ ಪಳವರ್

ಬಸವಪ್ಪ ಶಾಸ್ತ್ರಿಗಳು :

ಅಳಿಂಕದೆ ಮೂಳ್ವಿಮ ಮಾಳ್ವದ
ಪಳಿ ಬಾರದೆ ಬಿಡದು ಕುಜನರೆಂತಿರ್ದೊಡ ಮೇಂ ।
ಲಲನೆಯರ ನಡೆಯೊಳುಂ ಕವಿ
ಗಳಿ ನುಡಿಯೊಳು ----ಕುಂದ ನುಡಿದಪರತ್ತಿ ॥

ರಾಮನು ಸೀತೆಯೊಡನೆ ಹೇಳುವ ಮಾತು ಹೀಗಿದೆ.

ರಾಮ : ದೇವಿ ವೈದೇಹಿ, ಸಮಾಶ್ವಸಿಹಿ । ತೇಹಿ ಗುರವೋನ ಶುಕ್ಕುವಂತಿ ವಿಹಾತು ಮಸ್ಮಾನ್ ।
ಕಿಂತ್ವ ನುಷ್ಠಾನ ನಿತ್ಯತ್ವಂ ಸ್ವಾತಂತ್ರ್ಯಮಪಕರ್ಷತಿ ।

ಸಂಕಟಾ ಹ್ಯಾಹಿತಾಗ್ನೀನಾಂ ಪ್ರತ್ಯವಾಯೈರ್ಗೃಹಸ್ಥತಾ॥

ಧೊ.ನ. ಮುಳಿಬಾಗಲಿರು : ಎಲೈ ದೇವೀ ಜಾನಕೀ, ತಾಳು ಆ ನಮ್ಮ ಹಿರಿಯರಾದರೂ ನಮ್ಮನ್ನು ಬಿಟ್ಟು ಹೋಗಲಿಕ್ಕೆ ಬಯಸಿದವರಲ್ಲ; ಆದರೆ,

ಇಹುದಿಲ್ಲಂ ಸ್ವಾತಂತ್ರ್ಯಂ।
ವಿಹಿತಾನುಷ್ಠಾನಮ್ ವಹಿಸಿದರ್ಗೆ ॥
ಬಹುವಿಘ್ನದುಷ್ಕರಂಗಳ್ ।
ಗೃಹಸಧರ್ಮಂಗಳಗ್ನಿ ಹೋತ್ರಿಗಳಾ ॥

ಎಂದು ಸಂತೈಸಿದರೆ ಬಸವಪ್ಪ ಶಾಸ್ತ್ರಿಗಳು ಅದನ್ನು ಹೀಗೆ ಹೇಳಿದ್ದಾರೆ.
(ಶ್ರೀರಾಮನು ಸೀತೆಯೊಡನೆ ಅಂತಃ ಪುರದಲ್ಲಿ ಕುಳಿತು)

ರಾಗಃ ಜಂಜೋಟಿ॥ ರೂಪಕ

ರಾಮ- ಜನಕಾವನೀನಾಥ ಪುತ್ರಿ। ಜಲರುಹ ನೇತ್ರಿ।
ಮನವ ಸಂತೈಸಿಕೋ ನೀಂ ಮಂಜುಳಿ ಗಾತ್ರಿ ॥೧॥
ಜನಕ ನೃಪಡಿಗೆಮ್ಮನುಳಿದು ನಗರಿಗೆ ಪೋಗೆ।
ಮನವು ಬಾರದಾದೊಡು ಕೇಳಿ ನಾದಧಿರಾಗೆ ॥ ॥
ಸೀತೆ ನಿಯಮಿಗಳಿಗೆ ನಿತ್ಯ ಕರ್ಮದ ನೇಮ।
ಸ್ವಾತಂತ್ರ್ಯ ವನಪಹರಿಪುದು ನೀತಿಯಿದಮಮಾ।೩॥
ಆಹಿತಾಗ್ನಿಯದ ಗೃಹಸ್ಥನಾಲಯವನ್ನು।
ಸ್ನೇಹವಿರಲು ಬಿಡುವದಲ್ಲಿಮಾಹಿಸು ನೀನು ॥೪॥

ಎಂದು ವಿಸ್ತಾರವಾದ ಪದ್ಯವೊಂದನ್ನು ಹೇಳುತ್ತಾರೆ. ಕಂಪನಿ ನಾಟಕಕ್ಕೆ ಇದು ಅಗತ್ಯವಾಗಿ ಬೇಕಾಗುವಂತಹದೇ ಧೊ.ನ. ಮುಳಿಬಾಗಿಲರು ಮೂಲದ ಶ್ಲೋಕಗಳನ್ನೆಲ್ಲಾ ವಸಮತತಿಲಕ, ಮಾಲಿನೀವೃತ್ತಂ, ಆರ್ಯಾ, ಮತ್ತೇಭವಿಕ್ರೀಡಿತ, ಶಾರ್ದೂಲ ವಿಕ್ರೀಟಿಕಂ ಶಿಖರಿಣೀವೃತ್ತಂ, ಕಾಮದಾವೃತ್ತಂ, ಮಂದಾಕ್ರಾಂತ ವೃತ್ತಂ, ಉತ್ತರಾರ್ಧ, ಇಂದ್ರವಜ್ರಾವೃತ್ತಂ ಹೀಗೆ ವೃತ್ತಗಳಾಗಿ ನಿಕಟವಾಗಿ ಅನುವಾದಿಸಿದರೆ, ಬಸವಪ್ಪಶಾಸ್ತ್ರಿಗಳು ಶ್ಲೋಕಾರ್ಥವನ್ನು ಅಡಗಿಸಿಟ್ಟುಕೊಂಡು ಪದ್ಯಗಳಾಗಿ ರಚಿಸಿದ್ದಾರೆ.

ಉದಾ : ಕಷ್ಟೋ ಜನಃ ಕುಲಜನ್ಯೈರಂಜನೀಯ-
ಸ್ತಾನ್ನೋ ಯದುಕ್ತಮಶಿವಂ ನ ಹಿ ತತ್‌ಕ್ಷಮಂ ತೇ ।
ನೈಸರ್ಗಿಕೀ ಸುರಭಿಣಃ ಕುಸುಮಸ್ಯ ಸಿದ್ಧಾ
ಮೂರ್ಧ್ನಿಸ್ಥಿತಿರ್ನ ಚರಣೈರತಾಡನಾನಿ ॥

ಧೂ.ನ. ಮುಳಬಾಗಲ : ॥ ವಸಂತ ---॥
ಶಿದ್ಧಾನ್ವಯರ್ಗೆ ಜನರಂಜನೆ ಕಷ್ಟಕಾರ್ಯಂ ।
ಹೃದ್ದಾಹಕಂ ನಿನಗಯೋಗ್ಯವಿಂದೆಮ್ಮ ವಾಕ್ಯಂ॥
ಸಿದ್ಧಂ ಸುಗಂಧಿಕುಸುಮಕ್ಕೆ ಶಿರೋಗ್ರವಾಸಂ
ತದ್ಧರ್ಮಮೆಂದು ; ಚರಣಾಹತಿಯ ಪ್ರಸಿದ್ಧಂ॥

ಬಸವಪ್ಪ ಶಾಸ್ತ್ರಿಗಳು : (ರಾಗ ಕಾಮಾಚ್)
ಅನುಬಂಧಿಗಳಾದ ಮಹಾಮುನಿ
ಮೈತ್ರಾವರುಣಿ ಮುಖ್ಯರಂ ಪೂಜಿಸುವಂ ।
ಜನನಿ ನಿಜ ಜನಕನಪ್ಪೀ
ಜನಕಂ ಜನಕನೆ ಪುರೋಹಿತಂ ಗೌತಮನುಂ ॥

ಉದಾ : (೨) ಬ್ರಹ್ಮಾದಯೋ ಬ್ರಹ್ಮಹಿತಾಯ ತಪ್ತ್ವಾಪರ । ಸಹಸ್ರಃ ಶರಸ್ತಪಾಂಸಿ ।
ಏತಾನ್ಯಪಶ್ಯನ್ಗುರವಃ ಪುರಾಣಃ ಸ್ವಾನ್ಯೇದ ತೇಜಾಂಸಿ ತಪೋಮಯಾನಿ ॥
(ರಾಗ : ಸಂಕರಾಭರಣ)

ಬಸವಪ್ಪ ಶಾಸ್ತ್ರಿಗಳು : ಜನಕ ರಘುಕ್ಷಿತಿ ನಾಯಕ
ರನುಬಂಧವ ದಾರಿಗಪ್ರಿಯಂ ಕೊಡುವವನುಂ ।
ಇನಿಯಳೆ ಕೊಂಬುವನುಂ ತಾ
ನೆನಲ್ಕೇ ವಿಶ್ವೈಕಮಿತ್ರ ವಿಶ್ವಾಮಿತ್ರಂ

ಲಕ್ಷ್ಮಣನು ಚಿತ್ರಪಟಗಳನ್ನು ತೋರಿಸುತ್ತಿರುತ್ತಾನೆ. ದಿವ್ಯಾಸ್ತ್ರಗಳನ್ನು ಕುರಿತೆ ಚಿತ್ರಪಟವೊಂದಕ್ಕೆ ಕುರಿತು ಇವು ಸರ್ವಸಾಧಾರಣವಾದ ಅಸ್ತ್ರಗಳಲ್ಲಿ ಇವುಗಳಿಗೆ ನಮಸ್ಕರಿಸು ಎಂದು ರಾಮನು ಹೇಳುತ್ತಾನೆ. ಈ ಸಂದರ್ಭದಲ್ಲಿ ವಿವರಣೆಯು ಬಸವಪ್ಪ ಶಾಸ್ತ್ರಿಗಳ ಅನುವಾದದಲ್ಲಿ ಹಿಂದು ಮುಂದಾಗಿವೆ.

॥ ಮತ್ತೇಭ ವಿಕ್ರೀಡಿತಂ॥

ಧೊ.ನ. ಮುಳಿಬಾಗಿಲ :-

ಗುರುವರ್ಯರ್ಕಮಲಾಸನಾದಿಗಳಿತಿ ಪ್ರಾಚೀನರಾದಂತಪಶ್ ।
ಚರಣುಬೆತ್ತರು ಸಾವಿರಾರುವರುಷಂ ವೇದಂಗಳಿಂ ರಕ್ಷಿಸಲ್ ॥
ಸ್ಫಾರದಾತ್ಮೀಯ ತಪೋಮಯಂಗಳಿಲಸತ್ತೇಜಃ ಸ್ವರೂಪಂಗಳಿಂ ।
ನೆರೆ ಸಂಪಾದಿಸಿದರ್ ಮಹಾಮಹಿಮೆಯುಳ್ಳ ಜೃಂಭಕಾಸ್ತ್ರಂಗಳಿಂ ॥

ಉದಾ : (೩) ಸಂಬಂಧಿನೋ ವಸಿಷ್ಠಾದೀನೇಷ ತಾತಸ್ತವಾರ್ಚತಿ।
ಗೌತದುಶ್ಚ ಶತಾನಂದೋ ಜನಕಾನಾಂ ಪುರೋಹಿತಃ॥

ಬಸವಪ್ಪ ಶಾಸ್ತ್ರಿಗಳು : (ರಾಗ: ಕಾನಡ)

ಸುಮುಖಿ ಧೃತಕಂಕಣಂ ಗೌ
ತಮಾರ್ಪಿತಂ ಮೂರ್ತಿವೆತ್ತ ಸಮಹೋತ್ಸವದೊರ್ ।
ರಮಣೀಯಮದ ತವ ಕರ
ಕಮಲವಿದೆನಗಿತ್ತುದೆತ್ತಿ ಬಯಸಂಸಮಂ ॥

ಧೊ. ನ. ಮುಳಬಾಗಿಂ :

ಅಪ್ಪಯ್ಯ ನೊಪ್ಪುವೆಡಿದಾವರೆಗಳ್ ಮುದಂಗೊಂ।
ಡಿಪ್ಪಾಗೆ ಕಾಂತೆಯರ ಕೈ ವಿಡಿರ್ದೆದೆಮ್ಮುಂ॥
ಒಪ್ಪಿಂದೆ ಆಯ್ಗಳೊಸೆದಿರ್ದುರು ನೋಡಿ ನೋಡಿ ।
ಮುಪ್ಪಾಗಿ ಪೋಯ್ತು ಕನಸುವನಸೌಖ್ಯಕಾಲಂ ॥

ಪ್ರಥಮಾಂಕದಲ್ಲಿ ಸೀತೆ ಮತ್ತೆ ವನಕ್ಕೆ ಹೊರಡುವ ಸ್ಥಿತಿಯಲ್ಲಿರುವಾಗ, ರಥವನ್ನು ಏರುವಾಗ ಹೇಳುವ ಮಾತು ಇಬ್ಬರೂ ಅನುವಾದಕರಲ್ಲೂ ಭಿನ್ನವಾಗಿ ಮೂಡಿಬಂದಿವೆ. ಬಸವಪ್ಪಶಾಸ್ತ್ರಿಗಳು '' ಎಲೈ ವತ್ಸನೆ, ಸ್ವಲ್ಪ ತಾಳು ಆಶ್ರಮದ ಮುನಿ ಪತ್ನಿಯರಿಗೆ ಬಾಗಿನಗಳನ್ನು ಕೊಡುವುದಕ್ಕೆ ತಕ್ಕಾ ಮಂಗಳ ದ್ರವ್ಯಗಳನ್ನು ಸಿದ್ಧ ಪಡಿಕೊಂಡು ಬರುವೆನು'' ಎಂದರೆ, ಮುಳಿಬಾಗಲರು ಹಿಗೆ ಹೇಳುತ್ತಾರೆ. '' ಈಗ ತಪೋಧನರಾದ ಮುನಿಗಳಿಗೆ ನಮಸ್ಕಾರವು, ಪ್ರಾಣದೊಡೆಯರ ಚರಣಕಮಲಗಳಿಗೆ ಪುನಃ ಪುನಃ ನನ್ನ ನಮಸ್ಕಾರವು; ಹಾಗೂ ಯಾವತ್ತೂ ಗುರುಜನರಿಗೂ ನನ್ನ ಪ್ರಣಾಮವಿರಲಿ. ಆದರೆ ಮೂಲ ಪಠ್ಯದಲ್ಲಿ ನಮೋ ರಘುಕುಲದೇವತಾಭ್ಯಃ ದಿಂದಿಷ್ಟೆ ಇದೆ. ಇವೆರಡೂ ತಮ್ಮ ಇಷ್ಟಕ್ಕಾನುಸಾರವಾಗಿ ಬೆಳೆಸಿಕೊಂಡ ಅನುವಾದಗಳಾಗಿವೆ.

ದ್ವಿತೀಯಾಂಕದಲ್ಲಿ ಬರುವ ಸಂಭಾಷಣೆಯೊಂದು ಹೀಗಿದೆ:

ವನದೇವತಾಃ ಆರ್ಯೆ ಅತ್ರೇಯಿಾ ಕುತಃ ಪುನರಿಹಾಗೆಮ್ಯತೆ । ಕಿಂ ಪ್ರಯೋಜನೊ ವಾ ದಂಡಕಾರಣ್ಯ ಪ್ರವೇಶ ಃ। ಎಂಬುದನ್ನು ಬಸವಪ್ಪ ಶಾಸ್ತ್ರಿಗಳು ಆರ್ಯೆ, ಎತಕ್ಕಿಲ್ಲಿಗೆ ಬಂದೆ? ದಂಡಕಾರಣ್ಯವನ್ನು ಕುರಿತು ಬಂದುದಕ್ಕೆ ಪ್ರಯೋಜನವೇನು? ಇದನ್ನೆ ಧೊ.ನ . ಮುಳಿಬಾಗಿರಲು ವನದೇವಿ - ಅತ್ರೇಯಕ್ಕಾ, ತಂವು ಎಲ್ಲಿಂದ ಬಂದಿರಿ? ಮತ್ತೂ ಈ ದಂಡ ಕಾರಣ್ಯದಲ್ಲಿ ತಮ್ಮ ಕೆಲಸವೇನು? ಎಂಬ ಸಾಮಾನ್ಯ ಆಡುಮಾತಿನ ಶೈಲಿಯಲ್ಲಿಯೇ ಅನುವಾದ ಕೈಗೊಂಡಿದ್ದಾರೆ. ಅತ್ರೇಯಿ। ತಂಗೀ, ಇನ್ನು ನಾನು ಹೋಗಿಬರುತ್ತೇ ನೌಮ, ಲೋಭವಿರಲಿ ವಾಸಂತಿ, ಬಳೀ ದೌ ವಾ, ಮಧ್ಯಾಹ್ನವಾಯಿತು. ಬಿಸಿಲು ಬಹು ತೀಕ್ಷ್ಣವಾಗಿರುತ್ತದೆ.

ಎಂಬ ಮಾತುಗಳು ಆಡುಮಾತಿನ ಶೈಲಿಯ, ಆದರಲ್ಲೂ ಚುರಮರಿ ಶೇಷಗಿರಿಯರಂತೆ ಇವರು ಕೂಡ ಉತ್ತರ ಕರ್ನಾಟಕದ ದೇಸೀ ಸೊಗಡಿನ ಚೌಡಿನಲ್ಲೇ ನಡೆದಿದ್ದಾರೆ.

ವನದೇವತೆ, ವಾಸಂತಿ, ಆತ್ರೇಯಿ ಇವರುಗಳ ಸಂಭಾಷಣೆಯಲ್ಲಿ ಅತ್ರೇಯಿಯ ವಾಲ್ಮೀಕಿ ಋಷಿಗಳ ವಿಷಯವನ್ನು ತಿಳಿಸುತ್ತಾಳೆ. '' ಅಥ ಸ ಬ್ರಹ್ಮರ್ಷಿರೇಕದಾಮಾಧ್ಯಂದಿನ ಸಮನಾಯ ನದೀಂ ತಮಸಾಮನು ಪ್ರಸನ್ನೆಃ । ತತ್ರ ಯುಗ್ಮಚಾರಿಣೋಃ ಕ್ರೌಂಚಯೋರೇಕಂ ವ್ಯಾಧೇನ ವಿದ್ಯಮಾನಂ ದದರ್ಶ। ಆಕಸ್ಮಿಕ ಪ್ರತ್ಯಭಾಸಾಂ ಚ ದೇವೀಂ ವಾಚಮ್ಯತಿಕೀರ್ಣಯಾನುಷ್ಟುಬೇನ ಛಂದಸಾ ಪರಿಣತಾಮಭ್ಯುದೈರಯತ್ ॥

ಮಾ ನಿಷಾದ ಪ್ರತಿಷ್ಠಾ ತ್ವಮಗಮಃ ಶಾಶ್ವತೀಃ ಸಮಾಃ।
ಯತ್ಕ್ರೌಂಚ ಮಿಧುನಾದೇಕಮವಧೀಃ ಕಾಮಮೋಹಿತಮ್ ॥

ಧೊ.ನ. ಮುಳಬಾಗಲ : '' ಒಂದಾನೊಂದು ದಿವಸದಲ್ಲಿ ಮಧ್ಯಾನ್ಹದ ಕಾಲಕ್ಕೆ ಬ್ರಹ್ಮರ್ಷಿಯಾದ ಆ ವಾಲ್ಮೀಕಿಯು ನಿತ್ಯಕರ್ಮಕ್ಕೆ ತಮಸಾನಬೀ ತೀರಕ್ಕೆ ಹೋಗಿರುವಾಗ ಅಲ್ಲಿ ಆಡುತ್ತಿರುವ ಕ್ರೌಂಚ ಪಕ್ಷಿಗಳ ವಿಂಧುನದಲ್ಲಿ ಒಂದೇ ಹಕ್ಕಿಯನ್ನು ಒಬ್ಬ ಬೇಡನು ಹೊಡೆದದ್ದನ್ನು ನೋಡಿದನು. ಆ ಗಳಿಗ್ಗೆ ಆ ಮುನಿಯ ಮುಖದಿಂದ ಒಮ್ಮಿಂದೊಮ್ಮೆ ಆನುಷ್ಟುಪಛಂದೋರೂಪದಿಂದ ವಾಗ್ದೇವಿಯು ಈ ಪ್ರಕಾರವಾಗಿ ಹೊರಬಿದ್ದಳು.

ಇಲ್ಲಿ ಆಕಸ್ಮಿಕ ಪ್ರತ್ಯಭಾಸುಂ ಚ ದೇವೀಂ ವಾಚಮಯ್ಯ ಕೀರ್ಣಮಾನುಷ್ಟುಬೇನ ಛಂದಸು ಪರಿಣತಮಭ್ಯುದೈರಯತ್ । ಎಂಬುದನ್ನು ಆಮುನಿಯ ಮುಖದಿಂದ ಒಮ್ಮಿಂದೊಮ್ಮೆ ಅನುಷ್ಟುಪ್ ಛಂದೋರೂಪದಿಂದ ವಾಗ್ದೇವಿಯು ಈ ಪ್ರಕಾರವಾಗಿ ಹೊರಬಿದ್ದಳು. ಎಂದು ಪರಿವರ್ತಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಈ ವಿಷಯ ಪ್ರಸ್ತಾಪವನ್ನೇ ಮಾಡಿಲ್ಲದಿರುವದು ಗಮನೀಯ ಸಂಗತಿ.

ಮೂರನೇಯ ಅಂಕದಲ್ಲಿ ರಾಮನು ಸೀತೆಯ ವಿರಹದಿಂದ ವಿಹ್ವಲನಾಗಿ ಪಡುತ್ತಿರುವ ಪಾಡನ್ನು ವರ್ಣಿಸುವ ಶ್ಲೋಕ ಹೀಗಿದೆ.

ಅನಿರ್ಭಿನ್ನೋ ಗಭೀರತ್ವಾದಂತರ್ಗೂಢ ಘನವ್ಯಥಃ।
ಪ್ರುಟಪಾಕ ಪ್ರತೀಕಾಶೋ ರಾಮಸ್ಯ ಕರುಣೋ ರಸ ಃ॥

ಬಸವಪ್ಪ ಶಾಸ್ತ್ರಿಗಳು : ಅತಿಗಂಭೀರ್ಯಾ
ನ್ವಿತನಹ ಕತದಿಂದ ಬಹಿ ಃ ಪ್ರಕಾಶವಲ್ಲದ ಧಿರೋ।
ದ್ಧತರಾಮನ ಶೋಕಭರಂ
ಕ್ಷಿತಿಯೊಳ್ಪುಟ ಪಾಕಕೆಣೆಯೆನಿಪ್ಪುದು ಕೇಳೌ ॥

ಧೊ.ನ. ಮುಳಬಾಗಲ : ಗಂಭೀರನಾಗಿಹುದರಿಂ ಪ್ರಭುರಾಮನಲ್ಲಿ।
ತುಂಬಿರ್ದು ಕಂಗೊಳಿಸುತಿರ್ಪ ವಿಯೋಗದುಃಖ॥
ಸಂಬಂಧಿಯಾದ ಕರುಣಾರಸಮಿಾಗಲಿಲರ್ಕು೦।
ತಾಂ ಬೇಯುತಿರ್ಪ ಪುಟಪಾಕದಹಾಗೆ ಕೇಳೌ ॥

ಈ ಎರಡು ಅನುವಾದಗಳನ್ನು ನೋಡಿದಾಗ, ಕರುಣಾರಸ ಪೂರಿತವಾದ ಮೂಲಶ್ಲೋಕಕ್ಕೆ ಮುಳಬಾಗಲ ಅನುವಾದ ಸಂವಾದಿಯಾಗಿ ಮೂಡಿಬಂದಿದೆ. ತಮಸೆ ಮತ್ತು ಮುರಲೆಯ ಸಂಭಾಷಣೆಯಲ್ಲಿ ತಮಸೆ ಮುರಳೆಯನ್ನು ಕುರಿತು ಹೀಗೆ ಹೇಳುತ್ತಾಳೆ. ''ಭಾಗೀರಥಿಯು ಸೀತಾದೇವಿಯನ್ನು ಕುರಿತು ಹೀಗೆ ಹೇಳಿದಳು. '' ಎಲೇ ವತ್ಸೆ, ಈಗಲಾದರೋ ಆಯುಷ್ಮಂತರಾದ ಕುಶಲವರಿಗೆ ದ್ವಾದಶರ್ಷ ಸಂಖ್ಯಾಮಂಗಳ ಗ್ರಂಥಿಯು ಕಟ್ಟಲ್ಪಡುವುದಾದ್ದರಿಂದ ಮಾವನಾಗಬೇಕಾದ ಸೂರ್ಯನನ್ನು ಸ್ವಹಸ್ತದಿಂದ ಕೊಯ್ದು ಪುಷ್ಪಗಳಿಂದ ಪೂಜಿಸು. ಭೂತಳದಲ್ಲಿ ಸಂಚರಿಸುವ ನಿನ್ನನ್ನು ನನ್ನ ಪ್ರಭಾವದಿಂದ, ವನದೇವತೆಗಳೂ ಕೂಡ ಕಾಣದಿರುವರು. ಇನ್ನು ಮನುಷ್ಯರ ಮಾತೇನು? ಎಂದು ಹೇಳಿದಳು. ಇದು ಮೂಲದಲ್ಲಿ ಹೀಗಿದೆ.

"ಉಕ್ತಮತ್ರ ಭಗವತ್ಯಾ ಭಾಗೀರಥ್ಯಾ" ವತ್ಸೆ ದೇವಯಜನ ಸಂಭವೆ ಸೀತೆ, ಅದ್ಯ ಖಲ್ವಾಯುಷ್ಮತೋಃ ಕುಶಲವ ಯೋದ್ವಾದಶಸ್ಯ ಜನ್ಮ ಸಂವತ್ಸರಸ್ಯ ಸಂಖ್ಯಾಮಂಗಳ ಗ್ರಂಥಿರಭಿವರ್ತತೆ। ತದಾತ್ಮನ ಃ ಪುರಾಣಶ್ವ ಶುರದೇತುವತೋ ಮಾನವಸ್ಯ ರಾಜರ್ಷಿವಂಶಸ್ಯ ಪ್ರಸವಿತಾರಂ ಸವಿತಾರಮ ಪರಿಣೀಮ ಸ್ಮತಪ್ರಭಾವಾದ್ವನದೇವತು ಆಪಿ ದ್ರಕ್ಷಂತಿ ಕಿಂ ಪುನರ್ಮರ್ತ್ಯಃ ಇತ।

ಇದನ್ನೇ ಮುಳಬಾಗಿಲರು ಈ ರೀತಿ ಹೇಳುತ್ತಾರೆ " ಈವೊತ್ತು ಭಾಗೀರಥಿಯು ಸೀತೆಯನ್ನು ಕುರಿತು - ಮರಳೇ ಜಾನಕೀ, ಇಂದು ನಿನ್ನ ಮಕ್ಕಳಾದ ಕುಶಲವರ ಆಯುಷ್ಯವೃದ್ಧ್ಯರ್ಥವಾಗಿ ಮಂಗಳಕಾರ್ಯವನ್ನು ಮಾಡಬೇಕು. ಆದ್ದರಿಂದ ನಿಮ್ಮ ಆದಿಶ್ವಶುರನಾದಂಥ, ಮನುವಂಶೋತ್ಪಾದಕನಾದಂಥ, ನಿಷ್ಕಲಂಕವಾದಂಥ ಸೂರ್ಯನನ್ನು ನಿನ್ನ ಕೈಯಿಂದ ನೀನೇ ಹೂಗಳನ್ನು ತಂದು ಪ್ರಸನ್ನನಾಗುವಂತೆ ಪೂಜಿಸು, ಅಂಜಬೇಡ. ನೀನು ಭೂಮಿಭಾಗದಲ್ಲಿ ಸುಳಿದಾಡುತ್ತಿರಲು, ನನ್ನ ಮಹಿಮೆಯಿಂದ ವನದೇವತೆಗಳಾದರೂ ನಿನ್ನನ್ನು ನೋಡಲಿಕ್ಕೆ ಸಮರ್ಥರಾಗುವದಿಲ್ಲ. ಇನ್ನು ಮನುಷ್ಯರಂತೂ ಇರಲಿ!"

ಇಲ್ಲಿ ಮುಳಿಬಾಗಲರು ಸ್ವಲ್ಪ ಭಿನ್ನ ಕಾರಣವನ್ನುಹೇಳುತ್ತಾರೆ. ಮಕ್ಕಳಾದ ಕುಶಲವರ ಆಯುಷ್ಯ ವೃದ್ಧ್ಯರ್ಥವಾಗಿ ಮಂಗಳಕಾರ್ಯವನ್ನು ಮಾಡಬೇಕು. ಇದು ಮೂಲದ ಅದ್ಯ ಖಲ್ವಾಯುಷ್ಮತೋಃ ಕುಶಲದಯೋದ್ವಾದಶಸ್ಯ ಜನ್ಮ ಸಂವತ್ಸರಸ್ಯ ಸಂಖ್ಯಾಮಂಗಳಗ್ರಂಥಿರಭಿವರ್ತತೇ । ಎನ್ನುವದಕ್ಕೆ ತುಸು ಭಿನ್ನವೆನಿಸಿದೆ. ಆದೇ ಬಸವಪ್ಪಶಾಸ್ತ್ರಿಗಳು ಆಯುಷ್ಮಂತರಾದ ಕುಶಲವರಿಗೆ ದ್ವಾದಶವರ್ಷ ಸಂಖ್ಯಾಮಂಗಳ ಗ್ರಂಥಿಯು ಕಟ್ಟಲ್ಪಡುವುದುದ್ದರಿಂದ ಎಂದಿದ್ದಾರೆ. ಈ ಮಾತು ಜನಸಾಮಾನ್ಯರಿಗೆ ಕಬ್ಬಿಣದ ಕಡಲೆಯಾಗಿರುವ ನಿಮಿತ್ತದಿಂದ ಮುಳಿಬಾಗಿಲರು ಆಯುಷ್ಯ ವೃದಸ್ಥ್ಯರ್ಥವಾಗಿ ಮಂಗಳ ಕಾರ್ಯವನ್ನು ಮಾಡಬೇಕು ಎನ್ನುತ್ತಾರೆ.

ರಾಮ : ದೇವಿ.

ಪ್ರಸಾದ ಇದ ಮೂರ್ತಸ್ತೆ ಸ್ಪರ್ಶಃ ಸ್ನೇಹಾರ್ದ್ರ ಶೀತಲಃ।
ಅದ್ಯಾಪ್ಯಾನಂದಯತಿ ಮಾಂ ತ್ವಂ ಪುನಃ ಕ್ವಾಸಿ ನಂದಿನೀ ॥

ಧೊ.ನ. ಮುಳಿಬಾಗಲರು : --- ದೇವಿ, ಜಾನಕಿ -

॥ ವಸಂತ ತಿಲಕಂ॥

ಆಹಾ! ಪ್ರಸಾದವೇ, ಸುಖಪ್ರದೇ, ದೇವಿ ನಿನ್ನ।
ಸ್ನೇಹಾರ್ದ್ರಶೀತಲದು ದಾಮದು ಸೋಂಕು ನನ್ನ ॥
ದೇಹಕ್ಕೆ ದಿವ್ಯ ಪರಿತೋಷವನೀ ವೃದಿನ್ನುಂ।
ಹಾಹಾ! ಮನೋರಮಣಿ ಯಾದೆಡೆಯಿರ್ಪ ನೀನು ॥

ಬಸವಪ್ಪ ಶಾಸ್ತ್ರಿಗಳು : ( ರಾಗ. ಸಾಮ। ಆದಿ)

ಆಹಾ ಭೂಮಿಕುಮಾರಿ ॥ ಪ॥
ಮೋಹವಾ ಸೈಸೆ ಲಾವಣ್ಯಲಹರಿ।
ಆಕಟವ್ವೆ ದೇಹಿ ಕೋಮಲಾಂಗಿ ॥೧॥
ದೇವಿ ದಂಡಕಾರಣ್ಯ ಸಖಿ ಹರಿ ।
ಸುಮುಖಿ ಮದ್ಗೇಹಕಲ್ಪಿ ಶಾಖಿ ॥ ೨॥

ಶ್ಲೋಕಾನುವಾದವನ್ನು ಗ್ರಹಿಸಲಾಗಿದೆ.

ಪ್ರಸಾದ ಇವ ಮೂರ್ತಸ್ತೆ ಎನ್ನುವದನ್ನು ಆಹಾ! ಪ್ರಸುದೆವೇ, ಸುಖಪ್ರದೇ, ದೇವಿ ನಿನ್ನ ಸ್ಪರ್ಶಃ ಸ್ನೇಹಾರ್ದ್ರಶೀತಃ । ಎನ್ನುವದನ್ನು ಸ್ನೇಹಾರ್ದ್ರಶೀತಲವಾದುದು ಸೊಂಕು ನನ್ನ ಅದ್ಯಾಪ್ಯಾನಂದಯತಿ ಎನ್ನುವದನ್ನು ದಿವ್ಯ ಪರಿತೋಷವನೀವುದಿನ್ನು ಎಂಬುದಾಗಿ ನಿಕಟವಾಗಿ ಅನುವಾದಿಸಿದ್ದಾರೆ. ಆದರೆ ಗದ್ಯ ಸಂವಾದಗಳನ್ನು ಸಂಗ್ರಹಾನುವಾದವಾಗಿ ಕೊಟ್ಟಿರುವದು ವಿಶೇಷ. ಬಹುತೇಕ ಎರಡೂ ಅನುವಾದಗಳ ಗದ್ಯ ಸಂಭಾಷಣೆಯನ್ನು ಒಂದರ್ಥದಲ್ಲಿ ಸಂಗ್ರಹಿಸಿಕೊಂಡಿದ್ದಾರೆ. ಈ ಎರಡು ಅನುವಾದಗಳಲ್ಲಿಲ ಕಂಡುಬರುವ ಪ್ರಮುಖ ಹೋಲಿಕೆ ಇದೇ. ಆದರೆ ಬಸವಪ್ಪ ಶಾಸ್ತ್ರಿಗಳ ಗದ್ಯಾನುವಾದ ಮೂಲಕ್ಕೆ ಹೆಚ್ಚು ನಿಷ್ಠೆತೋರಿದರೆ, ಮುಳಬಾಗಲರು ಆಡುಮಾತಿಗೆ ಹೆಚ್ಚು ಆಸಕ್ತಿ ವಹಿಸಿರುವಂತೆ ತೋರಿಬರುತ್ತದೆ. ಆದರೆ ಬಸವಪ್ಪ ಶಾಸ್ತ್ರಿಗಳದ್ದು ಮೂಲ ಪಠ್ಯದ ಅಂಶಗಳು ಯಥಾರೀತಿ ಒಂದೇ ಸಾಂದರ್ಭಿಕವಾಗಿ ಬೇರೆ ಎಲ್ಲೋ ಬಂದಿದೆ. ಆದರೆ ಮುಳಿಬಾಗಲರು ಯಥಾವತ್ತಾದ ರೀತಿಯಲ್ಲಿ ಮೂಲಪಠ್ಯದಲ್ಲಿರುವ ಅಂಶಗಳು ಕ್ರಮವಾಗಿ ಬರುವಂತೆ ಅನುವಾದಿಸಿದ್ದಾರೆ.

ಉದಾ : ಸೀತಾ : ಎಲೆ ಖಲು ತೇಗಾಧಮಾನಸದರ್ಶಿತ ಸ್ನೇಹಸಂಭಾರಾ ಆನಂದ ನಿಷ್ಯಂದಿನಃ ಸಂಧಾಮಯಾ ಆರ್ಯಪುತ್ರಸ್ಯೋಲ್ಲಾಪಾಃ। ಯೇಷಾಂ ಪ್ರತ್ಯಯೇನ ನಿಷ್ಕಾರಣ ಪರಿತ್ಯಾಗಶಲ್ಲಿತೋಪಿ ಬಹುಮತೋ ಮಮ ಜನ್ಮಲಾಭಃ।

ಬಸವಪ್ಪ ಶಾಸ್ತ್ರಿ : ಆರ್ಯಪುತ್ರನೇ, ಈ ಮಾತು ನಿನಗಿನ್ನೂ ತಕ್ಕುದ್ದಲ್ಲ ಅಥವಾ ವಜ್ರದಂತೆ ಕಠಿಣಳಾದ ನಾನು ಜನ್ಮಾಂತರದಲ್ಲಿಯೂ ಕಾಣಲಶಕ್ಯವಾದರೂ ಮಂದಭಾಗ್ಯಳಾದ ನನ್ನನ್ನು ಹಂಬಲಿಸುವ ಆರ್ಯಪುತ್ರನ ಮೇಲೆ ಯಾತಕ್ಕೆ ನಿರ್ದಯಳಾಗಲಿ, ಈತನ ಹೃದಯವನ್ನು ನಾನು ಬಲ್ಲೆನು. ನನ್ನ ಹೃದಯವನ್ನು ಈತನು ಬಲ್ಲನು.

ಧೂ.ನ.ಮುಳಿಬಾಗಲ : ಈ ಅಪರಿಮಿತಪ್ರಣಯಾತಿರೇಕವುಳ್ಳಂಥ, ಪರಮಾಹ್ಲಾದಕ್ಕೆ ಕಾರಣವಾದಂಥ ಆರ್ಯ ಪುತ್ರರ ನುಡಿಗಳನ್ನು ಮನದಣಿಯೆ ಕೇಳುವ ನನ್ನ ಜನ್ಮವು ನಿಷ್ಕಾರಣ ಪರಿತ್ಯಾಗದಿಂದ ದೂಷಿತವಾದರೂ ಸಫಲವಾಯಿತು. ನಾನು ಧನ್ಯಗಳು. ಹೀಗೆ ಮುಳಿಬಾಗಲರು ಆಡುಮಾತಿನ

ಧಾಡಿಯನ್ನನುಸರಿಸಿ ಅನುವಾದಿಸಿದ್ದಾರೆ. ಚತುರ್ಥಾಂಕದಲ್ಲಿ ವಿಶೀಷ್ಠನ ಆರೆಮುನಿದ ಪ್ರಸಂಗದಲ್ಲಿ 'ಸಾಧಾತಕಿ' ವಶೀಷ್ಠರ ವ್ಯಕ್ತಿತ್ವ ನೋಡಿ ಇವರು ಹುಲಿಯೋ, ತಿಳವೋ ಎಂದು ಕೇಳಿದು ಮೂಲ ಸಂಸ್ಕೃತದಲ್ಲಿದೆ.

ಸಾಧಾತಕಿ: ಮಯಾ ಪುನರ್ಜ್ಞಾಶಂ ವ್ಯಾಪ್ರೋವಾ ವೃಕೋ ವೈಷಿ ಇತಿ। ಧೊ.ನ. ಮುಳಬಾಗಿಲ :- ದಾರು ಬಲ್ಲರಪ್ಪಾ! ನಾನು ಇದು ದೊಡ್ಡತೋಳನೋ? ಹೆಬ್ಬುಲಿಯೋ ಎಂದು ಆಲೋಚಿಸುತ್ತಿದ್ದೆನು.

ಬಸವಪ್ಪ ಶಾಸ್ತ್ರಿಗಳು : ಅಯ್ಯೋ, ಆತನು ಹುಲಿಯೋ ಎನ್ನುತ್ತಿದ್ದೆ, ಇವರು ವಸಿಷ್ಠ ಮಹರ್ಷಿಗಳೆ?

ಬಸವಪ್ಪಶಾಸ್ತ್ರಿಗಳು ಪ್ರಚಲಿತವಿದ್ದ ಬಾಷೆಯಲ್ಲಿ ಅದನ್ನು ಪರಿವರ್ತಿಸಿದ್ದು ಕಂಡು ಬರುತ್ತದೆ.

ಬಸವಪ್ಪ ಶಾಸ್ತ್ರಿಗಳು ಮೂಲ ಪಠ್ಯವನ್ನು ಅತ್ಯಂತ ನಿಕಟವಾಗಿ ಆನುವಾದ ಮಾಡುವವರು ಆದರೆ ಉತ್ತರಾಮಚರಿತೆಯ ಆನುವಾದದಲ್ಲಿ ಮಾತ್ರ ಕೆಲವು ಶ್ಲೋಕಗಳನ್ನು ಕೈಬಿಟ್ಟಿದ್ದಾರೆ.

ಮೂಲ : ಅರುಂಧತಿ :

ಸಂತಾನವಾಹಿನ್ಯಪಿ ಮಾನುಷಾಣಂ
ದುಃಖಾನಿ ಸಂಬಂಧಿವಿಯೋಗಜಾನಿ।
ದೃಷ್ಟೆ ಜನೆ ಪ್ರೇಯಸಿ ದುಃಸಹಾನಿ
ಸ್ರೋತಪುಃ ಸಹಸ್ರೈರಿವ ಸಾಂಪ್ಲವಂತೆ

ಧೊ.ನ.ಮ: ಅಕ್ಕುಂ ತ್ರಿಯರನಗಲ್ಪೆಡೆ।
ದುಖಂ ತಕ್ಕಾಲಕಾಪ್ತರಂ ಕಾಣ್ಬುದುಮಾ ॥
ದುಖಂ ದುಃಸಹಮಾದಪು।
ದುಕ್ಕೇರ್ವಾಮನೊರ್ಮೊನಲ್ಲಳಿಂದದು ಪರಿಗುಂ ।೮॥

ಬಸವಪ್ಪಶಾಸ್ತ್ರಿಗಳು ಮಾತ್ರ ಈ ಶ್ಲೋಕವನ್ನು ಬಿಟ್ಟಿರುವುದು ಆಶ್ಚರ್ಯಕರವಾಗಿರುವುದು.ಕೆಲವುಕಡೆ ಕುಳಬಾಗಿಲರು ಭಾವಾನುವಾದ ಮಾಡಿ ಕಿಂಚಿತ್ ವಿಸ್ತರಣೆಯೂ ಮಾಡಿದ್ದಾರೆ. ಜನಕ ನಮಸ್ಕರಿಸಿದಾಗ ವಶೀಷ್ಠನ ಪತ್ನಿ ಅರುಂಧತಿ ಆರ್ಶೀರ್ವದಿಸುತ್ತಾಳೆ.

ಮೂಲ : ಅರುಂಥತಿ : ಅಕ್ಷರಂತೆ ಜ್ಯೋತಿಃ ಪ್ರಕಾಶತಾಮ್। ಸತ್ವಾಂ ಪುನಾತು ದೇವಃ ಪರೊ ರಾಜಸಾಂಯ ಏಷಂ ತಪತಿ.

ಧೊ.ನ.ಮು: ಎಲೈ ಅರಸೇ। ನಿನಗೆ ಪರಂಜ್ಯೋತಿ ಸ್ವರೂಪನಾದ ಬ್ರಹ್ಮನು ಪ್ರತ್ಯೇಕವಾಗಲಿ, ಅಂತರಿಕ್ಷವಾಗಿ ಹೊಳೆಯುತ್ತಿರುವ ಸತ್ವಮಯನಾದ ಈ ಸೂರ್ಯನಾರಾಯಣನು ನಿನ್ನನ್ನು ಶುದ್ಧಿಗೊಳಿಸಲಿ.

ಬಸವಪ್ಪ ಶಾಸ್ತ್ರಿಗಳು : ನಿನಗೆ ಬ್ರಹ್ಮಜ್ಞಾನ ಸಿದ್ಧಿಸಲಿ ಆದರೆ ಮೂಲ ಸಾಂಸ್ಕೃತ ಅರ್ಥವು ಹೀಗಿದೆ.

''ನಿನ್ನ ಜ್ಯೋತಿ ಅಕ್ಷರವಾಗಿ ಬೆಳಗುತ್ತಿರಲಿ. ರಜೋದೂರನಾಗಿ ಬೆಳಗುತ್ತಿರುವ ಸೂರ್ಯನು ನಿನ್ನನ್ನು ಪಾವನಗೊಳಿಸಲಿ'' ಅನುವಾದಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಮಾತ್ರ ತೀರ ಸಂಕ್ಷಿಪ್ತವಾಗಿ ಅನುವಾದಿಸಿದ್ದಾರೆ. ಕೆಲವು ಸಲ ಬಸವಪ್ಪ ಶಾಸ್ತ್ರಿಗಳು ಗದ್ಯ ಸಂಭಾಷಣೆ ಪದ್ಯವಾಗಿ ರಚಿಸಿದ್ದಾರೆ.

ಬಸವಪ್ಪ ಶಾಸ್ತ್ರಿಗಳು : ಹಾ ಮಹೀಸುತೆ, ಹಾ ಮದಂಬಿಕ ಜಾತೆ ॥ಪ॥
ಹಾ ಮನೋಜ್ಞಗುಣಧಾಮ, ಜಗನ್ನುತೆ
ಕೋಮಲಾಂಗಿ ಹಾಹಾ ರಾಮನ ದಯಿತೆ ॥೧॥

ಮೂಲದಲ್ಲಿ ಮಾತ್ರ ಗದ್ಯ ಸಂಭಾಷಣೆ ಇದೆ. ಅಲಂಕಾರ ಪ್ರಾಯವಾದ ಮಾತುಗಳನ್ನು ಬಸವಪ್ಪ ಶಾಸ್ತ್ರಿಗಳು ಕೆಲವು ಕಡೆ ಬಿಟ್ಟಿದ್ದು ತೀರ ಸರಳಾನುವಾದ ಮಾಡಿದ್ದಾರೆ.

ಮೂಲ: ಕೌಸಲ್ಯ : ಜಾತೆ ಜಾಸಿದೆ, ಕಿಂ ಕರೋಮಿ? ಧೃಢವಜ್ರಲೇಪ ಪ್ರತಿಬದ್ಧನಿಶ್ಚಲಂ ಹತಬೇವತಂ ಮಾಂ ಮಂಟಭಾಗಿನೀಂ ನ ಪರಿತ್ಯಜತಿ।

ಬಸವಪ್ಪ ಶಾಸ್ತ್ರಿಗಳು : ಹಾವತ್ಸೆ ಜಾನಕಿ, ಏನು ಮಾಡಲಿ! ಹಾಳು ಜೀವವು ಮಂದಭಾಗ್ಯಳಾದ ನನನ್ನು ಬಿಡದಲ್ಲಾ.

ಧೊ. ನ. ಮು: ಮಗಳೇ ಜಾನಕೀ, ದೃಢವಾದ ವಜ್ರಲೇಪನದಿಂದ ಘಟಿತವಾದಂತೆ ನಿಶ್ಚಲವಾಗಿರುವ ಈ ನನ್ನ ಪ್ರಾಣವು ದುರ್ಭಾಗ್ಯಳನ್ನು ಬಿಟ್ಟು ಹೋಗವೊಲ್ಲದು. ಏನು ಮಾಡಲಿ।

ಶಾಸ್ತ್ರಿಗಳು ಸಂದರ್ಭಕ್ಕೆ ತಕ್ಕಂತೆ ಒಂದು ಲಘು ಶಿಶುಗೀತೆಯನ್ನು ರಚಿಸಿದ್ದಾರೆ. ಅನಧ್ಯಾಯ ಕಾಲದಲ್ಲಿ ಆಟ ಆಡುವ ವಟುಗಳು ಹಾಡುತ್ತಾರೆ.

ಬನ್ನಿ ಬನ್ನಿ ಬಾಲರ್‍ಕಿ ನಾನಿನ್ನು ಚಂಡನಾಡುವ।
ತನ್ನಿ ತನ್ನಿ ದಂಡುವ, ನಾವಿನ್ನು ಚಂಡನಾಡುವ ॥೧೩॥

ಇದು ಮೂಲದಲ್ಲಿ ಇಲ್ಲ. ಆದರೆ ಈ ಸರಳ ಪದ್ಯ ಬಾಲಭಾವಿಕ್ಕೆ ಉಚಿತವಾಗಿದೆ.

ಮುಳಬಾಗಲರ ಅನುವಾದದಲ್ಲಿ ಕೆಲವು ಉತ್ತರಕರ್ನಾಟಕದ ಪದಗಳ ಬಳಕೆ ಕಂಡು ಬರುವುದು. ಲವನನ್ನು ಆಶೀರ್ವದಿಸುವಾಗ

ಉದಾ: ಕೌಶಲ್ಯೆ:- ಅಪ್ಪ ಯ್ಯ, ಚಿರಂಜೀವಿಯಾಗು
ಅರುಂಧತಿ :- ಬಾಳಾ, ನನ್ನ ಕಡೆಗಿಷ್ಟು ಬಾರಪ್ಪಾ

ಇಲ್ಲಿ ಅಪ್ಪಯ್ಯ, ಬಾಳಾ(ಮಗು ಎಂಬ ಅರ್ಥದಲ್ಲಿ) ಬಳಕೆಯಾದುದು ಉತ್ತರ ಕರ್ನಾಟಕ ಭಾಷಾ ಪ್ರಭಾವವಾಗಿ ತೋರುವುದು.

ಅರುಂಧತಿ :- ಓಗೋ! ಆ ಉಲುಕೋಚಿ ಹುಡುಗನು ಅತಿವೇಗದಿಂದ
ಬಹಳ ದೂರ ಹೋದನು. ಇನುಕಾಣುವ ಬಗೆ ಹ್ಯಾಗೆ?

ತುಂಟ ಎನ್ನುವಲ್ಲಿ ಉಲುಕೋಟಿ ಎಂದು ಸ್ಥಳೀಯ ಭಾಷೆ ಉಪಯೋಗಿಸಿದ್ದಾರೆ.

ಒಟ್ಟಿನಲ್ಲಿ ಬಸವಪ್ಪಶಾಸ್ತ್ರಿಗಳು ಉಳಿದ ಕೃತಿಗಳಂತೆ ನಿಕಟ ಅನುವಾದ ಮಾಡುವದಕ್ಕೆ ಹೋಗಿಲ್ಲ. ಕೆಲವು ಸಂಭಾಷಣೆಗಳು ಬಿಟ್ಟು ಹೋಗಿವೆ. ಕೆಲವು ಪದ್ಯಗಳನ್ನು ತಾವೇ ಸೇರಿಸಿದ್ದಾರೆ. ಮಳಬಾಗಿಲರ ಪದ್ಯಗಳು ಮೂಲಕ್ಕೆ ನಿಕಟವಾಗಿದ್ದರೂ ಸಂಸ್ಕೃತದಿಂದ ಭಾರವಾಗಿವೆ. ಸಂಭಾಷಣೆಗಳಲ್ಲಿ ಆಡು ಭಾಷೆಯನ್ನು ಬಳಸಿದ್ದಾರೆ. ಕೆಲವು ಕಡೆ ಭಾವಾನುವಾದ ಮಾಡಿದ್ದಾರೆ. ಗದ್ಯವನ್ನು ಸುಲಲಿತವಾಗಿಸಿದ್ದಾರೆ.

4) ಆರ್ಯಕ್ಷೇಮಿಶ್ವರನ ಚಂಡಕೌಶಿಕ

ಒಂದು ಕೃತಿಯನ್ನು ಅನುವಾದಕರುಗಳು ಅನುಸರಿಸುವಲ್ಲಿ ತಳೆದ ಧೋರಣೆಗಳು ಪ್ರಸ್ತುತ ತೌಲನಿಕ ಅಧ್ಯಯನ ಚಂಡಕೌಶಿಕ ನಾಟಕದ ಅನುವಾದಗಳನ್ನು ಕುರಿತಿವೆ ಸತ್ಯ ಹರಿಶ್ಚಂದ್ರನನ್ನು ಪರೀಕ್ಷಿಸಿದ ಬಗೆ ಈ ನಾಟಕ ಕಥಾವಸ್ತು ಸತ್ಯವೆಂದು ಮೌಲ್ಯದ ಪ್ರತಿರೂಪದಂತಿರುವ ಸತ್ಯಹರಿಶ್ಚಂದ್ರನ ಕಥೆ ಜನಜನಿತವಾಗಿದೆ. ಈ ಕಥೆಯನ್ನು ಹೊಂದಿರುವ ನಾಟಕವನ್ನು ಜನಸಾಮಾನ್ಯರು ಆದರದಿಂದ ಸ್ವಾಗತಿಸುವರೆಂಬ ನಂಬಿಕೆ ಅನುವಾದಕಾರರಲ್ಲಿರುವದನ್ನು ಹಲವು ಅಂಶಗಳಿಂದ ಧೃಡಪಡಿಸಬಹುದಾಗಿದೆ. ರಂಗಭೂಮಿಯ ಆದ್ಯತೆಗನುಗುಣವಾಗಿ ರಂಗಭೂಮಿಯ ಪ್ರೇಕ್ಷಕರಿಗೋಸ್ಕರವಾಗಿಯೇ ಒಂದು ಅನುವಾದ ಬಂದರೆ, ರಾಜಸಭೆಯ ಘನತೆ, ಗಾಂಭಿರ್ಯತೆ ಅನುಗುಣವಾಗಿ ಇನ್ನೊಂದು ಅನುವಾದ ಮೂಡಿಬಂದಿದೆ. ಇದು ಮುಖ್ಯವಾಗಿ ಒಂದು ಕೃತಿಯನ್ನು ಒಂದಕ್ಕಿಂತ ಹೆಚ್ಚು ಅನುವಾದಕರುಗಳು ಅನುಸರಿಸುವ ಧೋರಣಾತ್ಮಕ ಅಂಶಕ್ಕೆ ಹೊಂದಿಸಬಹುದಾದರೂ ಮೂಲ ಸಂಸ್ಕೃತ ಕೃತಿ ಲಭ್ಯವಾಗಿಲ್ಲದಿರುವದರಿಂದ ಅವುಗಳನ್ನು ಒಂದು ಹೊಸ ವರ್ಗವಾಗಿ ಇಲ್ಲಿ ವಿಭಾಗಿಸಲಾಗಿದೆ.

ಆರ್ಯಕ್ಷೇಮಿಶ್ವರನ ಚಂಡಕೌಶಿಕವನ್ನು ಕ್ರಿ.ಶ.೧೮೮೯ರಲ್ಲಿ ಜಯರಾಯಚಾರ್ಯರು, ಸರಿ ಸುಮಾರು 1990ರ ನಂತರದ ಘಟ್ಟದಲ್ಲಿ ಬಸವಪ್ಪಶಾಸ್ತ್ರಿಗಳು ಅನುವಾದಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಮೈಸೂರು ಒಡೆಯರ ಆಸ್ಥಾನದ ಪರಿಪಾಠಕ್ಕನುಗುಣವಾಗಿ ಅನುವಾದ ರೀತಿಯನ್ನು ಅನುಸರಿಸಿದರೆ, ಜಯರಾಯಚಾರ್ಯರು ಆಸ್ಥಾನ ವಿದ್ವಾಂಸರಾದರೂ ಅಲ್ಲಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡುತ್ತಲೆ ಮೂಲಕ್ಕೆ ಹೆಚ್ಚು ನಿಕಟವಾಗುತ್ತ ನಡೆದಿದ್ದಾರೆ. ಬಸವಪ್ಪ ಶಾಸ್ತ್ರಿಗಳು ಈ ವಿಷಯದಲ್ಲಿ ಸ್ವಲ್ಪ ದ್ವಂದ್ವಕ್ಕೆ ಸಿಲುಕಿದ್ದಾರೆಂದು ಅನೇಕ ವಿದ್ವಾಂಸರು ಹೇಳಿದ್ದಾರೆ. ಬಸವಪ್ಪ ಶಾಸ್ತ್ರಿಗಳು ಕರ್ಣಾಟಕ ಚಂಡಕೌಶಿಕವೆಂದು ಬರೆದರೆ, ಜಯರಾಯಾಚಾರ್ಯರು ಕರ್ಣಾಟಕ ಚಂಡಕೌಶಿಕ ನಾಟಕವೆಂಬ ಹರಿಶ್ಚಂದ್ರನಾಟಕಂ ಎಂದು ಹೇಳಿದ್ದಾರೆ. ಸಂಸ್ಕೃತ ಶ್ಲೋಕಗಳನ್ನು ಮಹಾಸ್ರಗ್ಧರೆ, ಚಂಪಕಮಾಲಾ ವೃತ್ತಗಳಲ್ಲಿ ಅಳವಡಿಸಿದರೆ, ಜಯರಾಯಾಚಾರ್ಯರು ರಾಗ ರೂಪದಲ್ಲಿ ಸಂಭಾಷಣೆಗಳನ್ನು ರಚಿಸಿದ್ದಾರೆ. ಅಲ್ಲದೆ ನಾಂದಿಯ ಪೂರ್ವದಲ್ಲಿ ಇಂದ್ರಸಭೆ ಎಂಬ ಸಂದರ್ಭವನ್ನು ಹೊಸದಾಗಿ ಸೃಷ್ಠಿಸಿದ್ದಾರೆ.

ನಾರದನು ಮೊದಲು ಇಂದ್ರಲೋಕವನ್ನು ಪ್ರವೇಶಿಸುತ್ತಾನೆ. ಅಗ ಇಂದ್ರನು ನಾರದನಿಗೆ ಕೇಳುವ ಪ್ರಶ್ನೆ ಸಂಭಾಷಣೆ ರೂಪದಲ್ಲಿರದೇ ಕಂಪನಿ ನಾಟಕದವರ ಮಟ್ಟುಗಳಂತೆ ಪದ್ಯ ರೂಪದಲ್ಲಿವೆ ಆಕಾಲದ ಪ್ರಚಲಿತ ರಂಗನಾಟಕಗಳ ಶೈಲಿಗೆ ಅನುಸರಿಸಿ ಅನುವಾದ ನಡೆದಿದೆ.

" ಕಮಲಾಸನಸುತೆ। ವಿಮಲನೆ ನಾರದ। ಯಮಪಾಲನೆ ನುಡಿನುಡಿ। ಯಮನಿಯಮಾದ್ಯಷ್ಟಾಂಗ ಯೋಗರತ। ಸುಮಾನ್ಯದಯೆಗೂಡಿ ।೧।। ನಿರುಪಮ ಸತ್ಯಜ್ಞಾನ ದಾನಧರ್ಮ। ಪರನಾದಂತೆ ಧರೆಯಂ

"ಕಮಲಾಸನಸುತೆ। ವಿಮಲನೆ ನಾರದ। ಯಮಪಾಲನೆ ನುಡಿನುಡಿ। ಯಮನಿಯಮಾದ್ಯಷ್ಟಾಂಗ ಯೋಗರತ। ಸುಮಾನ್ನದಯೆಗೂಡಿ ।೧॥ ನಿರುಪಮ ಸತ್ಯಜ್ಞಾನ ದಾನಧರ್ಮ। ಪರನಾದಂತೆ ಧಗೆಯುಂ ಪರಮನೀತಿಯಂ ಪಾಲಿಸುತಿಹ ಭೂ। ವರನಾರಿಹ ನಿಳೆಯೊಳ್ ।೨॥ ಎಂದು ಪ್ರಶ್ನೆ ಮಾಡುತ್ತಾನೆ. ಆದಕ್ಕೆ ನಾರದನ್ನು ಎಲೈ ಮಹೇಂದ್ರನೇ ಸತ್ಯಾತ್ಮಕವಾದ ಹರಿಶ್ಚಂದ್ರ ಮಹಾರಾಜನೆ ಮನೆಯಲ್ಲಿ ಯಾರು ಭೋಜನವನ್ನು ಮಾಡುವರೋ? ಅವರುಗಳೆಲ್ಲಾ ಸತ್ಯಾತ್ಮಕರಾಗುವರು. ಹೀಗಿರುವಲ್ಲಿ ಆ ರಾಜನ ಸತ್ಯ ಸಂಧತೆಯನ್ನು ನಾನು ಹೇಳಿಬೇಕಾಗಿ ಇಲ್ಲ. ನೀನೇ ತಿಳಿಯಬಹುದು. ಅಲ್ಲದೇ ಇಂದ್ರಸಭೆಯೆಂಬ ಸಂದರ್ಭವನ್ನು ಕಲ್ಪಿಸಿ ಪೂರ್ವ ಪರಿಚಯವನ್ನು ಕೊಟ್ಟಿದ್ದಾನೆ. ಇಂದ್ರನು ನಾರದನನ್ನು ಕೇಳಿದ ಹಾಗೆ ನಾರದನ್ನು ಕಥಾನಾಯಕನಾದ ಹರಿಶ್ಚಂದ್ರನ ಕುರಿತು ಹೇಳಿದ ಹಾಗೆ ಅನುವಾದ ಕಲ್ಪಿಸುತ್ತಾನೆ. ಈ ಸಂಭಾಷಣೆಯನ್ನು ಪದ್ಯರೂಪದಲ್ಲಿ , ರಾಗಬದ್ಧವಾಗಿ ರಚಿಸಿರುವದು ಅನುವಾದಕರ ವಿಶಿಷ್ಟ್ಯತೆಯಾಗಿದೆ. ಉದಾ:- ॥ ರಾಗ ದೇಶಿಕಾಪಿ ಆದಿತಾಳ.

ನಾರದು ಕರುಣಿಸಿಕೇಳಿಂದ್ರ? ನಿರುಪಮ ಗುಣಸಾಂದ್ರ ॥ಪ॥ ಸುರತತಿ ಪಾಲಕ। ಹರಿಪದ ಪೂಜಕ ॥ ಅ॥ ಸೂರವಂಶ.

ಜನುಧೀರೋವಾತ್ತನು । ಧೀರಹರಿಶ್ಚಂದ್ರ। ಭೂ ರಮಣನೆಂಬುವನು ।೧॥ ಜ್ಞಾನ ನೀತಿ ಸತ್ಯ। ವಾನಮತಿಗಳಿಂದ। ಮಾನಿತವಾಗಿದೆ। ನಾನತಪಾಲನು।೨॥ ಇರುವನವನ । ಯಾರೆಯಲಶಕ್ಯವು । ಪರಿಸತ್ವದೊಳೇನಿರತನಾಗಿರುವನು॥ ೩॥ ಎಂದು ಕಂಪನಿ ನಾಟಕದ ಶೈಲಿಯಲ್ಲಿ ಸಂಭಾಷಣೆಯನ್ನು ಪದ್ಯಮಯವಾಗಿ ಬರೆದಿದ್ದಾರೆ.

ಆದರೆ ಬಸವಶಾಸ್ತ್ರಿಗಳು ಆರ್ಯಕ್ಷೇಮಿಶ್ವರ ಹೆಚ್ಚು ನಿಕಟವಾಗಿರಲು ಪ್ರಯತ್ನಿಸಿದ್ದಾರೆನ್ನಬಹುದು, ಆರ್ಯಕ್ಷೇಮಿಶ್ವರನಿಗೆ ಈ ಕೃತಿ ಬರೆಯಲು ಆಜ್ಞಾಪಿಸಿದ್ದು ಮಹಿಪಾಲ ದೊರೆ ಆದನ್ನು ಬಸವಪ್ಪ ಶಾಸ್ತ್ರಿಗಳು ಮತ್ತು ಜಯರಾಯಚಾರ್ಯರಿಬ್ಬರೂ ವಸ್ತು ವಿಷಯದಲ್ಲಿ ಹೋಲಿಕೆಯಿದೆ ಆದರೆ ಬಸವಪ್ಪ ಶಾಸ್ತ್ರಿಗಳು ಮಹಾಸ್ರಧ್ಧರೂ ವೃತ್ತದಲ್ಲಿ ನೇರ ಅಥವಾ ನಿಕಟ ಅನುವಾದ ಮಾಡಿದ್ದಾರೆನ್ನಬಹುದು.

ನೆರಳ್ಪಷ್ಟಾಮಾತ್ಯಧೀಚಾಲದೆ ಕೆಡೆಯದ ಸಿಂಹೋರುವೇಗಂ ನಿಜಭ್ರೂ,
ಯುಗಭಂಗ ಪ್ರೋದ್ವೃತಾಶೇಷ ರಿಪ್ರವಿಪುಲಯಾದ್ವರ್ಣ ವಾಂಡಭ್ರಮಚ್ಛ।
ಸ್ತ್ರರಬಾಹಮಂದಾರಾಕೃಷ್ಣ ವಿತತ ವಿಜಯಶ್ರೀ ವಿವಾಹಪ್ರಿಯಂಸಾ
ಧುರುಣಂ ತಾನೀಗಳೊಲ್ದಾ ಣತಿಸಿದನೆನಗಾ ಶ್ರೀ ಮಹಿಪಾಲದೇವಂ॥
ಪ್ರಾಚೀನರು ಮಹೀಪಾಲದೇವನ ಪ್ರಾಶಸ್ತ್ಯವನ್ನು ಕುರಿತು ಹೀಗೆ ಹೇಳುವರು

ಕಂ॥ ಪ್ರಣಯವಿನಾಲಿಸುತೆನ್ನಯ। ಗುಣಕಥೆಯಂ ನೋಡುತೆನ್ನ ಮಾರ್ಗದೊಳಾಗಳ್। ತೃಣಮಾದೊಡಂ ಚಲಿಸಲಾ। ನಣೆಯರದಿಂಬುದೆನೆಂದು ತಿಳಿದಾವಧುತಾಂ॥
ಕಂ॥ ಆರಿಯದ ತೆರದಿಂದ ಮೆಲ್ಲನೆ। ತೆರಳುತೆ ಪಿಂದೆಸೆಯೊಳಿಪ್ಪಲಿಲ್ಲಂಮುದದಿಂ॥ ಅರಸಿಯ ನವೀನ ನೀಲಾಂ। ಬುರುಹಸಮೇ ಕ್ಷಣವಮುಚ್ಚಲಿಲ್ಲಂ ಕರದಿಂ॥

ತಾಂಬೂಲ ಮಧರಕು ಕಂ
ಕಂಬುಗಳಾಲಿಂಗನೋತ್ಸುಕಂ ಹಾಕಂ ದೃ।
ಕ್ಪುಂಬನ ಲಾಲಸ ಮಂಜನ
ವೆಂಬುದವರ್ಕಿಷ್ಟ ಸಿದ್ಧಿ ನಿನಗವು ತೊಡವೇ - ಬಸವಪ್ಪಶಾಸ್ತ್ರಿ

ಕಂ॥ ಸರಸಾಂಜನ ಸರತಾಂಬೂ।
ಲರಾಗಗಳ್ ಸ್ವಾರ್ಥಮಾಗಿ ನಿನ್ನಕ್ಷಿಗಳಾ॥
ಧರಗಳ ಸೆಂದುದಲ್ಲವೆ।
ತರುಣಿಯೆ ನಿನಗಿವುಗಳಿಂದಲಂಕೃತಿಯಲ್ಲಂ॥ - ಜಯರಾಯಾಚಾರ್ಯ.

ಈ ಎರಡೂ ಅನುವಾದಗಳನ್ನು ನೋಡಿದಾಗ ಒಂದು ಪದ್ಯವನ್ನು ಅನುವಾದಕರಿಬ್ಬರೂ ಆನುವಾದಿಸುವಲ್ಲಿ ತಳೆದ ಧೋರಣೆ ವ್ಯಕ್ತವಾಗುತ್ತದೆ. ಸರಸಾಂಜನಸರ ತಾಂಬೂಲ ರಾಗಗಳ್ ಎಂದು ಜಯರಾಯಾಚಾರ್ಯರು ಹೇಳಿದರೆ, ತಾಂಬೂಲ ಮಧರಕುತುಕಂ ಎಂದು ಬಸವಪ್ಪಶಾಸ್ತ್ರಿಗಳು ಅನುವಾದಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ಚಂದ್ರಮತಿಯನ್ನು ಶೈಬ್ಯೆ ಎಂದೂ, ರಾಜನನ್ನು ರಾಯ ಎಂದೂ ಜಯರಾಯಾಚಾರ್ಯರು ಕರೆದಿದ್ದಾರೆ.

ಉದಾ: ಶೈಬ್ಯೆ : - (ಸ್ವಗತಂ) ಓಹೋ ! ಆರ್ಯಪುತ್ರನು ! ಒಳ್ಳೇದು. ಚಾರುಮತಿ ಒಡತಿಯಾದ ಚಂದ್ರಮತಿಯನ್ನು ಕುರಿತು ಈ ರೀತಿ ಹೇಳುತ್ತಾಳೆ. ''ದೇವಿ ತಾಪ ಪಡೋಣವು ಸಾಕು; ಬಹುವಲ್ಲಭಾಃ ಖಲು ರಾಜಾನಃ'' ರಾಜರು ಬಹುವಲ್ಲಭೇ ಎಂದು ಜಯರಾಯಾಚಾರ್ಯರು ಹೇಳಿದರೆ, ಬಸವಪ್ಪಶಾಸ್ತ್ರಿಗಳು ಇದೇ ವಾಕ್ಯವನ್ನು;

ಚಾರು - ಎಲೆ ಒಡತಿ ! ಸಾಕು ಏಕೆ ದುಃಖಿಸುವೆ। ಬಹುವಲ್ಲಭರಲ್ಲವೇ ರಾಜರು. ನಂತರ ಚಾರುಮಿ ಒಡತಿಗೆ ಇನ್ನೊಂದು ಮಾತು ಹೇಳುತ್ತಾಳೆ. ಅದನ್ನು ಜಯರಾಯಾಚಾರ್ಯರು ಚಾರುಮತಿ ಒಡತಿಯೆ ! ಸೈರಿಸು ಸೈರಿಸು; ಮಹಾನುಭಾವಳಾದ ನಿಂನಿಂದಲೇ ಆ ಮಹಾರಾಜನು ಇಷ್ಟು ಹೆಚ್ಚಿನದಲ್ಲ; ಆದ್ದರಿಂದ ನನ್ನನ್ನು ಕೇಳಿದ್ದೆ ಆದರೆ; ಆ ಮಹಾರಾಜರು ನಿನ್ನನ್ನು ನೋಡಿದರೂ ನೀನು ನೋಡಕೂಡದು;

ಕರ್ಣಾಟಕ ಭಾಷೆಯಲ್ಲಿ ಮಾಡಿರುವನು ಅದನ್ನೇ, ಅಭಿನಯಿಸುವಂತೆ ಆಜ್ಞಾಪ್ತನಾಗಿರುವೆನು ಆ ಕವಿಯಾದರೋ ನಾಟ್ಯವೇದ ವಿಶಾರದರಾದ, ಸಕಲಕಲಾಕೋವಿದರಾದ ಸಭಿಕರಿಗೆ, ಹೀಗೆ ವಿಜ್ಞಾಪಿಸಿಕೊಂಡಿರುವನು. ವೃ॥ ಜಗದೊಳುವುದು ಮಿಲ್ಲಮದೋಷವ । ಸ್ತುಗುಣಶೂನ್ಯಮುಮಿಲ್ಲದರಿಂಬುಧರ್ ಸುಗುಣಲೇಶವ ಸಂಗ್ರಹಿಸುತ್ತೆಮೇಣ್। ಒಗಿದ ದೋಷವ ಮುಚ್ಚುಗೆನಂತೆ ತಾಂ॥ ಎಂದು ಅನುವಾದಿಸಿದ್ದಾರೆ ಅಲ್ಪಸ್ವಲ್ಪ ಬದಲಾವಣೆಗಳಿದ್ದರೂ, ಅನುವಾದಕರಿಬ್ಬರಲ್ಲೂ ಹೋಲಿಕೆಯಿದೆ.

ಇನ್ನೊಂದು ಉದಾಹರಣೆಯನ್ನು ನೋಡಬಹುದು ರಾಜ ಮತ್ತು ವಿದೂಷಕರಿಬ್ಬರಲ್ಲಿ ನಡೆದ ಸಂಭಾಷಣೆ ನೋಡಿದರೆ ಗದ್ಯ ಸಂಭಾಷಣೆಯಲ್ಲಿ ಸಾಮ್ಯತೆ ಇದ್ದರೂ ಪದ್ಯದಲ್ಲಿ ವೈಶಿಷ್ಟ್ಯತೆ ಇದೆ ಅರ್ಥಾತ್ ಶ್ಲೋಕಗಳಲ್ಲಿ ಜಯರಾಯಾಚಾರ್ಯರು ಕಂದಪದ್ಯವಾಗಿಸಿದರೆ ಬಸವಪ್ಪಶಾಸ್ತ್ರಿಗಳು ಮಹಾಸ್ರಗ್ಧರೆ, ಮತ್ತೇಭ ಚಂಪಕ ವೃತ್ತಗಳಲ್ಲಿ ಅನುವಾದಿಸಿದ್ದಾರೆ.

ಜಯರಾಮಾಚಾರ್ಯರು ವಿದೂಷಕ, ಮಿತ್ರನೇ! ಕಳೆದು ಹೋದ್ದನ್ನು ಅನುಸರಿಸಿ ಅಳುತ್ತಾ ನಿನ್ನನ್ನು ನೀನೇ ಯಾತಕ್ಕೆ ಆಯಾಸಗೊಳಿಸುವೆ. ಆದ್ದರಿಂದ ಬಾ ಅಲ್ಲಿಗೆ ಹೋಗಿ ದೇವಿ ಪ್ರಸನ್ನಳಾಗುವಂತೆ ಮಾಡೋಣ. ರಾಯಃ ಭಾಪು ಮಿತ್ರನೇ ! ನೀನು ಚೆನ್ನಾಗಿ ಹೇಳಿದೆ, ಆದ್ದರಿಂದ ಬಾ, ಅಲ್ಲಿಗೆ ಹೋಗೋಣ (ಖೇದಯುಕ್ತವಾಗಿ ನಿಟ್ಟುಸಿರನ್ನು ಬಿಟ್ಟು) ಉಚಿತ ಕಾಲದಲ್ಲಿ ಉಳಿದ ನನ್ನ ಗಮನವು ಈಗ ಖೇದ ಕಾರಣವಾಗತಕ್ಕದ್ದು ಯುಕ್ತವೇ, ಇದನ್ನೇ ಬಸವಪ್ಪಶಾಸ್ತ್ರಿಗಳು: ಮಿತ್ರನೇ, ಕಳೆದುಹೋದುದನ್ನು ಕುರಿತು ಹಲುಬುತ್ತಾ ಆತ್ಮವನ್ನೇಕೆ ಆಯಾಸಪಡಿಸುವೆ ? ಚೆನ್ನಾಗಿ ಹೇಳಿದೆ; ನಡೆ ಅಲ್ಲಿಗೆ ಹೋಗೋಣ (ಸ್ವಲ್ಪ ನಡೆದು ವ್ಯಸನದಿಂದ ನಿಟ್ಟುಸಿರನ್ನು ಬಿಟ್ಟು) ಆ ಕಾಲದಲ್ಲಿ ಈಗ ನಾನಲ್ಲಿ ಹೋಗುವುದು ಖೇದವನ್ನುಂಟು ಮಾಡುವುದಕ್ಕಲ್ಲದೆ ಮತ್ತೆ ಜೇರೆಯಾಲಿ ಹಾಗೆಯೇ ಸರಿ. ಶ್ಲೋಕಗಳನ್ನು ಚಂಪಕ ವೃತ್ತದಲ್ಲಿ ಈ ರೀತಿ ಬರೆದಿದ್ದಾರೆ;

ನುಡಿವೆಡೆನಿಂದ ಮತ್ಕಾಥೆಯ ಗಂಡಿಡುವಳ್ ಮಗುಳ್ದಿನ್ನ ಮಾರ್ಗಮಂ
ಬಿಡದೆ ಮಿಲೋಕಿಪಳ್ ತೃಣಮಲುಂಗಿದೊಡಂ ನಡೆದತಂದನೆಂದು ತಾ।
ನೊಡನೆ ಗಣಿಪ್ಪಳಿಂದವಳ್ಗೆ ಕಾಣಿಸದಂತಿರೆ ಪಿಂದೆ ಪೋಗಿ ಸಂ.

ಗಡಿಯಿಸಿ ಕೈಗಳಿಂದವಳ ನೈದಿಲೆಗಣ್ಗಳಿ ನಪ್ಪದಾದೆ ನಾಂ॥ ಎಂದು ಅನುವಾದಿಸಿದರೆ, ಜಯ ರಾಯಾಚಾರ್ಯರು ಕಂದ ಪದ್ಯಗಳಾಗಿ ಈ ರೀತಿ ಬರೆದಿದ್ದಾರೆ.

ಪಿರಿದುಂ ಚಾಣಕ್ಯನೀತ್ಯಾಶ್ರಯಣದಿನವಲೇಪಾಂಧನಂ ನಾದರಂ ಕೊಂ
ದುರುಪುತ್ತಂ ಗೆಲ್ದನಾಮ ಕುಸುಮನಗರಿಯಂ ಚಂದ್ರಗುಪ್ತಕ್ಷಿತೇಂದ್ರಂ।
ಧರೆಯೊಳ್ ಕರ್ಣಾಟಕತ್ವಂ ಒಡೆದುದಯಿಸಿದಾ ದುಷ್ಷಿರಂ ಯುದ್ಧದೊಳ್ ಸಂ
ಹೆರಿಸಲ್ ದೋರ್ದರ್ಪದೃಪ್ತಂ ಮಗಳ್ದುಮವನೆ ತಾಂ ಶ್ರೀ ಮಹೀಪಾಲನಾದಂ॥

ಇದೇ ಜಯರಾಮಾಚಾರ್ಯರು ಮಹೀಪಾಲನನ್ನು ಪರಿಚಯಿಸುವ ಬಗೆ ತುಂಬ ಭಿನ್ನವಾಗಿದೆ, ಸೂತ್ರಧಾರ ಮತ್ತು ಪಾರಿಪಾರ್ಶ್ವಕರಿಬ್ಬರ ಸಂಭಾಷಣೆಯ ಮೂಲಕ ಮಹೀಪಾಲನ ವಿಷಯವನ್ನು ಕವಿ ಹೇಳಿಸುತ್ತಾನೆ.

ಅಷ್ಟ ಮಂತ್ರಿಗಳು ಬುದ್ಧಿ ಎಂಬ ಬಲೆಗೆ ಸಿಲುಕದಿರುವ, ಸಿಂಹದ ವೇಗವನ್ನು ಹೊಂದಿರುವ, ಯುದ್ಧ ಸಮುದ್ರ ಮಧ್ಯದಲ್ಲಿ ತಿರುಗುತಿರ್ಪ, ಭುಜದಂಡವೆಂಬ ಮಂದರಗಿರಿಯಂ ಪಡೆದಿತ್ತಿದ, ರಿಪ್ರಕುಲರಾಜ ಲಕ್ಷ್ಮಿಯ ವರಿಸಿ ಮೆರೆವ, ಶ್ರೀ ಮಹೀಪಾಲದೇವನಿಂದ ಅಜ್ಞಪ್ತನಾಗಿರುವೆನು. ಪಾರಿಪಾರ್ಶ್ವಕನು ಮಹೀಪಾಲದೇವಸೇನಾ ಜ್ಞಾಪಿಸಿದನು ಎನ್ನುವ ಪ್ರಶ್ನೆಗೆ ಬಸವಪ್ಪಶಾಸ್ತ್ರಿಗಳು ಮತ್ತು ಜಯರಾಮಾಚಾರ್ಯರು ಇಬ್ಬರೂ ಅನುವಾದಿಸಿರುವ ಉತ್ತರದ ಹೋಲಿಕೆ ಒಂದೆ ಆಗಿದ್ದರೂ, ಜಯರಾಯಾಚಾರ್ಯರ ವಿವರಣೆ ಸ್ವಲ್ಪ ಹೆಚ್ಚು ಎನಿಸುತ್ತದೆ.

ಬಸವಪ್ಪಶಾಸ್ತ್ರಿಗಳು: ವಿಜಯ ಪ್ರಶೋಷಿನ ಹಿರಿಯ ಮೊಮ್ಮಗನಾದ ಆರ್ಯಕ್ಷೇಮೀಶ್ವರ ಮಹಾಕವಿಯಿಂದ ರಚಿಸಲ್ಪಟ್ಟ ಅಭಿಮಾನ ಚಂಡಕೌಶಿಕ ನಾಟಕವನ್ನಾಡಿಸಬೇಕೆಂದು ಆಜ್ಞಾಪಿಸಿರುವನು. ಇದಲ್ಲದೇ ಆ ಆರ್ಯಕ್ಷೇಮೀಶ್ವರ ಕವಿಯೇ ನಾಟ್ಯವೇದ ವಿಚಕ್ಷಣರಾಗಿಯೂ, ವಿದ್ಯಾಕಲಾವಿದರಾಗಿಯೂ ಲೋಕಜ್ಞರಾಗಿಯೂ ಇರುವ ಸಭಾಸದರನ್ನು ಕುರಿತು ಹೀಗೆ ಹೇಳಿರುವನಲ್ಲವೆ?

ಇಲ್ಲಂ ದೋಷವಿಹೀನಮು
ಮಿಲ್ಲಂ ಗುಣಹೀನಮೆನಿಪುದೊಂದು ನೋಡಲ್।
ಬಲ್ಲರದರಿಂದೆ ದೋಷಮ
ದುಳ್ಳೊಡೆ ಮೆರೆಯಿಸುಗೆ ಮರೆಯಿಸುಗೆ ಗುಣಗಣಮಂ॥

ಆದನ್ನೆ ಜಯರಾಯಾಚಾರ್ಯರು, ವಿಜಯ ಪ್ರಕೋಷ್ಠ ಪ್ರಪಾತ್ರನಾದ, ಆರ್ಯಕ್ಷೇಮೀಶ್ವರ ಮಹಾಕವಿಯಿಂದ ವಿರಚಿತ ಚಂಡಕೌಶಿಕವೆಂಬ ನಾಟಕವನ್ನು

ಪ್ರಿಯೋಕ್ತಿಗಳನ್ನು ಆಡಿದರೂ ಧಿಕ್ಕಾರ ವಚನಗಳಿಂದ ದುಃಖಪಡಿಸಬೇಕು. ಬಸವಪ್ಪಶಾಸ್ತ್ರಿಗಳು ಇದನ್ನೇ ಹೀಗೆ ಹೇಳಿದ್ದಾರೆ.

ಚಾರು- ಓಡತಿಯೆ ! ಸಂತೈಸಿಕೋ ! ಸಂತೈಸಿಕೊ! ಘನವಾದ ನಿನ್ನ ಸ್ವಭಾವದಿಂದಲೇ ಅಲ್ಲವೆ ಮಹಾರಾಜನು ಇಷ್ಟು ಮಟ್ಟಿಗೆ ಹದ್ದು ಮೀರಿದ್ದು? ನನ್ನನ್ನು ನೀನು ಕೇಳಿದರೆ ಮಹಾರಾಜನು ನಿನ್ನನ್ನು ನೋಡಿದರೂ ನೀನು ಅವನನ್ನು ನೋಡಬೇಡ. ಆತನು ಎಷ್ಟು ಪ್ರಿಯೋಕ್ತಿಗಳನ್ನಾಡಿದರೂ ಅದಕ್ಕೆ ಬೇರೆಯದೇ ಬಿರುನುಡಿಗಳಿಂದ ಆತನನ್ನು ಮುರುಗಿಸು. ಮೇಲಿನ ಅನುವಾದ ವಾಕ್ಯಗಳನ್ನು ನೋಡಿದಾಗ ಬಸವಪ್ಪಶಾಸ್ತ್ರಿಗಳು ತೀರ ನಿಕಟವಾಗಿ, ಗ್ರಾಂಥಿಕ ಶೈಲಿಯಲ್ಲಿ ಅನುವಾದಿಸಿದ್ದಾರೆ. ಅದೇ ಜಯರಾಯಾಚಾರ್ಯರು ಜನಸಾಮಾನ್ಯರಿಗೆ ಅರ್ಥವಾಗುವ, ಕಂಪನಿ ನಾಟಕಗಳ ಭಾಷೆಗೆ ಅನುಗುಣವಾಗಿ ಅನುವಾದಿಸಿದ್ದಾರೆ.

ಉದಾ : ಚಂಡಿಯಕಾಂಡದೊಳ್ ಪೊರಳ್ಗುಮೇಕೆ ಲಲಾಟದೊಳಿಕ್ಕು ಕಾಂಡಕೋ
ದಂಡ ಜಯಧ್ವಜಾಂಶುಕ ವಿಲಾಸಮನೊಂದಿದ ಕೊಂಕುವುರ್ವು ತಾಂ ।
ತೊಂಡೆಯ ಪಣ್ಣ ಚೆಲ್ವುವಡೆದಿಂದುಟಿ ಮಂದ ಸಮೀರಚಾಲಿತಾ
ಖಂಡಜಪಾಸುಮಕ್ಕೆ ಪಡಿಯಪ್ಪುವುದೇತಕೆ ತಳ್ತ ಕಂಪದಿಂ ॥- ಬಸವಪ್ಪಶಾಸ್ತ್ರಿಗಳು.

ಜಯರಾಯಾಚಾರ್ಯರು ಇದನ್ನೇ ವೃತ್ತದಲ್ಲಿ ಹೀಗೆ ಹೇಳಿದ್ದಾರೆ;

ಚಂಡಿಯೇ ಕೃಪೆಮಾಡು ಸುಮ್ಮನೆನೀದೇತಕೆ ಕೋಪವಂ । ಕೊಂಡೆಮಾನಸದಲ್ಲಿ ಚಿಂತಿಸುದಂತೆ ನಾನಲ್ಲೀಗಳೇ ॥ ದಂಡಮಂ ವಿಧಿಸೀಗತಕ್ಕುದ ಸುಂದರಾಂಗಿಯೆ ಸಾಕ್ಷಿಯಾ । ಚಂಡಭಾನು ಕುಲೇಶ್ವರಂಗುರುವರ್ಯನೆನ್ನ ಚರಿತ್ರದೊಳ್ ॥

ವನೇಚರನ ಮಾತನ್ನು ಬಸವಪ್ಪಶಾಸ್ತ್ರಿಗಳು ಲಲಿತರಗಳೆಯಾಗಿಸಿದರೆ, ಜಯರಾಮಾಚಾರ್ಯರು ವನೇಚರನನ್ನು ವನಸಾಲನೆಂದು ಕರೆದು ಗದ್ಯರೂಪದಲ್ಲಿರಿಸಿದ್ದಾರೆ.

ಜಯರಾಯಾಚಾರ್ಯರು : ಭಟ್ಟಾರಕಂಗೆ ಜಯವಾಗಲಿ, ಇದಾದೊಡಂ ಕೊಂಕು ಮೂಗುದುವಿಯಿಂದ ಸೀಳ್ದ ಕೊನಸನುದಾಣದೊಳ್ಸಿಂಗೆಡಿಸಿದ ಸೌಸಮಂ ಪಕ್ಕನೆ ಕಕ್ಕುತಿರ್ಪಮಗಮಗಿಸು ನಿಡುಸುಯ್ಯೆಲರಿಂ ನೂಂಕುತಿರ್ಪ, ಪಲ್ಗಾಣದ ನಡುವಡೆಯೊಳ್ಸಿಸು ಕಡಿವಡೆದಿರ್ಪ ಬೆಳ್ಪಾದರೆ ಗೆಡ್ಡೆಕಥೆಗಳ .. ಬಸವಪ್ಪಶಾಸ್ತ್ರಿಗಳು ; ಲಲಿತರಗಳೆ.

ಇದೊ ನೀಳ್ದ ಮುಸುಡಿನಿಂ ಪೋಳ್ದ ಕೊನ್ನಾರೆಯೊಳ್
ಪ್ರವಿದ ಸೌಸವಮ ಸೂಸುವ ಸುಯ್ಲ ಗಾಳಿಯೊಳ್
ಪರೆದರೆಗಡಿದ ಸಿತ ಕಶೇಲಕ ವ್ಯಾಜದೊಳ್
ಪರವಿಜಯ ಯಶವ ನೆರಚುತ್ತ ದಶದಿಶೆಗಳೊಳ್.

ಎಂದು ಬರೆದಿದ್ದಾರೆ. ನಂತರ ಎರಡನೆಯ ಅಂಕದಲ್ಲಿ ಹರಿಶ್ಚಂದ್ರನು ಕಾಡಿನೊಳಗೆ ಪ್ರವೇಶಿಸಿ ವಿಶ್ವಾಮಿತ್ರನ ದೃಷ್ಟಿಗೆ ಬೀಳುತ್ತಾನೆ ಹಾಗೂ ಅವನ ಅವಕೃಪೆಗೆ ಒಳಗಾಗಿ, ಶರಣಾಗತಿಯನ್ನು ಕೋರುತ್ತಾನೆ. ಇಡೀ ಅಯೋಧ್ಯೆಯನ್ನು ಅವನಿಗೆ. ಒಪ್ಪಿಸಿ. ದಕ್ಷಿಣೆಯನ್ನು ಸಂಪಾದಿಸುವುದಕ್ಕಾಗಿ ವಾರಣಾಸಿಗೆ ಹೋಗಲು ಅಪ್ಪಣೆ ಯನ್ನು ಎಷ್ಟೋಂದು ಹೇಳಿ ಎಂದು ಕೇಳುತ್ತಾನೆ. ಈ ಸನ್ನಿವೇಶ ಬಸವಪ್ಪಶಾಸ್ತ್ರಿ ಮತ್ತು ಜಯರಾಯಾಚಾರ್ಯ ರಿಬ್ಬರಲ್ಲೂ ಅವರದೇ ಶೈಲಿಯಲ್ಲಿ ನಿರೂಪಿತವಾಗಿವೆ. ಆದರೆ ನಂತರದ ಸನ್ನಿವೇಶವನ್ನು ಜಯರಾಯಾಚಾರ್ಯರು ವಿಸ್ತೃತವಾಗಿ ವಿವರಿಸಿದ್ದಾರೆ. ಈ ವಿವರಣೆ ಅಥವಾ ಸನ್ನಿವೇಶ ವರ್ಣನೆ ಬಸವಪ್ಪಶಾಸ್ತ್ರಿಗಳ ಅನುವಾದ ಕೃತಿಯಲ್ಲಿಲ್ಲ. ಯಥಾರೀತಿಯಾಗಿ ಜಯರಾಯಾಚಾರ್ಯರು ಕೆಲವು ರಾಗಗಳನ್ನು ಹಾಗೂ ತಾಳಗಳನ್ನು ಸೂಚಿಸಿದ್ದಾರೆ. ಭೈರವಿ ರಾಗ, ಆನಂದ ಭೈರವಿ, ಆದಿತಾಳ ಇತ್ಯಾದಿ ಪದಗಳಿಂದ ಕಂಪನಿ ನಾಟಕದವರೆಗೆ ಅನುಕೂಲವಾಗುವಂತೆ ರಾಗ-ತಾಳಗಳನ್ನು ಸೂಚಿಸಿದ್ದಾರೆ. ಇದು ಒಂದು ವಿಶೇಷ. ಕೆಲವು ಸಾಲುಗಳನ್ನು ಗಮನಿಸಬಹುದು.

ವಿಶ್ವಾಮಿತ್ರ : ಒಳ್ಳೇದ ಹಾಗೆಯೇ ಮಾಡು. ಆದರೆ ಅಯೋಧ್ಯಾ ಪಟ್ಟಣದ ಜನರು ಮೊದಲಿನ ವಿಶ್ವಾಸದಿಂದ ನಿನಗೆ ಏನಾದರೂ ಕೊಟ್ಟರೆ ಅದನ್ನು ತೆಗೆದುಕೊಳ್ಳಕೂಡದು. ಹಾಗೇನಾದರೂ ಮಾಡಿದರೆ ಬ್ರಂಹ ಸ್ವದ್ರೋಹ ಪಾಪಕ್ಕೆ ಗುರಿಯಾಗುವೆ ? ನೀನು ಕೊಡಬೇಕಾಗಿ ಇರುವ ದಕ್ಷಿಣೆಯನ್ನು ಈ ನಮ್ಮ ಶಿಷ್ಯನಾದ ನಕ್ಷತ್ರಕನ ಕೈಯಲ್ಲಿ ಕೊಡತಕ್ಕದ್ದು. ಇವನು ನಿನ್ನ ಸಂಗಡವೇ ಬರುವನು. ಕಷ್ಟಪಡಿಸದಂತೆ ಕರೆದುಕೊಂಡು ಹೋಗಬೇಕು. ನಾನು ಆಗಾಗ್ಗೆ ಬರುತ್ತಿರುವೆನು.

ರಾಯ : ಪೂಜ್ಯರೇ! ತಮ್ಮ ಅಪ್ಪಣೆಯಾದಂತೆಯೇ ಆಗಲಿ.

ಮಿಶ್ವಾಮಿತ್ರ : (ನಕ್ಷತ್ರಕನನ್ನು ನೋಡಿ) ಎಲೈ ಶಿಷ್ಯನಾದ ನಕ್ಷತ್ರಕನೇ! ನೀನು ಇವನ ಜತೆಯಲ್ಲಿಯೇ ಹೋಗಿ ಇವನಿಗೆ ನಾನಾ ವಿಧಗಳಾದ ಕಷ್ಟಗಳನ್ನು ಕೊಡುತ್ತಾ ಇವನು ಹ್ಯಾಗಾದರೂ ಸತ್ಯ ಭ್ರಷ್ಟನಾಗುವಂತೆ ಮಾಡು. ನಾನು ಆಗಾಗ್ಗೆ ಬರುವೆನು ( ಎಂದು ಹೋಗುವನು).

(ಹರಿಶ್ಚಂದ್ರನು ಅಧಿಕವಾದ ಆಯಾಸವನ್ನು ಅಭಿನಯಿಸುತ್ತಾ ಬರುವನು).

ರಾಯ: ।ರಾಗ ಭೈರವಿ ಆದಿತಾಳ ॥

ಏನ ಮಾಡುವೆನು । ಮುಂದಕೆ ನಾನಿನ್ನೇನ ಮಾಡುವೆನು ॥ ಪ ॥ ಕಾನನದೊಳಗೆನ್ನ ಮಾನಿನಿ ಬಳಲಿದ ॥ಅ॥ ಅರಸಿಯ ಕೂಡಿ।ಪುರದಿಂ ನಾನು ।ಪೊರಮಡೆ ನೋಡಿ। ಮರುಗತ್ತೆ ಬಂದ ಪೌ। ರಥಮನ್ನಿಸದಾದೆ ।೧॥ನೀರಕೊಡೆಂದು।ಎನ್ನ ಯಸುಕು।ಮಾರನು ನಿಂದು।ಧಾರುಣಿಯೊಳು ಬಿದ್ದು ಬೇಂಡುತಿರುವನು ।೨॥.

ಚಂದ್ರಮತಿಯು ಕೂಡ ಆಯಾಸ ಪಡುತ್ತಾಳೆ. ರಾಜನು ಚಂದ್ರಮತಿಯ ಆಯಾಸವನ್ನು ನೋಡಿ ಅವಳ ಬಳಿಗೆ ತೆರಳಿ, ವಾರಾಣಸಿಗೆ ಹೋಗಿ ಶಿಶಿವನ ಸಾನಿಧ್ಯದಲ್ಲಿ ಹೋಗಿ ಅವನಿಗೆ ಶರಣಾಗೋಣ ಅನ್ನುತ್ತಾನೆ.

॥ ರಾಗ ಆನಂದ ಭೈವಿ ಆದಿತಾಳ ॥

ವಾರಣಾಸಿಗೆ ಪೋಗೆ । ಬಾರೆ ।ನೀರೆ ॥ಪ॥ ಘೋರಾರಣ್ಯದಿ ನಿನ್ನ । ಮಿರುತ ಬಳಲಿಸಿದೆ ಮಹಾ ॥ಅ॥ ಮುನಿಪನ ಧನವೀಯೆ । ಬಾಯೆ । ಸದಯೆ । ವನಿತಾ ಮಣಿಯೆಸುತು । ನನುವೆರೆಯುತಲಡಿಯಿಡುತ ।೧॥ ವರ ವಿಶ್ವೇಶ್ವನ ನೋಡಲೀಗ।ಬೇಗ।ಸ್ಮರಿಸದೆ ಪೂರ್ವದಾ।ಪರಿಯನಸತಿ। ಸುಗುಣವತಿ ।೧॥.

ರೋಹಿತಾಶ್ವನು ಹಸಿವಿನಿಂದ ಮತ್ತು ಜಲಭಾದೆಯಿಂದ ನರಳುವುದು ಅತ್ಯಂತ ಕರುಣಾಜನಕ ವಾಗಿವೆ.

ರೋಹಿತಾಶ್ವ - ಕೊಡಕೊಡು । ನೀರತಾತ । ಕ್ಷುಧೆಯನು । ತಡೆಯಲಾರೆನುತಾತ ॥ ಅರಿತು ಗಂಟಲು । ಏರಿತುಕಾಲುರಿ । ಸಾಗದೆ ಮುಂದೆ ನೋಡು । ಸೈರಿಸಲಾರೆ ತಾತ ।೧॥ ಅಮ್ಮ ಮಾತಾಡದೆ । ಸುಮ್ಮನಯಿರುವಳು । ಸಮ್ಮತಿಯೇನಿದು । ಮಮ್ಮಯ್ಯಹಾತಾತ ॥ ೨॥

ನಕ್ಷತ್ರಿಕನು ಕೂಡ ಹಸಿವೆ, ನೀರಡಿಕೆ ಬಾದಿಸಿರುವುದನ್ನು ನೋಡಿ ತಾನು ಸಂಕಷ್ಟ ಪಡುತ್ತಿದ್ದರೂ ಅವನನ್ನು ಸಂತೈಸಲು ಹೋಗುತ್ತಾನೆ. ಮುಂದೆ ತಾನು ಕಂದ ಮೂಲಗಳನ್ನು ತಂದು ಕೊಡುವುದಾಗಿಯೂ, ನಮ್ಮೊಡನೆ ನಡೆಯಬೇಕೆಂದು ಬೇಡುವನು. ನಕ್ಷತ್ರಕ ತನ್ನ ಗುರು ಹೇಳಿದಂತೆ ಹರಿಶ್ಚಂದ್ರನನ್ನು ಕಾಡಲು ಇನ್ನಷ್ಟು ಬೈಯ್ಯಲು ಪ್ರಾರಂಭಿಸುತ್ತಾನೆ.

ನಕ್ಷತ್ರಕ:- ಗುರುಗಳೇ ಈ ಪರಮಪಾಪಿಯು ಅನ್ಯಾಯವಾಗಿ ನನ್ನನ್ನು ಕೊಲ್ಲುತ್ತಾನಲ್ಲ । ನೀವಾದರೂ ಬಂದು ರಕ್ಷಿಸಬೇಕು. ಸ್ವಾಮಿತ್ರ ಪ್ರತ್ಯಕ್ಷನಾಗಿ ಹರಶ್ಚಂದ್ರನನ್ನು ನಕ್ಷತ್ರಿಕನ ಸಲುವಾಗಿ ಬೈಯ್ದು ಅವನಿಂದ ರಾಜಯೋಗ್ಯವಾದ ವಸ್ತುಗಳನ್ನು ಕೊಡುತ್ತಾನೆ.

ವಿಶ್ವಾಮಿತ್ರ ಅವನ ಆತ್ಮ ಸ್ಥೈರ್ಯ ಕಂಡು ಆಶ್ಚಯ ಚಕಿತನಾಗುತ್ತಾನೆ.

ಈ ಎಲ್ಲಾ ಸನ್ನಿವೇಶವು ಜಯರಾಯಾಚಾರ್ಯರು ಸೇರಿಸಿದ್ದಾರೆ. ಬಹುಶಃ ಕರುಣಾರಸ ಲಂಬಿತಗೊಳಿಸುವ ತಂತ್ರವಾಗಿ ಇದು ಸೇರಿಸಲ್ಪಟ್ಟಿರಬೇಕು.

ಜಯರಾಯಾಚಾರ್ಯರು ನಕ್ಷತ್ರಕ ಎಂಬ ವ್ಯಕ್ತಿಯನ್ನು ವಿಶ್ವಾಮಿತ್ರನ ಶಿಷ್ಯನನ್ನಾಗಿಸಿ ಹರಿಶ್ಚಂದ್ರನಿಗೆ ಪೀಡೆಕೊಡಲು ತೊಡಗಿಸುತ್ತಾನೆ. ಅಲ್ಲದೆ, ಹರಿಶ್ಚಂದ್ರ, ಚಂದ್ರಮತಿ ಮತ್ತು ರೋಹಿತಾಶ್ವನನ್ನು ಅರಣ್ಯಕ್ಕೆ ಕಳಿಸುತ್ತಾರೆ. ಪಡುತ್ತಿರುವ ಕಷ್ಟಕ್ಕೆ ನಕ್ಷತ್ರಕನ ಪೀಡೆಯನ್ನು ಜಯರಾಯಾಚಾರ್ಯರು ಕರುಣಾರಸದಿಂದ ಆರ್ದ್ರವಾಗುವಂತೆ ರಚಿಸಿರುತ್ತಾರೆ. ಆದರೆ ಬಸವಪ್ಪಶಾಸ್ತ್ರಿಗಳು ಈ ಸಂದರ್ಭವನ್ನು ಕೈಬಿಟ್ಟಿದ್ದಾರೆ. ಜನರಲ್ಲಿ ಈ ಕಥೆಯ ವಾಡಿಕೆಯಿದೆ. ಆ ಉದ್ದೇಶದಿಂದ ಜಯರಾಯಾಚಾರ್ಯರು ರಚಿಸಿರಬಹುದು. ಮೂಲ ಸಂಸ್ಕೃತ ನಾಟಕ ಲಭ್ಯವಾಗದ್ದರಿಂದ ಇದನ್ನು ಮೂಲದಲ್ಲಿನ ಬದಲಾವಣೆ ಅಥವಾ ಮೂಲಕ್ಕೆ ನಿಕಟ ಎಂಬುದಾಗಿ ಹೇಳುವುದು ಕಷ್ಟವೆನಿಸುತ್ತದೆ.

ತೃತೀಯಾಂಕದ ಮೊದಲಿನ ಅನುವಾದ ಇಬ್ಬರೂ ಅನುವಾದಕರಲ್ಲೂ ಸಾಕಷ್ಟು ಹೋಲಿಕೆಯಿದೆ.

ಕಂ ॥ ಕಡುಮೊದಲ್ಬೊಹುಸುಲಭಂ । ನಡುಗಾಲದೊಳಿಧಿಕ ಶೋಕ ರೋಗಾದಿಗಳಿಂ ॥ ದೊಡಗಲಸಿರ್ದಾಂಕ್ರೂರಂ। ಕಡೆಯೊಳ್ಬಹು ಘೋರ ನರಕ ದುಃಖದನತ್ತಿ ॥ ೧ ॥. (ಮುಂದೆ ನೋಡಿ ಭಯದಿಂದ ಮುಂದೆ ಬಂದು), ಅಯ್ಯಾ ! ಅಮ್ಮಾ ! ಉಚ್ಚರಿಸಲಶಕ್ಯವಾದ, ಹೆಸರುಳ್ಳ ಈ ದುಷ್ಟ ನಗರಿಯು ನನ್ನನ್ನು ನೂಕುವುದು; ನನ್ನನ್ನು ಕೊಲ್ಲುವುದು; ಇದರಲ್ಲಿ ಪ್ರವೇಶಿಸುವುದು ಹಾಗಿರಲಿ; ಇದನ್ನು ಕಣ್ಣೆತ್ತಿ ನೋಡುವುದಕ್ಕೂ ನಾನು ಸಮರ್ಥನಾಗಲಾರೆ; ( ಆಲೋಚಿಸಿ ) ಇಲ್ಲಿ ನಾನು ಏನು ಮಾಡಲಿ, ಒಳ್ಳೆಯ ರಹಸ್ಯವಾಗಿ ಇದ್ದುಕೊಂಡು ಇಲ್ಲಿಗೆ ಬಂದು ತಮ್ಮ ಜನ್ಮಾಂತರ ಪಾಪಗಳನ್ನು ಪರಿತ್ಯಜಿಸಿ ಪುನಃ ಹಿಂತಿರುಗಿ ಹೋಗತಕ್ಕ ಜನಗಳ ಬೆನ್ನಟ್ಟಿ ಹೋಗುವೆನು ಎಂದು ಜಯರಾಯಾಚಾರ್ಯರು ಅನುವಾದಿಸಿದ್ದಾರೆ. ಅದನ್ನೇ ಬಸವಪ್ಪಶಾಸ್ತ್ರಿಗಳು ;

ಕಡುಸೀಯೆನಿಪೆಂ ಮೊದಲೊಳ್
ನಡುವೆ ವಿಯೋಗಾದಿ ದುಃಖದಿಂ ಕೈಯ್ಯೆನಿಪೆಂ ।
ಕಡೆಯಲ್ಲಿನರಕ ದುಃಖದ
ನೂಡರ್ಚುವುದರಿನಧಿಕ ದಾರುಣಂ ನಾನಲ್ತೆ ॥

(ಮುಂದೆ ನೋಡಿ ಭಯದಿಂದ ಕೂಡಿ) ಅಯ್ಯೋ! ಅಮ್ಮಾ ಹೆಸರೆತ್ತುವುದಕ್ಕೂ ಅಶಕ್ಯವಾದ ಈ ದುಷ್ಟ ನಗರಿಯು ನನ್ನನ್ನು ಹೊರಡಿಸುವುದು ಹೋಗುವುದು ಹಾಗಿರಲಿ, ಈ ನಗರಿಯನ್ನು ನೋಡಲು ಆರೆನು, ನಾನೇನು ಮಾಡಲಿ? ಆಗಲಿ ಮರೆಯಾಗಿರುವೆನು, ಇಲ್ಲಿಗೆ ಬಂದು ತಮ್ಮ ಜನ್ಮಾಂತರ ಸಂಚಿತ ಪಾಪಗಳನ್ನು ಕಳೆದುಕೊಂಡು ಪುನಶ್ಚ ಹಿಂತಿರುಗಿ ಹೋಗುವ ಜನರನ್ನು ಬೆನ್ನಟ್ಟುವೆನು. ಇಲ್ಲಿ ಇಬ್ಬರೂ ಅನುವಾದಕರಲ್ಲೂ ಹೋಲಿಕೆ ಕಂಡು ಬಂದಿದೆ.

ಚತುರ್ಥಾಂಕದಲ್ಲಿ ಜಯರಾಯಾಚಾರ್ಯರು ಪುರಾಣೋಕ್ತ ಭಾಗವೆಂದು ಸ್ವಲ್ಪ ಭಾಗವನ್ನು ಹೆಚ್ಚಿಸಿದ್ದಾರೆ. ಅದು ರೋಹಿತಾಶ್ವನ ವೃತ್ತಾಂತವಾಗಿ ಮೂಡಿ ಬಂದು ಕರುಣರಸ ಉತ್ತಾಂಗಕ್ಕೆರಿದ ಸಂದರ್ಭ ಕಾಣಬರುತ್ತದೆ. ಕಂಪನಿ ನಾಟಕಗಳಲ್ಲಿ ಜನರನ್ನು ಸೆರೆ ಹಿಡಿಯುವ ತಂತ್ರ ಇಲ್ಲಿ ಕಾಣಬರುತ್ತದೆ. ಇದೊಂದು ಮಹತ್ತರ ಬದಲಾವಣೆ ಎನಿಸುತ್ತದೆ. ಸ್ವಲ್ಪ ಹೆಚ್ಚು ಕಡಿಮೆ ಒಂದೇ ಬಗೆಯ ಅನುವಾದ ವೈಖರಿಯಿಂದ ಈ ಎರಡೂ ಅನುವಾದಗಳು ಮೂಡಿಬಂದಿದ್ದರೂ, ಒಂದೇ ಪ್ರಾಂತ್ಯದಲಲಿ, ಸ್ವಲ್ಪ ಹೆಚ್ಚು ಕಡಿಮೆ ಕಾಲಘಟ್ಟಗಳಲ್ಲಿ ಮೂಡಿಬಂದ ಈ ಅನುವಾದಗಳ ವಿಶಿಷ್ಟತೆಯನ್ನು ಕೃತಿಗಳ ಅನುವಾದಿತ ಭಾಷೆ ಮತ್ತು ಶೈಲಿಗಳು ಭಿನ್ನ ಅಂಶಗಳಾಗಿಸಿವೆ. ಹಾಗಾಗಿ ಈ ಇಬ್ಬರೂ ಅನುವಾದಕರುಗಳು ಕಾಲದ ಅಗತ್ಯಕ್ಕೆ ತಕ್ಕಂತೆ ತಮ್ಮ ಕೃತಿಯನ್ನು ಅನುವಾದಿತ ಪ್ರಯೋಗಕ್ಕೆ ಒಳಪಡಿಸಿದ್ದಾರೆ. ಈ ಕಾಲಘಟ್ಟದ ಪ್ರಮುಖ ಅನುವಾದಕರೆಲ್ಲರಿಗೂ ಸೃಜನ/ನಿಕಟಗಳ ದ್ವಂದ್ವ ಎದುರಿಗೆ ನಿಂತಂತಿದೆ. ಎರಡನ್ನೂ ಬಿಟ್ಟಿಲಾರದ ಸ್ಥಿತಿ ಅನುವಾದಕರ ಪ್ರಮುಖ ಧೋರಣೆಗಳಲ್ಲಿ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಬಸವಪ್ಪಶಾಸ್ತ್ರಿಗಳು ಯಥಾ ಸ್ಥಿತಿ ನಿಕಟ ಅನುವಾದ ಶೈಲಿಯನ್ನು ಮುಂದುವರೆಸಿದ್ದಾರೆನ್ನಬಹುದು. ಜಯರಾಯಾಚಾರ್ಯರು ರಂಗಭೂಮಿಯ ಆದ್ಯತೆಗನುಸಾರವಾಗಿಯೇ ಅನೇಕ ಸಂದರ್ಭಗಳನ್ನು ಜನವಾಡಿಕೆಯ ಮುಂದುವರಿಕೆಯಾಗಿ ಸಾಧಿಸಿದ್ದಾರೆ. ಚತುರ್ಥಾಂಕದಲ್ಲೂ ಯಥಾ ರೀತಿಯ ಸಂದರ್ಭವನ್ನು ನಾವು ಕಾಣಬಹುದು (ಲೋಹಿತಾಶವನು ವಟುಗಳೊಡನೆ ಬರುವನು).

೧ನೇ ವಟು : ನಡೆ ನಡೆ ನಡೆ ವನಕೆ । ಪೂತರುವದಕ್ಕೆ ॥ಪ॥ ಗರ್ಭದಾಸನೆ । ನಿರ್ಭಾಯನೆ ನೀಂ ।ದರ್ಭೆಯರಲೀ । ಯಶ್ವಕರೊಡನೆ ।೧॥.

೨ನೇ ವಟು : ತತಬಲ್ಲಧವ । ಶತದಳ ಮುಖಸುಮ । ತತಿಯನುತರುವದ।ಕತಿಜದಿಂದ ।೨॥.

೩ನೇ ವಟು : ಬರುವೆಯೊಗುರುಗಳಿ । ಗರುಪಲೋ ಪೇಳಿದ । ಸರಭಸವಿರಪಿಂ । ದಿರುಗುತಲಿತ್ತ।೩॥

೧. ವಟು : ಎಲೆ ವಿಕ್ರೀದಾಸಿ ! ಬೇ ಇವನನ್ನು ನಿಮ್ಮೊಡನೆ ಕಳುಹಿಸುವೆಯೋ ? ಗುರುಗಳಿಗೆ ಹೇಳೋಣವೋ ?.

ಚಂದ್ರ : ಎಲೈ! ಮುನಿಪುತ್ರರಾದ ವಟುಗಳಿರಾ ! ಅನಾಥರಾದ ನಮ್ಮ ಮೇಲೆ ಇಷ್ಟು ಕೋಪವೇಕೆ ? ಇವನು ಯಾವಾಗಲೂ ಕೆಲಸ ಮಾಡಿದವನ್ನಲ್ಲ. ಆದ್ದರಿಂದ ಸ್ವಲ್ಪ ಸಾವಕಾಶ ಮಾಡಿ ಕಳುಹಿಸುವೆನು (ಎಂದು ಮಗನನ್ನು ನೋಡಿ ಆತ್ಮಗತಃ).

॥ ರಾಗ ಯಮುನಾ ಆದಿ ತಾಳ ॥

ಕಳುಹುವೆನೆಂತೀ । ಕೆಲಸಕೆ ಬಾಲನಾ ॥ಪಲ್ಲ॥ ವನಕ್ಕೆ ಹುಡುಗೆರ ಕೂಡಿ । ತನುಜನಿವನು ಹೋಗಿ । ವನಜವತರುವದೆಂತೋ । ಮನವು ಕಳವಳಿಪುದು ।೧॥ ಅಳುವನೇನೋ ಪಾದ । ಮುಳ್ಳಗುತಗುಲೆ । ತೊಳಲಿತೋಳಿವನದೊಳ್ । ಬಳಲುವನೊತಾನೆಂತು ।೨॥ ಮಗನ ಕಳುಹದಿಲು । ಹಗರಣವಾಗುವದು। ದಿಗಿಲಾಗುವದೆನ್ನ । ಬಗೆಯೊಳು ಬಲವಾ ॥ ೩ ॥.

(ಆಲೋಚಿಸಿ) ನಿಷ್ಪ್ರಯೋಜನವಾಗಿ ವ್ಯಸನಪಡುವುದು ಯೋಗ್ಯವಲ್ಲ. ಹಣೆಯಲ್ಲಿ ಬರೆದದ್ದನ್ನೆಲ್ಲಾ ಅನುಭವದಿಂದಲೇ ತೀರಿಸತಕ್ಕದ್ದು. ನಾನು ವೃಥಶಡು ವದನ್ನು ಗುರುಪತ್ನಿ ಕೇಳಿದರೆ. ಕೋಪವನ್ನು ಮಾಡ್ಯಾಳು ( ಆಲೋಚಿಸಿ) ಇವನನ್ನು ಕಳುಹಿಸುವುದೇ ಯುಕ್ತ. ಮತ್ತು ನನಗೆ ಗುರುಸೇವಾ ಕಾಲವು ಅತಿಕ್ರಮಿಸುವುದು (ಪ್ರಕಾಶಂ) ಎಲೆ ಮಗನೆ! ಗುರುಗಳಿಗೋಸ್ಕರ ಹೂವು, ಬಿಲ್ವಪತ್ರೆ, ದರ್ಭೆ, ಸಮಿತ್ತುಗಳನ್ನು ತರುವುದಕ್ಕೆ ಈ ವಟುಗಳ ಸಂಗಡ ಅರಣ್ಯಕ್ಕೆ ಹೋಗು. ಈ ವಟುಗಳಲ್ಲಿ ಕೋಪಿಸಿಕೊಂಡು, ನಿನ್ನ ಕ್ಷಾತ್ರ ಸ್ವಭಾವವನ್ನು ತೋರಿಸಬೇಡ. ಈ ದಾಸಭಾವದಲ್ಲಿ ಅದು ಯುಕ್ತವಲ್ಲ. ಈಗ ಈ ನೀರನ್ನು ಕುಡಿದು ಹೋಗು. ಬಂದ ಮೇಲೆ ಹಾಲನ್ನು ಕೊಡುವೆನು( ನೀರು ಕುಡಿಯಿಸಿ) ಎಲೈ ವಟುಗಳಿರಾ! ಇವನನ್ನು ಬಹಳವಾಗಿ ಪೀಡಿಸಬೇಡಿ, ಕರೆದುಕೊಂಡು ಹೋಗಿ.

ಲೋಹಿತ : ಜನನಿ! ಯಾತಕ್ಕೆ ಚಿಂತಿಸುವೆ ? ಧೈರ್ಯದಿಂದಿರು. ಹೂವನ್ನು ತೆಗೆದುಕೊಂಡು ನಾನು ಜಾಗ್ರತೆಯಲ್ಲಿ ಬರುವೆನು.

ರೋಹಿತಾಶ್ವ ಕಾಡಿಗೆ ಹೋಗುವನು. ವಿಶ್ವಾಮಿತ್ರನು ತಕ್ಷಕನಿಗೆ ಲೋಹಿತಾಶ್ವ ಹುತ್ತದ ಸಮೀಪ ಹೂವನ್ನು ಕೀಳಲು ಬಂದಾಗ ಕಚ್ಚಲು ಹೇಳುತ್ತಾನೆ. ಲೋಹಿತಾಶ್ವ ತಕ್ಷಕನೆಂಬ ಹಾವಿನಿಂದ ಕಚ್ಚಿಸಿಕೊಂಡು ಪ್ರಾಣವನ್ನು ಬಿಡುತ್ತಾನೆ. ಇತ್ತ ಚಂದ್ರಮತಿ ತನ್ನ ಪುತ್ರ ಇನ್ನೂ ಅಡಿವಿಯಿಂದ ಬರಲಿಲ್ಲವೆಂದು ಕಳವಳ ಪಡುತ್ತಿದ್ದಾಳೆ. ವಟುಗಳು ಬಂದು ಲೋಹಿತಾಶ್ವನು ಸತ್ತಿದ್ದನ್ನು ಅರುಹುವ್ರು. ಚಂದ್ರಮತಿ ಆ ಶವದ ಜಾಗೆಯನ್ನು ಅರಸ್ತು ವಟುಗಳ ಜೊತೆಗೆ ಬರುವಳು. ಚಂದ್ರಮತಿ ಅವನ ಶವವನ್ನು ನೋಡಿ ಶೋಕಿಸುವಳು.

ಲೋಹಿತ: ಎಲೈ ವಟುಗಳಿರಾ! ಯಾತಕ್ಕೆ ನನ್ನನ್ನು ಪೀಡಿಸುವಿರಿ ? ನಿನ್ನೇ ದಿವಸದಿಂದಲೂ, ನನ್ನ ತಾಯಿಯು ತಾನು ಮಾಡುವ ಸೇವಾವೃತ್ತಿಯಲ್ಲಿ ನನ್ನನ್ನು ಮರೆತು, ಅನ್ನವನ್ನೇ ಹಾಕಲಿಲ್ಲ. ಆದರೂ ಚಿಂತೆಯಿಲ್ಲ; ಸ್ವಲ್ಪ ಸಾವಕಾಶ ಮಾಡಿ ನಿಮ್ಮ ಅಮ್ಮನನ್ನು ಕೇಳಿ ತಿನ್ನುವಕ್ಕೆ ತೆಗೆದುಕೊಂಡು ಬರುವೆನು. ನಿಮಗೂ ಕೊಡುವೆನು.

೧ನೇ ವಟು: ಎಲೋ! ತನಗೆ ನಿನ್ನೇ ದಿವಸದಿಂದಲೂ ಅನ್ನವಿಲ್ಲವೆಂಬ ಇವನು ನಮಗೆ ತಿನ್ನುವುದಕ್ಕೆ ಕೊಡುವನಂತೆ.

ಲೋಹಿತ: ನಾನು ಚೆನ್ನಾಗಿ ಬದುಕುವ ಕಾಲದಲ್ಲಿ ನಿಮ್ಮನ್ನು ಮರೆಯುವುದಿಲ್ಲ. ಬೇಕಾದ್ದನ್ನು ಕೊಡುವೆನು.

೨ನೇ ವಟು: ಎಲೋ ? ಈ ಗರ್ಭದಾಸನು ಬಾಯಿಗೆ ಬಂದಂತೆ ಹರಟುವನು. ತಾನೇ ಪರಿಚಾರಕನಾಗಿ ಬಿದ್ದಿದ್ದಾನೆ. ನಮಗೆ ಬೇಕಾದ್ದನ್ನು ಕೊಡುವನಂತೆ.

೩ನೇ ವಟು: ಎಲೋ? ನೀನು ಚೆನ್ನಾಗಿ ಬದುಕುವ ಕಾಲಕ್ಕೆ ಹಾಗೆಯೇ ಆಗಲಿ. ಈಗ ಹೂವನ್ನು ತರುವುದಕ್ಕೆ ಬಾ (ಎಂದು ಬಲತ್ಕಾರವನ್ನು ಮಾಡುವರು).

ಲೋಹಿತ: ಅಮ್ಮಾ ! ಈ ವಟುಗಳೆಲ್ಲಾ ನನ್ನನ್ನು ಬಾಧಿಸುವಲ್ಲ.

ಚಂದ್ರ: (ಬಂದು)ಎಲೆ ಮಗನೆ ಪುಣ್ಯಹೀನೆಯಾದ ನನ್ನನ್ನು ಅಮ್ಮಾ ಎಂದು ಯಾತಕ್ಕೆ ಕೂಗುವೆ?

ಲೋಹಿತ: (ತಾಯಿಯ ನೆರೆಯನ್ನು ಹಿಡಿದುಕೊಂಡು)
॥ ರಾಗ ಕಮಾಚ್ ಛಾಪು ತಾಳಿ ॥

ಕರುಣಿಸಿಕೇಳೆನ್ನ ಜನನಿ ॥ ಈ ॥ ತರಳಿರು ಎನ್ನನು ಬಾಧಿಪಪರಿಯನು ॥ಪಲ್ಲ॥
ಹಡುಗರೆಲ್ಲರು ಬಿಡದೀಗ । ಎನ್ನ। ನಡವಿಗೆ ಬಾರೆಂದು । ಜಡಿದೆಳೆಯವರು ।೧॥
ಛಲದಿಂದ ಕೂಗವರೆನ್ನ।ನೆಂತಿ।ಕೆಲಸವ ಮಾಡುವೆ । ತೊಲಗುತತ್ತ ನಾನು ।೨॥
ಕುಸುಮವ ತರಲಸವಸದಿಂದ । ಬಾರೆಂ । ದುಸುರುತಲಿರುವರು । ಹಸದಿರುವೆನು ನಾನು।೩॥

॥ ರಾಗ ನಾದನಾಮಕ್ರಿಯ ರೂಪಕ ತಾಳ ॥

ತರಳ ನಿನನ್ನುಳಿಯುತೀಗ । ಹರಣ ವಧರಿಸುವೆನೆಂತು ॥ಪ॥ ಧರೆಯೊಳಗೆ। ತೊರೆದೆನ್ನಯ ಪಲೋಕವೋಗಿ ಹಾ ಹಾ ॥ ಅ ॥ ಹರಿಪಿರಂಬೆಸುರರು । ಮೌನಿವರೆಗೆ ಸಹಾಯಕರಾಗೀ । ಪರಿಮಾಡಲು। ತೆರನಾಗುವದು । ನೆರೆತೋರದು ಮುಂದೆ ಹಾ ಹಾ ।೧॥ ಇವನ ವಂಶದಲ್ಲಿ ಜನಿಸಿ।ದಲುಪಮ ಸತ್ಯ ಹರಿಶ್ಚಂ।ದ್ರವರೇಶ್ವರ।ತನುಜಾತನೆ। ಎನಗೇಂಗತಿ ಪೇಳು ಹಾಹಾ।೨॥ ಜನನಿಯಾನುತಿರುಗಿ ನೋಡು। ತನುಜನೆ ಮಾತಾಡು। ಜನಪಾಲನಿ। ದನು ಕೇಳಲು । ಅನುವೆನೆನಶಿಂದು ಹಾ ಹಾ ।೩॥ ( ಎದ್ದು) ಹಾಹಾ ದೈವವೆ! ನಾಮು ಯಾವ ಜನ್ಮದಲ್ಲಿ, ಯಾರ ಮಕ್ಕಳಿಗೆ, ಏನು ದ್ರೋಹವನ್ನು ಮಾಡಿದ್ದೆನೋ! ಈಗ ನನ್ನ ಮಗನಿಗೆ ಈ ದುರವಸ್ಥೆಯು ಪ್ರಾಪ್ತವಾಯಿತು. ದೈವ ಕೃತ್ಯಕ್ಕೆ ಎಷ್ಟು ಅತ್ತರೆ ತಾನೆ ಏನು ಪ್ರಯೋಜನ. ನಾನು ಬೇಗ ಬರಲಿಲ್ಲವೆಂದು ಗುರುಪತ್ನಿಯೂ ಕೋಪವನ್ನು ಮಾಡ್ಯಾಳು, ಇದೇ ನನಗೆ ಕೊನೇಚಿಕಿತ್ಸೆ ಆಯಿತು. ಇನ್ನು ಪ್ರಕೃತ ಕಾರ್ಯಕ್ಕೆ ಎತ್ನಿಸುವೆನು ( ಎಂದು ಮಗುವನ್ನು ಎತ್ತಿಕೊಂಡು ಹೋಗುವಳು).

ಈ ಹೃದಯವಿದ್ರಾವಕ ಸನ್ನಿವೇಶವನ್ನು, ಕರುಣಾರಸ ಪ್ರತಿಪಾದಕ ಪದ್ಯಗಳನ್ನು ಕವಿ ಜನಪ್ರಿಯತೆಯ ಅಥವಾ ರಂಗಭೂಮಿ ಆದ್ಯತೆಗನುಸಾರವಾಗಿ ರಚಿಸಿದ್ದಾರೆಂಬುದು ಸ್ಪಷ್ಟ. ಚಂದ್ರಮತಿ ಪ್ರಲಾಪವಂತೂ ರಂಗತಂತ್ರವನ್ನು ಸಮರ್ಥವಾಗಿ ಪಾಲಿಸಿದೆ. ಸಂಭಾಷಣೆ ಹಾಗೂ ಅಭಿನಯಿಸು ವಿಕೆಯ ಅಂಶಗಳು ಇದನ್ನು ಸಮರ್ಥ ರಂಗಭೂಮಿಯ ಆದ್ಯತೆ ಇಟ್ಟುಕೊಂಡ ಅನುವಾದವನ್ನಾಗಿಸಿದೆ.

ಪಂಚಮಾಂಕದಲ್ಲಿ ರೋಹಿತಾಶ್ವನ ಸಾವಿನ ನಂತರ ಸ್ಮಶಾನಕ್ಕೆ ತಂದು ರೋಧಿಸಿ ಕಡೆಗೆ ಚಿತೆಗೆ ಸಿದ್ಧತೆ ಮಾಡಿಕೊಳ್ಳುತ್ತಾಳೆ. ಆನಂತರದ ಸಂದರ್ಭ ಬಸವಪ್ಪಶಾಸ್ತ್ರಿಗಳು/ಜಯರಾಯಾಚಾರ್ಯರು ವಿವರಿಸಿದ ಬಗೆ ಸಾಮ್ಯತೆಯನ್ನು ತೋರಿಸುವುದು ಈ ಅನುವಾದಗಳ ವೈಶಿಷ್ಟ್ಯ. ಹರಶ್ಚಂದ್ರ ಮೃತ ಕಂಬಳಿ ಕೊಡುವಂತೆ ಕೇಳುತ್ತಾನೆ. ಆನಂತರ ಚಂದ್ರಮತಿಯು (ಲೋಹಿತಾಶ್ವನ ಮೈಮೇಲಿನ ಬಟ್ಟೆ ಯನ್ನೆಳೆದುಕೊಡುವಾಗ ರಾಜನ ಹಸ್ತವನ್ನು ನೋಡಿ ಸೋಜಿಗದಿಂದ ತನ್ನಲ್ಲಿ ತಾನು) ಏನು ಚಕ್ರವರ್ತಿ ಚಿಹ್ನೆಗಳುಳ್ಳ ಹಸ್ತವು ಇಂಥ ಕೆಲಸಕ್ಕೆ ಇಳಿಯುವುದೇ ? (ಹತ್ತಿರ ಬಂದು ಅವಯವಗಳನ್ನು ಗುರುತಿಸಿ) ಏನು ಆರ್ಯ ಪುತ್ರನೇ! (ತ್ವರೆಯಿಂದ) ಹಾ! ಆರ್ಯಪುತ್ರ! ರಕ್ಷಿಸು ರಕ್ಷಿಸು! ( ಎಂದು ನೆಲಕ್ಕುರುಳುವಳು). ಆದರೆ ಜಯರಾಯಾಚಾರ್ಯರು ಹೀಗೆ ಹೇಳುತ್ತಾರೆ. ಚಂದ್ರಮತಿಯು ಭದ್ರಮುಖನೆ! ಬ್ರಾಹ್ಮಣ ದಾಸಿಯಾದ ನನ್ನಲ್ಲಿ ಒಂದು ಕಾಸಿಗೂ ಗತಿಯಿಲ್ಲ; ಈ ಹುಡುಗನ ಮೈಮೇಲಿನ ಬಟ್ಟೆ ಹೊರತು ಬೇರೆ ಗತಿಯಿಲ್ಲ; ಈಗ ದೀನಳಾದ ನಾನು ಒಂದು ಹಣವನ್ನು ಎಲ್ಲಿಂದ ತಂದುಕೊಡಲಿ? ಈ ಮಗುವನ್ನು ಸುಡುವುದಕ್ಕೆ ಅಪ್ಪಣೆಯನ್ನು ಕೊಟ್ಟರೆ ನಿನಗೂ ಬಹಳ ಧರ್ಮವುಂಟು ಎನ್ನುತ್ತಾಳೆ ಚಂದ್ರಮಿ. ಆದಕಕೆ ರಾಜನು (ಹಿಂದಕ್ಕೆ ಬಂದು ಆತ್ಮಗತಂ) ಹಾಹಾ ದೈವವೇ! ಏನು ಕಷ್ಟದೆಶೆಯನ್ನು ಕೊಟ್ಟೆ ; ಇವಳು ಕೇಳುವ ಮಾತಿಗೆ ಪ್ರತ್ಯುತ್ತರವನ್ನು ( ಆಲೋಚಿಸಿ) ಇವಳಿಗೆ ಕೊಡುವುದಕ್ಕೆ ಗತಿಯಿಲ್ಲವೆಂಬ ದಾಕ್ಷಿಣ್ಯಕಕೆ ಒಳಗಾಗಿ, ಸ್ವಾಮಿ ದ್ರೋಹಕ್ಕೆ ಗುರಿಯಾಗುವುದು

ಯುಕ್ತವಲ್ಲ; ನಿರ್ದಾಕ್ಷಿಣ್ಯದಿಂದ ಹಣವನ್ನು ತೆಗೆದುಕೊಂಡು ಸತ್ಯ ಧರ್ಮ ಪಾಲನೆಯನ್ನು ಮಾಡಿದರೆ ಇಹಕ್ಕೂ, ಪರಕ್ಕೂ, ಶ್ರೇಯಸ್ಸುಂಟಾಗುವುದು (ಪ್ರಕಾಶಂ) ಎಲೆ ಪುಣ್ಯವತಿ ! ನಿನ್ನ ಕೊರಳಲ್ಲಿರುವ ತಾಳಿಯನನು ಈ ಹುಡುಗನ ಮೈಮೇಲಿನ ಬಟ್ಟೆಯನ್ನು ಕೊಡು. ಬಸವಪ್ಪಶಾಸ್ತ್ರಿಗಳ ಅನುವಾದದಲ್ಲಿ ಚಂದ್ರಮತಿಯು ಮಗುವಿನ ಶರೀರದಿಂದ ವಸ್ತ್ರವನ್ನು ತೆಗೆದುಕೊಂಡುದ ಕಾಲದಲ್ಲಿ ರಾಜನ ಕೈಯನ್ನು ನೋಡಿ ಆಶ್ಚರ್ಯದೊಡನೆ ತನ್ನಲ್ಲಿ ತಾನು) ಇದೇನು ? ಚಕ್ರವರ್ತಿ ಲಕ್ಷಣದಿಂದ ಕೂಡಿರುವ ಈ ಹಸ್ತವು ಇಂತಹ ಕೆಲಸಕ್ಕೆ ಪ್ರವರ್ತಿಸಿರುವುದು ? (ಸಮೀಪಕ್ಕೆ ಬಂದು ಅವಯವಗಳನ್ನೆಲ್ಲಾ ನೋಡಿ ಗುರುತು ಓಡಿದು) ಇದೇನು ? ಆರ್ಯಪುತ್ರನಂತೆ ? (ತ್ವರೆಯಿಂದ) ಹಾ! ಆರ್ಯ ಪುತ್ರನೇ ! ರಕ್ಷಿಸು। ರಕ್ಷಿಸು । (ಎಂದು ಬೀಳುವಳು). ಆದರೆ ಜಯರಾಯಾಚಾರ್ಯರು ಈ ಸಂದರ್ಭವನ್ನು ಜನವಾಡಿಕೆಯಂತೆ ಬದಲಿಸಿದ್ದಾರೆ( ಆಶ್ಚರ್ಯಯುಕ್ತಳಾಗಿ ಆತ್ಮಗತಂ) ಇದೇನು ಈ ಹಸ್ತವು ಚಕ್ರವರ್ತಿ ಲಕ್ಷಣಗಳಿಂದ ಕೂಡಿದ್ದರೂ ಈ ಕೆಲಸಕ್ಕೆ ಬಂತು (ಸಮೀಪಕ್ಕೆ ಬಂದು ಆಕಾರವನ್ನು ನೋಡಿ ಸ್ಮರಿಸಿ) ಏನು ಆರ್ಯ ಪುತ್ರನೇ! (ಸಸಂಭ್ರಮಂ) ಆರ್ಯ ಪುತ್ರನೆ! ರಕ್ಷಿಸು ರಕ್ಷಿಸು ( ಎಂದು ಕೆಳಗೆ ಬೀಳುವಳು). ಈ ಸಂದರ್ಭದಲಲಿ ಬಸಪ್ಪಶಾಸ್ತ್ರಿಗಳ ಕೃತಿಯಲಲಿ ಆಕಾಶದಿಂದ ಪುಷ್ಪವೃಷ್ಟಿಯಾದರೆ ಜಯರಾಯಾಚಾರ್ಯರು ಅದಕ್ಕೊಂದು ಸನ್ನಿವೇಶವನ್ನು ಕಟ್ಟಿಕೊಟ್ಟಿದ್ದಾರೆ. ಚಂದ್ರಮತಿ ಆರ್ಯಪುತ್ರನೆ! ಮುತ್ತೈದೆತನಕಕೆ ಸೂಚಕವಾದ ತಾಳಿಯನ್ನು ತೆಗೆದುಕೊಡತಕ್ಕದ್ದು ಯುಕ್ತವೋ, ಧರ್ಮಜ್ಞನಾದ ನೀನೆ ಆಲೋಚಿಸು.

ರಾಯ : ಹಾಗಾದರೆ ನೀನು ನಿಮ್ಮ ಗುರುಗಳ ಮನೆಗೆ ಹೋಗಿ ಈ ವೃತ್ತಾಂತವನ್ನು ಹೇಳಿ, ಬಂದು ಹಣವನ್ನು ತೆಗೆದುಕೊಂಡು ಬಾ; ಅಲ್ಲಿನವರೊ ಈ ಸ್ಮಶಾನದಲ್ಲಿ ಶವವನ್ನು ನಾನು ಕಾದಿರುವೆನು.

ಚಂದ್ರ: ಆರ್ಯಪುತ್ರನ ಅಪ್ಪಣೆ, ( ಎಂದು ಕತ್ತಲೆಯಲ್ಲಿ ಹೊರಟು ಚಿಂತಿಸುತ್ತಾ ಬರುವಾಗ ದಾರಿಯಲ್ಲಿ ಬಿದ್ದಿರುವ ಮಗುವನ್ನು ನೋಡಿ ಲೋಹಿತಾಶ್ವನೆಂದು ಭ್ರಮಿಸಿ) ಸ್ಮಶಾನದಲ್ಲಿದ್ದ ನನ್ನ ಮಗುವು ಇಲ್ಲಿ ಬಿದ್ದಿರುವುದಕ್ಕೆ ಕಾರಣವೇನು ಎಂದು ಮಗುವಿನ ಬಳಿಯಲ್ಲಿ ಕುಳಿತು)

॥ ರಾಗ ಮಾಂಜಿ ಛಾಪು ॥

ಹೇಳು ಇಲ್ಲಿಗೇಕೆ ಬಂದೆ । ತನೂಜ ।।ಪ।। ತಾಳಲಾರೆನಿಂದೆ । ತನೂಜ ।।ಅ।। ಇಂದವಾರುವ ಮಾಯೆಯಿಂದಿಲ್ಲಿ ನಿನ್ನ ನುತಂದು ಹಾಕಿದರೋ ಹಾ ತನೂಜ ।೧।। ವಲ್ಲಭನೆಡೆಯೊಳು । ನಿಲ್ಲಲು ಚಿತ್ತ । ಮಿಲ್ಲವಾದುದೆ ನಿನಗೆ । ತನೂಜ ।೨।। ಪಾಪಿ ಮೋಸವನು । ಈ ಪರಿ ಮಾಡಲು । ಸೈಪನೆಂತು ನೃಪನು । ತನೂಜ ।೩।।

ಎಲೆ ಮಗನೆ! ಚಂದ್ರ ಸದೃಶವಾದ ನಿನ್ನ ಮುಖದಲ್ಲಿ ದುರ್ದೈವದಿಂದ ಕಾಂತಿಯು ಕುಂದಿಸಲ್ಪಟ್ಟಿತೆ ! (ಮುಖವನ್ನು ನೋಡಿ) ಆಹ ಇದೇನು, ಈ ಮಗುವು ಲೋಹಿತಾಶ್ವನಲ್ಲ. ಪುತ್ರ ವಿಯೋಗದಿಂದ ಕಳವಳಿಸುತ್ತಿದ್ದ ನನ್ನ ಮನಸ್ಸು ಲೋಹಿತಾಶ್ವನೆಂದು ಭ್ರಮಿಸಿತು. ಹಾಹಾ! ಅಯ್ಯೋ ಮಗುವೆ, ನೀನು ಯಾವ ಕುಲಕ್ಕೆ ಅಲಂಕಾರ ಭೂತನಾಗಿದ್ದೆಯೋ? ಹಾಹಾ! ಪಾಪಿನಿಯಾದ ನನ್ನಂತೆ ನಿನಗೋಸ್ಕ ಯಾವ ಪುಣ್ಯಹೀನೆಯು ಮರುಗುತ್ತಿರುವಳೋ ?.

(ಅಷ್ಟರಲ್ಲಿಯೇ ಯಾಮಿಕರು ಬರುವರು).

೧ನೇ ಯಾಮಿಕ: ಎಲೋ! ಅಂತಃಪುರದಲ್ಲಿ ಇದ್ದ ಕಾಶೀರಾಜನ ಮಗುವನ್ನು ಆಭರಣ ಆಸೆಯಿಂದ ಯಾರೋ ಕದ್ದು ಕೊಂಡು ಹೋದರಂತೆ.

೨ನೇ ಯಾಮಿ: ನಮ್ಮ ಮಹಾರಾಜನು ಈ ಕಳವನ್ನು ಹಿಡಿದವರಿಗೆ ಬಹುಮಾನವನ್ನು ಕೊಡುವುದಾಗಿ ಸಾರಿಸಿ ಇರುವನು. ಅದಕ್ಕಾಗಿಯೇ ನಾನು ಬಂದಿರುವೆನು.

೧ನೇ ಯಾಮಿ: ಹೋ ಹೋ! ಈ ಗಾಢಾಂಧಕಾರದಲ್ಲಿ ಕಳವನ್ನು ಹಿಡಿಯುವುದು ಹ್ಯಾಗೋ ? ಸಾರಿಸಿ ಇರುವನು. ಅದಕ್ಕಾಗಿಯೇ ನಾನು ಬಂದಿರುವೆನು.

೨ನೇ ಯಾಮಿ: ಬಾ ಪ್ರಯನಪಟ್ಟು ನೋಡೋನ (ಮುಂದೆ ಬರುವರು).

ಚಂದ್ರ: ಪುತ್ರ ವಿಯೋಗವನ್ನು ಕಾಣದೆ ಬಂಜೆಯರೇ ಪುಣ್ಯವತಿಯರು.

೨ನೇ ಯಾಮಿ: ಹೌದು ಹೌದು, ಸಾವಕಾಶಮಾಡದೇ ಬೇಗ ಬಾ.

ಚಂದ್ರ: ಸ್ಮರಿಸಿ ನಾನು ಇನ್ನು ಸಾವಕಾಶವನ್ನು ಮಾಡುವುದು ಯುಕ್ತವಲ್ಲ, ಆರ್ಯಪುತ್ರನು ಅಲ್ಲಿ ಕಾದಿರುವನು. (ಮಗುವಿನ ಮೇಲೆ ಬಟ್ಟೆಯನ್ನು ಹೊದ್ದಿಸಿ ಹೋಗುವುದಕ್ಕೆ ಎತ್ತಿಸುವಳು).

೧ನೇ ಯಾಮಿ: ಎಲೊ! ಕೇಳಿದೆಯಾ ! ತಪ್ಪಿಸಿಕೊಂಡು ಹೋಗುವಂತೆ ಕಾಣುತ್ತೆ; ಬೇಗ ನಡೆ. (ಅವಳ ಬಳಿಗೆ ಬಂದು ಅವಳನ್ನೂ, ಮಗುವನ್ನೂ ನೋಡಿ).

೨ನೇ ಯಾಮಿ: ಎಲೋ ಈ ಮಹಾನಿಶಿಯಲ್ಲಿ ಸಂಚರಿಸುವ ಈ ರಾಕ್ಷಸಿಯೇ ಈ ಮಗುವನ್ನು ಕದ್ದಿರಬೇಕು. ನಾನು ಇಲ್ಲಿಯೇ ಇವಳನ್ನು ನಿಲ್ಲಿಸಿ ಇರುವೆನು. ಮಗುವಿಗೆ ಪ್ರಾಣ ವಿರುವುದೋ, ಇಲ್ಲವೋ ನೋಡು.

೧ನೇ ಯಾಮಿ: (ನೋಡಿ) ಮಗುವಿಗೆ ಪ್ರಾಣವಿಲ್ಲ. ಈ ರಾಕ್ಷಸಿಯೇ ಈ ಮಗುವನ್ನು ಕೊಂದವಳು ; ಏನು ಸಂಶಯವಿಲ್ಲ. ಎಲೆ ರಾಕ್ಷಸಿ! ಬಾಲ ಘಾತಿನಿ ! ನಿನ್ನ ಕೃತ್ಯಕ್ಕೆ ತಕ್ಕಫಲವನ್ನು ಹೊಂದುವೆ; ಮಗುವನ್ನು ಮಡಿಲಲ್ಲಿ ಇಟ್ಟುಕೋ (ಹೊಡೆಯುವುದಕ್ಕೆ ಹೋಗುವರು).

ಬಸವಪ್ಪಶಾಸ್ತ್ರಿಗಳ ಅನುವಾದ ಮತ್ತು ಜಯರಾಯಾಚಾರ್ಯರ ಅನುವಾದಗಳನ್ನು ಕೆಲವು ಸಂದರ್ಭಗಳನ್ನು ಮುಂದೆ ಇಟ್ಟುಕೊಂಡು ಪರಸ್ಪರ ಚರ್ಚಿಸಿದ್ದಾಯಿತು. ಈ ಚರ್ಚೆಯಿಂದ ಬಂದ ಅಂಶಳನ್ನು ಹೀಗೆ ಕ್ರೋಢೀಕರಿಸಬಹುದು.

ಅ) ಬಸವಪ್ಪಶಾಸ್ತ್ರಿಗಳು ಸಂಸ್ಕೃತ ಮೂಲಕ್ಕೆ ಬದ್ಧವಾಗಿದ್ದರೆ; ಜಯರಾಯಾಚಾರ್ಯರು ಮೂಲಕ್ಕೆ ಬದ್ಧರಾಗಿದ್ದರೂ ಸ್ವತಂತ್ರ ಮನೋಭಾವ ಇಟ್ಟುಕೊಂಡಿದ್ದಾರೆ.

ಆ) ಜಯರಾಯಾಚಾರ್ಯರು ಕಂಪನಿ ನಾಟಕಗಳ ರಂಗತಂತ್ರಗಳನ್ನು ಅನುಸರಿಸಿದ್ದಾರೆ. ಬಸವಪ್ಪ ಶಾಸ್ತ್ರಿಗಳು ಓದುವ ಪಂಡಿತ ವರ್ಗದ ಕಡೆ ಗಮನಹರಿಸಿದ್ದಾರೆ.

ಇ) ಬಸವಪ್ಪಶಾಸ್ತ್ರಿಗಳು ಕಂದಗಳೊಡನೆ-ಸಂಸ್ಕೃತದ ಅಕ್ಷರ ವೃತ್ತಗಳನ್ನು ಹ್ರಸ್ವನಕ್ಷವಾದ ವೃತ್ತಗಳನ್ನು ಬಳಸಿದ್ದಾರೆ. ಜಯರಾಯಾಚಾರ್ಯರು ಕಂದಗಳನ್ನು ಅಪರೂಪವಾಗಿ ಬಳಸಿ ಹಾಡುವ ಮಟ್ಟುಗಳನ್ನು ಅನುಸರಿಸಿದ್ದಾರೆ. ಇವು ರಾಗ-ತಾಳಗಳಿಂದ ಬದ್ಧವಾಗಿವೆ.

# ಅಧ್ಯಾಯ - ೬

# ಅನುವಾದದ ತಾತ್ತ್ವಿಕತೆ

ಯಾವುದೇ ಜ್ಞಾನ ಶಿಸ್ತಿಗೂ ಅದರದೇ ಆದ ತಾತ್ವಿಕ ನಿಲುವುಗಳಿರುವುದು ಸಹಜ. Translatology ಎಂಬ ಶಾಸ್ತ್ರವಾಗಿ ಬೆಳೆದ ಅನುವಾದಕ್ಕೂ ಅದರದೇ ತಾತ್ವಿಕ ನಿಲುವುಗಳಿವೆ. ಸಾಹಿತ್ಯಕ್ಕೂ ತಾತ್ತ್ವಿಕತೆಗೂ ನಿಕಟವಾದ ನಂಟು. ಒಂದು ರೀತಿ ಸಾಹಿತ್ಯವೆನ್ನುವುದು ''ತತ್ವಶಾಸ್ತ್ರದ ಒಂದು ಪ್ರಕಾರ'' ಎಂಬ ಮಾತಿದೆ. ''ದೊಡ್ಡ ತತ್ತ್ವಶಾಸ್ತ್ರಜ್ಞನಾಗದೆ ಯಾವನೂ ದೊಡ್ಡ ಕವಿಯಾಗಿಲ್ಲ'' ಎಂಬ ಕೋಲ್‌ರಿಜನ ಮಾತು ತಾತ್ವಿಕತೆಯ ಚರ್ಚೆಗೆ ಒಂದು ಮಹತ್ವವನ್ನು ಒದಗಿಸಿಕೊಡುತ್ತದೆ. ತತ್ತ್ವವೇ ಸಾಹಿತ್ಯವಾಗದೇ ಸಾಹಿತ್ಯದಲ್ಲಿ ತತ್ತ್ವ ಅಂತಃಸತ್ವವಾಗಿ ಬಂದರೆ ಅದೊಂದು ಶ್ರೇಷ್ಠ ಬಗೆಯ ಕೃತಿಯಾಗಲು ಸಾಧ್ಯವಿದೆ.

ಹಳೆಗನ್ನಡ ಸಾಹಿತ್ಯ ಷಟ್ಪದಿ, ರಗಳೆ, ಛಂದೋವೃತ್ತಿ , ವ್ಯಾಕರಣವಾಗಲೀ, ಯಾವುದೋ ಒಂದು ಬದ್ಧ ಚೌಕಟ್ಟಿನ್ನಲಾಗಲಿ ಒಳಪಟ್ಟಿದೆ. ಹೊಸಗನ್ನಡ ರೂಪ ಸ್ವತಂತ್ರ ಲಹರಿಯಿಂದ ಮೂಡಿಬಂದಿದೆ. ತಮ್ಮ ಸಾಂದರ್ಭಿಕ ಒತ್ತಾಸೆಗನುಗುಣವಾಗಿ, ತಮ್ಮ ಅನುಕೂಲತೆಯನ್ನು ಅನುಸರಿಸಿ ಅನುವಾದ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿದ್ದಾರೆ. ಅನುವಾದ ಆನ್ವಯಿಕ ಸಿದ್ಧಾಂತವಲ್ಲ. ಅದು ಸೃಜನಾತ್ಮಕ ವ್ಯಾಪಾರ. ಆನ್ವಯಿಕ ಸಿದ್ಧಾಂತದಲ್ಲಿ ನಿಯಮಾನುಸಾರ ರಚನೆ ನಡೆಯಬೇಕಾಗುತ್ತದೆ. ಸೃಜನೆಗೆ ಬದ್ಧತೆ ಇಲ್ಲ. ಬದ್ಧತೆ ಸೃಜನತೆಯಲ್ಲ ಎಂಬುದು ವಿದಿತ ವಿಷಯ.

ಪೂರ್ವನಿಶ್ಚಿತವಾದ ಸಿದ್ಧಾಂತದಿಂದ ಒಂದು ಸಾಹಿತ್ಯ ಸೃಷ್ಟಿಯಾಗುವುದು ಸಮಂಜಸವಾದ ವಿಚಾರವಲ್ಲ. ಪಡೆಯುವ ಅನುಭವಗಳನ್ನು ಹಾಗೂ ಅವುಗಳನ್ನು ಅರ್ಥಮಾಡಿಕೊಳ್ಳುವ ಕ್ರಿಯೆಗೆ ಪರಸ್ಪರ ವಿರುದ್ಧವಾಗಿರುತ್ತವೆ ಎಂಬುದು ಮುಖ್ಯ ಕಾರಣವಿರಬಹುದು. ಸಾಹಿತ್ಯದಲ್ಲಿ ಅಭಿವ್ಯಕ್ತಿ ತಾತ್ವಿಕತೆಯನ್ನು ಪಡೆಯಬೇಕೆಂಬುದು ಸಹಜವೆನಿಸಿದರೂ, ಸೃಜನ ಕ್ರಿಯೆಯಲ್ಲಿ ಅಭಿವ್ಯಕ್ತಿ ಮೊದಲೋ,ತಾತ್ವಿಕತೆ ಮೊದಲೋ ಎಂಬುದು ಅಷ್ಟು ಪ್ರಸ್ತುತ ವಿಚಾರವೆನಿಸುವುದಿಲ್ಲ. ಸಿದ್ಧಾಂತಗಳೊಂದಿಗೆ ಅಭಿವ್ಯಕ್ತಿ ಮಾಧ್ಯಮ ತಾದಾತ್ಮ್ಯ ಪಡೆಯುವುದಿಲ್ಲ. ಅರ್ಥಾತ್ ಪೂರ್ವ ಸಿದ್ಧಾಂತದೊಡನೆ ಬರವಣಿಗೆ ಸಾಧ್ಯವಿಲ್ಲ.

ಗಯಟೆ ಸಂಸ್ಕೃತ-ಕನ್ನಡ ಅನುವಾದ ಮೂರನೇ ಘಟ್ಟದಲ್ಲಿ ನಡೆಯುತ್ತದೆ ಎಂದಿದ್ದಾನೆ. ಸಾಹಿತ್ಯವೊಂದರಲ್ಲಿ ಮೂರು ಘಟ್ಟಗಳಲ್ಲಿ ಅನುವಾದವು ಮೂಡಿಬರುತ್ತದೆ. ಮೊದಲನೆಯ ಘಟ್ಟದ ಅನುವಾದ ನಮ್ಮದೇ ಅರ್ಥದಲ್ಲಿ ಪರಕೀಯ ಸಂಸ್ಕೃತಿಯನ್ನು ಪರಿಚಯ ಮಾಡಿಕೊಳ್ಳುವ ಉದ್ದೇಶದಿಂದ ಪ್ರೇರಿತವಾಗಿರುತ್ತದೆ. ಸರಳವಾದ ಗದ್ಯ ಕೆಲಸಕ್ಕೆ ಅತ್ಯುತ್ತಮ ಮಾಧ್ಯಮವಾಗಿರುತ್ತದೆ. ಎರಡನೆಯ

ಘಟ್ಟದ ಅನುವಾದ ಪ್ರತಿನಿಧಿ ಸ್ವರೂಪದ್ದಾಗಿರುತ್ತವೆ. ಅನುವಾದಕ ಪರಕೀಯ ಕೃತಿಯನ್ನು ಅರಿತು, ಅದರ ಅಂಶಗಳನ್ನು ಪ್ರತಿನಿಧಿಸುವಂಥ ತನ್ನ ಭಾಷೆಯ, ಸಂಸ್ಕೃತಿಯ ಅಂಶಗಳನ್ನು ಬಳಸಿಕೊಂಡು ಹೊಸ ನಿರ್ಮಿತಿಯೊಂದನ್ನು ರೂಪಿಸುತ್ತಾನೆ. ಪರಿಪೂರ್ಣತೆಯ ಅಪೇಕ್ಷೆಯು ಅನುವಾದದ ಮೂರನೇ ಘಟ್ಟಕ್ಕೆ ಪ್ರಚೋದಚನೆ ಒದಗಿಸುತ್ತದೆ. ಅನುವಾದದ ಅತ್ಯುನ್ನತ ಹಂತದಲ್ಲಿ ಮೂಲ ಪಠ್ಯ ಮತ್ತು ಅನುವಾದಗಳ ಐಕ್ಯದ ಸಾಧನೆ ಪರಮೋದ್ದೇಶವಾಗಿರುತ್ತದೆ. ಅನುವಾದಿತ ಪಠ್ಯವು ಆಕರ ಪಠ್ಯದ ಬದಲಾಗಿ ಅಲ್ಲ. ಅದರ ಸ್ಥಾನದಲ್ಲಿ ಹೊಸ ಅಸ್ತಿತ್ವವನ್ನು ಪಡದುಕೊಳ್ಳುತ್ತದೆ. ಈ ಬಗೆಯ ಭಾಷಾಂತರವು ಭಾಷಾಂತರಕಾರನಿಂದ ಸಂಪೂರ್ಣ ನಿಷ್ಠೆ ಬಯಸುತ್ತದೆ. ಸಂಸ್ಕೃತ-ಕನ್ನಡ ಅನುವಾದ ಮೂರನೆಯ ಘಟ್ಟದಲ್ಲಿ ನಡೆಯುತ್ತದೆ ಎನ್ನುತ್ತಾರೆ. ಗಯಟೆ ಇಲ್ಲಿ ಕನ್ನಡ-ಸಂಸ್ಕೃತ ಐಕ್ಯತೆ ಸಾಧಿಸುತ್ತದೆ. ಸಂಪೂರ್ಣ ನಿಷ್ಠೆಯೊಡನೆ ಉದ್ದಿಷ್ಟ ಭಾಷೆ ಹೊಸ ಅಸ್ತಿತ್ವ ಪಡೆದುಕೊಂಡಿದೆ. ಈ ತತ್ವ ತನ್ನ ನಿಷ್ಠೆಯನ್ನು ಸಾಧಿಸಿದೆ. ಭಾಷಾಂತರಕಾರನ ಮುಂದಿರುವ ಸಮಸ್ಯೆಯೆಂದರೆ ರೀತಿಯ ಅಥವಾ ಶೈಲಿಯ ಅವಕಾಶಕ್ಕೆ ಸಂಬಂಧಿಸಿದ್ದು. ಈ ತೊಡಕನ್ನು ಶ್ರೀಮಾನ್ ಡಿ.ವಿ.ಜಿ. ಯವರು ಹೀಗೆ ಹೇಳುತ್ತಾರೆ. ''ಪ್ರತಿಯೊಂದು ಭಾಷೆಯಲ್ಲಿಯೂ ಮಾತಿಗೆ ಎರಡು ತರಹದ ಶಕ್ತಿಗಳಿರುತ್ತವೆ. ಒಂದು ಕಿವಿಯನ್ನೊಲಿಸಿಕೊಳ್ಳುವುದು, ಇನ್ನೊಂದು ಬುದ್ಧಿಯ ಮುಂದೆ ವಸ್ತುಗಳನ್ನು, ಭಾವಗಳನ್ನು ಚಿತ್ರಿಸುವುದು. ಈ ಶ್ರವಣಾಕರ್ಷಣೆ ಮತ್ತು ಅರ್ಥಬೋಧನೆಯೆಂಬ ಶಕ್ತಿಗಳೆರಡೂ, ಒಟ್ಟಿಗೆ ಯಾವ ಎರಡು ಭಾಷೆಗಳ ಮಾತುಗಳಿಗೂ ಒಂದೇ ಸಮನಾಗಿರುವುದಿಲ್ಲ. ಭಾಷೆಗಳಲ್ಲಿಯೂ ಇದೇ ತೆರದ ಸ್ಥೂಲ ಸದೃಶತೆಯೂ ಸೂಕ್ಷ್ಮ ವಿಷಮತೆಯೂ ಅವುಗಳ ಸಹಜ ಲಕ್ಷಣವಾಗಿ ಅನಿವಾರ್ಯವಾದುಗಳಾಗಿ ಕಾಣಬರುತ್ತವೆ. ಈ ಕಾರಣದಿಂದ ಒಂದು ಭಾಷೆಗೆ ಇನ್ನೊಂದು ಭಾಷೆಯನ್ನು ಬಗ್ಗಿಸುವ ಪ್ರಯತ್ನವು ಒಂದಡಿಯಷ್ಟು ದೂರದಲ್ಲಿ ಅರಂಗುಲ ಎಂಟು ಗುಲಗಳಷ್ಟು ಸಾಗಬಹುದೇ ಹೊರತು ಹನ್ನೆರಡಂಗುಳಷ್ಟೂ ಚರಿತಾರ್ಥವಾಗುವುದು ಬಹು ವಿರಳ''.

ಅನುವಾದ ಎದುರಿಸುವ ಸಮಸ್ಯೆಗಳಲ್ಲಿ ರೂಪಾಂತರ, ಅನುವಾದ ಎಂಬುದು ಬಹುಮುಖ್ಯ ಕಥಾವಸ್ತುವನ್ನೂ, ವಾತಾವರಣವನ್ನೂ ಬದಲಿಸಿ ರೂಪಾಂತರ ಮಾಡಿದರೆ, ಮೂಲದ ಸೊಗಡು ಮಾಡ ಲಾರದು. ಅದಕ್ಕೆ ಅನುವಾದದ ಶ್ರೇಯಸ್ಸು ದೊರೆಯುವುದಿಲ್ಲ. ಸ್ವತಂತ್ರ ಕೃತಿಯ ಆದ್ಯತೆಯೂ ಇರುವುದಿಲ್ಲ. ರೂಪಾಂತರಗಳು ಕನಿಷ್ಠವೆಂಬ ವಿಚಾರ ಸಮಂಜಸವಲ್ಲ. ಆದರೆ ಮೂಲದ ಸಮಾಜ ರೂಪವೊಂದನ್ನು ಬದಲಿಸಿ, ಸಂವಿಧಾನ ಪಾತ್ರ ರಚನೆ ಮುಂತಾದವುಗಳನ್ನು ಇದ್ದಂತೆ ಅನುವಾದಿಸುವ ರೂಪಾಂತರ ಪರಿಣಾಮಕಾರಕವಾಗುತ್ತದೆ. ಒಳ್ಳೆಯ ರೂಪಾಂತರಕ್ಕಿಂತ ಒಳ್ಳೆಯ ಭಾಷಾಂತರವೇ ಮೂಲ ಗ್ರಂಥಕ್ಕೆ ನ್ಯಾಯವನ್ನು ಒದಗಿಸಬಲ್ಲದು ಎಂಬ ಅಭಿಪ್ರಾಯ ಈ ಕಾಲದ ಅನುವಾದಕರಲ್ಲಿ ಕಂಡುಬರುತ್ತದೆ.

## ಚಾರಿತ್ರಿಕ, ಧಾರ್ಮಿಕ, ಆಧ್ಯಾತ್ಮಿಕ ಗುರುತಿಸಿಕೊಳ್ಳುವಿಕೆ :

ಅನುವಾದಕ್ಕೆ ಪ್ರೇರಣೆ ಒಂದು ಸಂಕೀರ್ಣ ಪ್ರಕ್ರಿಯೆ. ಅನುವಾದಕನ ಹಿನ್ನೆಲೆ ಪ್ರಭಾವ, ಉದ್ದಿಷ್ಟ ಕಾಲದ ಅಗತ್ಯ ಇವೆಲ್ಲಾ ಈ ಅನುವಾದದ ಹಿಂದೆ ಅಡಗಿರಬಹುದು. ಜನರ ಮನದಾಳದಲ್ಲಿ ಅಂತಸ್ತವಾಗಿ ಉಳಿದ ಸಂಸ್ಕೃತ ಭಾಷೆ ಸಾತತ್ಯ ಸಾಧಿಸಿಕೊಳ್ಳಬೇಕಾಗಿತ್ತು. ಸಾತತ್ಯ ಸಾಧನೆಗೆ ಲೇಖನ ಸಧ್ಯದ ಭಾಷೆಯಲ್ಲಿ ನೇಯ್ಗೆಯಾಗಿ ಪರಂಪರೆಯನ್ನು ಸ್ವೀಕರಿಸುವ ಜೊತೆಗೆ ಅನುಭವದ ಹೊಸ ವಲಯಗಳನ್ನು ದಕ್ಕಿಸಿಕೊಳ್ಳಬೇಕು ಅಥವಾ ಸಂಸ್ಕೃತ ಭಾಷೆ ತನ್ನನ್ನು ಸಜೀವವಾಗಿರಿಸಿಕೊಳ್ಳುವಲ್ಲಿ ಪರಂಪರೆಯ ಎಳೆಯನ್ನು ಹೊಸ ದೃಷ್ಟಿಕೋನದೊಡನೆಯ ನೇಯ್ಗೆಯಲ್ಲಿ ಪಾಲ್ಗೊಳ್ಳುತ್ತಿತ್ತು. ಈ ಅವಕಾಶವನ್ನು ಅಂದಿನ ವಿದ್ಯಾವಂತರು ಅನುವಾದ ಸಾಹಿತ್ಯದ ಚೌಕಟ್ಟನ್ನು ರೂಪಿಸಿಕೊಳ್ಳುವಲ್ಲಿ ಬಳಸಿಕೊಂಡರು. ಸಾಮಾನ್ಯವಾಗಿ ಈ ವರ್ಗ ಮೇಲ್ವರ್ಗವಾಗಿರುತ್ತಿತ್ತು. ಈ ವರ್ಗದ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಅಂದಿನ ಸಾಹಿತ್ಯ ಬೆಳೆದುಕೊಳ್ಳುತ್ತಿತ್ತು. ರಾಜ ಭಾಷೆಯಾಗಿ, ಅಭಿಜಾತ ಕಲೆ, ಭಾಷೆಯೊಂದಕ್ಕೆ ಪ್ರೇರಕವಾಗಿದ್ದ ಸಂಸ್ಕೃತ ಸಾಂಸ್ಕೃತಿಕ ಭಾಷೆಯಾಗಿ ಜನಮನ್ನಣೆಗಳಿಸಿತ್ತು. ಇನ್ನು ಸಾಮಾನ್ಯ ವರ್ಗದ ಹಿತಾಸಕ್ತಿ ರಂಗ ಭೂಮಿಯ ಕಡೆಗೆ ಇತ್ತು. ರಂಗಭೂಮಿಯ ಅಸ್ತಿತ್ವಕ್ಕೆ ಬೇಕಾದ ನಾಟಕಗಳನ್ನು ಸಾಹಿತ್ಯ ಒದಗಿಸುತ್ತಿತ್ತು. ಹಾಗಾಗಿ ಈ ಎರಡೂ ಅಂಶಗಳು ಪರಸ್ಪರ ಪೂರಕ ಪ್ರೇರಕ ಅಂಶಗಳಾಗಿ ಅನುವಾದಕರನ್ನು ಸೆಳೆದಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಬೀಜ ವೃಕ್ಷ ನ್ಯಾಯದಂತೆ ಈ ಎರಡೂ ನೆಲೆಗಳು ಅನುವಾದದ ತಾತ್ವಿಕತೆಯನ್ನು ರೂಪಿಸಿವೆ.

ಅಂದಿನ ಅನುವಾದಕರ ಧೋರಣೆಗೆ ಪ್ರೇರಕ ಅಂಶಗಳನ್ನು ಜಿ. ಎಚ್. ನಾಯಕ ಅವರು ಹೀಗೆ ಹೇಳುತ್ತಾರೆ. ''ನಮ್ಮ ಆತ್ಮಾಭಿಮಾನವನ್ನು, ಆತ್ಮ ಪ್ರತ್ಯಯವನ್ನು, ಮೆರೆಯುವ ಚೈತನ್ಯ ಸೆಲೆಗಳನ್ನು ನಮ್ಮ ಪ್ರಾಚೀನ ಬದುಕಿನ ಸಂದರ್ಭದಲ್ಲಿ ಗುರುತಿಸಿ, ಚಾರಿತ್ರಿಕ, ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಹಕ್ಕಿನ ವಾರಸುದಾರಿಕೆಯಿಂದ ತಿರುಗಿ, ಪಡೆಯುವ ಧೋರಣೆ ರಾಷ್ಟ್ರ ಜೀವನದಲ್ಲಿ ತೋರಿತು. ಜೊತೆಗೆ ಇಂಗ್ಲೀಷಿನ ರೊಮ್ಯಾಂಟಿಕ್ ಮನೋಭಾವವೂ ಈ ಕನಸುಗಾರಿಕೆಗೆ ಪೋಷಕವಾಗಿಯೇ ಇತ್ತು''. ಹಾಗಾಗಿಯೇ ಈ ಕಾಲಕ್ಕೆ ಚಾರಿತ್ರಿಕ, ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಪುನರ್ನಿರ್ವಚಿಸುವ ಬಗೆಯೊಂದು ಕಾಣಿಸಿಕೊಂಡಿತು. ಕಳೆದು ಹೋದದುದನ್ನು ಮತ್ತೆ ಮರಳಿ ಪಡೆಯುವ, ಮತ್ತೆ ಪುನಃ ಪ್ರಸ್ತಾಪಿಸುವ ಸಂವೇದನೆಗಳ ಅನುಭವದ ಮೊತ್ತ ಈ ಪ್ರಕ್ರಿಯೆಯಲ್ಲಿ ಕಾಣಿಸಿಕೊಂಡಿದೆ. ಈ ಬಗೆಯ ಪ್ರತ್ಯಭಿಜ್ಞಾನ ಕ್ರಿಯೆಯಲ್ಲಿ ಅನುವಾದ ಮೂಡಿಬಂದಿದೆ.

ಅಭಿವ್ಯಕ್ತಿಗೆ ಹೊಸ ಮಾರ್ಗವನ್ನು ಹುಡುಕುವುದು ತಪ್ಪಲ್ಲ, ಸಹಜವಾದದ್ದೇ. ಆದರೆ ಹಾಗೆ ಹುಡುಕ ಹೊರಟಿದ್ದು ಏಕೆ?, ಅಂತರಂಗದ ಹೋರಾಟವೇ?, ಆಸಕ್ತಿಗಳ ಸಂಘರ್ಷಣೆಯೇ?, ಭಾಷೆಯಲ್ಲಿ ಹೊಸ ಕಸುವನ್ನು ಮೂಡಿಸಬೇಕೆಂಬ ಕಳಕಳಿಯೇ?, ಸಂಕೀರ್ಣವಾದ ಬದುಕಿನ ಆಗು-ಹೋಗುಗಳಿಗೆ ಮೂಡುತ್ತಿರುವ ಹೊಸ ಹೊಸ ಪ್ರಶ್ನೆಗಳಿಗೆ ಹೊಸ ರೀತಿಯ ಉಕ್ತಿ ಬೇಕು ಎಂಬ ತಡಕಾಟವೇ? ಎಂಬುದು ಆ ಕಾಲಕ್ಕೆ ಬಂದ ಅನುವಾದಗಳ ಹಿಂದಿರುವ ಪ್ರಶ್ನೆ. ಈ ಪ್ರಶ್ನೆಯನ್ನು ಅವಲೋಕಿಸಿದಾಗ ಚಿಂತನೆ ಅರ್ಥವಾಗುತ್ತದೆ. ಅಂದಿನ ಅನುವಾದಗಳು ಬಳಸಿಕೊಂಡ ಭಾಷೆ ಸಂಸ್ಕೃತ, ಬಂಗಾಲಿ, ಇಂಗ್ಲೀಷ್ ಇತರ ಭಾಷೆಗಳಿಂದ ಅನುವಾದಗಳು ಬಂದರೂ, ಸಂಸ್ಕೃತ ಭಾಷೆಯಿಂದಾದ ಕೃತಿಗಳ ಸಂಖ್ಯೆ ಹೆಚ್ಚಾಗಿತ್ತು. ಕಾರಣ ಸಂಸ್ಕೃತ ಅಂದು ರಾಷ್ಟ್ರೀಯ ಭಾಷೆಯಾಗಿತ್ತು. ರಾಷ್ಟ್ರೀಯತೆಯ ಪ್ರಶ್ನೆ ಹರಳುಗಟ್ಟುತ್ತಿರುವ ಆ ಕಾಲಕ್ಕೆ ಇದು ರಾಷ್ಟ್ರಾಭಿಮಾನದ ಪ್ರತೀಕವೆನಿಸಿತ್ತು. ಇದನ್ನು ಕುರಿತೇ ಜಿ.ಎಸ್. ಶಿವರುದ್ರಪ್ಪ ಅವರು ಹೀಗೆ ಹೇಳುತ್ತಾರೆ. ''ಭಾರತೀಯ ಸಾಹಿತ್ಯ ಎಂದರೆ; ಯಾವುದು ಸಾಹಿತ್ಯ ಅಕಾಡೆಮಿ ಬಹುಕಾಲದಿಂದ ಪ್ರತಿಪಾದಿಸುವ ಸೂತ್ರವೊಂದು ಇದಕ್ಕೆ ಉತ್ತರ ಕೊಡಲು ಪ್ರಯತ್ನಿಸಿದೆ. ಹಲವು ಭಾಷೆಗಳಲ್ಲಿ ರಚಿತವಾದರೂ ಮೂಲತಃ ಭಾರತೀಯ ಸಾಹಿತ್ಯ ಒಂದೇ ಎನ್ನುವುದು. ಒಂದು ಕಾಲಕ್ಕೆ ಸಂಸ್ಕೃತದಲ್ಲಿ ರಚಿತವಾದ ಸಾಹಿತ್ಯವನ್ನೇ ಅಥವಾ ಸಂಸ್ಕೃತ ಸಾಹಿತ್ಯವನ್ನೇ ಭಾರತೀಯ ಸಾಹಿತ್ಯವೆಂದು ತಿಳಿಯಲಾಗುತ್ತಿತ್ತು. ಹಾಗೆಯೇ ಭಾರತೀಯ ಕಾವ್ಯ ಮಿಮಾಂಸೆ ಎಂಬುದು ಸಂಸ್ಕೃತ ಭಾಷೆಯಲ್ಲಿ ನಡೆದು ಕಾವ್ಯ ಚರ್ಚೆ ಎನ್ನುವ ಅರ್ಥದಲ್ಲೇ ಪ್ರಚಲಿತವಾಗಿತ್ತು'' ಎನ್ನುತ್ತಾರೆ.

ಒಂದು ಗ್ರಹಿಕೆಯ ಪ್ರಕಾರ ಪ್ರಧಾನ ಸಂಸ್ಕೃತಿಯ ಅಂಶಗಳು ಮಾರ್ಗದ ಪರಿಭಾಷೆಯಲ್ಲಿ ಕಾಣಿಸಿಕೊಳ್ಳುತ್ತವೆ. ಮಾರ್ಗವೆಂದರೆ ಶೈಲಿಕೃತವಾದ ನಿಯಮಬದ್ಧ, ಛಂದೋಬದ್ಧ ನಡವಳಿಕೆಯನ್ನು ಸೂಚಿಸುತ್ತದೆ. ಒಂದು ನಿಯಮಬದ್ಧವಾದ ರಚನಾಕ್ರಮವನ್ನು ಭೇದಿಸುವ ಮೂಲಕ ಕನ್ನಡ ಸಾಹಿತ್ಯವು ತನ್ನ ಅನನ್ಯತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದೆ. ಅದು ಎಷ್ಟರಮಟ್ಟಿಗೆ ಎಂಬುದನ್ನು ಡಿ. ಆರ್. ನಾಗರಾಜ್ ಅವರು ಹೇಳುತ್ತಾರೆ. ಸಂಸ್ಕೃತಿಯೊಂದು ಇನ್ನೊಂದನ್ನು ಭೇಟಿಯಾದಾಗ ನಿರಂತರವಾಗಿ ತನ್ನತನವನ್ನು ಉಳಿಸಿಕೊಳ್ಳುವ ಪ್ರಯತ್ನದ ಅನ್ಯದಿಂದ ಕಲಿತೂ ಭಿನ್ನವಾಗುವ ದ್ವಂದ್ವದಲ್ಲಿ ನಾವು ಕಾಣುವುದು ಇವೇ ಪ್ರಯತ್ನವನ್ನು' ಎಂದು ಅರ್ಥಾತ್ ನವೋದಯ ಸಂದರ್ಭದಲ್ಲಿ ಉಂಟಾದ ಭಾಷೆಯ ಬದಲಾವಣೆಯ ಪರಿಕಲ್ಪನೆ ಕಾವ್ಯದ ಬಗೆಗಿನ ನಿಲುವುಗಳು ಕೇವಲ ಭಾರತೀಯ ಸಂಸ್ಕೃತಿಯ ಅನನ್ಯತೆಯನ್ನು ಉಳಿಸಿಕೊಂಡಿವೆ ಎಂಬು ನಿಲುವಿನಲ್ಲಿ ಅಂದಿನ ಅನುವಾದಿತ ಕೃತಿಗಳ ಚರ್ಚೆ ಪ್ರಾರಂಭವಾಗುತ್ತದೆ (ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ).

ಅನುವಾದ ಪ್ರಕ್ರಿಯೆಯು ವಿಮರ್ಶೆಯ ಹಾಗೆ, ಮೂಲಕೃತಿಗಳ ಓದು ಮತ್ತು ಚಿಂತನೆ ಈ ಪ್ರಕ್ರಿಯೆಯ ಮೂಲದ್ರವ್ಯ. ಪ್ರಸಕ್ತ ಚರ್ಚೆ ಮೂಲಕೃತಿಗಳ ಓದು ಮತ್ತು ಚಿಂತನಾ ಕ್ರಮವನ್ನು ಅಳವಡಿಸಿಕೊಳ್ಳುವ ಅನುವಾದಕನ ಜಾಣ್ಮೆ ಇಲ್ಲಿ ಮುಖ್ಯ ಭಾರತೀಯರ ಬದುಕು ಸಾಹಿತ್ಯ ಮೊದಲಿನಿಂದ ಧಾರ್ಮಿಕವಾದದ್ದೆ, ಧರ್ಮದ ನೆಲೆ ಸಾಹಿತ್ಯವನ್ನು ಹಿತವಾಗಿಸಿದ್ದು ಮಾತ್ರವಲ್ಲ. ತತ್ಕಾಲೀನ ಜೀವನದ ಸಾಕ್ಷ್ಯವನ್ನಾಗಿಸಿತು ಕೂಡ ಸಾಹಿತ್ಯದಲ್ಲಿ ಆಯಾಯ ಕಾಲದ ಬದುಕಿನ ಮೌಲ್ಯಗಳು ಪ್ರತಿಬಿಂಬಿತವಾಗಿದ್ದರೂ, ಎಲ್ಲದಕ್ಕೂ ಧಾರ್ಮಿಕತೆಯ ಕವಚವಿದ್ದೇ ಇದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಈ ತಾತ್ವಿಕತೆಯೇ ಜೀವಾಳವಾಗಿತ್ತೆಂದರೆ ಆಶ್ಚರ್ಯವೇನಿಲ್ಲ.

ಅಂದಿನ ಅನುವಾದಿತ ಸಾಹಿತ್ಯ ವಸಾಹತುಶಾಹಿ ಅನುಭವದಿಂದಾಗಿ ಮತ್ತು ಆಧುನೀಕರಣ ದಿಂದಾಗಿ ನಶಿಸಿ ಹೋಗುತ್ತಿರುವ ಭಾಷೆ ಮತ್ತು ಜನಾಂಗೀಯ ಸ್ಮೃತಿಗಳನ್ನು ಜೀವಂತವಾಗಿ ಉಳಿಸುವ ಪ್ರಯತ್ನದಿಂದ ಕೂಡಿದೆ. ಒಟ್ಟು ಸಾಹಿತ್ಯ ಸೃಷ್ಟಿ ವಸಾಹತುಶಾಹಿ ಅನುಭವದ ಆಘಾತಕ್ಕೆ ದೇಶಿಯ ಸಂವೇದನೆ ತೋರಿದ ಮಹತ್ವಪೂರ್ಣ ಪ್ರತಿಕ್ರಿಯೆಯನ್ನು ದಾಖಲಿಸುತ್ತದೆ. ಅನುವಾದದ ಶೈಲಿ ಆಯಾ ಕಾಲಘಟ್ಟದಲ್ಲಿ ತನ್ನದೇ ಆದ ಅಭಿವ್ಯಕ್ತಿಯನ್ನು ಮಂಡಿಸುತ್ತದೆ. ಇದೇ ಅನುವಾದಕರ ಧೋರಣೆ ಯಾಗಿರುವುದು ಒಂದು ಬಗೆಯಲ್ಲಿ ಕಾಕತಾಳೀಯ ಕೂಡ. ಅನುವಾದದ ಲಾಭ ಲೇಖಕರು, ಓದುಗರಿಗಷ್ಟೇ ಅಲ್ಲ. ಒಂದು ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೂ ಉಪಯುಕ್ತವಾದದ್ದು. ಇದು ವಸಾಹತುಶಾಹಿ ಕಾಲಘಟ್ಟದ ಅನುವಾದಿತ ಕೃತಿಗಳ ಹಿಂದಿರುವ ತಾತ್ವಿಕತೆ "ಸ್ವತಂತ್ರ ಕಾವ್ಯವನ್ನು ಬರೆಯಬಲ್ಲ ಮಹನೀಯರು ಎಲ್ಲಿಯೋ ಕೆಲವರು. ಮಿಕ್ಕವರಿಗೆ ಭಾಷಾಂತರವನ್ನು ಮಾಡಿ ಉತ್ತಮ ಸಾಹಿತ್ಯವನ್ನು ತಮ್ಮ ದೇಶದಲ್ಲಿ ನಾಟಿ ಹಾಕುವುದಕ್ಕಿಂತ ಬೇರೆ ಘನವಾದ ಕಾರ್ಯ ಯಾವುದು ? ಎಂಬುದಾಗಿ ಕಾರ್ಲೈಲ್ ಒಂದುಕಡೆ ಹೇಳಿರುತ್ತಾನೆ.

ಕೈಗೆ ಸಿಕ್ಕುವ ಕೃತಿಗಳನ್ನು ಅನುವಾದಿಸುವುದಕ್ಕಿಂತ, ಒಂದೇ ಕೃತಿಯನ್ನು ಅನೇಕರು ಅನುವಾದಿ ಸುವುದಕ್ಕಿಂತ ಒಬ್ಬ ಕೃತಿಕಾರನನ್ನು ತಮ್ಮ ಭಾಷೆಯಲ್ಲಿ ಪಡಿಮೂಡಿಸುವುದು. ವೈಶಿಷ್ಟ್ಯ ಪೂರ್ಣವಾದ ಕೆಲಸ. ಇದನ್ನು ಬಿ. ಎಂ.ಶ್ರೀ.ಯವರು ಹೀಗೆ ಹೇಳಿದ್ದಾರೆ. 'ಜೊವೆಟ್ ಪ್ಲೇಟೋವಿಗೆ ಹೀಗೆ ತನ್ನ ಜೀವ ಮಾನವನ್ನು ಅರ್ಪಣ ಮಾಡಿದನು. ಕೀರ್ತಿಶೇಷರಾದ ವೆಂಕಟಾಚಾರ್ಯರು ಬಂಕಿಂ ಚಂದ್ರನಿಗೆ ತಮ್ಮ ಸರ್ವಶಕ್ತಿಯನ್ನು ವಿನಿಯೋಗಿಸಿದರು. ಭಾಷಾಂತರ ಕೀಳು ಕೆಲಸವಲ್ಲ. ಸುಲಭವಾದ ಕೆಲಸವೂ ಅಲ್ಲ. ನಿರರ್ಥಕವಾದ ಕೆಲಸವೂ ಅಲ್ಲ. ಒಟ್ಟಿನ ಮೇಲೆ ಕನ್ನಡ ಸಾಹಿತ್ಯವೆಲ್ಲಾ ಸಂಸ್ಕೃತ ಸಾಹಿತ್ಯದ ಭಾಷಾಂತರವಲ್ಲವೇ ? ಈ ರೀತಿಯಾದ ನಿಲುವಿನಿಂದ ಅಂದಿನ ಅನುವಾದಗಳು ಮೂಡಿಬಂದಿವೆ.

ಪೂರ್ವ ನಿಶ್ಚಿತವಾದ ಸಿದ್ಧಾಂತಗಳಿಂದ ಬರವಣಿಗೆ ಸಾಧಿಸುವುದಿಲ್ಲ. ಸಾಹಿತ್ಯದಲ್ಲಿ ಒಂದು ಅನುಭವ ತನ್ನ ಅರ್ಥವಂತಿಕೆಯನ್ನು ಸಹಜವಾಗಿ ಪ್ರಕಟಿಸಬೇಕೆಂಬುದು ಸಹಜ. ಪೂರ್ವ ಸಿದ್ಧಾಂತ ದೊಡನೆ ಹೊರಡುವ ಅನುಭವದ ಬರವಣಿಗೆ ಕೂಡ ಕೃತಕತೆಯನ್ನು ತಂದೊಡ್ಡುತ್ತದೆ. ಹಾಗಾಗಿ ಅನುವಾದಿತ ಕೃತಿಗಳಲ್ಲಿ ಈ ಬಗೆಯಾದ ಸಿದ್ಧಾಂತವನ್ನು ನಾವು ನೋಡಲು ಸಾಧ್ಯವಿಲ್ಲ. ಸಾಂಸ್ಕೃತಿಕ ಕಾರಣಗಳಿಂದ ಮೂಡಿಬಂದ ಈ ಅನುವಾದಗಳನ್ನು ಸಾಹಿತ್ಯಿಕ ದೃಷ್ಟಿ ಕೋನದಲ್ಲಿ ನೋಡಲು ಮಾತ್ರ ಸಾಧ್ಯ. ಅನುವಾದಕರು ಆ ಕಾಲಕ್ಕೆ ಬೆಳೆಸಿಕೊಂಡ ವೈಚಾರಿಕತೆಯಲ್ಲಿ ಎರಡು ಅಂಶಗಳು ವ್ಯಕ್ತವಾಗುತ್ತವೆ. ಮೊದಲನೆಯದು ಜಗತ್ತಿನ ಮೇಲೆ ಸಾಹಿತ್ಯಕಾರನ ಹೃದಯದ ಅಧಿಕಾರವೆಷ್ಟು?, ಎರಡನೆಯದು ಅದರಲ್ಲಿ ಎಷ್ಟುಭಾಗ ಸ್ಥಾಯಿಯಾದ ಆಕಾರದಲ್ಲಿ ವ್ಯಕ್ತವಾಗಿದೆ ಎಂಬುದು. ಈ ಎರಡೂ ಅಂಶಗಳು ಅಂದಿನ ಅನುವಾದ ಪ್ರಕ್ರಿಯೆಯನ್ನು ನಿಯಂತ್ರಿಸಿದೆ. ಉದಾ: ಕಾಳಿದಾಸನು ಹೇಗೆ ಭಾರತೀಯರಲ್ಲಿ ತನ್ನನ್ನು ಪ್ರತಿನಿಧಿಸಿಕೊಂಡಿದ್ದಾನೆ ಎಂಬುದರ ಮೇಲೆ ಅಂದಿನ ಸಂಸ್ಕೃತ ಸಾಹಿತ್ಯ ಹೇಗೆ ಭಾರತೀಯರ ಮೇಲೆ ತನ್ನ ಹತೋಟಿಯನ್ನಿಟ್ಟುಕೊಂಡಿದೆ ಎಂಬೆಲ್ಲಾ ವಿಚಾರಗಳು ಅಂದಿನ ಅನುವಾದಕರ ಮುಂದೆ ಸುಳಿದಾಡಿರಲು ಸಾಕು.

## ಪರಿಪೂರ್ಣತೆಯ ತುಡಿತ :

ಅನುವಾದವು ಕ್ಲಿಷ್ಟವಾದ ಕ್ರಿಯೆ. ಈ ವಿಚಾರದಿಂದಲೇ ಪ್ರತಿಯೊಂದು ಭಾಷೆಯ ಕೃತಿಯು ಅನುವಾದಕನಿಗೆ ಪ್ರತಿರೋಧವನ್ನೊಡ್ಡುವುದು. ''ಪದದೊಳವಳವರ್ಥ ಮಾತ್ರ ಅರ್ಥ ನನ್ನದೆನಿಸಿತು'' ಎಂಬ ಮಾತಿನಂತೆ ಅನುವಾದದ ಸ್ವಾರಸ್ಯವನ್ನು ಕಳೆದುಕೊಳ್ಳುವ ಸಾಧ್ಯತೆ ಇರುತ್ತದೆ. ಯಾವುದೇ ಭಾಷೆಯಲ್ಲಿನ ಒಂದು ಶ್ರೇಷ್ಠ ಕೃತಿಯ ಅನುವಾದಗಳು ಬಹಳಷ್ಟು ಬರುವ ಕಾರಣವೇನೆಂದರೆ; ಪರಿಪೂರ್ಣತೆಯತ್ತ ಮುನ್ನಡೆಯಬೇಕೆಂಬ ಹಂಬಲ ಹಾಗೂ ಭಾಷೆಯ ಪರಿವರ್ತನಾಶೀಲತೆ. ಒಂದಕ್ಕಿಂತ ಹೆಚ್ಚು ಅನುವಾದಗಳನ್ನು ಸ್ವಾಗತಿಸುತ್ತದೆ. ಕಾಳಿದಾಸನ ಶಾಕುಂತಲವನ್ನು ಕುರಿತಂತೆ ಅನೇಕ ಅನುವಾದಗಳು ಬಂದಿವೆ. ಈ ಅನುವಾದಕ್ಕೆ ಬಸವಪ್ಪಶಾಸ್ತ್ರಿಗಳು ಪಾಂಡಿತ್ಯಪೂರ್ಣ ಚೌಕಟ್ಟನ್ನು ಹಾಕಿದರೆ, ಚುರುಮುರಿ ಶೇಷಗಿರಿರಾಯರು ಕನ್ನಡದಲ್ಲಿ ಶಾಕುಂತಲ ಬೇಕಿತ್ತೆಂಬುದಾಗಿ ತ್ವರಿತಗತಿಯಲ್ಲಿ ಮುಗಿಸಿದೆ ಎಂದಿದ್ದಾರೆ. ಇಷ್ಟಾದರೂ ರೈನಾಪುರವರು ತಾವೇಕೆ ಇಷ್ಟು ಅನುವಾದಗಳಿದ್ದಾಗಲೂ ಮತ್ತೆ ತಾವೇಕೆ ಈ ಅನುವಾದ ಕೈಗೆತ್ತಿಕೊಳ್ಳುತ್ತಿರುವೆ ಎಂಬಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. (೧) ಚುರಮುರಿಯವರ ನಾಟಕದಲ್ಲಿಯ ಪದಗಳು ನೆಟ್ಟಗಿದ್ದರೂ ಅದರೊಳಗಿನ ಕವಿತೆಗಳನ್ನು ಓದಲಿಕ್ಕೆ ಸಾಹಿತ್ಯ ಪ್ರೇಮಿಗಳಿಗೆ ಮನಸ್ಸಾಗುವುದಿಲ್ಲ. ಯಾಕೆಂದರೆ ಅವುಗಳಲ್ಲಿ ವ್ಯಾಕರಣಕ್ಕೂ, ಛಂದಸ್ಸಿಗೂ ವಿರುದ್ಧವಾದ ನೂರಾರು ಪ್ರಯೋಗಗಳಿರುವವು.

(೨) ಬಸವಪ್ಪಶಾಸ್ತ್ರಿಗಳ ಶಾಕುಂತಲ ನಾಟಕವು ಸರ್ವಮಾನ್ಯವಾಗಿರುವುದು. ಆದರೆ ಅದರಲ್ಲಿ ಕಂದ ಪದ್ಯಗಳೇ ವಿಶೇಷವಾಗಿರುವುದರಿಂದ ಓದುಗರಿಗೆ ಬೇಸರಿಕೆ ಬರುವಂತಿರುವುದು.

(೩) ಸೂಲಿಬೆಲೆ ಡಿ.ಶ್ಯಾಮರಾಯರ ಶಾಕುಂತಲ ನಾಟಕವು ನಾಟಕ ಮಾಡುವ ಜನರಿಗಾಗಿಯೇ ಬರದಂತೆ ತೋರುವುದು. ಅದು ಸಂಕ್ಷಿಪ್ತವಾಗಿರುವುದರಿಂದ ಅವರಲ್ಲಿ ಸರ್ವಸ್ವಾರಸ್ಯವೂ ಬಂದಿರುವುದಿಲ್ಲ. ಮೇಲಾಗಿ ಶ್ಯಾಮರಾಯರ ಕವಿತೆಗಳು ಅಷ್ಟೇನು ಮೋಹಕವಾಗಿಲ್ಲ.

ಅಂದರೆ ಪರಿಪೂರ್ಣತೆ ದೊರಕದೇ ಇರುವುದು ಇನ್ನಷ್ಟು ಅನುವಾದಗಳಿಗೆ ಕಾರಣವಾಗುತ್ತದೆ ಎಂಬ ವಿಚಾರ ಈ ಮಾತುಗಳಿಂದ ದೃಢಗೊಳ್ಳುತ್ತದೆ.

ಕಾವ್ಯದ ಅನುವಾದ ತುಂಬಾ ಕ್ಲಿಷ್ಟ (ಕಾವ್ಯವೂ ನಾಟಕವೇ ಎಂಬರ್ಥದಲ್ಲಿ ಹೇಳಲಾಗಿದೆ). ಅದರಲ್ಲೂ ಕಾಳಿದಾಸನಂಥ ದೊಡ್ಡ ಕವಿಯನ್ನು ಅನುವಾದಿಸುವುದು ಸುಲಭವಲ್ಲ. ಅವನ ನಾದ ಮಾಧುರ್ಯವಂತೂ ಅನುವಾದಕ್ಕೆ ಮೀರಿದ್ದು. ಆದರೂ ಅವನ ಕಾವ್ಯದ ಸವಾಲುಗಳನ್ನು ಕನ್ನಡ ಕವಿಗಳು ಸಾಕಷ್ಟು ಪ್ರತಿಭೆ, ಕೌಶಲಗಳಿಂದ ಎದುರಿಸಿದ್ದಾರೆ. ಕೆಲವೊಮ್ಮೆ ಗೆದ್ದಿದ್ದಾರೆ; ಕೆಲವೊಮ್ಮೆ ಅನಿವಾರ್ಯವಾಗಿ ಸೋತಿದ್ದಾರೆ. ಬೇಂದ್ರೆಯವರು ಈ ವಿಷಯದಲ್ಲಿ ಹೇಳುವ ಮಾತು ಹೆಚ್ಚು ಅರ್ಥಪೂರ್ಣ ಎನಿಸುತ್ತದೆ.

> ''ರಸವತಿಯು ನಿನ್ನ ಸರಸತಿಯು, ಸವಿಗೆ ತುಟಿಮುದ್ದು ಹಾಲು ಜೇನು
> ಕನ್ನಡದೊಳಿಂದು ಕನ್ನಡಿಸಿದಂತೆ ಮೂಡಿರುವಳಿಲ್ಲಿ ತಾನು'' (ಷಷ್ಠಿಲೇಖ, ಪು.೨೯೫).

ಅಂದಿನ ಅನುವಾದಕರು ಕೇವಲ ಸೈದ್ಧಾಂತಿಕವಾಗಿ ಅನುವಾದವನ್ನು ಗ್ರಹಿಸದೇ ಒಬ್ಬ ಕೃತಿಕಾರನನ್ನು ತಮ್ಮ ಭಾಷೆಯವನ್ನಾಗಿಸುವುದು ಎನ್ನುವ ತತ್ವದಿಂದ ಕಾರ್ಯ ತತ್ಪರವಾದವರು. ಮೂಲದ ಕರ್ತೃವಿನ ಭಾವನೆಗೆ ಧಕ್ಕೆಯಾದಂತೆ ಭಾಷೆಯ ವೇಷದಲ್ಲಿ ಅಂತರ ಉಂಟು ಮಾಡಬಹುದೇ ವಿನಃ ಭಾವದಲ್ಲಲ್ಲ. ಭಾವ ಮತ್ತು ಭಾಷೆಗಳೆರಡನ್ನು 'ಪೂಜಾರಿಯ ಕೈಯಲ್ಲಿನ ಗಂಟೆ ಮತ್ತು ಆರತಿ ಬೆಳಗುವ ತಟ್ಟೆಯಂತೆ ಸಾಮರಸ್ಯದಿಂದ ಕಾಯ್ದುಕೊಂಡಿದ್ದಾರೆ. ಇದರಿಂದ ಓದುಗರ ಮನಸ್ಸು ಕೇಂದ್ರಿಕೃತವಾಗಿ ರಸಸ್ಥಿತಿಗೇರುತ್ತವೆ. ಅನುವಾದವನ್ನು 'Kissing through the Screen' ಎಂಬಂತೆ ಆಚರಣೆಗೆ ತಂದಿದ್ದಾರೆ.

ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ವಾಕ್ಯರಚನೆಯಲ್ಲಿ, ನುಡಿಗಟ್ಟುಗಳಲಿ ಬಹಳ ವ್ಯತ್ಯಾಸಗಳಿವೆ. ಸಂಸ್ಕೃತ ಭಾಷೆಯಾದರೂ ಕನ್ನಡಕ್ಕೆ ಬಂದಷ್ಟು ಸುಲಭವಲ್ಲ. ಇಂಗ್ಲೀಷಿಗೆ ಹೋಗಲಾರದು. ಪ್ರಿಯಂವದಾ, ಶಕುಂತಲಾ. ಹೀಗೆ ಪ್ರತಿಯೊಂದು ಶಬ್ದವೂ ಇಂಗ್ಲೀಷ್‌ನಲ್ಲಿ ಅರ್ಥ ವಿವರಣೆಯನ್ನು ಬೇಡುತ್ತವೆ. ಹೀಗಾಗಿಯೇ ಕ್ರಿಸ್ಟೋಫರ್ ಇಷಿರ್‌ವುಡ್ ಹೀಗೆ ಅಭಿಪ್ರಾಯ ಪಡುತ್ತಾನೆ. ಸಂಸ್ಕೃತದಿಂದ ಇಂಗ್ಲೀಷಿಗೆ ಅನುವಾದಿಸುವಾಗ ವಾಕ್ಯ ವಿವರಣೆಯು ಅಗತ್ಯವೆಂದು, ಇಲ್ಲವಾದರೆ ಭಾಷಾಂತರಕಾರನು ಮುಳುಗುತ್ತಿರುವ ಹಡಗಿನಿಂದ ಬಂದ ಕೊನೆಯ ರೇಡಿಯೋ ಸಂದೇಶವನ್ನು ಒಪ್ಪಿಸುವಂತೆ ನೀಡಬಹುದು. ಕನ್ನಡಗರಿಗೆ ಈ ಸಮಸ್ಯೆ ಎದುರಾಗಿಲ್ಲ. ಪ್ರಿಯಾವಾಗಿ ಮಾತನಾಡು

ವವಳು ಪ್ರಿಯಂವದೆ, ಅಸೂಯೆಯಿಲ್ಲದವಳು ಅನಸೂಯೆ ಎಂಬರ್ಥದಲ್ಲಿ ಪಾತ್ರ ಚಿತ್ರಣವಿದೆ. ಕೇವಲ ನಾಮ ನಿರ್ದೇಶನದಿಂದಲೇ ಪಾತ್ರಗಳ ಮೌಲ್ಯವನ್ನು ನಾವು ಕಂಡುಕೊಳ್ಳಬಹುದು. 'ವಾಗರ್ಥ ಪ್ರತಿಪತ್ತಿ'ಯನ್ನು ಹೆಚ್ಚಿನ ರೀತಿಯಲ್ಲಿ ಬೇಡುವ ಅನುವಾದಕನಿಗೆ ಮೂಲ ಕೃತಿಕಾರನಿಗಿಂತ ಸಹೃದಯತೆ ಮೂಲದ್ರವ್ಯವಾಗಿರುತ್ತದೆ'' ಮೂಲಪ್ರತಿಭೆ, ವಿಶಾಲವ್ಯುತ್ಪತ್ತಿ, ಕವಿತಾ ಭ್ಯಾಸಗಳಿಂದ ರಸಪೂರ್ಣ ಕಾವ್ಯ ಹುಟ್ಟುವಂತೆ, ಭಾವಯಿತ್ರಿ ಪ್ರತಿಭೆ, ವಾಗರ್ಥ ಪ್ರಭುತ್ವ ಸಂತತ ಪ್ರಯತ್ನ ಈ ಮೂರರಿಂದ ಅನುವಾದ ಮೂಡುತ್ತದೆ'' ಎನ್ನುತ್ತಾರೆ ಡಾ.ಕೆ. ಕೃಷ್ಣಮೂರ್ತಿ ಹೊಸ ಸೃಷ್ಟಿ ಒಂದು ಸಾಹಿತ್ಯದ ಸಂಪತ್ತಾಗಿರುವಂತೆ ಅನುವಾದದ ಕಾರ್ಯವೂ ಅವಶ್ಯವಾಗಿರುತ್ತದೆ.

ಏಕಸ್ಯ ತಿಷ್ಠತಿ ಕರ್ವೇಗೃಹ ಏವ ಕಾವ್ಯಂ।
ಅನ್ಯಸ್ಯ ಗಚ್ಛತಿ ಸುಹೃದ್ಭವನಾನಿ ಯಾವತ್ ॥

ಅನುವಾದ ಪ್ರಕ್ರಿಯೆಯನ್ನು ಈ ಶ್ಲೋಕ ಅರ್ಥಪೂರ್ಣವಾಗಿಸುತ್ತದೆ. ಒಬ್ಬನ ರಚನೆ ಅವನ ಮನೆಯಲ್ಲಿಯೇ ನಿಲ್ಲುತ್ತದೆ. ಇನ್ನೊಬ್ಬನದು ಅವನ ಗೆಳೆಯನ ಮನೆಯವರೆಗೆ ಹೋಗುತ್ತದೆ. ಆದರೆ ರಸಿಕರ ರಸನಾಗ್ರದಲ್ಲಿ ಚಿರಂಜೀವಿಯಾಗಿ ವಿಶ್ವಯಾತ್ರೆ ಮಾಡುವುದು ಅನುವಾದ ಮಾತ್ರ. ಅನುವಾದಕನು ಮೂಲ ಗಾಂಭೀರ್ಯವನ್ನು ಸಹಜವಿಲಾಸವನ್ನು ಉಳಿಸಿಕೊಳ್ಳಬೇಕಾದರೆ ಸಮ ಸಂಸ್ಕೃತ ಶಬ್ದಗಳ ಸಮಯೋಚಿತ ಬಳಕೆಯಿಂದ, ಸಂಧಿ ಸಮಾಸಗಳ ಜಾಣ್ಮೆಯಿಂದ ಮಾತ್ರ ಯಶಸ್ವಿಯಾಗಬಹುದಾಗಿದೆಂಬುದನ್ನು ದೇವಶಿಖಾಮಣಿ ಆಳಸಿಂಗರಾಚಾರ್ಯರು ಮಹಾಸ್ರಗ್ಧರ ವೃತ್ತದಲ್ಲಿ ರಚಿಸಿರುವ ಶ್ಲೋಕದಲ್ಲಿ ತೋರಿಸಿಕೊಟ್ಟಿದ್ದಾರೆ.

ನರಪಾಲೋಷ್ಣೀಷಟ್ಟಾಂಸುಕಪರಿಮೃಜಿತಾಂಘ್ರಿದ್ವಯರ್ ಸುಶಕ್ತರ ಸ
ಚ್ಚರಿತರ್ ವಾರ್ಧಕ್ಯ ಮಾಂತುಂ ನಿಜನಿಯಮರತರ್ ವೇದಪಾಠ ಪ್ರಗಲ್ಬರ್ ।
ಪರಿತರ್ಪರ್ ಮೂರು ಕಾಲಿಂ ನಡೆವವೊಲಿದು! ದಂಡಾಶ್ರಯರ್ ವಿಪ್ರವೃದ್ಧರ್
ಕರಮಂ ತಂತಮ್ಮ ಶಿಷ್ಯಂಸದೊಳಿರಿಸಿ ಜಿರಾಜೀರ್ಣ ಮತ್ತದ್ವಿಪಂಬೋಲ್ ॥

ಅನುವಾದಕ್ಕೂ, ಶಾಸ್ತ್ರಬದ್ಧ ತತ್ವಕ್ಕೂ ಇರುವ ಸಂಬಂಧ ಎರಡು ವಿಧಗಳಲ್ಲಿ ಚರ್ಚೆಗೊಳಪಡುತ್ತದೆ. ಮೊಲದನೆಯದು ತಾತ್ವಿಕ ಚರ್ಚೆ, ಎರಡನೆಯದು ಸಾಹಿತ್ಯಕ ನಿಲುವು ಅಂದಿನ ಅನುವಾದಕರು ಸಾಹಿತ್ಯಿಕ ನಿಲುವಿನಿಂದ ಅನುವಾದವನ್ನು ಗ್ರಹಿಸಿದ್ದಾರೆಯೇ ವಿನಃ ತಾತ್ವಿಕ ಚರ್ಚೆ ಕಾರಣ ಅನುವಾದ ಮೂಡಿಬಂದುದು ಸಾಂಸ್ಕೃತಿಕ ಒತ್ತಾಸೆಯಿಂದ ತಾತ್ವಿಕ ಚರ್ಚೆ ಅದರ ಅಂತಸ್ತ ಶಕ್ತಿಯಾಗಿ ಗೋಚರಿಸುತ್ತದೆ. ಆ ಹಿನ್ನೆಲೆಯಲ್ಲಿ ತಾತ್ವಿಕ ಜಿಜ್ಞಾಸೆಗೆ ಆಸ್ಪದವಿದೆ. ಸಾಹಿತ್ಯ ಮತ್ತು ತತ್ವಗಳ ಸಂಬಂಧದಲ್ಲಿ ಮೂರು ಬಗೆಯ ವಿಚಾರಗಳನ್ನು ಮಂಡಿಸುವವರನ್ನು ಕಾಣು ತ್ತೇವೆ. ಮೊದಲನೆಯದಾಗಿ. ಸಾಹಿತ್ಯದ ರಸಲೋಕಕ್ಕೆ ತತ್ವಗಳು ಪರಕೀಯ ಎಂದು ಭಾವಿಸುವ ಸಾಹಿತ್ಯ

ಪರವಾದಿಗಳು. ಎರಡನೆಯದಾಗಿ ತತ್ವಶಾಸ್ತ್ರಜ್ಞರು ಯೋಚಿಸುತ್ತಾರೆ. ಸಾಹಿತಿಗಳು ಈ ವಿಚಾರ ಗಳನ್ನು ಬಳಸಿಕೊಳ್ಳುತ್ತಾರೆ ಎಂದು ವಾದಿಸುವ ತತ್ವಶಾಸ್ತ್ರಜ್ಞರು ಯೋಚಿಸುತ್ತಾರೆ. ಸಾಹಿತಿಗಳು ಈ ವಿಚಾರಗಳನ್ನು ಬಳಸಿಕೊಳ್ಳುತ್ತಾರೆ ಎಂದು ವಾದಿಸುವ ತತ್ವಶಾಸ್ತ್ರ ಪರರು, ಮೂರನೆಯದಾಗಿ ; ಸಾಹಿತಿ ತನ್ನ ಭಾಷೆಯ ವಿಶಿಷ್ಟವಾದ ಶೋಧನಾತ್ಮಕ ಬಳಕೆಯಿಂದ ತತ್ವಗಳನ್ನು ಸೃಷ್ಟಿಸುತ್ತಾನೆ'' ಎಂದು ಲೀವಿಸ್‌ನಂತೆ ಭಾವಿಸುವವರು (ಪ್ರಜ್ಞೆ ಮತ್ತು ಪರಿಸರ, ಅನಂತಮೂರ್ತಿ, ಪು.೩೭).

ಮೂರನೆಯ ವಿಚಾರ ಪಂಥದವರು ಅನುವಾದದ ಅನ್ವಯಿಕ ಸಿದ್ಧಾಂತಕ್ಕೆ ಹೆಚ್ಚು ಸ್ಪಂದಿಸುತ್ತಾರೆ. ಅನುವಾದಕ ಶೋಧನಾತ್ಮಕ ಭಾಷಾ ಬಳಕೆಯಿಂದ ತತ್ವಗಳನ್ನು ಸೃಷ್ಟಿಸಿದ್ದಾನೆ ಎಂಬುದು ಈ ಅನುವಾದದ ಚರ್ಚೆಗೆ ಮುಖ್ಯ ವಿಷಯವಾಗಿರುತ್ತದೆ.

ಉದಾ : ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವಾಚಂ ತತೋಭಯಮುದೀರಯೇತ್ ॥

ಎಂಬ ವ್ಯಾಸ ಭಾರತದ ಶ್ಲೋಕವನ್ನು ಕುಮಾರವ್ಯಾಸನು

ನಮಿಸಿ ನಾರಾಯಣನ ನರನ ಪುರುಷೋತ್ತಮನ
ವ್ಯಾಸ ವಾಗ್ದೇವಿಯರ ಬಳಿಕ ಪೇಳ್ದುದು ಜಯವ ॥

ಸ್ನೇಹಂ ದಯಾಂಚ ಸೌಖ್ಯಂ ಅಥವಾ ಜಾನಕೀಮಪೀ ।
ಆರಾಧನಾಯಿ ಲೋಕಾನಾಂ ಮುಂಚತೋ ನಾಸ್ತಿ ಮೇ ವ್ಯಥಾ ॥

ಕಾರುಣ್ಯಮಂ ಸ್ನೇಹವ ಸೌಖ್ಯಮಂ ಮೇಣ್
ರಾಮನೀ ಸೀತೆಯುಮಂ ಬಿಡಲ್ಕೆ
ಕೋರುತ್ತಿಹಂ ನಿಶ್ಚಯದಿಂ ಪ್ರಜಾಚಿ
ತ್ತಾರಾಧನಾರ್ಥಂ ವ್ಯಥೆಯಿಲ್ಲವೆಂಗೆ.

ಅನುವಾದಕನ ಸಮಸ್ಯೆ ಎಂದರೆ ಉದ್ದಿಷ್ಟ ಭಾಷೆಯ ಸ್ವಂತಕೃತಿಯೆಂಬಂತೆ ಭಾಸವಾಗಬಹುದು ಅಥವಾ ಮೂಲ ಸಾಹಿತ್ಯದ ಸಾಂಸ್ಕೃತಿಕ, ಸಾಮಾಜಿಕ ಪರಿಸರಗಳ ವೈಶಿಷ್ಟ್ಯಗಳನ್ನು ಉಳಿಸಿಕೊಳ್ಳಬೇಕೆಂದು ಬೇಡವೇ ? ಎಂಬ ವಿಷಯ ಬರುತ್ತದೆ. ಉದ್ದಿಷ್ಟ ಭಾಷೆಯ ಓದುಗರಿಗೆ ಗ್ರಾಹ್ಯವಾಗುವ ಹಾಗೆ ಬದಲಾಯಿಸಿಕೊಂಡರೆ ಓದುಗ ಅದನ್ನು ಅನುವಾದವೆಂದು ಓದದೇ ತನ್ನ ಭಾಷೆಯ ಕೃತಿಯಂತೆ ಓದುತ್ತಾನೆ. ಇದು ರೂಪಾಂತರವೆನಿಸಿಕೊಳ್ಳುತ್ತದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಮೂಡಿಬಂದ ಅನುವಾದಗಳೆಲ್ಲವೂ ಮೂಲಕೃತಿಯ ಎಲ್ಲಾ ವಿಶಿಷ್ಟತೆಗಳನ್ನು ಶಕ್ತಿಮೀರಿ ಕಾಪಾಡಿಕೊಂಡು ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿವೆ.

ಉದಾ : ಶುಶ್ರೂಷಸ್ವಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನಿ ಜನೇ
ಭರ್ತುರ್ವಿಪ್ರಕೃತಾಪಿರೋಷಣತಯಾಮಾಸ್ಮ ಪ್ರತೀಪಂ ಗಮಃ।
ಭೂಯಿಷ್ಠಂಭವ ದಕ್ಷಿಣಾಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ।

ಪಿರಿಯರ್ ಸೇವೆಗೆಯ್ ಸವತಿಯರ್ಕಳೊಪ್ಪವಯೆಯಂದದಿಂ
ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್।
ಪರಿಜನವಂ ಕರಂ ಸಲಹು ಭಾಗ್ಯದೆಬಾಗಿರು ಪೆಣ್ಗಳಿಂತಿರಲ್
ಪರಿಜನವಂ ಕರಂ ಸಲಹು ಭಾಗ್ಯದೆಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದಿರನ್ವಯ ಕಾವಿ.....

ಇಲ್ಲಿ ನಿಕಟ ಅನುವಾದವಾಗಿದ್ದರೂ ನೇರವಾಗಿ ಓದಿದಾಗ ಅದು ಕನ್ನಡದಂತೆಯೇ ಅನ್ನಿಸುವುದು.

ಮೂಲ ಸಾಹಿತಿಯ ಶೈಲಿಯನ್ನನುಸರಿಸುವುದಕ್ಕೆ ಅನುವಾದಕ ಪ್ರಯತ್ನಿಸಿದರೂ ಎರಡೂ ಭಾಷೆಯ ಜಾಯಮಾನಗಳನ್ನು ಸಮೀಕರಿಸುವುದಕ್ಕೆ ಅಸಾಧ್ಯ ಮೂಲಕ್ಕೆ ಎಷ್ಟೇ ನಿಷ್ಠವಾಗಿದ್ದರೂ ಆತನ ವೈಯಕ್ತಿಕ ಭಾಷಾ ಶೈಲಿಯ ಒಗರು ಅನುವಾದದಲ್ಲಿ ಉಳಿದೇ ಇರುತ್ತದೆ. ಮೂಲಕೃತಿಯ ಉದ್ದೇಶಕ್ಕೆ ಧಕ್ಕೆಯಾಗದಿದ್ದರೆ ಅನುವಾದಕನ ಶೈಲಿಯ ವೈಯಕ್ತಿಕತೆ ಸಹ್ಯವಾಗುತ್ತದೆ.

ಉದಾ: ಪಾತುಂನ ಪ್ರಥಮಂ ವ್ಯವಸ್ಯತಿ ಜಲಂ ಯುಷ್ಮಾಸ್ವಪೀತೇಷು ಯಾ
ನಾದತ್ತೇ ಪ್ರಿಯಮಂಡನಾಪಿ ಭವತಾಂ ಸ್ನೇಹೆನ ಯಾ ಪಲ್ಲವಮ್।
ಆದ್ಯೇ ವಃ ಕುಸುಮ ಪ್ರಸೂತಿಸಮಯೇ ಯಸ್ಯಾ ಭವತ್ಯುತ್ಸವಃ
ಸೇಯಂ ಯಾತಿ ಶಕುಂತಲಾ ಪತಿಗೃಹಂ ಸರ್ವೈರನುಜ್ಞಾಯತಾಮ್॥

ಪತಿಯಾಲಕಿಂದು ಪೋಗುವ ನಿಮ್ಮ ಸಖಿಯೊಳನು
ಮತವ ನೀಡಲಿಬೇಕಾಶ್ರಮ ತರುವರುಗಳಿರಾ ॥ಪಲ್ಲ॥

ಪೊಸಕುಸುಮ ಪ್ರಸವನೆ ಕಂಡತಿ ಸಂತೋಷವ ತಾಳ್ದು।
ಎಸಳುಗಂಗಳೆ ನಿಮ್ಮನೆ ನೋಡುತ ನಿಲ್ಲುವಳು ॥

ಯಾಕೆ ಸಂಸ್ಕೃತಾನುವಾದಗಳು ಯಶಸ್ವಿಯಾದವು ಎಂಬುದನ್ನು ವಿಚಾರಿಸಿದಾಗ ಉದ್ದಿಷ್ಟ ಭಾಷೆಯಲ್ಲಿ ಕ್ರಿಯಾತ್ಮಕ ಸಾಮರ್ಥ್ಯ ಹೊಂದಿರಬೇಕಾಗಿರುವ ಅಗತ್ಯತೆ ಕಾರಣ ವಿಷ್ಣುಡೇ, ಟ್ಯಾಗೋರ್ ಮೊದಲಾದವರು ತಮ್ಮ ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ಅನುವಾದಿಸಿದಾಗ ವಿಫಲರಾಗುತ್ತಾರೆ. ಟ್ಯಾಗೋರರು ಗೀತಾಂಜಲಿಯನ್ನು ಇಂಗ್ಲೀಷಿಗೆ ಅನುವಾದಿಸಿದಾಗ ಅದು ಅದೇ ಕೃತಿಯಾಗಿ ಹೊಮ್ಮಲಿಲ್ಲ. ಅನುವಾದಕ ಸಾಹಿತ್ಯದ ಭಾಷೆಯೊಂದನ್ನು ಪರಿವರ್ತಿಸುವ ಕ್ರಿಯೆಯಲ್ಲಿ ತೊಡಗಿದಾಗ ಮೂಲಭಾಷೆಯ ಜಾಯಮಾನಗಳಲ್ಲಿರುವ ಸಾಂಸ್ಕೃತಿಕ ಅರ್ಥದಲ್ಲೂ ಉದ್ದಿಷ್ಟ ಭಾಷೆಯಲ್ಲಿ ಪುನ ನಿರ್ಮಾಣವಾಗಬೇಕಾದದ್ದು ಅಗತ್ಯ. ರೂಪಾಂತರಕ್ಕಿಂತ ಅನುವಾದಗಳೇ ಹೆಚ್ಚು ಸಂಖ್ಯೆಯಲ್ಲಿ ಬಂದಿವೆ. ರೂಪಾಂತರದಲ್ಲಿ ಮೂಲ ಸಾಹಿತ್ಯದ ರೂಪ ಪರಿವರ್ತನೆ ನಡೆಯುತ್ತದೆ. ಮೂಲಕೃತಿಯ ಕಾಲ ಸನ್ನಿವೇಶಗಳನ್ನು ಅನುವಾದಕ ತನ್ನ ಸಮಕಾಲೀನ ಕಾಲ, ಸನ್ನಿವೇಶಕ್ಕೆ ಬದಲಾಯಿಸಬಹುದು. ಸಂಸ್ಕೃತದ ಸನ್ನಿವೇಶಗಳೆಲ್ಲಾ ಕನ್ನಡದ ಸನ್ನಿವೇಶಗಳಾಗಿರುವುದರಿಂದ ರೂಪಾಂತರಕ್ಕಿಂತ ಅನುವಾದ ಹೆಚ್ಚು ಸಹ್ಯವೆನಿಸುತ್ತದೆ. ಸಂಸ್ಕೃತ ಕವಿಗಳು ಭಾರತೀಯರೇ, ಸಂಸ್ಕೃತದಲ್ಲಿರುವ ಕಾರಣ ಇತಿಹಾಸಗಳೇ ಮೊದಲಾದವುಗಳು ಕನ್ನಡಿಗರದ್ದೂ ಆಗಿವೆ. ಕಾವ್ಯಗಳಲ್ಲೂ ಹೋಲಿಕೆಗಳಿವೆ. ಸಂಸ್ಕೃತದಲ್ಲಿರುವಷ್ಟು ವ್ಯಾಕರಣ ನಿರ್ಬಂಧಗಳು ಕನ್ನಡದಲ್ಲಿ ಇಲ್ಲ. ಅಲಂಕಾರ, ಛಂದಸ್ಸುಗಳೂ ಅಷ್ಟು ಜಟಿಲವಾಗಿಲ್ಲ. ಇದಲ್ಲದೆ, ಮೂಲ ಗ್ರಂಥವನ್ನು ಸಂಸ್ಕೃತದಲ್ಲಿ ಹೇಳಿದವರ ಅರ್ಥಗಾರಿಕೆ, ತಿಳುವಳಿಕೆ ಕನ್ನಡಿಗರಲ್ಲೂ ಇದೆ. (೨) ಸಂಸ್ಕೃತದಲ್ಲಿರತಕ್ಕ ಪುರಾಣ, ಇತಿಹಾಸ, ನೀತಿ, ನ್ಯಾಯ ಮತ್ತು ಆಚಾರ ವ್ಯವಹಾರಗಳೂ ಕನ್ನಡಿಗರದಾಗೇ ಇರುತ್ತದೆ. (೩) ಸಂಸ್ಕೃತ ಗ್ರಂಥಗಳಲ್ಲಿ ಯಾವುದು ಕಾವ್ಯರಚನೆಯಾಗಿರುವದೋ ಕನ್ನಡವನ್ನು ಅದೇ ಕಾವ್ಯ ರಚನೆಯಿರುವುದು (೪) ವಾಕ್ಯಬಂಧನ ಕಾವ್ಯ ಬಂಧನಗಳು, ಸಂಸ್ಕೃತದಲ್ಲಿ ಇರುವಂತೆ ಕನ್ನಡದಲ್ಲಿಯೂ ಇರುವವು (೫) ಸಂಸ್ಕೃತದಲ್ಲಿರುವ ಅಲಂಕಾರ ಲಕ್ಷಣಗಳೇ ಕನ್ನಡದಲ್ಲಿ ಅಲಂಕಾರ ಲಕ್ಷಣಗಳಾಗಿರುವುವು (೬) ಸಂಸ್ಕೃತ ಛಂದಸ್ಸೇ ಕನ್ನಡದ ಛಂದಸ್ಸಾಗಿರುವುದು ಸಂಸ್ಕೃತವನ್ನು ಕನ್ನಡಿಸುವಲ್ಲಿ ಈ ವಿಷಯಗಳೆಲ್ಲವೂ ಯಾವುದೇ ವ್ಯತ್ಯಾಸವಿರುವುದಿಲ್ಲ. ಭಾಷಾವ್ಯಾತ್ಯಾಸದಿಂದುಂಟಾದ ಶಬ್ದ ವ್ಯತ್ಯಾಸವೊಂದೇ ಇದೊಂದೇ ವಿರೋಧ ಇಲ್ಲಿ ಕಂಡುಬರುತ್ತದೆ. ಸಂಸ್ಕೃತ ಶಬ್ದಗಳು ನಿರಂತರವಾಗಿ ಕನ್ನಡಕ್ಕೆ ಬರುತ್ತಲೇ ಇರುವವು.

ವಸಾಹತುಶಾಹಿ ಕಾಲಘಟ್ಟದಲ್ಲೇ ಶೇಕ್ಸ್‌ಪಿಯರನ ಇಂಗ್ಲಿಷ್ ನಾಟಕಗಳನ್ನು ಕನ್ನಡಕ್ಕೆ ತರಲಾಯಿತು. ಇದಕ್ಕೆ ಕಾರಣ ಶೇಕ್ಸ್‌ಪಿಯರ್ ಅಗ್ರಗಣ್ಯ ನಾಟಕಕಾರ. ಈ ನಾಟಕಗಳು ಶಾಲಾ ಕಾಲೇಜುಗಳಲ್ಲಿ ಪಠ್ಯಪುಸ್ತಕವಾಗಿದ್ದವು ಮತ್ತು ಆತನ ನಾಟಕಗಳು ಭಾರತ ರಂಗಭೂಮಿಗೆ ಸುಲಭವಾಗಿ ಬಗ್ಗುತ್ತಿದ್ದವು. ನಾಡಿನಾದ್ಯಾಂತ ಏಕಕಾಲಕ್ಕೆ ಇಂಗ್ಲೀಷ್ ನಾಟಕಗಳ ಅನುವಾದ ಪ್ರಾರಂಭವಾದವು. ಈ ಕಾರ್ಯದಲ್ಲಿ ಎ. ಆನಂದರಾವ್, ಎಂ. ಎಲ್.ಶ್ರೀಕಂಠೇಶಗೌಡ ಮತ್ತು ಎಂ. ಎಸ್. ಪುಟ್ಟಣ್ಣ ಇಂಗ್ಲೀಷಿನ ಈ ಅನುವಾದಗಳು ಸಂಸ್ಕೃತಾನುವಾದಗಳಂತೆ ನೇರ ಅನುವಾದಗಳಾಗಿರದೆ, ಭಾಷಾಂತರ, ರೂಪಾಂತರಗಳ ಸಮ್ಮಿಶ್ರಣಗಳಾಗಿ ಮೂಡಿಬಂದಿವೆ. ಅಭಿನವ ಕಾಳಿದಾಸ ನೆನೆಸಿಕೊಂಡ ಬಸವಪ್ಪ ಶಾಸ್ತ್ರಿಗಳು ಓಥೆಲೊ ದ ಕನ್ನಡದನುವಾದದಲ್ಲಿ ಸೋತಿದ್ದಾರೆ. ಶ್ರೀಕಂಠೇಶಗೌಡರು ಶೇಕ್ಸ್‌ಪಿಯರನ

ನಾಟಕಗಳನ್ನು ಭಾಷಾಂತರಿಸುವುದು ಕ್ಲಿಷ್ಟವೆಂದು ಹೀಗೆ ಹೇಳಿದ್ದಾರೆ. '' ಇಂತಹ ಭಾಷೆಯ ಉತ್ತಮ ಗ್ರಂಥವನ್ನು ಆಸಾಮತೆಗೆ (Tradutori Traditari) ಎಡೆಗೊಡದೆ ಕನ್ನಡಿಸಬೇಕೆನ್ನುವದು ಆ ಇಂಗ್ಲೆಂಡ್ ದೇಶವಿರತಕ್ಕ ಪಶ್ಚಿಮ ಸಮುದ್ರದ ನೀರನ್ನು ನಮ್ಮ ಕರ್ನಾಟಕದ ರಾಜಧಾನಿಯ ದೊಡ್ಡ ಕೆರೆಗೆ ತಂದು ಮಧ್ಯದಲ್ಲಿರತಕ್ಕ ಅನೇಕ ಸಾವಿರ ಮೈಲಿಗಳ ನೆಲವನ್ನು ಅನೇಕ ಉನ್ನತ ಪರ್ವತಗಳನ್ನೂ ದಾಟಿಸಿ ಬರುವಂತೆ ಕಾಲುವೆಗಳನ್ನು ತೆಗೆಯಬೇಕೆಂದು ಪ್ರಯತ್ನ ಪಟ್ಟಂತಲ್ಲವೇ? ಅದನ್ನು ನಮ್ಮ ದೊಡ್ಡ ಕೆರೆಗೆ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಬೆಂಗಳೂರು ವಿಶ್ವ ವಿದ್ಯಾಲಯ ; ಪು.೫೧)

ತಿರುಗಿಸಿದರೆ ನಮ್ಮ ಈಗಿನ ಕೆರೆಯು ಅದರ ಪ್ರವಾಹವನ್ನು ಹಿಡಿಯುವದು ಎಲ್ಲಾದರೂ ಹೋಗಲಿ ಕೆರೆಯೇ ಉಳಿಯುವದೋ ಕೊಚ್ಚಿ ಹೋಗುವುದೋ ಎಂದು ಮೂಲ ನಾಟಕದ ಪಾತ್ರಗಳ ಹೆಸರುಗಳನ್ನೆಲ್ಲ ಶ್ರೀಕಂಠೇಶ ಗೌಡರು ಭಾರತೀಕರಿಸಿದ್ದಾರೆ. ವಿಜಯಧ್ವಜ, ಪ್ರತಾಪರುದ್ರದೇವ, ವೀರಸೇನ ಇತ್ಯಾದಿ ಪ್ರತಾಪರುದ್ರದೇವ ಎಂಬುದು ಮಾಲ್ಕಂ ಕೊಟ್ಟ ಹೆಸರು ಅವನಿಗೆ ಪಟ್ಟಾಭಿಷೇಕವಾಗುವುದರಿಂದ ಅವನ ಹೆಸರನ್ನೇ ಕೊಡಲಾಗಿದೆ. ಮ್ಯಾಕ್ಬೆತ್ ವೀರಸೇನನೆನಿಸಿದ್ದಾನೆ. ಹೀಗೆ ಷೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ತರಲು ಪ್ರಯತ್ನಿಸಿದರಾದರೂ ವಿವರ ಬೇರೆಯೇ ಆಗಬೇಕಾಯಿತು. ಶ್ರೀಕಂಠೇಶಗೌಡಂಗಿಂತ ಮೊದಲೇ ಆನಂದರಾಯರು ರೋಮಿಯೋ ಆಂಡ್ ಜೂಲಿಯಟ್ ನಾಟಕವನ್ನು ರಾಮವರ್ಮ - ಲೀಲಾವತಿಯನ್ನಾಗಿ ಅನುವಾದಿಸಿದ್ದರು. ಪಾತ್ರಗಳ ಹೆಸರುಗಳನ್ನು ಭಾರತೀಕರಣ ಮಾಡುವಾಗ ಉಚ್ಚಾರಣೆಗೆ ಅನುಕೂಲವಾಗುವಂತೆ ಕೊಡಲಾಗಿದೆ. ಪ್ಯಾರಿಸ್-ಪೇಶಲಾಂಗ, ಕ್ಯಾಪುಲೆಟ್-ಕಾಪಿಂ, ಬಾಲ್ಥಜರ್- ಬಾಲಚಂದ್ರ, ಎಬ್ರಹಾಂ- ಏಕಸಿಂಗ ಹೀಗೆ ನಾಯಕ-ನಾಯಿಕೆಯರ ದುರಂತವನ್ನು ತಪ್ಪಿಸಿ ಅವರ ಬದುಕನ್ನು ಸುಖಾಂತಗೊಳಿಸಿದ್ದಾರೆ. ಹೀಗೆ ರಾಮವರ್ಮ-ಲೀಲಾವತಿಯನ್ನು ಬದುಕಿಸಿದ ಲೇಖಕರು ಷೇಕ್ಸ್‌ಪಿಯರನ ಆಶಯವನ್ನು ಬಲಿಕೊಟ್ಟಿದ್ದಾರೆ. ಇನ್ನು ಹ್ಯಾಮ್ಲೆಟ್ ನಾಟಕದ ಪೀಠಿಕೆಯಲ್ಲಿ ಹೀಗೆ ಹೇಳಿದ್ದಾರೆ. ''ಷೇಕ್ಸ್‌ಪಿಯರ್ ಮಹಾಕವಿಯ ಅದ್ಭುತ ಕವಿತಾ ಸಾಮರ್ಥ್ಯವನ್ನು ಇಂಗ್ಲೀಷ್ ಭಾಷೆಪರಿಚಯವಿಲ್ಲದ ನಮ್ಮ ದೇಶಿಯರು ತಿಳಿದು ಸಂತೋಷಪಡಬೇಕೆಂಬ ಅಭಿಪ್ರಾಯದಿಂದ ಆ ಇಂಗ್ಲೀಷ್ ನಾಟಕದ ಕರ್ಣಾಟ ಭಾಷಾಂತರವನ್ನು ಮಾಡಿದೆನು'' ಎಂದು ತಾತ್ಪರ್ಯವಾದರೂ ತಿಳಿದರೆ ಸಾಕೆಂದು ಹೇಳಿರುವೆ ಎಂದಿದ್ದಾರೆ. ಈ ರೀತಿಯಾಗಿ ಇವರು ಅನುವಾದಕರಾಗಿ ತಮ್ಮ ತಾತ್ವಿಕತೆಯನ್ನು ಹೇಳಿಕೊಂಡಿದ್ದಾರೆ. ಗುಂಡೋಕೃಷ್ಣ ಚುರುಮರಿಯವರು ೧೮೮೫ ರಲ್ಲಿ ಓಥೆಲೊ ನಾಟಕವನ್ನು 'ರಾಘವೇಂದ್ರರಾವ್ ನಾಟಕವೆಂದು'' ಅನುವಾದಿಸಿದರು. ಓಥೆಲೊ ರಾಘವೇಂದ್ರರಾಯ ಡೆಸ್ಟೆಮೋನ ವೆಂಕೂಬಾಯಿ, ಹೀಗೆ ಈ ಅನುವಾದ ಕೈಗೊಂಡ ಬಗೆಯನ್ನು ಈ ರೀತಿ ಹೇಳಿಕೊಂಡಿದ್ದಾರೆ. ''ಕನ್ನಡ ಭಾಷೆಯು ಉತ್ಕರ್ಷೆಗೆ ಬರುವದಕ್ಕೆ ಬೇಕಾಗಿರುವ ಸಾಧನಗಳಲ್ಲಿ ಮನೋರಂಜಕ ಕಥೆಗಳ ಪುಸ್ತಕಗಳನ್ನು ಬರೆಯುವದು ಮೊದಲಿನ ಉಪಾಯವೆಂದು ನನ್ನ ಬುದ್ಧಿಗೆ ತೋರುತ್ತದೆ. ಯಾಕೆಂದರೆ ಈ ಉಪಾಯದ ಹೊರ್ತು ಜನರಿಗೆ ಭಾಷೆಯನ್ನು ಓದುವ ಕುತೂಹಲವು ಮಿಕ್ಕ ಯಾವ ಉಪಾಯಗಳಿಂದಲೂ ಉಂಟಾಗಲರಿಯದು. ಇದೇ ಗ್ರಹಿಕೆಯಿಂದ ನಾನು ಈ ಕಥೆಯನ್ನು ಬರೆದಿದ್ದೇನೆ. ಈ ಕಥೆಯು ನಾನು ಕಲ್ಪಿಸಿದ್ದಲ್ಲ. ಇಂಗ್ಲೀಷ್

ಭಾಷೆಯಲ್ಲಿ ಇರುವ ಷೇಕ್ಸ್‌ಪಿಯರನೆಂಬ ಒಬ್ಬ ಮಹಾಕವಿಯಿಂದ ರಚಿತವಾದ ಆಥೆಲ್ಲೊಯೆಂಬ ಶೋಕರಸ ಪ್ರಧಾನವಾದ ಒಂದು ನಾಟಕದ ಆಧಾರದಿಂದ ಬರೆದದ್ದಿರುತ್ತದೆ. ಇಂಗ್ಲೀಷ್ ಭಾಷೆಯ ಜ್ಞಾನವು ನನಗೆ ಸಾಕಷ್ಟು ಇದ್ದು, ಆ ಕಥೆಯನ್ನು ಕನ್ನಡ ಭಾಷೆಯಲ್ಲಿ ಅಂತರಿಸಿದ್ದರೆ ಯಾವ ಸೊಗಸು ಉಂಟಾಗುತ್ತಿತ್ತೋ ಅದರಲ್ಲಿ ನೂರರಲ್ಲಿ ಒಂದು ಪಾಲು ಸಹ ಈ ಗ್ರಂಥದಲ್ಲಿ ಇಲ್ಲವೆಂದು ನಾನು ಒಪ್ಪಿಕೊಳ್ಳಬೇಕಾಗಿದೆ ಎಂದ ಮೇಲೆ ಮೂಲದ ಆ ಗಗನಚುಂಬಿಯಾದ ಕಲ್ಪನಾಶಕ್ತಿಯನ್ನಾಗಲಿ, ದಿವ್ಯಪ್ರತಿಭೆಯನ್ನಾಗಲಿ 'ರಾಘವೇಂದ್ರರಾವ್ ನಾಟಕ'ದಲ್ಲಿ ಹುಡುಕ ಹೊರಡುವುದು ಕಲ್ಲು ಮೊರಡಿಯಲ್ಲಿ ಮಾದಳದ ಹಣ್ಣು ಹುಡುಕಿದಂತಾಯಿತು!'' ಐತಿಹಾಸಿಕ ವಸ್ತುವೊಂದನ್ನು ಸಮಕಾಲೀನ ವ್ಯಕ್ತಿತ್ವವಾಗಿಸಿರುವದರಿಂದ ಅದೊಂದು ರೀತಿಯ ಕುಂದು ಎನ್ನುವಂತಾಗಿದೆ. ಉತ್ತರ ಕರ್ನಾಟಕ ದೇಸಿಯತೆಯನ್ನು ಬಿಂಬಿಸುವ ಸಂಭಾಷಣೆ ಮತ್ತು ಹೆಸರುಗಳಿಂದ ಭಿನ್ನ ಪರಿಸರ ಎದ್ದು ತೋರುತ್ತದೆ.

ಎಂ. ಎಸ್. ಪುಟ್ಟಣನವರು ಇಂಗ್ಲೀಷ್ ನಾಟಕಗಳನ್ನು ಅನುವಾದಿಸುವಾಗ ಮೂಲದ ಸತ್ವವನ್ನು ಕನ್ನಡಕ್ಕೆ ತರುವ ಧ್ಯೇಯವಿದೆ. ಹಾಗಾಗಿ ವಿರೋಧಾಭಾಸಗಳಿಲ್ಲ. ಬಸವಪ್ಪಶಾಸ್ತ್ರಿಗಳು ಸ್ವತಃ ಇಂಗ್ಲೀಷ್ ಬಾರದಿದ್ದರೂ, ಬಲ್ಲವರಿಂದ ಕೇಳಿಸಿಕೊಂಡು ಒಥೆಲೋ ನಾಟಕವನ್ನು ಕನ್ನಡಿಸಿದ್ದಾರೆ. ''ಬಸವಪ್ಪಶಾಸ್ತ್ರಿಯ ನಾಟಕಾನುವಾದಗಳಲ್ಲೆಲ್ಲ ಅಸಮರ್ಪಕವಾದದ್ದು. ಅದರ ಶೈಲಿಯು ತೀರ ಅಸಮ-ವಿಷಮವಾಗಿದೆ. ವಾಕ್ಯಗಳಲ್ಲಿ ಒಮ್ಮೆ ಅತಿ ಸಂಸ್ಕೃತವಿದ್ದರೆ ಮತ್ತೊಮ್ಮೆ ಗ್ರಾಮ್ಯವೆನ್ನುವ ಶಬ್ದಗಳು ನುಸುಳಿವೆ. ಕಾವ್ಯರಚನೆಯಲ್ಲಿಯೂ ಅದೇ ವಿಷಮತೆ. ಇದು ಬಸವಪ್ಪಶಾಸ್ತ್ರಿಯಿಂದ ರಚಿತವೆಂದು ನಂಬಲಿಕ್ಕೆ ಸಾಧ್ಯವಿಲ್ಲದಂತಿದೆ''. ( ಷಷ್ಠಿಲೇಖ : ಆರಂಭಕಾಲದ ಇಂಗ್ಲೀಷ್ ನಾಟಕಾನುವಾದಗಳು ; ಪು. ೨೬೪)

ಆ ಕಾಲಕ್ಕೆ ಬಂದ ಇಂಗ್ಲೀಷ್ ಅನುವಾದಗಳನ್ನು ಅವಲೋಕಿಸಿದಾಗ ಭಾಷಾಂತರವೋ ರೂಪಾಂತರವೋ ಎಂದು ಹೇಳಲಾರದ ಸಂದಿಗ್ಧ ಸ್ಥಿತಿಯಿದೆ. ರಚನೆಗೊಂಡ ಕಲದಿನಗಳಲ್ಲೇ ತೀವ್ರ ಟೀಕೆಗೆ ಗುರಿಯಾದವು. ಈ ರೀತಿಯ ರಚನೆಗಳನ್ನು ಖಂಡಿಸುವ ' ಆಕಿಂಡ್ರೇನ್' ಎಂಬ ಪುಸ್ತಕ ಕೂಡ ರಚನೆಯಾಯಿತು. ಪಾತ್ರಗಳ ಹೆಸರುಗಳನ್ನು ರೂಪಾಂತರಿಸಿ, ಭಾರತೀಯ ಆವರಣವನ್ನು ಕಲ್ಪಿಸಿದರೂ ಆಚಾರ, ವಿಚಾರ ಮೌಲ್ಯಗಳು ಪಶ್ಚಿಮದವಾಗಿಯೇ ಇರುವದು ಒಂದು ಬಗೆಯಲ್ಲಿ ಶ್ರೇಷ್ಠ ಇನ್ನೊಂದು ಬಗೆಯಲ್ಲಿ ಕನಿಷ್ಠ ಎಂಬತಾಗಿದೆ.

'' ಇಂಗ್ಲೀಷ್ ನಾಟಕಗಳ ಅನುವಾದಿತ ಕೃತಿಗಳು ಕನ್ನಡ ನಾಟಕ ಸಾಹಿತ್ಯದ ಬಳಸನ್ನು ಹೆಚ್ಚಿಸುವದರಲ್ಲಿ ಯಶಸ್ವಿಯಾದರೂ, ಉದ್ದೇಶಿತ ರಂಗಪ್ರದರ್ಶನಕ್ಕೆ ಈಡಾಗಿ ಬರಲಿಲ್ಲ. ಮುಖ್ಯವಾದ ಕಾರಣವೆಂದರೆ ನಮ್ಮ ಜನಜೀವನಕ್ಕೆ ಹೊಂದಿಕೊಳ್ಳದ ಅಲ್ಲಿನ ಕಥಾವಸ್ತುವೇ ಮನರಂಜನೆಗೆ ಅವಕಾಶವಿದ್ದರೂ ಅಲ್ಲಿನವರೆಗಂತೂ ಪ್ರಚಲಿತವಾಗಿದ್ದ ನಮ್ಮ ಪೌರಾಣಿಕ ನಾಟಕಗಳಲ್ಲಿರುವಂತೆ, ಅವು ನೀತಿ ಭೋಧಕವಾಗಲಿಲ್ಲ. ನಮ್ಮ ಇತಿಹಾಸದ ಏಳು ಬೀಳುಗಳನ್ನು ಪ್ರತಿಧ್ವನಿಸಲಿಲ್ಲ. ನಮ್ಮದೇ

ಸಾಮಾಜಿಕ ಸಮಸ್ಯೆಗಳನ್ನು ಪ್ರತಿನಿಧಿಸಲಿಲ್ಲ. ಎರಡನೆಯದಾಗಿ ಬಳಸಿದ ಭಾಷೆಯ ಸಮಸ್ಯೆ. ಕಥಾದ್ರವ್ಯ ಸಾಮಾಜಿಕವಾದರೂ, ಬಳಸಿದ ಭಾಷೆ ಗ್ರಾಂಥಿಕವಾಗಿ, ಪೆಡಸಾಗಿ, ಕೃತ್ರಿಮವೇ ಆದ ಉದಾಹರಣೆಗಳು ಹೆಚ್ಚು ಹೀಗಾಗಿ, ನಮ್ಮ ' ರಂಗ-ಸಂಸ್ಕೃತಿಗೆ ಕಥೆ, ಬಂಧ, ಮಾತುಗೀತೆಗಳ ದೃಷ್ಟಿಯಿಂದ ಹೊರತಾಗಿ ನಿಂತುದರಿಂದಾಗಿ, ಮೂಲದಲ್ಲಿ ಈ ಎಲ್ಲ ಅನುವಾದಗಳು ರಂಗಕ್ಕೆಂದೇ ಮೀಸಲು ಎಂದರೂ, ವೃತ್ತಿಸಂಸ್ಥೆಗಳು ಎತ್ತಿ ಆಡಲು ಹಿಂದೆಗೆದವು. 'ರಾಮವರ್ಮ-ಲೀಲಾವತಿ' ಮತ್ತು ಶೂರಸೇನ ಚರಿತ್ರೆ'ಗಳಾದರೂ ಹಳೆಯ ಮೈಸೂರು ಕಡೆ ರಂಗದಲ್ಲಿ ಧ್ವಜಹಾಕಿ ನಿಂತಿದ್ದು, ಮುಖ್ಯವಾಗಿ ಪರಿಣಿತ ನಾಟಕ ಸಾಹಸದ ಕಾರಣ. ಅಂತಹ ವೃತ್ತಿನಟರಿಂದಾಗಿ, ನಾಟಕ ರಂಗದ ಮೇಲೆ ಬೆಳಗಿತು. ಇಂಗ್ಲೀಷ್ ನಾಟಕಗಳ ಈ ಕೆಲವು ಕನ್ನಡ ರೂಪಾಂತರಗಳು ವಿಲಾಸೀ ರಂಗಭೂಮಿಯಲ್ಲಾದರೂ ಜನಪ್ರಿಯತೆ ಗಳಿಸಿದವು'' ( ಷಷ್ಟಿಲೇಖ ; ಪು. ೨೬೭)

ಒಟ್ಟಿನಲ್ಲಿ ಇಂಗ್ಲೀಷ್ ನಾಟಕಾನುವಾದಗಳು ಭಾರತೀಯ ಪರಂಪರೆಗೆ ಭಿನ್ನವಾಗಿದ್ದವು. 'ಬ್ಲಾಂಕ ವರ್ಸ'ನ ಪದ್ಯ ನಾಟಕಗಳು ಗದ್ಯಾತ್ಮಕವಾಗುವುದು ಒಂದು ಕೊರತೆಯೇ ಆಯಿತು. ಇನ್ನು ಷೇಕ್ಸ್‌ಪಿಯರನ ನಾಟಕಗಳೂ ಕೂಡ ಶುದ್ಧಭಾಷಾಂತರಗಳಲ್ಲಿ ಭಾಷಾಂತರ, ರೂಪಾಂತರಗಳ ಸಮ್ಮಿಶ್ರಣಗಳೆನ್ನಬೇಕು. ಈ ವೈಲಕ್ಷಣ್ಯ ಆಕಸ್ಮಿಕವಾದುದಲ್ಲ. ಲೇಖಕರು ರಂಗಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಿಸಿದ್ದು ಇದಕ್ಕೆ ಕಾರಣ. ರಂಗದ ಮೇಲೆ ನಾಟಕಗಳು ಪರಕೀಯವಾಗಿ ಕಾಣಬಾರದು. ನಮ್ಮ ಸಮಾಜಕ್ಕೆ ಅವು ಹತ್ತಿರವೆನಿಸಬೇಕು. ಅವುಗಳ ಪಾತ್ರಗಳು ಪರಿಚಿತವಾಗಿ ತೋರಬೇಕು ಎಂಬುದು ಅವರ ಆಶಯವಾಗಿತ್ತು. ಜನಪ್ರಿಯತೆ ಅವರ ಗುರಿಯಾಗಿದ್ದು, ಅವರ ಪರಿವರ್ತನೆಗಳು ಅಕ್ಷರಶಃ ದೃಶ್ಯ ಕಾವ್ಯಗಳಾಗಿ ಉದ್ದಿಷ್ಟವಾಗಿದ್ದವು. ಷೇಕ್ಸ್‌ಪಿಯರನ ಕೃತಿಗಳನ್ನು ಕುರಿತ ಪ್ರಾರಂಭಿಕ ಅನುವಾದಗಳು ವಾಸ್ತವವಾಗಿ ಅನುವಾದ ಮತ್ತು ಅನುಕರಣಗಳ ನಡುವೆ ಬರುವಂಥವು. ಶೈಕ್ಷಣಿಕ ವಲಯದ ಅನುವಾದಕರಿಗಿಂತ ರಂಗಭೂಮಿಯ ಆಸಕ್ತರಿಂದ ಬಂದವುಗಳು. ಎಂಬ ಹೇಳಿಕೆಯನ್ನು ನೆನೆಯಬಹುದು. ಮೂಲ ನಿಷ್ಠತೆ ಈ ನಾಟಕಗಳ ಉದ್ದೇಶವಾಗಿರಲಿಲ್ಲ. ಸಾಕಷ್ಟು ಸ್ವಾತಂತ್ರ್ಯ ವಹಿಸಿದ ಭಾಷಾಂತರಗಳಿವು. ಸಾಹಿತ್ಯಿಕವಾಗಿ ಅವು ಅಷ್ಟೇನು ಉತ್ಕೃಷ್ಟವಾಗದಿರುವುದಕ್ಕೂ ವಿವರಣೆಯನ್ನು ಈ ಸಂಗತಿಗಳಲ್ಲಿ ಕಾಣಬೇಕು. ಅವುಗಳಿಗಿರತಕ್ಕದ್ದು ಬಹುಮಟ್ಟಿಗೆ ಒಂದು ಚಾರಿತ್ರಿಕ ಮಹತ್ವ ಸಂಸ್ಕೃತ ನಾಟಕಾನುವಾದಗಳು ಈ ಅನುವಾದಗಳಿಗಿಂತ ಭಿನ್ನ ಪರಿಪ್ರೇಕ್ಷ್ಯದಲ್ಲಿ ಬೆಳೆದು ಬಂದವುಗಳು. ಕಾರಣ ಸಂಸ್ಕೃತ ನಾಟಕಗಳು ನಮ್ಮ ಸಮಾಜಕ್ಕೆ ಹತ್ತಿರದವುಗಳಾಗಿವೆ. ಸಂಸ್ಕೃತದ ರಾಮ ಸೀತೆ ಕನ್ನಡದ ಅಪರಿಚಿತರೇನಲ್ಲ. ಈ ಅನುವಾದಗಳು ಶೈಕ್ಷಣಿಕ ವಲಯದವುಗಳಾಗಿ ಬಂದಿವೆ. ಮೂಲನಿಷ್ಠತೆ ಈ ಅನುವಾದಗಳಲ್ಲಿ ಬಂದಿದೆ. ಸಾಹಿತ್ಯಿಕವಾಗಿಯೂ ಈ ನಾಟಕಾನುವಾದಗಳು ತಮ್ಮ ಛಾಪು ಮೂಡಿಸಿವೆ. ಈ ಅನುವಾದಗಳು ಸಾಹಿತ್ಯಿಕ ಅನುವಾದಗಳು ಯಾಕೆ ಎಂಬುದನ್ನು ಅನುವಾದಕರ ಧೋರಣೆಗನುಗುಣವಾಗಿ ನೋಡಿದಾಗ ದೃಢಪಡುತ್ತದೆ.

ಶಾಕುಂತಲದ ಅನುವಾದಗಳಲ್ಲಿ ಚುರಿಮುರಿ ಶೇಷಗಿರಿರಾಯರ ಶಾಕುಂತಲವೆ ಪ್ರಥಮವಾದುದು, ಕನ್ನಡದಲ್ಲಿ ಅನುವಾದಗಳಿರಲಿಲ್ಲ. ಆ ಕೊರತೆಯನ್ನು ತುಂಬಿಕೊಡುವ ಉದ್ದೇಶದಿಂದ ಭಾಷಾಮತರದ ಕೃತ್ಯಕ್ಕೆ ಕೈ ಹಾಕಿದ್ದೇನೆ ಎಂದು ಲೇಖಕರು ಹೇಳಿಕೊಂಡಿದ್ದಾರೆ.

ಕವಿಲೋಕಕ್ಕೆ ನರೇಶ್ವರಂ ನವರಸಂ ಸೂರಲ್ ಮಹಾಮೇಘ ಮಾ -।
ಧಿವ ಮೇಣ್ ಬಲ್ಲ ರಸಜ್ಞ ಭೃಂಗತತಿಗಾಗಿ ಗೀರ್ವಾಣಭಾಷಾವನಂ॥
ತವೆ ಸೌಂದರ್ಯಕೆ ತಂದ ಚಂದ್ರಮ ಮನೋಭಾಚ ಪ್ರಕಾಶಕ್ಕೆ ತಾಂ।
ರವಿಮುನ್ ಪೇಳ್ವನಿದನ್ನು ಸಂಸ್ಕೃತದೊಳು ಶ್ರೀ ಕಾಳಿದಾಸಾಖ್ಯನು॥

ಇದಭಿಜ್ಞಾನ ಚುಂತಲಾಖ್ಯಕೃತಿಯಂ ಭಾಷಾಂತರಂ ತಮ್ಮ ತ -।
ಮ್ಮ ದರೋಳ್ಮಾ ಡಿದರೆಲ್ಲ ನಾಡದ (ಡಿನ) ಜನರ್ ಕರ್ನಾಟಕ ದೊಳಿಲ್ಲೆಲೈ ॥
ಮುಂದಿದಂದದ್ದುವದಲ್ಲದೆನ್ನ ಮರಣಂ ಯಾವಾಗರೋ ಎಂದು ಸಿ-।
ಕ್ಕಿದ ಶಬ್ಬಂಗಳಿನ್ನಿಟ್ಟು ಶ್ರೀಘ್ರತರದಿಂದೀ ಕೃತ್ಯಮಂಗೈದೆ ನಾ ॥

ಎಂಬಂತೆ ಉತ್ತರ ಕರ್ನಾಟಕದ ದೇಶೀ ಪ್ರಚಾರ ಶೈಲಿಯಲ್ಲಿ, ಕಂದ ಹಾಗೂ ವೃತ್ತಗಳಲ್ಲಿ ಶ್ಲೋಕಗಳನ್ನು ಅನುವಾದಿಸಿದ್ದಾರೆ. ದೇಶೀಯ ಹಾಡಿನ ಮಟ್ಟುಗಳಾಗಿಸಿದ್ದಾರೆ. ಹಾಡುಗಳ ಅಂತ್ಯದಲ್ಲಿ 'ಎಂಬಂತೆ' ಎಂಬ ಪಾರಿಜಾತದ ಪದದಂತೆ ಎಂಬ ವೈವಿಧ್ಯಮಯ ಜಾನಪದ ಸೊಗಡು. ಆ ಕಾಲಕ್ಕೆ ಪ್ರಚಲಿತವಾಗಿದ್ದ ಶ್ರೀಕೃಷ್ಣ ಪಾರಿಜಾತ ಸಣ್ಣಾಟ ದೊಡ್ಡಾಟದ ಪದಗಳನ್ವಯ ಈ ಶ್ಲೋಕಗಳನ್ನು ಪರಿವರ್ತಿಸಿದ್ದಾರೆ. ವಿದೂಷಕನ ಮಾತು ಅಚ್ಚ ಹಳ್ಳಿ ಹೈದನ ಮಾತುಗಳಾಗಿ ಹೊರಹೊಮ್ಮಿವೆ. ಒಬ್ಬ ಅನುವಾದಕ ಕೇವಲ ಭಾಷಾಂತರ ಮಾಡುತ್ತಾನೆಯೇ ಅಥವಾ ಸಾಂದರ್ಭಿಕತೆಗನುಸಾರವಾಗಿ ಶೈಲಿಯನ್ನಾದರೂ ಬದಲಿಸಿಕೊಳ್ಳಬಹುದು ಅಲ್ಪ ಮಟ್ಟಿನ ಪರಿಸರ ಕೂಡಾ ಎಂಬುದು ಗಮನಾರ್ಹ ಸಂಗತಿ.

ಮುಳಬಾಗಲರು ಕಾಳಿದಾಸ, ಭವಭೂತಿ, ಶೂದ್ರಕ ಹಾಗೂ ಭಟ್ಟನಾರಾಯಣ ಇವರೇ ಮೊದಲಾದ ಮಹೋನ್ನತ ನಾಟಕಕಾರರ ನಾಟಕಾನುವಾದಗಳನ್ನು ಮಾಡಿದ್ದಾರೆ. ಸಂಸ್ಕೃತ ಕನ್ನಡ ಉಭಯ ಭಾಷಾ ಪರಿಣಿತರಾದ ಇವರು ಶಿಕ್ಷಕರಾಗಿ, ಅದರಲ್ಲೂ ಕನ್ನಡದ ಸೇವೆಗಾಗಿ ಶ್ರಮಿಸುವ ಸಂಸ್ಥೆಯಾಗಿದ್ದ ಟ್ರೈನಿಂಗ್ ಕಾಲೇಜಿನಲ್ಲಿ ಶಿಕ್ಷಕರಾಗಿದ್ದರು. ಇವರು ಕೂಡ ಅನುವಾದವನ್ನು ಯುಗಧರ್ಮಕ್ಕೆ ಅನುಸಾರವಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯಾಭಿವೃದ್ಧಿಗಾಗಿ ಎಂದಿದ್ದಾರೆ. ''ಕನ್ನಡದಲ್ಲಿ ಗದ್ಯಾತ್ಮಕ ಗ್ರಂಥಗಳ ಕೊರತೆಯಿದ್ದು ಅದನ್ನು ನೀಗಿಸುವದಕ್ಕಾಗಿ ಅನುವಾದವನ್ನು ಕೈಗೊಂಡಿರುವದಾಗಿ ಹೇಳಿದ್ದಾರೆ. ''ಕನ್ನಡ ಭಾಷೆಯ ಈಗಿನ ಸ್ಥಿತಿಯನ್ನು ನೋಡಿದರೆ, ಈ ಭಾಷೆಯಲ್ಲಿ ಎಲ್ಲಾ ವಿಷಯಗಳ ಗದ್ಯಾತ್ಮಕ ಗ್ರಂಥಗಳು ತೀರ ಕಡಿಮೆಯಾಗಿವೆ. ಒಂದು ಪಕ್ಷದಲ್ಲಿ ಇಲ್ಲೆಂದರೂ ಚಿಂತೆಯಿಲ್ಲ. ಸಾಧಾರಣ

ಜನರ ಮನೋರಂಜನಾರ್ಥವಾಗಿ ಏನಾದರೂ ಓದಬೇಕೆಂದರೆ ಯೋಗ್ಯವಾದ ಪುಸ್ತಕಗಳು ಇರುವದಿಲ್ಲ. ಇದೊಂದು ಈ ಭಾಷೆಯು ಜನರ ತಿರಸ್ಕಾರಕ್ಕೊಳಗಾಗುವ ಕಾರಣವಾಗಿರುತ್ತದೆ. ಈ ಅಪೂರ್ಣತ್ವದ ಒಂದು ಲಕ್ಷ್ಯಾಂಶ ದಷ್ಟಾದರೂ ಪೂರ್ಣ ಮಾಡಬೇಕೆಂದು ಮೊದಲಿನಿಂದ ನನ್ನ ಮನಸ್ಸು ಹವಣಿಸುತ್ತದೆ. ಆದರೆ ನನ್ನಲ್ಲಿ ಅಂತಹ ದೊಡ್ಡ ವಿದ್ವತ್ತೆ ಎಲ್ಲಿಂದ ಬರಬೇಕು?, ಆದರೂ ನನಗೆ ದೊರೆತ ಕಿಂಚಿತ್ ಜ್ಞಾನದಿಂದ ಶಕ್ತ್ಯಾನುಸಾರವಾಗಿ ನಮ್ಮ ದೇಶಭಾಷಾರ್ಜನೆಯ ಶುಶ್ರೂಷೆಯನ್ನು ಮಾಡಬೇಕೆಂದು ಈ ವೇಣಿಸಂಹಾರವೆಂಬ ನಾಟಕ ಗ್ರಂಥವನ್ನು ಕನ್ನಡದಲ್ಲಿ ಬರೆದಿರುತ್ತೇನೆ'' ಎಂದು ಹೇಳಿದ್ದಾರೆ. ಹೊಸ ಶಿಕ್ಷಣ ಕ್ರಮದಿಂದ ಇಂಗ್ಲೀಷ್ ವ್ಯಾಮೋಹಕ್ಕೆ ಒಳಗಾದ ಜನರನ್ನು ಕನ್ನಡ ಗ್ರಂಥ ರಚನಾ ಕಾರ್ಯದ ಮೂಲಕ ಒಲಿಸಿಕೊಳ್ಳಬಹುದೆಂಬ ತುರ್ತು ಅಂದು ಇತ್ತು. ಕನ್ನಡದ ನಿರ್ವ್ಯಾಜ್ಯ ಪ್ರೇಮದಿಂದ ಅನುವಾದ ಕಾರ್ಯ ಪ್ರಾರಂಭಿಸಿದ್ದಾರೆ.

ಸಂಸ್ಕೃತ ಸಂಭಾಷಣೆಗಳನ್ನು ಹೊಸಗನ್ನಡ ಶೈಲಿಯಲ್ಲಿ ಅನುವಾದಿಸಿದ್ದಾರೆ. ಸಂಸ್ಕೃತ ವೃತ್ತಗಳನ್ನು ಕನ್ನಡದ ಪ್ರೌಢ ಮಾರ್ಗೀಯ ಶೈಲಿಯಲ್ಲಿ ಅನುವಾದಿಸಿದ್ದಾರೆ. ಮೂಲಕ್ಕೆ ನಿಷ್ಠವಾಗಿ ಸುಲಭತೆಯಿಂದ ಅನುವಾದಿಸಿರುವದು ಕಂಡು ಬರುತ್ತದೆ.

ಉದಾ : ಪುರಾಣಮಿತ್ಯೇವ ನ ಸಾಧು ಸರ್ವಂ ।
ನ ಚಾಪಿ ಕಾವ್ಯಂ ನಾವಮಿತ್ಯ ವಾದ್ಯಂ ।
ಸಂತ ಪರೀಕ್ಷ್ಯಾನ್ಯರಂ ಭಜಂತೆ ।
ಮೂಢ : ಪರಪ್ರತ್ಯಯನೇಯ ಬುದ್ಧಿ ॥

ಪ್ರವೇಶ ಮುಲ್ತಯ್ ಪಳದಂತೆ ಎಲ್ಲಂ-
ನವೀನಮೆಂದೇ ಕೆಡಕಲ್ತು ಕಬ್ಬಂ
ಪ್ರವೀಣರೊಂದಂ ನಡೆನೋಡಿಕೊಂಬರ್
ವಿವೇಕಹೀನಂ ಪರವಾಕ್ಯ ಪ್ರಮಾಣಂ ॥

ಮೂಲಕ್ಕೆ ನಿಷ್ಠವಾಗಿ ನವಮಿತ್ಯವದ್ಯಂ - ನವೀನವೆಂದೇ, ಸಂತ : ಪರೀಕ್ಷಾನ್ಯರಂ-ಪ್ರವೀಣರೊಂದಂ ನಡೆನೋಡಿಕೊಂಬರ್, ಮೂಢ:- ವಿವೇಕಹೀನಂ ಪರಪ್ರತ್ಯಯನೇಯ ಬುದ್ಧಿ :- ಪರವಾಕ್ಯ ಪ್ರಮಾಣಂ ಅನುವಾದಿಸಿದ್ದಾರೆ. ''ಮುಳಿಬಾಗಲರು ಅವರ ಇತರ ಧಾರವಾಡದ ಸಮಕಾಲೀನರಂತೆ ಆಧುನಿಕ ಅಚ್ಚಗನ್ನಡ ಶೈಲಿಯಲ್ಲಿ ಕೃತಿಗಳನ್ನು ರಚಿಸಿದ್ದಾರೆ' ಮೃಚ್ಛಲಟಿಕದಲ್ಲಿ ಸಾಮಾಜಿಕ ವಸ್ತುವಿದ್ದುದರಿಂದ ಸಾಮಾಜ ಜೀವನದ ನಾನಾಸ್ತರಗಳ ವ್ಯಕ್ತಿಗಳು ಅಲ್ಲಿ ಪಾತ್ರಗಳಾಗಿದ್ದಾರೆ. ಆದ್ದರಿಂದ ವೈವಿಧ್ಯಪೂರ್ಣವಾದ ಭಾಷೆಯ ಪ್ರಯೋಗವು ಅನಿವಾರ್ಯವಾಗಿದೆ. ಪಾತ್ರಗಳ ಸ್ವಭಾವಶೀಲಗಳಿಗೆ ಅನುಗುಣವಾಗಿ ಕನ್ನಡ ಭಾಷೆಯನ್ನು ಬಳಿಸಿ ಕಲಾನೈಪುಣ್ಯವನ್ನು

ತೋರಿದ್ದಾರೆ. ಚಾರುಂದತ್ತನ ಉದಾತ್ತತೆ, ಶಕಾರನ ಕ್ರೂರ ಹಾಸ್ಯ, ವಸಂತಸೇನೆಯ ನಿರ್ಮಲ ಪ್ರೇಮ ಇವೆಲ್ಲವೂ ಕನ್ನಡ ಅನುವಾದದಲ್ಲಿ ಚೆನ್ನಾಗಿ ಮೈವೆತ್ತಿವೆ'' ( ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ; ಪು.೪೦) ಬಸವಪ್ಪ ಶಾಸ್ತ್ರಿಗಳು ಕಾಳಿದಾಸನ ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶೀಯ, ಭವಭೂತಿಯ ಉತ್ತರ ರಾಮಚರಿತೆ ಮತ್ತು ಮಾಲತೀ ಮಾಧವ, ಶ್ರೀ ಹರ್ಷನ ರತ್ನಾವಳಿ, ಆರ್ಯಕ್ಷೇಮೀಶ್ವರನ ಚಂಡಕೌಶಿಕ ತಾವು ಈ ಬಗೆಯಾದ ಅನುವಾದಗಳನ್ನು ಮಾಡುತ್ತಿರುವ ಕಾರಣವನ್ನು ಈ ರೀತಿ ಹೇಳಿದ್ದಾರೆ.

'' ಮುನ್ನಿನ ಸಂಸ್ಕೃತ ಕೃತಿಗಿದು ಕನ್ನಡಿಯನೆ ಕನ್ನಡಿಪ್ಪದುಚಿತಂ ಕವಿಗಳ್
ಎನ್ನರಿವುಳ್ಳನಿತರಿದಾಂ ಕನ್ನಡಿಸಿರ್ಪೆಂ ಗುಣಜ್ಞಾರಭಿಮತಿ ಪ್ರದಿದಂ''॥

ಭರ್ತೃಹರಿಯ ನೀತಿ ಶತಕ ಕನ್ನಡ ಭಾಷಾಂತರ ಪ್ರಸ್ತಾವನೆಯಲ್ಲಿ ನುಡಿದಿದ್ದಾರೆ.

ಬಸವಪ್ಪಶಾಸ್ತ್ರಿಗಳು ಕಾಳಿದಾಸನನ್ನು ಕನ್ನಡಕ್ಕೆ ಇಳಿಸಿದ್ದಾರೆ. ''ಮಹಾಕವಿಯೊಬ್ಬನ ಅಂತರಂಗವನ್ನು ಹೊಕ್ಕು ಅದರ ಆಳ ಚೌನ್ನತ್ಯಗಳನ್ನು ಪರರಿಗೆ ದರ್ಶನ ಮಾಡಿಸುವ ಕಾರ್ಯದಲ್ಲಿ ಬಹುಮಟ್ಟಿಗೆ ಕೃತ ಕೃತ್ಯರಾಗಿದ್ದಾರೆ. ಕಾಳಿದಾಸನ ಕಲಾಶಕ್ತಿ ಶಾಕುಂತಲ ನಾಟಕದಲ್ಲಿ ಪರಿಣಿತಗೊಂಡಿದ್ದಾರೆ. ಬಸವಪ್ಪ ಶಾಸ್ತ್ರಿಗಳ ಭಾಷಾಂತರ ಕಲೆ ಕನ್ನಡ ಶಾಕುಂತಲ ನಾಟಕದಲ್ಲಿ ಪರಿಣತಿಗೊಂಡಿದೆ. ಕಾಳಿದಾಸನು ಪರಿವರ್ತನೆಗೆ ಸುಲಭನಲ್ಲ. ಅನುಕರಣಾತೀತನಾದ ಆತನ ಶೈಲಿಯ ಸರಳತೆಯು ಪರಿವರ್ತನಕಾರನ ಮೃತ್ಯವು ಕಾಳಿದಾಸನ ಶಾಕುಂತಲ ಪ್ರಪಂಚದ ಎಲ್ಲಾ ಭಾಷೆಗಳಲ್ಲಿಯೂ ಪರಿವರ್ತಿತವಾಗಿದೆ. ಆದರೆ ಎಲ್ಲಾ ಪರಿವರ್ತನೆಗಿಂತಲೂ ಬಸವಪ್ಪನವರ ಉತ್ತಮವೆಂದು ಧೈರ್ಯವಾಗಿ ಹೇಳಬಹುದು. ಶಾಸ್ತ್ರಿಗಳು ಭಾಷಾಂತರ ಶಕ್ತಿಯು ಶಾಕುಂತಲದಲ್ಲಿ ಅದ್ಭುತವಾಗಿ ಕಂಡುಬಂದಿದೆ'' (ಸಮಗ್ರ ಸಾಹಿತ್ಯ ಚರಿತ್ರೆ ; ಪು. ೮೪)

ಇಡೀ ಅನುವಾದ ಪ್ರಕ್ರಿಯೆ ವ್ಯಾಖ್ಯಾಕಾರ ಮಲ್ಲಿನಾಥನ ಮಾತಿನಂತೆ ''ನಾಮೂಲಂ ಲಿಖ್ಯತೇ ಕಿಂಚಿತ್ ನಾನಪೇಕ್ಷಿತ ಮುಚ್ಯತೇ'' ಮೂಲದಲ್ಲಿ ಇಲ್ಲದ್ದನ್ನು ಸ್ವಲ್ಪಮಟ್ಟಿಗೂ ಬರೆಯುವದಿಲ್ಲ. ಅನಪೇಕ್ಷಿತವಾದುದನ್ನು ಹೇಳುವುದೂ ಇಲ್ಲ'' ಎಂಬ ತತ್ವಾಧಾರಿತವಾಗಿದೆ.

ಶ್ರೀಕಂಠಶಾಸ್ತ್ರಿಗಳು ಪ್ರಿಯದರ್ಶಿಕೆ ಮತ್ತು ಕೃಷ್ಣವಿಜಯ ವ್ಯಾಯೋಗಗಳೆಂಬ ನಾಟಕಗಳನ್ನು ಕನ್ನಡಿಸಿದ್ದರು. ಕೃಷ್ಣವಿಜಯ ವ್ಯಾಯೋಗದ ಪೀಠಿಕೆಯಲ್ಲಿನ ಪದ್ಯ ಹೀಗಿದೆ.

ಮುನ್ನಾ ಪ್ರಿಯದರ್ಶಿಕೆಯಂ
ತೆನ್ನಂ ಕೈಗೊಂಡ ತೆರದೊಳೀ ಕಬ್ಬಮುಮಂ
ಕನ್ನಡಗಬ್ಬುಳಿಗರ್ಕಳ್
ಸನ್ನುತ ಗುಣಶಾಲಿಗಳ್ದಿರಿಗ್ರಹಿಸುಗೆ ತಾಂ॥

''ಕೃಷ್ಣ ವಿಜಯ ವ್ಯಾಯೋಗದ ಶೈಲಿ ಸಂಪೂರ್ಣ ಪದ್ಯಮಯ. ಹಳೆಗನ್ನಡವು ಮೇಲ್ಮಟ್ಟದ್ದು ಪೆಡಸು ಕರ್ಪೂರ ಮಂಜರಿಯ ಧಾಟಿಯದು ಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗದ ಪ್ರೌಢರಚನೆ ಎನ್ನಲೇಬೇಕು. ರುಕ್ಮಿಣಿಯನ್ನು ಕೃಷ್ಣನು ವಿವಾಹವಾಗುವ ಕಥಾವಸ್ತು. ಮನೋಜ್ಞವಾದ ರಸವತ್ಕಾವ್ಯವು ಆದರೂ ಶಾಸ್ತ್ರಿಗಳು ಅಭಿನವ ಕಾಳಿದಾಸನೆನಿಸಿದ ಈ ಗ್ರಂಥದ ಲೇಖಕನ ಸರಸ ರಚನಾ ಧೋರಣೆಗೆ ಬೆರಗಾಗಿ ಸಾಹಿತ್ಯ ಪ್ರಿಯರಿಗೆ ಈ ಕಾವ್ಯ ಅಪರಿಚಿತವಾಗಿ ಉಳಿಯಬಾರದೆಂಬ ಉದ್ದೇಶದಿಂದ ಆ ಕವಿಯ ಓಜೋಮಯ ಶೈಲಿಯ ಅರಿವನ್ನು ನೀಡುವದಕ್ಕಾಗಿಯೇ ಅದೇ ರೀತಿಯಲ್ಲಿ ಈ ಕನ್ನಡಾನುವಾದ ಮಾಡಿದ್ದಾರೆ'' ಅಲ್ಲದೆ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ.

''ಕೃಷ್ಣವಿಜಯ ವ್ಯಾಯೋಗವೆಂಬೀ ಗ್ರಂಥವನ್ನು ಸುಮಾರು ಕ್ರಿ.ಶ. ೧೭೮೦ ರಲ್ಲಿ ಅಭಿನವ ಕಾಳಿದಾಸನೆಂದು ಮೈಸೂರು ಸಂಸ್ಥಾನದಲ್ಲಿ ಪ್ರಸಿದ್ಧನಾಗಿ, ಭಾಗವತ ಚಂಪೂ ಗ್ರಂಥವನ್ನು ರಚಿಸಿರುವ ಚಂದ್ರಶೇಖರನೆಂಬ ಕವೀಂದ್ರನ ಮಗನಾದ ರಾಮಚಂದ್ರ ಕವಿಯು ಸಂಸ್ಕೃತದಲ್ಲಿ ಬರೆದಿರುವನು. ನಾನು ಇದನ್ನು ಈಗ ಕನ್ನಡಿಸಿ ಕನ್ನಡಿಗರೆಡಿದಾವರೆಗಳಿಗೆ ವಿನಯ ಪೂರಕವಾಗಿ ಸಮರ್ಪಿಸಿರುವೆನು'' (ಸಂಕುಲ; ರಂಗಭೂಮಿ. ಪು.೨೯).

ಪ್ರಿಯದರ್ಶಿಕೆ ಕವಿಯ ಪಾಂಡಿತ್ಯ ಹಾಗೂ ವಾಗ್ವೈಭವದ ಸಿದ್ಧಿ. ಇದು ಕಾವ್ಯರಚನಾ ಕುತೂಹಲದಿಂದ ಬರೆಯಲ್ಪಟ್ಟಿದೆ. ಅದೂ ಅಲ್ಲದೆ ಜನಮನ್ನಣೆಗಳಿಸಿ, ರಂಗಸ್ಥಳದ ಮೇಲೆ ಅಭಿನಯಿಸಲು ಯೋಗ್ಯ ಎಂದೆನಿಸಿಕೊಳ್ಳುವದು ಕವಿಯ ಅಪೇಕ್ಷೆ. ಪ್ರಭುಗಳ ಆದೇಶಕ್ಕನುಗುಣವಾಗಿ ಬರೆಯಲ್ಪಟ್ಟಿದ್ದೂ ಎಂಬ ಹೇಳಿಕೆ ಇದ್ದರೂ, ಇದು ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕವಾಗಿತ್ತು ಎಂಬುದು ಈ ರಚನೆಯ ಹಿನ್ನೆಲೆ ಶ್ರೀಕಂಠಶಾಸ್ತ್ರಿಗಳು ಮೈಸೂರು ಅರಸು ಬೋರ್ಡಿಂಗ್ ಪಾಠಶಾಲೆಯಲ್ಲಿ ಕನ್ನಡ ಸಂಸ್ಕೃತಗಳ ಬೋಧಕರಾಗಿದ್ದರು. ಚಾಮರಾಜ ಒಡೆಯರ್ ಮತ್ತಿತರಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಬೋಧಿಸುತ್ತಿದ್ದರೆಂಬುದು ಗಮನೀಯ ಸಂಗತಿ.

### (ಮೂಲ ಸಂಸ್ಕೃತ ಆದರೆ ಕೃತಿ ಕನ್ನಡದ್ದು)

ಅನುವಾದ ಮೂಲಕ್ಕೆ ನಿಷ್ಠವಾಗಿರಬೇಕೆಂಬ ತತ್ವದ ಔಚಿತ್ಯವೆಂದರೆ ಅನುವಾದಕನು ಮೂಲ ಕರ್ತೃವಾಗಬಾರದು. ಅವನ ಕಾರ್ಯವೆಂದರೆ ಮೂಲಕೃತಿ ಹಾಗೂ ಓದುಗನ ನಡುವಿನ ಕೊಂಡಿಯಾಗಿರಬೇಕು. ಮೂಲವನ್ನು ಓದುಗನಿಗೆ ಮುಟ್ಟಿಸುವ ಈ ಕಾರ್ಯದಲ್ಲಿ ಅನುವಾದಕನು ವೈಯಕ್ತಿಕತೆಯನ್ನು ಮರೆತು, ಮೂಲಕೃತಿಯೊಡನೆ ತಾದ್ಮಾತ್ಯ ಹೊಂದಿ ಮೂಲಕೃ ತಿಯನ್ನು ಬಿಂಬಿಸಬೇಕು. ಅನುವಾದಕ ಈ ಕಾರ್ಯದಲ್ಲಿ ತೊಡಗುವಿಕೆಯಿಂದ ಅನುವಾದ ಯಶಸ್ವಿಯಾದುದರ ಬಗ್ಗೆ ಗೊತ್ತಾಗುತ್ತದೆ. ಅದರಂತೆ ಶಬ್ದಶಃ ಅನುವಾದವೂ ಮೂಲಭಾಷೆಯ ಶಬ್ದಕ್ಕೆ ಸಂವಾದಿಯಾಗಿ

ನಮ್ಮ ಭಾಷೆಯಲ್ಲಿ ನೈಜ ಚಿತ್ರಕೊಡುವ ಶಬ್ದವನ್ನು ಅಲ್ಲಿಯ ಪಡೆನುಡಿಗಳಿಗೆ ಸಂವಾದಿಯಾಗಿ ನಮ್ಮ ಪಡೆನುಡಿಗಳನ್ನು ಹಾಕಿದರೆ ಔಚಿತ್ಯ ಪೂರ್ಣವೆನಿಸುತ್ತದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಮೂಡಿಬಂದ ಅನುವಾದಗಳೆಲ್ಲವೂ ಅನುವಾದ ತತ್ವಕ್ಕನುಸರಿಸಿಯೇ ಮೂಡಿಬಂದಿರುವದು ಔಚಿತ್ಯಪೂರ್ಣ. ರಂಗಭೂಮಿ, ವಸಾಹತುಶಾಹಿ ಪ್ರಜ್ಞೆ, ಕನ್ನಡಾಭಿಮಾನ ಮತ್ತು ರಾಷ್ಟ್ರೀಯತೆ ಈ ಹಿನ್ನೆಲೆಯಲ್ಲಿ ಮೂಡಿ ಬಂದ ಅನುವಾದ ಪರಿಕಲ್ಪನೆ ಈ ಮೂರು ಅಂಶಗಳನ್ನು ಗೆರೆ ಎಳೆದು ತೋರಿಸದಷ್ಟು ಸೂಕ್ಷ್ಮ ಪ್ರಜ್ಞೆಯಿಂದ ಹೊರಹೊಮ್ಮಿದೆ. ಅಧ್ಯಯನ ಕಲ್ಪನೆಗೋಸ್ಕರ ಈ ಮೂರು ವಿಭಾಗಗಳನ್ನು ವರ್ಗೀಕರಿಸಬೇಕೆ ವಿನಃ ಒಟ್ಟಾರೆ ಪ್ರಕ್ರಿಯೆಯಲ್ಲಿ ಇವು ಮೂರು ಪೂರಕ, ಪ್ರೇರಕ ಅಂಶಗಳಾಗಿ ಹೊರಹೊಮ್ಮಿವೆ. ಆ ಕಾಲಕ್ಕೆ ಬಂದ ಅನುವಾದಗಳು ಸ್ವತಂತ್ರ ಕೃತಿಗಳಾಗಿವೆ. ಮೂಲ ಕೃತಿಯೊಡನೆ ತಾದಾತ್ಮಹೊಂದಿ ಮೂಲಕೃತಿಯ ಉತ್ತಮಿಕೆಯನ್ನು ಉದ್ದಿಷ್ಟ ಭಾಷೆಯಲ್ಲಿ ಪಡಿಮೂಡಿಸಿವೆ. ಈಗಾಗಲೇ ವಿಷಯ ಚರ್ಚಿಸಿರುವಂತೆ ಶಬ್ದಶಃ ಅನುವಾದಕರಾಗದೆ ಸಂಸ್ಕೃತ ಶಬ್ದಕ್ಕೆ ಸಂವಾದಿಯಾದ ಕನ್ನಡ ಶಬ್ದವನ್ನು ಕೊಡುವ ಪಡೆನುಡಿಗಳೇ ಆ ಕಾಲದ ಅನುವಾದಿತ ಸಾಹಿತ್ಯದಲ್ಲಿ ಇವೆ. ಕಾವ್ಯಾನುವಾದವೊಂದು ಪದ್ಯದಲ್ಲಿರಬೇಕೆ ಅಥವಾ ಗದ್ಯದಲ್ಲಿರಬೇಕೆ? ಎಂಬು ಸಂಸ್ಕೃತ ನಾಟಕಗಳೆಲ್ಲವೂ ಕಾವ್ಯಗಳೇ ಎಂಬರ್ಥದಲ್ಲಿ ಈ ಮಾತು ಹೇಳಲಾಗುತ್ತಿದೆ. ಅನುವಾದ ಪದ್ಯದಲ್ಲಿರಬೇಕಾದುದು ಸಹಜ ಹಾಗೂ ತಾತ್ವಿಕ. ಆದರೂ ಅನುವಾದಕನ ಶಕ್ತಿ ಸಾಮರ್ಥ ಇಲ್ಲಿ ಗ್ರಾಹ್ಯ. ಇದೇ ಪದ್ಯಗಳನ್ನು ಗದ್ಯಾನುವಾದವಾಗಿ ಪರಿವರ್ತಿಸಿದ ಅನುವಾದಕರು ಅದನ್ನು ಸಮರ್ಥವಾಗಿ ಅಭಿವ್ಯಕ್ತಗೊಳಿಸಿರುತ್ತಾರೆ. ಹೀಗೆ ತಾತ್ವಿಕ ಚರ್ಚೆ ಒಂದು ಪರಿಧಿಗೆ ಮಾತ್ರ ಸೀಮಿತವಾಗಿರುತ್ತದೆ. ಅದರಾಚೆಗೂ ಸೃಜನತೆಯ ನೈಜ ವ್ಯಾಪಾರ ತನ್ನ ದಾರಿಯೊಂದನ್ನು ಹುಟ್ಟು ಹಾಕಿರುತ್ತದೆ. ಅನುವಾದ ಸಿದ್ಧಾಂತಗಳನ್ನು ಕಲೆ ಹಾಕಬಹುದೇ ವಿನಃ ಅದನ್ನು ಪ್ರತಿ ಹಂತದಲ್ಲೂ ಅನ್ವಯಿಸಲು ಅಸಾಧ್ಯ. ಎಷ್ಟೇ ಬಗೆಯ ಸಿದ್ಧಾಂತಗಳು ಪ್ರಚಲಿತವಾದರೂ ಅವುಗಳು ಅನ್ವಯಿಕ ಸಿದ್ಧಾಂತಗಳಾಗಲು ಸಾಧ್ಯವಿರಲಿಲ್ಲ. ಸಿದ್ಧಾಂತಕ್ಕೆ ಬದ್ಧವಾದ ಕೃತಿ ಸಾಹಿತ್ಯಕೃತಿಯಾಗುವುದಿಲ್ಲ. ಬದ್ಧತೆಯಿಂದ ಬರವಣಿಗೆ ಸಾಧ್ಯವಿಲ್ಲ. ಅನುವಾದ ಮೂಲ ಹಾಗೂ ಉದ್ದಿಷ್ಟ ಭಾಷೆಯ ನಡುವಣ ಸಾವಯವ ಕ್ರಿಯೆ ಬದ್ಧತೆಗೆ ಒಳಪಟ್ಟರೆ ಈ ಬಗೆಬರುವುದಿಲ್ಲ.

ಬಹಳಷ್ಟು ಸಲ ಲೇಖಕ ಮತ್ತು ಓದುಗ ಇಬ್ಬರ ಸಾಂಸ್ಕೃತಿಕ ಪರಿಸರ ಒಂದೇ ಆಗಿದ್ದರೆ ಲೇಖಕ ಬಹಳಷ್ಟು ವಿವರಣೆಯನ್ನು ಹೇಳದೆ ಬಿಟ್ಟಿರುತ್ತಾನೆ. ಉದಾ: ಸಂಸ್ಕೃತ ನಾಟಕಗಳಲ್ಲಿ ಬರುವ ದೋಹದ ಕ್ರಿಯೆಯೆಂಬ ಕವಿಸಮಯ ಕನ್ನಡ ಸಾಹಿತ್ಯ ಓದುವವರಿಗೂ ಗೊತ್ತಿರುವ ವಿಷಯ ಅದೇ ಬೇರೆ ಭಾಷೆಯ ಓದುಗರಿಗೆ ಇದು ತಿಳಿಯದೇ ಇರಬಹುದು. ಈ ವಿವರಣೆ ಅಗತ್ಯವೇ ಅಲ್ಲವೇ ಎಂಬುದು ಅನುವಾದಕನಿಗೆ ತಿಳಿಯಬೇಕಾದ ಸಂಗತಿ. ಅನ್ವಯಿಕ ವಿವರಣೆ ಅಗತ್ಯವೇ ಅಲ್ಲವೇ ಎಂಬುದು ಅನುವಾದಕನಿಗೆ ತಿಳಿಯಬೇಕಾದ ಸಂಗತಿ. ಅನ್ವಯಿಕ ವಿವರಣೆಯನ್ನು ಅನುವಾದಿತ ಭಾಷೆಯಲ್ಲಿ ಹೇಳಬೇಕೆ? ಅಥವಾ ಹೇಳಬೇಕಾದರೆ ಯಾವ ಪ್ರಮಾಣದಲ್ಲಿ ಎಂಬುದನ್ನು ಅನುವಾದಕ ಗುರುತಿಸಬೇಕು. ಸಂಸ್ಕೃತ

ನಾಟಕಾನುವಾದಗಳ ಪ್ರಕ್ರಿಯೆಯಲ್ಲಿ ಕನ್ನಡ ಓದುಗನ ಪರಿಸರ ಸಂಸ್ಕೃತಕ್ಕೆ ಹತ್ತಿರವಾಗಿರುವದರಿಂದ ಈ ಬಗೆಯ ಸಾಧ್ಯತೆ ಕಡಿಮೆ ಕಾಳಿದಾಸನ ಸೂತ್ರಧಾರ ನಡಿಗೆ ವಸಂತೋತ್ಸವ ಇರುವದರಿಂದ ಸಭಿಕರಿಗೆ ಪ್ರಿಯವಾದ ನಾಟಕವೊಂದನ್ನು ಆಡಬೇಕು ಎನ್ನುತ್ತಾನೆ. ಕನ್ನಡ ಪರಿಸರಕ್ಕೆ ಈ ಉತ್ಸವ ಹೊಸದೇನಲ್ಲ. ಆದೇ ರೋಮಿಯೊ-ಜೂಲಿಯಟ್ ನಾಟಕದ ನರ್ತನ ಹೊಸದೆನಿಸುತ್ತದೆ. ಕಾರಣ ಕಟ್ಟಿಕೊಟ್ಟ ಪರಿಸರ. ಭಾರತೀಯ ಪರಿಸರಕ್ಕಿಂತ ತುಂಬ ಭಿನ್ನ ಅದೇ ಗೀತಗೋವಿಂದ ರಾಧಾಕೃಷ್ಣರ ಲಾಸ್ಯ, ವಿಲಾಸ ಕನ್ನಡ ಪರಿಸರಕ್ಕೆ ಹೊಂದಿಕೆಯಾಗುತ್ತವೆ. ಹಾಗಾಗಿ ಸಂಸ್ಕೃತ ನಾಟಕಾನುವಾದಗಳಲ್ಲಿ ಈ ಸಮಸ್ಯೆ ಎದ್ದು ಕಾಣುವುದಿಲ್ಲ.

ಇನ್ನು ಅನುವಾದಕ ಮೂರ ಬಗೆಯ ವಿಷಯಗಳನ್ನು ಗಣನೆಗೆ ತೆಗೆದು ಕೊಳ್ಳಬೇಕಾಗುತ್ತದೆ.

೧) ವಿವರಣಾತ್ಮಕ ೨)ವಿಚಾರಗಳ ಕುರಿತಾಗಿ ೩) ಗುರಿ ಪ್ರಧಾನ್ಯತೆಯಾಗಿ

ವಿವರಣಾತ್ಮಕ ಪ್ರಾಧಾನ್ಯತೆಯಲ್ಲಿ ಮುಖ್ಯ ಘಟನೆಗಳಿಗೆ ಒತ್ತು ಕೊಡಬೇಕಾಗುತ್ತದೆ. ವಿಚಾರಗಳ ಪ್ರಾಧಾನ್ಯತೆಯಲ್ಲಿ ಮತೀಯ ಪುಸ್ತಕಗಳು ಪ್ರಮುಖವಾಗಿರುತ್ತವೆ. ಗುರಿಪ್ರಾಧಾನ್ಯತೆಯಲ್ಲಿ ಹಂತಹಂತದ ವಿವರಣೆಗಳನ್ನು ಒಳಗೊಳ್ಳುತ್ತದೆ. ಸಂಸ್ಕೃತಾನುವಾದ ಪ್ರಕ್ರಿಯೆಯಲ್ಲಿ ಗುರಿ ಪ್ರಾಧಾನ್ಯತೆ ಹಂತ ಹಂತಗಳ ವಿವರಣಾತ್ಮಕತೆ ಪ್ರಮುಖ ಪಾತ್ರವಹಿಸಿದೆ ಎನ್ನಬಹುದು. ಗುರಿ ಪ್ರಾಧಾನ್ಯತಾ ತತ್ವ ಇಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದೆ. ಒಂದು ತುರ್ತಿನ ಪೂರೈಕೆಗಾಗಿ ಅನುವಾದಿಸಲ್ಪಟ್ಟ ಈ ಕೃತಿಗಳು ಭಾಷಾತ್ಮಕ ಸವಾಲುಗಳನ್ನು ಎದುರಿಸಿ ಯಶಸ್ವಿಯಾಗಿದೆ.

ಕಾವ್ಯ ಪಂಕ್ತಿಗಳಲ್ಲಿ ಅಲಂಕಾರವು ಸಾಮಾನ್ಯ ಒಂದು ಮೂಲಭಾಷೆಯಲ್ಲಿನ ಅಲಂಕಾರ ಪರಿಣಾಮ ಅನುವಾದಗೊಂಡ ಭಾಷೆಯಲ್ಲಿಯೂ ಪಡಿಮೂಡಿಸುವದು ಅಗತ್ಯ. ಉಭಯ ಭಾಷಾ ಕಾವ್ಯ ಪ್ರತಿಭೆ ಅವನಲ್ಲಿರಬೇಕು ಭಾವನೆ, ಮನೋಭಾವನೆ ಸೌಂದರ್ಯ ಪ್ರಜ್ಞೆ ಇವುಗಳ ವಿಷಯದಲ್ಲಿ ಪರಿಣಾಮ ಉಂಟುಮಾಡುವುದೇ ಶೈಲಿ ಹಲವಾರು ಬದಲಾವಣೆಗಳ ನಡುವೆ ಈ ಶೈಲಿ ಅನುವಾದಗೊಂಡ ಕೃತಿಯಲ್ಲಿರಬೇಕಾಗುತ್ತದೆ. ಈ ಬಗೆಯಾದ ಶೈಲಿ ಕನ್ನಡದಲ್ಲಿ ಮೂಡಿರುವದಷ್ಟೇ ಅಲ್ಲ. ಅಭಿನವ ಕೃತಿಕಾರರೆನಿಸಿ ನೈಜತೆಯನ್ನು ಮೆರೆದಿದ್ದಾರೆ. ಸಂಸ್ಕೃತ ಕೃತಿಗಳಿಂದ ಅನುವಾದಿಸುವಾಗ ಗದ್ಯದ ರೂಪಾಂತರ ಪದ್ಯದಲ್ಲಿ, ಪದ್ಯದ ರೂಪಾಂತರ ಗದ್ಯದಲ್ಲಿ ಮಾಡುವುದನ್ನು ಅನುವಾದಕರು ತೆಗೆದುಕೊಂಡಿದ್ದಾರೆ. ಮೂಲ ಪಠ್ಯದ ಆಶಯ ಬಿಂಬಿಸುವದರೊಂದಿಗೆ ಅನುವಾದಿತ ಭಾಷೆಯ ಜಾಯಮಾನಕ್ಕೂ ಹೊಂದಿಕೊಂಡಿರುವದರಿಂದ ಮೂಲಕ್ಕೆ ನಿಷ್ಠರಾಗಿರುವದು ಎಂಬ ತತ್ವ ಸಾರ್ವಕಾಲಿಕವೇ ಎಂಬ ಸಂಶಯ ಉಂಟಾಗುತ್ತದೆ.

ಉದಾ : ಬಿ. ಕೃಷ್ಣಪ್ಪನವರು ಶಾಕುಂತಲದ ಶ್ಲೋಕಗಳನ್ನು ಗದ್ಯಾತ್ಮಕರೂಪದಲ್ಲಿ ಅನುವಾದಿಸಿದ್ದಾರೆ.

ಗಚ್ಛತಿ ಪುರಃ ಶರೀರಂ ಧಾವತಿ ಪಶ್ಚಾತ್ ಅಸಂಸ್ತುತಂ ಚೇತಃ।
ಚೀನಾಂಶುಕಮಿವ ಕೇತೋಃ ಪ್ರತಿವಾತಂ ನೀಯಮಾನಸ್ಯ॥

''ಗಾಳಿಗೆ ಇದಿರಾಗಿ ಚಲಿಸುತ್ತಿರುವ ಧ್ವಜಸ್ತಂಭವ ಹಾಗೆಯೇ ನನ್ನ ಶರೀರವು ಮುಂದೆ ಮುಂದಕ್ಕೆ ಚಲಿಸುತ್ತಿರುವುದು; (ಧ್ವಜಸ್ಥವಾದ) ಚೀನಾಂಶುಕದಂತೆಯೇ ನನ್ನ ಮನಸ್ಸು ಅಸಂಸ್ಥುತವಾಗಿ ಹಿಂದು ಹಿಂದಕ್ಕೆ ಓಡುತ್ತಿದೆ.

ನೀಡಾ ಅವರು ಹೇಳುವಂತೆ ಸಂವಾಹನ ಕೌಶಲ್ಯ, ಮೂಲ ಆಶಯದ ಬಂಧ, ಪ್ರತಿಕ್ರಿಯೆಗಳ ಸಮಾನತೆ ಮೂಲ ಪಠ್ಯದ ಓದುಗರ ಪ್ರತಿಕ್ರಿಯೆ ಹಾಗೂ ಅನುವಾದಿತ ಕೃತಿಯ ಓದುಗರ ಪ್ರತಿಕ್ರಿಯೆ ಸಮಾನ ಮಟ್ಟದಲ್ಲಿರುವುದು ಎಂಬುದು ವಸಹತುಶಾಹಿ ಕಾಲಘಟ್ಟದ ಅನುವಾದಗಳಲ್ಲಿ ಕಂಡುಬರುತ್ತದೆ. ಈ ಅನುವಾದಗಳು ಮೂಲ ಕೃತಿಯ ಸಮಕಾಲಿನ ಉತ್ಪನ್ನಗಳಾಗಿ ಬಂದಿವೆ. ಮೂಲಪಠ್ಯಕ್ಕೆ / ಆಶಯಕ್ಕೆ ವಿಧೇಯತೆ ಮತ್ತು ಮೂಲಭಾಷೆಯ ಚೇತನವನ್ನು ಅನುವಾದಗೊಂಡ ಭಾಷೆಯಲ್ಲಿ ಉಳಿಸಿಕೊಳ್ಳುವುದು ಸಾಮಾನ್ಯವಾಗಿ ಈ ಕಾಲಘಟ್ಟದ ಸ್ವೀಕೃತ ತತ್ವಗಳು ಕಾವ್ಯಾನುವಾದ ತುಂಬಾ ಕ್ಲಿಷ್ಟವಾದುದು. ಇದು ಮೂರು ಬಗೆಗಳಲ್ಲಿ ನಡೆಯುತ್ತದೆ.

೧. ಮೂಲಪಠ್ಯದಿಂದ ಧ್ವನ್ಯಾತ್ಮಕ ಬದಲಾವಣೆಗೆ ಅದರಲ್ಲಿ ಅದರ ಅರ್ಥ ಕಳೆದುಕೊಳ್ಳುತ್ತದೆ.
೨. ಶಬ್ದಾನುವಾದ - ಶಬ್ದಶಃ ಅನುವಾದದಿಂದ ಕಾವ್ಯದ ಅರ್ಥ ಮತ್ತು ಬಂಧ ಕೆಡುತ್ತದೆ.
೩. ಛಂದಸ್ಸಿನ ಅನುವಾದ - ಮೂಲಪಠ್ಯದ ಸೊಗಸನ್ನು ಹಾಳುಮಾಡುತ್ತದೆ.

ಈ ಮೂರು ತರನಾದ ಸವಾಲುಗಳಿಗೆ ಅನುವಾದ ಪ್ರಕ್ರಿಯೆಯಲ್ಲಿ ಉತ್ತಮ ಪ್ರತಿಕ್ರಿಯೆ ದೊರೆತಿದೆ. ಈ ವಸಹತುಶಾಹಿ ಅನುವಾದ ಘಟ್ಟದಲ್ಲಿ ಮೂಲ ಪಠ್ಯದಿಂದ ಅರ್ಥ ವ್ಯತ್ಯಸ್ತವಾಗದಂತೆ ಧ್ವನ್ಯಾತ್ಮಕವಾಗಿ ನಾಟಕಗಳು ಬದಲಾವಣೆ ಹೊಂದಿವೆ. ಅರ್ಥ ಬಂಧ ಕೆಡದ ಹಾಗೆ ಅನುವಾದ ಕಾರ್ಯ ನಡೆದಿದೆ. ಮೂಲ ಸಂಸ್ಕೃತ ವೃತ್ತಗಳನ್ನು ಕೆಲವರು ವೃತ್ತಗಳಾಗಿ ಇನ್ನು ಕೆಲವು ಕಂದಗಳಾಗಿ ಅನುವಾದಿಸಿದ್ದಾರೆ. ಮೈಸೂರು ಪ್ರಾಂತ್ಯದವರು ಕಂದಗಳಾಗಿ ಬಳಸಿಕೊಂಡಿದ್ದಾರೆ. (ಕಂದವು ರಚನೆಯಲ್ಲಿ ಆರ್ಯ, ಗೀತಿಕೆ, ಸ್ಕಾಂಧಶ ಎಂಬ ಛಂದಸ್ಸುಗಳು ಛಾಯೆಯಲ್ಲಿ ರೂಪಗೊಂಡಿವೆ). ಜನಪದಲ್ಲಿ ತ್ರಿಪದಿಗೆ ಇರುವ ಅಗ್ರಸ್ಥಾನ ಮಾರ್ಗ ಕಾವ್ಯದಲ್ಲಿ ಕಂದಕ್ಕೆ ದೊರೆತಿದೆ. ಈ ಛಂದಸ್ಸು ಕಾವ್ಯ ಪ್ರತಿಭೆಗೂ, ಶಾಸ್ತ್ರ ಪ್ರತಿಭೆಗೂ ಹೇಳಿ ಮಾಡಿಸಿದ ಮಾಧ್ಯಮವಾಗಿದೆ. ಈ ರೀತಿಯಾದ ರಚನೆಯನ್ನು

ಅಳವಡಿಸಿಕೊಂಡವರು ಮೊದಲಿಗೆ ಬಸವಪ್ಪ ಶಾಸ್ತ್ರಿಗಳು ಕಾಳಿದಾಸನ ಮೂಲ ಪಠ್ಯಕ್ಕೆ ಸಮಾನಾಂತರದಲ್ಲಿ ಗದ್ಯಶೈಲಿಯನ್ನು ಅಳವಡಿಸಿಕೊಂಡ ಶಾಸ್ತ್ರಿಗಳು ವೃತ್ತಗಳಲ್ಲಿ ತಮ್ಮದೇ ಆದ ಕಂದ ಶೈಲಿಯಿಂದ ಛಾಪು ಮೂಡಿಸಿದ್ದಾರೆ. ಕಂದದಲ್ಲಿ ನಾಲ್ಕು ಪಾದಗಳಿರುತ್ತವೆ. ಒಂದು ಮತ್ತು ಮೂರನೇಯ ಪಾದಗಳು ಹಾಗೂ ಎರಡೂ ಮತ್ತು ನಾಲ್ಕನೇಯ ಸಾಲುಗಳು ಸಮನಾಗಿರುತ್ತವೆ. ಒಂದು ಮತ್ತು ಮೂರನೇಯ ಸಾಲುಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳು

| | |
|---|---|
| ಳ ಳ ಳ | ಸುಲಭ ಸರಲಿರಾವಗಾಹುಃ |
| ಳ ಳ ಳ ಳ ಳ | ಪಾಟಲಸಂಸರ್ಗಿ ಸುರಭಿವನವಾತಾಃ। |
| ಳ ಳ ಳ | ಪ್ರಚ್ಛಾಯ ಸುಲಭ ನಿದ್ರಾ |
| ಳ ಳ ಳ ಳ ಳ | ದಿವಸಾಃ ಪರಿಣಾಮರಮಣೀಯಾಃ॥ |

ಈ ಕಾಲಘಟ್ಟದಲ್ಲಿ ಭಾಷೆಯ ಸ್ವರೂಪವು ಬೇರೆಯಾಗಿತ್ತು. ನಾಮ ಅಥವಾ ಕ್ರಿಯಾಪ್ರಕೃತಿಗಳಿಗೆ ಕೆಲವು ಪ್ರತ್ಯಯಗಳನ್ನು ಸೇರಿಸಿ ಸಾಧಿತ ನಾಮಗಳಾಗಿ ಪರಿವರ್ತಿಸುವ ರೂಢಿ ಕಂಡುಬರುತ್ತದೆ. ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ಪ್ರತ್ಯಯಗಳು ಸೇರಬಹುದು. ಓಣ ಎಂಬ ಪ್ರತ್ಯಯ ಸೇರೋಣ ಎಂದಾಯಿತು. ಕ್ರಿಯಾ ಪ್ರಾತಿಪದಿಕಗಳಿಗೆ ಕೆಲವು ಅಧ್ಯಾಯ ಅಥವ ಆಖ್ಯಾತ ಪ್ರತ್ಯಯಗಳನ್ನಂಟಿಸಿ ವಿವಿಧ ಕ್ರಿಯಾರ್ಥಕ ರೂಪಗಳನ್ನು ಸಾಧಿಸುವ ರೂಢಿ ಎಲ್ಲಾ ಪ್ರಭೇದಗಳಲ್ಲಿಯೂ ಕಂಡು ಬರುತ್ತದೆ. ಪಕ್ಷಾರ್ಥ ಹಾಗೂ ಭಾವಾರ್ಥಗಳನ್ನು ಅಸಮಾಪಕ ಕ್ರಿಯಾಪದಗಳ ಮೂಲಕವೂ ಹೇಳಲಾಗುತ್ತದೆ. ಮೈಸೂರು ಕನ್ನಡದಲ್ಲಿ ಭೂತ ಕೃದಂತಗಳಿಗೆ ಆದರೆ, ಅರೆ ಅಥವಾ ಅಲ್ಲಿ ಪ್ರತ್ಯಯಗಳು ಸೇರಿ ಪಕ್ಷಾರ್ಥರೂಪಗಳು ಸಿದ್ಧವಾಗುತ್ತವೆ. ವಿದ್ಯರ್ಥಕ ರೂಪಗಳನ್ನು ಪಡೆಯುವಲ್ಲಿ ಭಾವಾರ್ಥಕ ರೂಪಗಳಿಗೆ ಬೇಕು. ತಕ್ಕಾದ್ದು ಎಂಬ ಪ್ರತ್ಯಯಗಳಿರುತ್ತವೆ. ಕರ್ತರಿ ಹಾಗೂ ಕರ್ಮಣಿ ಎಂಬ ಎರಡು ಬಗೆಯ ವಾಕ್ಯಾರಚನೆಗಳ ಪ್ರಯೋಗ ಲಿಖಿತ ಭಾಷೆಯಲ್ಲಿ ಕಂಡುಬರುತ್ತದೆ, ಕರ್ಮಣಿ ರಚನೆಯನ್ನು ಸಾಧಿಸುವ ಎರಡು ರೀತಿಗಳಲ್ಲಿ ಭಾವಾರ್ಥಕ ಕ್ರಿಯಾರೂಪಗಳಿಗೆ ಪಡು ಧಾತುವನ್ನು ಪ್ರತ್ಯಯವಾಗಿರಿಸಿ ಮಾರಲ್ಪಡು, ತರಲ್ಪಡು ರೂಪಗಳನ್ನು ಪಡೆಯಲಾಗಿದೆ. ಸಾಹಿತ್ಯಿಕ ಭಾಷೆಯಲ್ಲಿಯೂ ಮೈಸೂರು ಭಾಷೆ ಶ್ರೀಮಂತ ಸಾಹಿತ್ಯಿಕ ಸಂಪ್ರದಾಯದ ಹಾಗೂ ಅರಮನೆಯ ಹಿನ್ನೆಲೆಯುಳ್ಳದ್ದಾಗಿದ್ದರೂ, ಹೊಸಭಾಷೆಯನ್ನು ರೂಢಿಸಿಕೊಳ್ಳುವ ಸೂಚನೆಗಳು ಪ್ರಾರಂಭಿಕ ಪ್ರಯತ್ನಗಳು ಕಂಡು ಬಂದರೂ ಸಂಸ್ಕೃತ ಭೂಯಿಷ್ಠವಾದ ನಡುಗನ್ನಡ ಶೈಲಿಗೆ ಹೆಚ್ಚಾಗಿ ಅಂಟಿಕೊಳ್ಳುವ ಪ್ರವೃತ್ತಿ ಇನ್ನೂ ಕಡಿಮೆಯಾದಂತೆ ತೋರೆದು. ಬಸವಪ್ಪಶಾಸ್ತ್ರಿಗಳಲ್ಲೇ ಈ ಇಬ್ಬಗೆಯ ಧೋರಣೆ ಕಂಡು ಬರುತ್ತದೆ. ಮೈಸೂರು ಪ್ರದೇಶದಲ್ಲಿ ಹೊಸವಸ್ತುಗಳನ್ನು ಸ್ವತಂತ್ರ ಕೃತಿಗಳಿಗಿಂತ ಹಳೆಯ ಕೃತಿಗಳ ಅನುವಾದವೇ ಹೆಚ್ಚಾಗಿ ಕಾಣಬರುತ್ತದೆ. ಹೊಸ ಸಾಹಿತ್ಯ ಪ್ರಕಾರಗಳನ್ನು ಹುಟ್ಟು ಹಾಕಿ ಬೆಳೆಸುವ ಪ್ರವೃತ್ತಿ ಕಡಿಮೆಯಾಗಿರುವದು ವೈಶಿಷ್ಟ್ಯ.

೬) ಕನ್ನಡ ಸಾಹಿತ್ಯ ಪ್ರಕಾರಗಳ ಇತಿಹಾಸದಲ್ಲಿ ನಾಟಕಕ್ಷೇತ್ರವು ಬಂಜೆಯೆಂಬ ಆಪಾದನೆಯನ್ನು ತಮ್ಮ ಸಾಮರ್ಥ ಅನುವಾದ ಕಾರ್ಯದಿಂದ ನೀಗಿದ ಯಶಸ್ಸು ಸಂಸ್ಕೃತ ನಾಟಕಗಳನ್ನು ಕನ್ನಡಿದಿಸ ಮಹನೀಯರದ್ದು.

ವಸಾಹತುಶಾಹಿ ಕಾಲಘಟ್ಟದ ಅನುವಾದಗಳು ಮೂಲಕ್ಕೆ ನಿಷ್ಠವಾಗಿದ್ದರೂ, ಅನೇಕ ಸಮಸ್ಯೆಗಳನ್ನು ಎದುರಿಸಿವೆ. ಸಂಸ್ಕೃತಾನುವಾದಗಳ ವಿಷಯದಲ್ಲೂ ಇದು ತನ್ನ ಪ್ರಭಾವವನ್ನು ತೋರಿಸಿತು. ಮೂಲಕೃತಿಕರು ಬಳಸುವಂತೆ ಒಂದು ಸಂಸ್ಕೃತ ನಾಲ್ಕಾರು ಪ್ರಾಕೃತ ಉಪಭಾಷೆಗಳ ವೈವಿಧ್ಯವೇ ಕನ್ನಡದಲ್ಲಿ ಇಲ್ಲ. ಉಚ್ಚಪಾತ್ರದ ಶಿಷ್ಟ ಪದ್ಯವಿರು ನೀಚಪಾತ್ರದ ಕನಿಷ್ಠ ಗ್ರಾಮ್ಯವಚನವಿರಲಿ - ಒಂದೇ ಬಗೆಯ ಕನ್ನಡದಲ್ಲಿ ಮೂಡಿಸಬೇಕಾದರೆ ಅದೊಂದು ಸಾಹಸವೇ '' ಅದನ್ನು ಗಮನಿಸಿದೆ, ಹೇಗೋ ಗಂಭೀರವಾದ ಪ್ರಾಚೀನ ಹಳೆಗನ್ನಡ ಪದ್ಯ ಶೈಲಿಯಲ್ಲಿ ಸಂಸ್ಕೃತ ಪದ್ಯದ ಶ್ರೀಮದ್ ಗಂಬೀರ್ಯವನ್ನುಳಿಸಿಕೊಂಡು ಗದ್ಯಕ್ಕೆ ಒಂದೇ ರೀತಿಯ ಸಾಮಾನ್ಯ ಗ್ರಾಂಥಿಕ ಕನ್ನಡವನ್ನು ಬಳಸುವ ಪ್ರಯೋಗಿ ಮೊಟ್ಟ ಮೊದಲು ನಡೆಯಿತು. ಈ ಪ್ರಯೋಗಗಳನ್ನು ಕೈ ಕೊಂಡವರೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ಪಂಡಿತರು ಇವರು ಸಂಸ್ಕೃತದಲ್ಲಿ ಪರಿಣತಿಯನ್ನು ಹಳಗನ್ನಡ ಚಂಪೂ ಶೈಲಿಯಲ್ಲಿ ಪ್ರಭಾತ್ವವನ್ನು ಪಡೆದವರು ಇವರಿಗೆ ಸಿಂಗರಾರ್ಯನು ಅನುಸರಿಸಿದ ಈ ಮಾರ್ಗ ಅಮುಕರಣೀಯವಾಗಿ ಕಂಡಿದ್ದು ಆಶ್ಚ ರ್ಯವಿಲ್ಲ'' ( ಕನ್ನಡ ಸಾಹಿತ್ಯ ಪರಿಷತ್ರಿಕೆ ಜೂನ್ ೧೯೮೧ ಕನ್ನಡದಲ್ಲಿ ಸಂಸ್ಕೃತ ನಾಟಕಗಳು ಡಾ. ಕೆ. ಕೃಷ್ಣಮೂರ್ತಿ)

''ಪ್ರಾಗ್‌ಜ್ವಾಲಿತಾತ್ ಪ್ರದೀಪಾದ್ ಹಿ ದೀಪಿತು ದೀಪಸಂತತಿ'' ಮೊದಲು ಹೆಚ್ಚಿಟ್ಟ ಒಂದು ಹಣತಯಿಂದ ಅನೇಕ ದೀಪದ ಸಾಲುಗಳೇ ಬೆಳಗತೊಡಗುತ್ತವೆ'' ಈ ತರ್ಕ ಅನುವಾದ ಪ್ರಕ್ರಿಯೆಯಲ್ಲಿ ಚೆನ್ನಾಗಿ ಕೆಲಸ ಮಾಡಿದೆ. ಬಸವಪ್ಪ ಶಾಸ್ತ್ರಿಗಳಿಂದ ಶುರುವಾದ ಈ ಪ್ರಕ್ರಿಯೆ ಕೆಲವೇ ಹಂತಗಳಲ್ಲಿ ಇಡೀ ಮೈಸೂರು ಪ್ರಾಂತ್ಯವನ್ನು ಆವರಿಸಿದೆ. ಅದೇ ರೀತಿ ಉತ್ತರ ಕರ್ನಾಟಕದಲ್ಲಿ ಚು. ಶೇಷಗಿರಿಯರಿಂದ ಆರಂಭಗೊಂಡ ಈ ಪ್ರಕ್ರಿಯೆ ಇಡೀ ಪ್ರಾಂತ್ಯದಲ್ಲೆಲ್ಲಾ ಹಬ್ಬಿ ಚಳುಚಳಿ ರೂಪವನ್ನು ಕೂಡ ಪಡೆದುಕೊಂಡು ವಿದ್ಯಾವರ್ಧಕ ಸಂಘವೊಂದರ ನಿರ್ಮಾಣಕ್ಕೆ ಕಾರಣವಾಯಿತೆಂದರೆ ಆಶ್ಚರ್ಯವಿಲ್ಲ.

ಉದಾ : ಗದ್ಯಾನುವಾದಕ್ಕೆ, ಮುದ್ರಾರಾಕ್ಷಸ ನಾಟಕದ ಒಂದು ಪದ್ಯ ದುರ್ಗಸಿಂಹನು ತನ್ನ ಕರ್ನಾಟಕ ಪಂಚತಂತ್ರದಲ್ಲಿ ಹೀಗೆ ಕನ್ನಡಿಸಿದ್ದಾನೆ.

ಅಪ್ರಾಜ್ಞೇನ ಚ ಕುತರೇಣ ಚ ಗುಣ ಃ ಸ್ಯತ್ ಸಾನುರಾಗೇಣ ಕಃ ?
ಪ್ರಜ್ಞಾ ವಿಕ್ರಮ ಶಾಲಿನೋಪಿ ಹಿ ಭವೇತ್ ಕ್ರಿಂ ಭಕ್ತಿಹೀನಾತ್ ಫಲಮ್ ।
ಪ್ರಜ್ಞಾ ವಿಕ್ರಮ ಭಕ್ತಯಃ ಸಮುದಿತು। ಯೇಷಾಂ ಗುಣಾ ಭೂತಯೇ
ತೇ ಭೃತ್ಯಾ ನೃಪತೇಃ ಕೆಳತ್ರಮಿತ್ರತೆ ಸಂಪತ್ತು ಚಾಪತ್ಸು ಚ ॥

''ಬುದ್ಧಿ ಹೀನನೂ ಕಾತರನುಮಾಗಿರ್ಪವಂ ಸ್ನೇಹಿತನುದೂದರಿಂದಾವ ಲೇಸುಂಟು? ಬುದ್ಧಿ ಪರಾಕ್ರಮಗಳಿಂದೊಳ್ಪುವೆತ್ತವನಾದೊಡಂ ಭಕ್ತಿಯಿಲ್ಲದದೆ ನೇತರ್ಕಂ ಬಾರ್ತೆಯಿಲ್ಲಂ ಬುದ್ಧಿ ಪರಾಕ್ರಮ ಭಕ್ತಿಗಳ ಆರ್ಕೆಲಬಗರ್ಳಾಳವು ಆ ಭೃತ್ಯರ್ ಅರಸುಗಳೊ ಪಂಡಿರ್ಮಕ್ಕಾಳೋಪಾದಿಯಲ್ಲಿ ಸಂಪತ್ತಾದೊಡಂ ವಿಪತ್ತಾದೊಡಂ ಬಿಡರ್''

ಆದಕ್ಕಾಗಿ ಡಾ.ಕೆ. ಕೃಷ್ಣ ಮೂರ್ತಿಗಳು ಹೀಗೆನ್ನುತ್ತಾರೆ. '' To be thorough translator, he must be a thorough poet''. ಪರಿಪೂರ್ಣ ಭಾಷಾಂತಕಾರ ಪರಿಪೂರ್ಣಕವಿಯೂ ಆಗಿರಬೇಕು' ಎಂಬ ಡ್ರೈಡನ್ನನ ಉಕ್ತಿ ಇಲ್ಲಿ ಸ್ಮರಣೀಯ. ಮೈಸೂರು ಅರಮನೆ ಆಸ್ಥಾನ ಪಂಡಿತರಲ್ಲಿ ಅನೇಕರು ಬೇರೆ ಬೇರೆ ನಾಟಕಗಳನ್ನು ಒಂದೇ ಮಾದರಿಯಿಂದ ಅನುವಾದಿಸಿದರೂ, ಅವರ ಪ್ರತಿಭಾ ತಾರತಮ್ಯದಿಂದ ತುಂಬಾ ಕೀರ್ತಿಶಾಲಿಗಳಾದವರು ಇಬ್ಬರೇ ಸೊಸಲೆ ಅಯ್ಯಾಶಾಸ್ತ್ರಿಗಳು, ಬಸವಪ್ಪ ಶಾಸ್ತ್ರಿಗಳು. ಈ ಬಗೆಯ ತಾತ್ವಿಕ ಚರ್ಚೆಯಿಂದುಂಟಾದ ಅಂಶಗಳನ್ನು ಈ ರೀತಿ ನಿರ್ವಹಿಸಬಹುದು.

೧. ಅನುವಾದ ಒಂದು ಕಲೆ ಅದೂ ಸಾಹಿತ್ಯಕಲೆ.
೨. ಸಾಹಿತ್ಯ ಸೃಷ್ಟಿಗೆ ಪ್ರತಿಭಾ ಸ್ಫೂರ್ತಿ ಎಷ್ಟು ಅವಶ್ಯಕವೋ, ಉತ್ತಮ ಅನುವಾದವೆಂಬ ಅನುಸೃಷ್ಟಿಗೂ ಅದು ಅಷ್ಟೇ ಅವಶ್ಯ.
೩. ಸಂಸ್ಕೃತ ವಿದ್ವತ್ತೆಯಾಗಲಿ, ಕನ್ನಡ ವಿದ್ವತ್ತೆಯಾಗಲಿ ಅಥವಾ ಉಭಯ ಭಾಷಾ ಪ್ರಾವಿಣ್ಯವಾಗಲಿ ಸಂಸ್ಕೃತ ನಾಟಕದ ಉತ್ತಮ ಅನುವಾದಕ್ಕೆ ಸಾಕಾಗದು.
೪. ಸಂಸ್ಕೃತ ನಾಟಕಗಳ ಸಾಹಿತ್ಯಗುಣ - 'ನಾಟಕಾಂತಂ ಕವಿತ್ವಂ' ಕಾವ್ಯೇಷಂ ನಾಟಕಂ ರಮ್ಯಂ' 'ಸಂದರ್ಭೇಷಂ ದಶರೂಪಕಂ ಶ್ರೇಯ' ಪದ್ಯಶೋಭೆಯಿಂದ ಎದ್ದು ಕಾಣಿಸುತ್ತದೆ. ಅದನ್ನು ಪದ್ಯವಾಗಿಯೇ ಕನ್ನಡಿಸದೇ ಸಂಸ್ಕೃತ ನಾಟಕದ ಕನ್ನಡ ಅನುವಾದ ಸಾರ್ಥಕವಾಗಲಾರದು.
೫. ಪಾಶ್ಚಾತ್ಯ ನಾಟಕಗಳ ಅನುವಾದಕ್ಕಿಂತ ಸಂಸ್ಕೃತ ನಾಟಕಗಳ ಅನುವಾದ ಸಂಮೃದ್ಧಿಯಷ್ಟೇ ಅಲ್ಲ ಸಿದ್ಧಿಯೂ ಹೆಮ್ಮ ತರುವಂತದ್ದು.

ವಸಾಹತುಶಾಹಿ ಕಾಲದಲ್ಲಿ ಸ್ವತಂತ್ರ ಸಾಹಿತ್ಯ ಕೃತಿಗಳ ಅಭಾವವಿತ್ತು ಎನ್ನುವುದು ಈಗಾಗಲೇ ಚರ್ಚಿಸಲಾಗಿದೆ. ಆದರೆ ಶಿಕ್ಷಣ ಪ್ರಸಾರದಿಂದ ಒಂದು ಓದುಗ ವರ್ಗ ತಯಾರಾಗಿತ್ತು. ವಾಚಕವೃಂದ ಮತ್ತು ಕನ್ನಡ ಭಾಷೆಯ ಉಳಿವಿಗೆ ಸಹಾಯ ಮಾಡಬೇಕಾದರೆ, ಹೊಸ ಪುಸ್ತಕಗಳು ನಿರ್ಮಾಣ ವಾಗಬೇಕಾದಂಥ ಅಗತ್ಯ ಇತ್ತು. ಕೇವಲ ನೀರಸ, ಯಾಂತ್ರಿಕ ಕಥಾರೂಪದ ಪುಸ್ತಕದ ನಿರ್ಮಾಣ ಈ ದಿಸೆಯಲ್ಲಿ ಉಪಯೋಗ ವಿರಲಿಲ್ಲ. ಓದುಗರಿಗೆ ಅಭಿಜಾತವಾದದ್ದನ್ನೆ ಕೊಡಬೇಕಾಗಿತ್ತು. ಇದರಿಂದಾಗಿಯೇ ಓದುಗರ ಆಸಕ್ತಿಯನ್ನು ಕಾಯ್ದುಕೊಂಡು ಅದನ್ನು ಬೆಳೆಸುವ ಉಪಾಯವನ್ನು ಹುಡುಕಬೇಕಾಗಿತ್ತು. ಕೃತಿ ಅನುವಾದವಾದರೂ ಅದು ವಿಶೇಷ ಸಾಹಿತ್ಯಿಕ ಮೌಲ್ಯದ್ದಾಗಿರಬೇಕು ಎಂದು ಓದುಗ ಬಯಸುವುದು ಸಹಜವಾಗಿತ್ತು. ವಾಚಕವೃಂದದ ನಿರ್ಮಾಣ ಮತ್ತು ಸಾವರ್ಧನೆ ಒಂದು ಅನಿವಾರ್ಯ ತತ್ವವಾಗಿ ಮೂಡಿ ಬಂತು. ಧಾರವಾಡದಲ್ಲಿ ಕನ್ನಡ ವಿದ್ಯಾವರ್ಧಕ ಸಂಘ ಈ ಕೆಲಸವನ್ನು ಮಾಡುವ ಒಂದು ಸಂಸ್ಥೆಯಾಗಿ ಕೆಲಸಮಾಡಿತ್ತು.

# ಅಧ್ಯಾಯ - ೭

# ಸಮಾರೋಪ

ಈವರೆಗಿನ ಎಲ್ಲಾ ವಿಭಾಗಗಳಲ್ಲಿ ಸಂಸ್ಕೃತದಿಂದ ಕನ್ನಡಕ್ಕೆ ಬಂದ ಅನುವಾದಗಳ ಬಗೆಗಿನ ವಿವಿಧ ಆಯಮಗಳ ಚರ್ಚೆ ಮಾಡಲಾಗಿದೆ. ಅನುವಾದ ಕೃತಿಗಳನ್ನು ಒಟ್ಟಾರೆಯಾಗಿ ಅಧ್ಯಯನಕ್ಕೆ ಒಳಪಡಿಸಲು ಇಲ್ಲಿಯವರೆಗೆ ಪ್ರಯತ್ನಿಸಲಾಗಿದೆ. ವಿಶ್ಲೇಷಣೆ ಮಾಡುವ ಸಂದರ್ಭದಲ್ಲಿ ಹಾಗೂ ಅಲ್ಲಲ್ಲಿ ತೌಲನಿಕ ಅಧ್ಯಯನದಲ್ಲಿ ಸಂವಾದಿಯಾದಂಥ ನಿರ್ಣಯಗಳು ಬಂದರೂ ಕೂಡ ಅಧ್ಯಯನದ ಏಕಸೂತ್ರೀಕರಣವನ್ನು ಇಲ್ಲಿ ಮಾಡುವುದು ಅವಶ್ಯಕವಾಗಿದೆ.

ಕನ್ನಡ ಸಂದರ್ಭವನ್ನು ಅವಲೋಕಿಸಿದಾಗ ಕನ್ನಡ-ಸಂಸ್ಕೃತ ಅನ್ಯೋನ್ಯಾಶ್ರಯಿತ್ವ ಗೋಚರವಾಗುತ್ತವೆ. ಕನ್ನಡ ಸಾಹಿತ್ಯ ಸಂದರ್ಭ ಮತ್ತು ಸಂಸ್ಕೃತ ಸಾಹಿತ್ಯದ ಕೊಡುಗೆಯನ್ನು ಭಿನ್ನಭಿನ್ನವಾಗಿ ನೋಡಲು ಸಾಧ್ಯವಿಲ್ಲ. ಆದ್ದರಿಂದಲೇ ಅನುವಾದದ ಪ್ರಕ್ರಿಯೆಯ ಅಂದರೆ, ಕನ್ನಡದ ಮಟ್ಟಿಗೆ ಇನ್ನೊಂದು ಪದವಾದ ಕನ್ನಡೀಕರಣ ಪ್ರಕ್ರಿಯೆಯ ನೆಲೆಯಲ್ಲಿ ಚರ್ಚಿಸಲಾಗಿದೆ. ಕವಿರಾಜಮಾರ್ಗದಿಂದಲೇ ಇದು ಆರಂಭಗೊಳ್ಳುತ್ತದೆ. ವಸಾಹತುಪೂರ್ವ ಕಾಲಘಟ್ಟವಾದ ಈ ಕಾಲವನ್ನು ಅವಲೋಕಿಸುವ ಸಂದರ್ಭದಲ್ಲಿ ರಾಜಾಶ್ರಯ ಪ್ರೇರಿತವಾದ ಅನುವಾದಗಳು ತನ್ನದೇ ಆದಂಥ ಸ್ಥಾನವನ್ನು ಪಡೆದಿದೆ.

ಯಾವುದೇ ಕೃತಿಯು ಆ ಕಾಲದ ಯಾವುದಾದರೂ ಒಂದು ಅಥವಾ ಅದಕ್ಕಿಂತ ಹೆಚ್ಚು ಅಗತ್ಯಗಳಿಗಾಗಿ ಸೃಷ್ಟಿಯಾಗುತ್ತವೆ. ಕೃತಿ ರಚನೆ ಬಹಳ ಮಟ್ಟಿಗೆ ಒಳಮನದಿಂದ ನಿಯಂತ್ರಿಕವೆಂಬ ಮಾತು ನಿಜವಾದರೂ, ಕಾಲ, ದೇಶ, ಮಾನಾದಿಗಳನ್ನು ಮೀರಿ ಅದನ್ನು ನೋಡಲು ಬರುವುದಿಲ್ಲ. ಕವಿರಾಜ ಮಾರ್ಗವನ್ನೇ ನೋಡುವುದಾದಲ್ಲಿ, ಕನ್ನಡದ ಕಾವ್ಯಗಳ ಉಪ ಲಬ್ಧವಿದ್ದರೂ ಕಾವ್ಯವನ್ನು ಕುರಿತು ಒಂದು ಲಾಕ್ಷಣಿಕ ಗ್ರಂಥ ಉಪಲಬ್ಧವಿರಲಿಲ್ಲ. ಕನ್ನಡದ್ದೇ ಆದ ಚತ್ತಾಣ, ಬೆದಂಡೆಗಳನ್ನು ಸಂಸ್ಕೃತದ ಕಾವ್ಯಾಲಂಕಾರದಲ್ಲಿ ಸೇರಿಸಿ ಬರೆದ ಕವಿರಾಜಮಾರ್ಗ 'ದಂಡಿಯ ಕಾವ್ಯ ವರ್ಗ'ದ ಭಾಗಶಃ ಅನುವಾದ, ಕನ್ನಡಿಸುವ ಪ್ರಕ್ರಿಯೆಯ ಅಡಿಪಾಯ ಜೊತೆಗೆ ಅರ್ಥಾತ್ ಸಂವೇದನಾಶೀಲ ಮನಸ್ಸೊಂದರ ಸಾಂಸ್ಕೃತಿಕ ಒಟನಾಟ ಸೃಷ್ಟಿಸಿದ ರಚನೆ ಅಥವಾ ಕೃತಿ ಮುಖ್ಯವಾಗುತ್ತದೆ. ಘಟ್ಟದಲ್ಲಿ ಬಂದಂಥ ಅನುವಾದಗಳನ್ನು ಸಾಂಸ್ಕೃತಿಕ ಅನುವಾದವೆಂದು ಪ್ರಸ್ತುತ ಪ್ರಬಂಧ ಗುರುತಿಸಿಕೊಂಡ ಹಿನ್ನೆಲೆಯಲ್ಲಿ ನೋಡಿದಾಗ ಅವು ಸಾಹಿತ್ಯಿಕ ಉತ್ಕೃಷ್ಟತೆಯನ್ನು ಕಡೆಗಣಿಸಿಲ್ಲ. ಕವಿಗಳು ತಮ್ಮ ಕೃತಿ ಸಾಹಿತ್ಯಿಕ ಕೃತಿ ಎನ್ನುವುದಕ್ಕಿಂತ ಸಾಂಸ್ಕೃತಿಕ ಕೃತಿಯೆಂದು ಗುರುತಿಸಿಕೊಳ್ಳಲು ಇಷ್ಟಪಟ್ಟರು ಎಂಬುದಾಗಿದೆ. ರಾಜಶ್ರಯದ ಹಿನ್ನೆಲೆಯಿಂದ ಮತ್ತು ಈಗಾಗಲೇ ಮಹಾಭಾರತದ ಕಥೆಯನ್ನು ಸ್ಥೂಲವಾಗಿ ಗೊತ್ತಿದ್ದಂತಹ ಆ ಕಾಲದ ಜನ, ಆ ಕೃತಿಯನ್ನು ಸಾಂಸ್ಕೃತಿಕವಾಗಿ ಗುರುತಿಸಿದರು. ಕುಮಾರವ್ಯಾಸನ 'ಕರ್ಣಾಟ ಕಥಾ ಮಂಜರಿ' ಮಹಾಭಾರತವನ್ನು ಕೃಷ್ಣ ಕಥೆಯಾಗಿ ಬರೆದ ಹಿನ್ನೆಲೆಯಿಂದ ಮತ್ತು ದಾಸ ಸಾಹಿತ್ಯದ ಪ್ರಭಾವದಿಂದ ಎಲ್ಲೆಡೆಗೆ ಹರಡಿದ್ದು ಸ್ಪಷ್ಟ. ಗಮಕಿಗಳ ರಾಗಬದ್ಧವಾದ ಉಲಿಯುವಿಕೆ. ಅದಕ್ಕೆ ಲೋಕ ಪ್ರಿಯತೆಯನ್ನು ತಂದುಕೊಟ್ಟಿತು. ಮಹತ್ತಿನೊಡನೆ ಲೋಕಪ್ರಿಯತೆ ಎಂಬ ವಿರಳ ಯೋಗ ಅದಕ್ಕೆ ಲಭಿಸಿತು.

ಪಂಪ, ಕುಮಾರವ್ಯಾಸ, ಲಕ್ಷ್ಮೀಶ ಇವರೆಲ್ಲಾ ಸಾಂಸ್ಕೃತಿಕ ಅಗತ್ಯಕ್ಕೂ, ಸಾಹಿತ್ಯದ ತುಡಿತಕ್ಕೂ ಕೃತಿಗಳನ್ನು ರಚಿಸಿದರೂ ಅವು ಲೋಕೋತ್ತರ ಕೃತಿಗಳಾಗಿ ಮೂಡಿಬಂದವು. ಅದರ ಅರ್ಥ ಅವು ಜನರಿಗೆ ಅರ್ಪಿತವಾಗಿದ್ದರೂ ಅವು ಲೋಕದ ವಿಶಿಷ್ಟ ಅಗತ್ಯಗಳಿಗಾಗಿ ಸ್ಪಂದಿಸಿ ಬರೆದವುಗಳಲ್ಲ. ಆದ್ದರಿಂದಲೇ ಅವು ಸಮಕಾಲೀನ ಜನಮಾನಸವನ್ನು ದೃಷ್ಟಿಯಲ್ಲಿಟ್ಟುಕೊಂಡರೂ ಲೋಕೋತ್ತರ ಕೃತಿಗಳೆನಿಸಿದವು.

ಲಕ್ಷ್ಮೀಶ, ಕುಮಾರವ್ಯಾಸರಂತಹ ಕವಿಗಳು ದಾಸ ಚಳುವಳಿಯಿಂದು ಪ್ರೇರಿತರಾಗಿ ಪರ್ಯಾಯ ರೂಪವಾಗಿ ದಾಸ ಸಾಹಿತ್ಯಕ್ಕೆ ಹಿನ್ನೆಲೆಯಾಗಿ ಒಂದು ಸಮೃದ್ಧ ಕಾವ್ಯಮಯ ಬೃಹತ್ ಕಥಾನಕವನ್ನು ಒದಗಿಸಿಕೊಟ್ಟಂಥ ಹಿರಿಮೆಯನ್ನು ತನ್ನದಾಗಿಸಿಕೊಂಡವರು. ಕುಮಾರವ್ಯಾಸ ಸಾಹಿತ್ಯದ ದೃಷ್ಟಿಯಿಂದ ದಾಸ ಸಾಹಿತ್ಯಕ್ಕೆ ಮಹತ್ತರವಾದ ಕೊಡುಗೆಯನ್ನು ಕೊಟ್ಟರೆ, ಲಕ್ಷ್ಮೀಶ ಅನುವಾದ ಪ್ರಕ್ರಿಯೆಯಲ್ಲಿ ನಾದಮಯಕೆಯನ್ನು ಪರಿಚಯಿಸಿದನು. ಪುರಂದರದಾಸರಂಥ ಗೇಯ ಪ್ರಧಾನ ದಾಸರ ಸಾಹಿತ್ಯಕ್ಕೆ ಇದು ಸಂವಾದಿಯಾಗಿ ಬಂದಂಥ ಕೃತಿ.

ಪಂಪ, ಕುಮಾರವ್ಯಾಸಾದಿ ಕವಿಗಳೂ ಆಯ್ದುಕೊಂಡ ಮೂಲಗ್ರಂಥವಾದ ಮಹಾಭಾರತದ ಪಾತ್ರಗಳು, ಜನವರ್ಗಕ್ಕೆ ಪರಿಚಿತ ಪಾತ್ರಗಳೇ ಆಗಿದ್ದರಿಂದ ಸಾಂಸ್ಕೃತಿಕವಾಗಿ ಕೃತಿಯನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆ ಸುಲಭವಾಯಿತು. ಅದರಂತೆಯೇ ಪಂಪ,ರನ್ನಾದಿಗಳು ವೈದಿಕ ಸಂಸ್ಕೃತಿಯನ್ನು ಜೈನ ಸಂಸ್ಕೃತಿಯನ್ನು ಪರಿವರ್ತಿಸಲು ಪ್ರಯತ್ನಿಸಿದರು. ವೈದಿಕ ಸಂಸ್ಕೃತಿಯೂ ಮಹಾಭಾರತದ ಯಾವ ಪಾತ್ರಗಳನ್ನು ಖಳವಾಗಿಸಿದರೋ, ಅವೇ ಪಾತ್ರಗಳೂ ಜೈನ ಕವಿಗಳ ಕೈಯಲ್ಲಿ ಬೆಳಗಿದವು. ಆದರೂ ಸಂಪೂರ್ಣವಾಗಿ ಜನಮಾನಸವನ್ನು ಮತ್ತು ರಾಜಾಶ್ರಯವನ್ನು ನಿರಾಕರಿಸಲಾಗದೇ ಅನೇಕ ಒಪ್ಪಂದದಡಿಯಲ್ಲಿ ಕೃತಿ ರಚನೆ ಮಾಡಿದರು.

ಹನ್ನೊಂದನೇ ಶತಮಾನದ ಒಂದನೇ ನಾಗವರ್ಮನಿಂದ 'ಕರ್ಣಾಟಕ' ಎಂಬ ಶಿರೋನಾಮೆ ಯನ್ನು ನಾವು ಕಾಣಬಹುದು. ಮುಂದೆ ಬಂದಂಥ ಬಹುತೇಕ ಅನುವಾದಿತ ಕೃತಿಗಳು ಈ ಪದವನ್ನು ಬಳಸಿದವು. ಈ ಪದ ಕರ್ನಾಟಕತ್ವವನ್ನು ಪ್ರತಿನಿಧಿಸುವ ಪದವಾಗಿ ಮೂಡಿಬಂದಿದೆ. ಆ ನಂತರ ಅನೇಕ ಅನುವಾದಗಳಲ್ಲಿ ಮತ್ತು ೧೮-೧೯ನೆಯ ಶತಮಾನದಲ್ಲಿ ಬಂದ ಅನುವಾದಗಳಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಬಂದಂಥ ಮೊದಲ ಅನುವಾದ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದಾ'. ಇದು ಸಂಸ್ಕೃತದ 'ರತ್ನಾವಳಿ'ಯ ಅನುವಾದ. ಇದು ಭಾಗವತದ 'ಮಿತ್ರದಿಂದ ಗೋವಿಂದ' ಉಪಾಖ್ಯಾನವನ್ನು ಸಿಂಗರಾರ್ಯ ಮೂಲ ನಾಟಕಕ್ಕೆ ಕಸಿ ಮಾಡಿ ಕನ್ನಡಕ್ಕೆ ಅನುವಾದಿಸಿದರು. ಅದು ಈ ಕಾಲಘಟ್ಟದಲ್ಲಿ ಬಂದಂಥ ಕೃತಿಯಲ್ಲಿ ಅನ್ಯಕೃತಿಯ ಛಾಯೆಯಿದ್ದಂಥ ಅನುವಾದವೆನ್ನಬಹುದು. ೧೭ ರಿಂದ ೧೯ನೇ ಶತಮಾನದ ಕಾಲಾವಧಿಯನ್ನು 'ಕಗ್ಗತ್ತಲ ಖಂಡ'ವೆಂದು ಗುರುತಿಸುವ ವಿದ್ವಾಂಸರು, ಆ ಕಾಲದಲ್ಲಿಗುಪ್ತಗಾಮಿನಿಯಾದ ಅನುವಾದ ಪ್ರಕ್ರಿಯೆಯನ್ನು ಗಣನೆಗೆ ತೆಗೆದುಕೊಂಡಿಲ್ಲ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕೆಂಪುನಾರಾಯಣನಿಂದ ರಚಿತವಾಗಿ ೧೯ನೇ ಶತಮಾನದಲ್ಲಿ ಹೊಸಗನ್ನಡದ ಮೊದಲ ಕಾದಂಬರಿ 'ಮುದ್ರಾಮಂಜೂಷ' (ಸಂಸ್ಕೃತದ ಮುದ್ರಾಮಂಜುಷಿಯ ಅನುವಾದ), ಹೆಳವನಕಟ್ಟೆ ಗಿರಿಯಮ್ಮನ

'ಚಂದ್ರಹಾಸ' ಇತ್ಯಾದಿಗಳು. ನಂತರದ ಬಸವಪ್ಪಶಾಸ್ತ್ರಿ, ಚುರಮುರಿ ಶೇಷಗಿರಿರಾಯರ 'ಶಾಕುಂತಲ' ಮತ್ತು ತದನಂತರದ ಅನುವಾದ ಪ್ರಕ್ರಿಯೆ ಇವು ಸಾಹಿತ್ಯ ನಿರಂತವಾಗಿ ನಡೆದಿತ್ತೆನ್ನುವುದು ಅಧ್ಯಯನ ಸಾಕಷ್ಟು ಪ್ರಯತ್ನಿಸಿದೆ. ವಸಾಹತುಶಾಹಿ ರಾಜಕಾರಣ ಭಾರತೀಯತೆಯನ್ನು ಬಡಿದೆಬ್ಬಿಸಿತು ಎಂದು ಈಗಾಗಲೇ ಚರ್ಚಿತವಾಗಿವೆ. ಇದಕ್ಕೆ ಪ್ರಥಮವಾಗಿ ಸ್ಪಂಧಿಸಿದ್ದು, ಕನ್ನಡ ಬಲ್ಲ ಸಂಸ್ಕೃತ ವಿದ್ವಾಂಸರು.

ರಂಗಭೂಮಿ ಚಟುವಟಿಕೆ ಒಂದು ದೃಷ್ಟಿಯಿಂದ ಅನುವಾದ ಪ್ರಕ್ರಿಯೆಯ ಹಿಂದೆ ಕೆಲಸ ಮಾಡಿದ ಒತ್ತಾಸೆಗಳು. ಬಸವಪ್ಪಶಾಸ್ತ್ರಿಗಳು ಮತ್ತು ಚುರಮುರಿ ಶೇಷಗಿರಿರಾಯರು ಇವರಿಬ್ಬರು ರಂಗಭೂಮಿಯ ಅಗತ್ಯಕ್ಕೆ ತಕ್ಕಂತೆ 'ಶಾಕುಂತಲ' ನಾಟಕವನ್ನು ಅನುವಾದಿಸಿದರು. ಶಾಸ್ತ್ರಿಗಳ ಅನುವಾದ ಅವರ ಪಾಂಡಿತ್ಯದ ಕ್ರೋಢೀಕೃತ ಸ್ವರೂಪವಾಗಿ ಮೂಡಿಬಂದಿದೆ. ಚುರುಮುರಿ ಶೇಷಗಿರಿರಾಯರು ಸರಳೀಕರಣಗೊಳಿಸಿದ ಈ ಅವಧಿಯು ಲೋಕಾಭಿಮುಖಿಯಾಗಿ ಹೊರಡುವುದು ಸ್ಪಷ್ಟ. ಲೋಕಜ್ಞಾನಾರ್ಥವಾಗಿ, ಅಲೌಕಿಕ, ಆಧ್ಯಾತ್ಮಿಕ ಅಂಶಗಳನ್ನೊಳಗೊಂಡ ಕೃತಿಗಳು ಕನ್ನಡಕ್ಕೆ ಅನುವಾದಿಸಿದ್ದುಟ್ಟಿವು. ಆಧ್ಯಾತ್ಮದ ಚರ್ಚೆಯನ್ನು ನಾಟಕದ ಚೌಕಟ್ಟಿಗೆ ಒಳಪಡಿಸುವಾಗ ಕ್ಲಿಷ್ಟ ತಾತ್ವಿಕ ಮತ್ತು ಆಧ್ಯಾತ್ಮಿಕ ಪ್ರತಿಮೆಗಳು ನಾಟಕದ ಸಂವಹನೆಗೆ ಅಡಚಣೆ ಉಂಟು ಮಾಡಿರುವುದು ಸಾಮಾನ್ಯ ಸಂಕಲ್ಪ ಸೂರ್ಯೋದಯವೆಂಬ ಅನುವಾದಿತ ನಾಟಕ ತೀವ್ರ ತತ್ವಾನ್ವೇಷಣೆ ಮತ್ತು ತನ್ನ ಸಂಸ್ಕೃತ ಭೂಯಿಷ್ಠ ಸಂಭಾಷಣೆಗಳಿಂದ ಜನ ಸಾಮಾನ್ಯರನ್ನು ತಲುಪುವ ಮರಿಗಳಿಂದ ತೊಂದರೆ ಅನುವಾದಿಸಿದೆ. ಈ ನಾಟಕದಂತೆ ಅನುತಾಪವೆಂಬ ಮಾನವೀಯ ಮೌಲ್ಯವನ್ನು ಆಧರಿಸಿ, ಸಿದ್ಧಾಂತಿಶಾಸ್ತ್ರಿಗಳಿಂದ ಅನುತಂಪ ಪ್ರೇಕ್ಷಣಿಕಂ ಎಂಬ ನಾಟಕವು ಅನುವಾದಿಸಲ್ಪಟ್ಟಿತು. ನಾಟಕವು ಒಂದು ದೃಷ್ಟಿಯಿಂದ ಅನುವಾದಕನ ವೈಯಕ್ತಿಕ ಜೀವನದ ನೋವು ನಲಿವುಗಳನ್ನು ನಾಟಕದ ಮೂಲಕ ಪರಿಹರಿಸಿಕೊಳ್ಳುವ ಪ್ರಕ್ರಿಯೆಯಾಗಿ ಈ ನಾಟಕ ಮೂಡಿ ಬಂದಿದೆ. ಇನ್ನು ಕರ್ಪೂರ ಮಂಜರಿ, ಸ್ನುಷಾ ವಿಜಯದಂತಹ ನಾಟಕಗಳನ್ನು ಅನುವಾದಕ ಆಯ್ದುಕೊಂಡ ಬಗೆಯನ್ನು ನೋಡಿದಾಗ ಸ್ತ್ರೀ ವಿದ್ಯಾಭ್ಯಾಸ ಜಾಗೃತಿಯನ್ನು, ಸಾಮಾಜಿಕ ಅಸಮತೋಲನದ ಬಗ್ಗೆ ಜಾಗೃತವಾಗುವ ಮನಸ್ಸನ್ನು ದೃಷ್ಟಿಯಲ್ಲಿಟ್ಟುಕೊಂಡಿದೆ ಎಂಬುದು ಕಂಡು ಬರುತ್ತದೆ. ಸ್ನುಷಾ ವಿಜಯಂ ಸಾಮಾನ್ಯವಾಗಿ ಅತ್ತೆ ಸೊಸೆ ಜಗಳನ್ನು ರಂಗಭೂಮಿಯ ಪ್ರೇಕ್ಷಕರಾಗಲೀ. ಅಂದಿನ ನಾಟಕ ವರ್ಗ ವಾಗಲಿ ಸ್ವೀಕರಿಸುವ ಬಗೆಯನ್ನು ದೃಷ್ಟಿಯಲ್ಲಿರಿಸಿಕೊಂಡಿದೆ ಪೌರಾಣಿಕ ಅಂಶಗಳನ್ನುಳ್ಳ ನಾಟಕಗಳನ್ನು ಕವಿ ಅನುವಾದಿಸಿರುವ ಹಿನ್ನೆಲೆ ಆ ಕಾಲದ ಧಾರ್ಮಿಕ ವಿಶ್ವಾಸವನ್ನು, ಸನಾತನ ಸಂಸ್ಕೃತಿಯನ್ನು ಒಟ್ಟಾಗಿಸುವ ಪ್ರಯತ್ನವಿದೆ. ಕಾಳಿದಾಸ, ಹರ್ಷ ಇತ್ಯಾದಿಗಳನ್ನು ಅನುವಾದಿಸುವಾಗ ಸಂಸ್ಕೃತ ನಾಟಕಕಾರರ ಪರಿಚಯಿಸುವ ಪ್ರಕ್ರಿಯೆ ಕಂಡು ಬರುತ್ತದೆ. ತೌಲನಿಕವಾಗಿ ನೋಡಿದಾಗ ತೂಗಿ ನೋಡಿದ ಪದಬಳಕೆ ಒಂದು ಕಡೆ ಕಂಡು ಬಂದರೂ ಇನ್ನೊಂದು ಕಡೆ ಹೊಸ ಹೆಜ್ಜೆಯ ಗುರುತಾಗಿ ಅವೇ ಶ್ಲೋಕಗಳನ್ನು ಕಂದ/ವೃತ್ತಗಳನ್ನಾಗಿಸುವ ಬಗೆ ಗೋಚರಿಸಿದೆ. ಕಥಾ ಸಂವಿಧಾನವನ್ನು ಯಥಾ ಸ್ಥಿತಿಯನ್ನು ಕಾಯ್ದುಕೊಂಡರೂ ಕೂಡ ಬಳಸುವ ಕಂದಪದ್ಯಗಳು, ವೃತ್ತಗಳು, ಭಾಷಾಶೈಲಿ, ಸಂಸ್ಕೃತವನ್ನು ಜನರಿಗೆ ಕೊಡುತ್ತೇವೆಂಬ ವಿಶ್ವಾಸ ಇವುಗಳೆಲ್ಲಾ ಒಂದು ಬಗೆಯಲ್ಲಿ ಸಾಹಿತ್ಯಿಕ ಅನುವಾದ ವಾಗಿಸಿವೆ. ಇದೊಂದು ಅನುಕೀರ್ತನ ಆದರೆ ಅನುಕರಣವಲ್ಲ.

ಅಭಿನವಗುಪ್ತ ಹೇಳುವಂತೆ ಅನುವ್ಯವಸಾಯ ಅಥವಾ ಅನುಕೀರ್ತನ ಅಂದರೆ, ನಂತರದ ವ್ಯಾಪಾರ ಸಂಸ್ಕೃತ ಕೃತಿಗಳು ಈಗಾಗಲೇ ರಚಿತವಾದ ಕೃತಿಗಳು ಅವುಗಳ ಅನುವ್ಯವಸಾಯ ಈ ಅನುವಾದ ಪ್ರಕ್ರಿಯೆ ವಸಾಹತು ಪೂರ್ವ ಮತ್ತು ವಸಾಹತುಶಾಹಿ ಕಾಲಘಟ್ಟದಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮೂಡಿಬಂದ ಅನುವಾದಗಳ ಏಕಸೂತ್ರತೆ ಪ್ರತ್ಯಭಿಜ್ಞಾನ ಪ್ರಕ್ರಿಯೆ ಇದು ಸಂಸ್ಕೃತಾನುವಾದ ಪ್ರಕ್ರಿಯೆಯ ಮೂಲಧ್ಯೇಯವಾದ ಜ್ಞಾರ್ಥಸ್ಯ ಪ್ರತಿ ಪಾದನದ ಸಂವಾದಿ ಪ್ರಕ್ರಿಯೆಯಾಗಿದೆ.

ತೌಲನಿಕ ಅಧ್ಯಯನದಲ್ಲಿ ಗೋಚರಿಸುವ ಅಂಶಗಳನ್ನು ಹೀಗೆ ಹೇಳಬಹುದು.

೧) ವಸಾಹತು ಪೂರ್ವ ಅನುವಾದಗಳು ಸಾಂಸ್ಕೃತಿಕ ಅನುವಾದಗಳು, ಸಾಹಿತ್ಯಕ ಅನುವಾದ ನೆರಳಿನಲ್ಲಿಯೇ ಇದು ಮೂಡಿಬಂದಿದೆ.

೨) ವಸಾಹತು ಕಾಲದ ಅನುವಾದಗಳು ಸಾಹಿತ್ಯಕ ಅನುವಾದಗಳು ಇವುಗಳಲ್ಲಿ ಸಂಸ್ಕೃತಿಕ ಅಂಶಗಳು ಇಲ್ಲವೆಂತಲ್ಲ ಆದರೆ ಪ್ರಕ್ರಿಯೆ ಜರುಗುವಾಗ ಹೆಚ್ಚು ಪ್ರಭಾವ ಬೀರಿರುವ ಅಂಶ ಸಾಹಿತ್ಯಕ.

೩) ತೌಲಿನಿಕ ಅಧ್ಯಯನ ಕೇವಲ ಕೃತಿಗಳನ್ನು ಪಕ್ಕಕ್ಕೆ ಇಟ್ಟು ನೋಡುವವಲ್ಲಿ, ಪಕ್ಕಕಿಟ್ಟು ನೋಡಿದಾಗ ಹೊಮ್ಮಿರುವ ಸತ್ಯಗಳು ಯಾವವೆಂದರೆ (1) ಒಬ್ಬ ಕವಿ ಅಥವಾ ಅನುವಾದಕ ಒಂದು ಕೃತಿಯನ್ನು ಅನುವಾದಿಸುವಾಗ ಆತನ ನಿಲುವು (2) ಅದೇ ಅನುವಾದಕ ಎರಡು ಕೃತಿಗಳನ್ನು ಅನುವಾದಿಸುವಲ್ಲಿ ತಳೆಯುವ ಧೋರಣೆಗಳು (3) ಅದೇ ಅನುವಾದಕ ಅನುವಾದಿಸುವ ಕೃತಿಯನ್ನು ಈಗಾಗಲೇ ಇನ್ನೊಬ್ಬ ಅನುವಾದಕ ಅನುವಾದಿಸಿದಾಗ ಒಂದೇ ಕೃತಿಯನ್ನು ಅನುವಾದಿಸುವಾಗ ತಳೆಯುವ ಧ್ಯೇಯ ಧೋರಣೆಗಳು ಇಲ್ಲಿ ಪ್ರಮುಖ ಅಧ್ಯಯನ ವಿಧಾನವಾಗಿ ಬಳಿಸಿಕೊಳ್ಳಲಾಗಿದೆ. ಅನುವಾದಕನೊಬ್ಬ ತನ್ನೆ ಸಾಂಸ್ಕೃತಿಕತೆಯನ್ನು ಕುರಿತು ಅನುವಾದಿಸುವಲ್ಲಿಯೂ ಇನ್ನೊಬ್ಬ ತನ್ನ ಪರಿಸರದಲ್ಲಿ ಅನುವಾದಿಸುವದಕ್ಕೂ ತುಂಬ ಭಿನ್ನ ಪರಿಪ್ರೇಕ್ಷ್ಯಗಳಿವೆ. ಆ ಪರಿಪ್ರೇಕ್ಷ್ಯಗಳು ತುಂಬ ಸೂಕ್ಷ್ಮ ಹಂತಗಳಲ್ಲಿ ವ್ಯಕ್ತವಾಗುತ್ತವೆ. ಆ ಕಾಲದ ಅನುವಾದಕರಗಳನ್ನು ಸಾಹಿತ್ಯಪ್ರಜ್ಞೆ, ರಂಗಭೂಮಿ, ಪ್ರಚಲಿತ ರಾಜಕಾರಣ ನಿಯಂತ್ರಿಸುತ್ತಿದ್ದವು. ಎರಡು ಅನುವಾದಗಳನ್ನು ನೋಡಿದಾಗ ಭಿನ್ನ ಅಂಶಗಳೆ ಸಾಮ್ಯತೆಗಳು ಕಂಡುಬರುತ್ತವೆ ಮೂಲಕ್ಕೆ ಬದ್ಧವಾಗಿವೆ ಎನ್ನುತ್ತಲೇ ಅವುಗಳ ನೋಡಿ ಬೇರೆಡೆಗೆ ಹೊರಳಿರುವದು ಕಂಡು ಬರುತ್ತದೆ. ಪ್ರಾರಂಭಿಕ ಧೋರಣೆ ಬರಬರುತ್ತ ಸಡಿಲವಾಗಿ ಬೇರೆ ನೋಟಗಳಿಗೂ ಅವಕಾಶವಾಗುತ್ತದೆ. ಉದಾ: 'ದೂತವಾಕ್ಯಮ್'ನಲ್ಲಿ ಸುಂದರಶಾಸ್ತ್ರಿಗಳು ದುರ್ಯೋಧನ ಶ್ರೀಕೃಷ್ಣ ಸಂವಾದದಲ್ಲಿ ಶ್ರಿಕೃಷ್ಣನು ದುರ್ಯೋಧನನ ಕುಲಗೋತ್ರಗಳನೆನ್ನಲ್ಲಿ ತಿಳಿಸಿ ಹೇಳುವಾಗ ಗೋಳಕಾಗ್ರಜ ಎಂದು ಸಂಬೋಧಿಸುತ್ತಾನೆ. ಅಂದರೆ ವ್ಯಾಸರ ಕೃಪೆಯಿಂದ ದುರ್ಯೋಧನ ವಂಶಜರು ಹುಟ್ಟಿರು ಹಿನ್ನೆಲೆಯನ್ನು ಸೂಚ್ಯವಾಗಿ ಅನುವಾದಕರು ದರ್ಯೋಧನನ ಮೂಲಕ ಸಂಬೋಧಿಸಿದ್ದಾರೆ. ಇಲ್ಲಿ ಆ ಕಾಲಕ್ಕೆ ಬದಲಾಗುತ್ತಿದ್ದ ವೈಜ್ಞಾನಿಕ ಪರಿಸರದ ಪ್ರಭಾವವೂ ಸೂಚ್ಯವಾಗಿ ಗೋಚರಿಸಿದೆ. ಹೀಗೆ ಬದಲಾದ ಸನ್ನಿವೇಶವನ್ನು ಅರ್ಥೈಸಿಕೊಂಡ ಭಾಷ್ಯಾಂತರವಾಗಿಯೂ ಈ ಪ್ರಕ್ರಿಯೆ ಗುರುತಿಸಲ್ಪಡುವದು ಈ ಕಾಲಘಟ್ಟದಲ್ಲಿ ಕೇವಲ ಅಲ್ಪಸ್ವಲ್ಪ ಬದಲಾವಣೆಗಳನ್ನು ವ್ಯಾಖ್ಯಾನಗಳನ್ನು ಒಳಗೊಂಡ ನಿಕಟಾನುವಾದಕ್ಕಿಂತ ವೈಜ್ಞಾನಿಕ/ಶೈಕ್ಷಣಿಕ ಪ್ರಗತಿ ಸಾಮಾಜಿಕ ಸ್ಥಿತ್ಯಂತರಗಳು ,ರಾಜಕೀಯ ಒತ್ತಡಗಳು, ಆರ್ಥಿಕ ವೈವಸ್ಥೆ, ಧಾರ್ಮಿಕ/ ಪೌರಣಿಕ ನಂಬುಗೆ ಇವೆಲ್ಲವುಗಳನ್ನೊಳಗೊಂಡ ಸಾಂಸ್ಕೃತಿಕ ರಾಜಕಾರಣ ಸೂತ್ರಧಾರಿಯಂತೆ ನಿಯಂತ್ರಿಸಿದೆ, ಆದರೂ

ಅನುವಾದದ ಒಳಗಡೆ ಈ ಯಾವ ಪ್ರಕ್ರಿಯೆಯ ಗಂಧಗಾಳಿಯೂ ಅಷ್ಟಾಗಿ ಪ್ರಭಾವ ಬೀರಿಲ್ಲ ಅಭಿಮನ್ಯುವಿನ ಚಕ್ರವ್ಯೂಹ ಪ್ರವೇಶ ಪರಿಯಂತೆ, ಒಳಗೆ ಹೋಗುವಾಗ ಅರ್ಥಾತ್ ಈ ಒಂದು ಪ್ರಕ್ರಿಯೆಯ ಪ್ರವೇಶಕ್ಕೆ ಈ ಸಾಂಸ್ಕೃತಿಕ ಪರಸರ ಕೊಟ್ಟ ಒತ್ತನ್ನು ಒಳಗಡೆ ಹೋದ ನಂತರ ಕವಿ ಅನುಭವಿಸುವಲ್ಲಿ ಎಲ್ಲೋ ಗೊಂದಲ ಕಾರಣಬರುತ್ತದೆ. ಆಗ ಭಾರತೀಯ ಸನಾತನ ಸಂಸ್ಕೃತಿ ಹಡೆಯೆತ್ತಿ ನಿಂತಿದೆ ಹಾಗಾಗಿ ವಸಾಹತು ರಾಜಕಾರಣ ಕೇವಲ ಬಾಹ್ಯ ಒತ್ತಡಕ್ಕಷ್ಟೇ ಸೀಮಿತಗೊಂಡು ಒಳಗೆ ತನ್ನ ಸಾಮರ್ಥ್ಯವನ್ನು ಪ್ರವೇಶಿಸುವಲ್ಲಿ ಎಲೋ ಸೋತಿದೆ. ಇದು ಸೂತ್ರಧಾರನ, ನಾಂದಿ ಪದ್ಯದ ಕೆಲಸ ಚೆನ್ನಾಗಿ ನಿರ್ವಹಿಸಿದರೂ, ಭರತವಾಕ್ಯ ಭಾರತೀಯ ಸಂವೇದನಾ ಶೀಲ, ಸನಾತನ ಮನಸ್ಸೊಂದರ ತುಡಿತವಾಗಿ ಬಂದಿದೆ ಎಂಬುದು ಗಮನೀಯ ಅಂಶ ಎರಡು ಭಿನ್ನ ಪರಿಪ್ರೇಕ್ಷ್ಯಗಳಲ್ಲಿ ಅನುವಾದಕ ಸಿಲುಕಿದ್ದನೇ ಎಂಬುದು ಗೋಚರ ಸತ್ಯ ಆದಾಗ್ಯೂ ಮಾಡಿಕೊಂಡ ಮಾರ್ಪಾಡುಗಳು ಸಾಹಿತ್ಯ ಪ್ರಪಂಚದ ವೈಶಿಷ್ಟಕ್ಕೆ ಅನುಸಾರವಾಗಿ ಇರುವದರಿಂದ ಸಾಹಿತ್ಯಿಕ ಅನುವಾದವಾಗಿ ಗ್ರಹಿಸಬಹುದಾಗಿದೆ. ಈ ಬಗೆಯ ಸಂಕೀರ್ಣ ವ್ಯವಸ್ಥೆಯಲ್ಲಿ ವ್ಯವಸ್ಥಿತ ರೂಪವಾಗಿ ನಡೆದ ಪ್ರಕ್ರಿಯೆಯಲ್ಲಿ ಭಾಗಿಗಳದವರ ಪರಿಚಯ ಬಹಳಷ್ಟು ಇಲ್ಲ. ಜಯರಾಯಾಚಾರ್ಯ , ಸೀತಾರಾಮಶಾಸ್ತ್ರಿ, ಮೊದಲಾದವರು ಹೊಸ ಪರಿಸರದಲ್ಲಿ, ಅನುವಾದ ಶಾಸ್ತ್ರದಲ್ಲಿ ಹೊಸದಾಗಿ ಕಾಣುತ್ತಾರೆ, ತತ್ತ್ವಶಃ ಅನುವಾದಕ್ಕೆ ಅವರು ಬದ್ಧರಾಗದೇ ಹೋದರೂ, ಕೃತಿ ರಚನೆಯಲ್ಲಿ ಅವರ ಒಂದು ತಾತ್ವಿಕ ನಿಲುವು ಸ್ಪಷ್ಟವಾಗುತ್ತದೆ, ಉದಾ: ರಂಗಪಠ್ಯವಾಗಿ ಬರೆಯುದಲ್ಲಿ ರಾಗ, ತಾಳ, ಬದ್ಧ ಪದ್ಯಗಳು,ಓದು ಪಠ್ಯವಾಗಿ ಬರೆಯುವಲ್ಲಿ ಕಂದ!ವೃತ್ತಾದಿ ಪದ್ಯಗಳು, ಒಟ್ಟಿನಲ್ಲಿ ಬದ್ಧತೆಯ ಸೃಜನೆಯಾಗದಿದ್ದರೂ, ಸೃಜನಾ ಬದ್ಧರಾಗಿ ಅಂದಿನ ಲೇಖಕರು ಕಾಣಿಸಿಕೊಂಡಿದ್ದಾರೆ. ತತ್ವಕ್ಕೆ ಅವರನ್ನು ಸಿಲುಕಿಸಲಾಗದಿದ್ದರೂ, ಅತಿವ್ಯಾಪ್ತಿ ದೋಷವೇನೂ ಅಂಟಿಕೊಂಡಿಲ್ಲ. ಅಂತಸ್ತ ತತ್ವ ಅವರನ್ನು ಬದ್ಧರನ್ನಾಗಿಸಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

# ಅನುಬಂಧ

೧) ಅಭಿಜ್ಞಾನ ಶಾಕುಂತಲ ನಾಟಕ : ಬಿ. ಕೃಷ್ಣಪ್ಪ - ೧೯೨೨

೨) ಅಭಿಜ್ಞಾನ ಶಾಕುಂತಲ ನಾಟಕಂ ; ಬೆಳ್ಳಾವೆ ನರಹರಿಶಾಸ್ತ್ರಿ - ೧೯೨೬

೩) ಮಾಲವಿಕಾಗ್ನಿಮಿತ್ರಂ : ಧೋಂಡೋ ನರಸಿಂಹ ಮುಳಬಾಗಿಲು - ೧೮೯೭

೪) ವಿಕ್ರಮೋರ್ವಶೀಯ ನಾಟಕಂ : ಬಸವಪ್ಪಶಾಸ್ತ್ರಿ - ೧೯೫೮

೫) ಕನ್ನಡ ವಿಕ್ರಮೋರ್ವಶೀಯ ನಾಟಕಂ : ಬಸವಪ್ಪಶಾಸ್ತ್ರಿ - ೧೯೫೮

೬) ಕರ್ಣಾಟಕ ಚಂಡಕೌಶಿಕ ನಾಟಕಂ : ಬಸವಪ್ಪಶಾಸ್ತ್ರಿ - ೧೮೯೭

೭) ಕರ್ಣಾಟಕ ವೇಣಿ ಸಂಹಾರ ನಾಟಕಂ : ಮೈಸೂರು ಸೀತಾರಾಮಶಾಸ್ತ್ರಿ

೮) ವೇಣಿ ಸಂಹಾರ ನಾಟಕಂ : ಎಂ. ಕೆ. ಶ್ರೀನಿವಾಸರಾಘವಾಚಾರ್ಯ - ೧೯೨೧

೯) ವೇಣಿ ಸಂಹಾರ ನಾಟಕವು : ಧೋಂಡೋ ನರಸಿಂಹ ಮುಳಬಾಗಲ - ೧೮೮೩

೧೦) ಉತ್ತರ ರಾಮಚರಿತ ನಾಟಕವು : ’’ ’’ ’’ - ೧೮೯೨

೧೧) ಉತ್ತರ ರಾಮ ಚರಿತೆ : ಬಸವಪ್ಪಶಾಸ್ತ್ರಿ - ೧೯೧೦

೧೨) ಕರ್ಣಾಟಕ ಮಾಲತೀಮಾಧವ ನಾಟಕ : ಬಸವಲಿಂಗಪ್ಪ. - ೧೯೨೫

೧೩) ಅಭಿಷೇಕ ನಾಟಕ : ಬಿ. ನಂಜುಂಡಸ್ವಾಮಿ - ೧೯೩೪

೧೪) ಕರ್ಣಾಟಕ ಬಾಲಚರಿತಮ್ : ಎಚ್. ಶೇಷಯ್ಯಂಗಾರ - ೧೯೩೪

೧೫) ಬಾಲಚರಿತ : ಪಾನ್ಯಂ ಸುಂದರ ಶಾಸ್ತ್ರಿ - ೧೯೨೪

೧೬) ಕರ್ಣಾಟಕ ಪಂಚರಾತ್ರವು : ಪಾನ್ಯಂ ಸುಂದರ ಶಾಸ್ತ್ರಿ - ೧೯೨೨

೧೭) ಪಂಚರಾತ್ರ : ಎನ್. ಎಸ್. ನಾರಾಯಣಶಾಸ್ತ್ರಿ - ೧೯೩೨

೧೮) ಪಂಚರಾತ್ರ ರೂಪಕಂ : ದೇವ ಶಿಖಾಮಣಿ ಅಳಿಸಿಂಗರಾಚಾರ್ಯ - ೧೯೩೪

೧೯) ಕರ್ಣಾಟಕ ಮಧ್ಯಮ ವ್ಯಾಯೋಗ : ಕೃಷ್ಣಾಜಿ ಶ್ರೀನಿವಾಸ ಬೆಟಗೇರಿ - ೧೯೨೩

೨೦) ದೂತವಾಕ್ಯವು : ಕಡಬದ ನಂಜುಂಡಸ್ವಾಮಿ - ೧೯೨೨

೨೧) ಕರ್ಣಭಾರ : ದೂತವಾಕ್ಯ : ಪಾನ್ಯ ಸುಂದರಶಾಸ್ತ್ರಿ - ೧೯೨೨

೨೨) ಭಾಸ ಕವಿಯ ಪ್ರತಿಜ್ಞಾ ಯೌಗಂಧರಾಯಣ : ಎಲ್. ಗುಂಡಪ್ಪ - ೧೯೩೭

೨೩) ಕರ್ಣಾಟಕ ಸ್ವಪ್ನ ವಾಸವದತ್ತ ನಾಟಕಂ :
ಎಂ. ಡಿ. ಅಳಿಸಿಂಗರಾಚಾರ್ಯ - ೧೯೨೫

೨೪) ಕರ್ಣಾಟಕ ಸ್ವಪ್ನ ವಾಸವದತ್ತ : ಭೀಮೋಜಿ ಜೀವಾಜಿ ಹುಲಿಕವಿ - ೧೯೨೫

೨೫) ಕರ್ಪೂರ ಮಂಜರೀ ಪರಿಣಯ : ಅನಂತನಾರಾಯಣಶಾಸ್ತ್ರಿ - ೧೯೧೩

೨೬) ಕರ್ಣಾಟಕ ಮುದ್ರಾರಾಕ್ಷಸ ನಾಟಕಂ :
ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ - ೧೯೩೧

೨೭) ಆಶ್ಚರ್ಯ ಚೂಡಾಮಣಿ : ಎಂ. ರಾಮಕೃಷ್ಣ ಭಟ್ಟ - ೧೯೪೩
೨೮) ನಾಗನಂದ ನಾಟಕಂ : ಎನ್. ಅನಂತನಾರಾಯಣಶಾಸ್ತ್ರಿ - ೧೮೯೪
೨೯) ಕರ್ಣಾಟಕ ನಾಗಾನಂದ ನಾಟಕಂ : ಗರಣಿ ಕೃಷ್ಣಾಚಾರ್ಯ - ೧೮೮೮
೩೦) ಪ್ರಿಯದರ್ಶಿಕೆ - ಶ್ರೀನಿವಾಸ ವೆಂಕಟೇಶ ಕಟ್ಟಿ - ೧೮೯೩
೩೧) ಶ್ರೀಹರ್ಷದೇವನಿಂದ ರಚಿಸಲ್ಪಟ್ಟ ಪ್ರಿಯದರ್ಶಿಕಾ ಎಂಬ ನಾಟಕ - ೧೮೯೩
೩೨) ಕರ್ಣಾಟಕ ರತ್ನಾವಳಿ ನಾಟಕ : ಬಸವಪ್ಪಶಾಸ್ತ್ರಿ - ೧೯೨೯
೩೩) ರತ್ನಾವಳಿ ನಾಟಕ : ಸಿ. ಶಿವಶಂಕರಶಾಸ್ತ್ರಿ - ೧೮೯೯
೩೪) ಮೃಚ್ಛಕಟಿಕ ಪ್ರಕರಣ : ಧೋಂಡೋ ನರಸಿಂಹ, ಮುಳಬಾಗಲ - ೧೮೮೯
೩೫) ಕರ್ಣಾಟಕ ಮೃಚ್ಛಕಟಿಕ ಪ್ರಕರಣಂ - ನಂ. ಸುಬ್ಬಶಾಸ್ತ್ರಿ - ೧೯೨೯
೩೬) ಕರ್ಣಾಟಕ ಸಂಗೀತ ಮೃಚ್ಚಕಟಿಕ ನಾಟಕವು : ಬೋಳಂತೂರ ಕೃಷ್ಣಪ್ರಭು - ೧೮೧೭
೩೭) ಕರ್ಣಾಟಕ ಪ್ರಬೋಧ ಚಂದ್ರೋದಯ ನಾಟಕಂ : ಎಂ. ಕೃಷ್ಣಪ್ಪ - ೧೯೦೧
೩೮) ಪ್ರಬೋಧ ಚಂದ್ರೋದಯ ಎಂಬ ನಾಟಕವು : ಎಂ.ಕೆ. ಶ್ರೀನಿವಾಸ ರಾಘವಾಚಾರ್ಯ - ೧೯೨೦
೩೯) ನರಕಾಸುರ ವ್ಯಾಯೋಗ : ಕೆ. ನಂಜುಂಡಸ್ವಾಮಿ - ೧೯೦೨
೪೦) ಚಂದ್ರಕಲಾ ಕಲ್ಯಾಣಂ ನಾಟಕವು : ಕೆ.ರಾಮಸ್ವಾಮಯ್ಯಂಗಾರ್ - ೧೯೦೯
೪೧) ಕರ್ಣಾಟಕ ಧನಂಜಯ ವಿಜಯಂ ಎಂಬ ವ್ಯಾಯೊಗ ರೂಪಕವು : ಸಿದ್ಧಾಂತಿ ಶಿವಶಂಕರಶಾಸ್ತ್ರಿ - ೧೯೦೨
೪೨) ಶೃತಕೀರ್ತಿ ಮಹಾರಾಯನ ನಾಟಕ : ಸೊಂಡೆಕೊಪ್ಪ ವೆಂಕಟೇಶಶಾಸ್ತ್ರಿ - ೧೮೯೯
೪೩) ಕರ್ಣಾಟಕ ಪಾರ್ವತೀ ಪರಿಣಯ ನಾಟಕಂ : ಮೈಸೂರು ಸೀತಾರಾಮಶಾಸ್ತ್ರಿ - ೧೮೯೬
೪೪) ಅನುತಾಪಿಕಾ ಪ್ರೇಕ್ಷಣಿಕಂ ಮತ್ತು ಉನ್ಮತ್ತ ರಾಘವ ಪ್ರೇಕ್ಷಣಿಕಂ : ಸಿದ್ಧಾಂತಿ ಶಿವಶಂಕರಶಾಸ್ತ್ರಿ - ೧೮೮೭
೪೫) ಕರ್ಣಾಟಕೋನ್ಮತ್ತ ರಾಘವಂ : ಸರ್ಜಾಪುರ ವೆಂಕಟಸುಬ್ಬಯ್ಯ - ೧೯೦೮
೪೬) ಕರ್ಣಾಟಕ ಸುಭದ್ರಾಹರಣಂ - ೧೯೦೩
೪೭) ಕರ್ಣಾಟಕ ಕೃಷ್ಣವಿಜಯ ವ್ಯಾಯೋಗಂ : ನಂ. ಶ್ರೀಕಂಠಶಾಸ್ತ್ರಿ - ೧೯೦೫
೪೮) ಕರ್ಣಾಟಕ ಘೋಷಯಾತ್ರೆ : ಬಿ. ರಾಮರಾವ್ -

(ವೇದಾಂತಾಚಾರ್ಯ) ಸಂಕಲ್ಪ ಸೂರ್ಯೋದಯ ನಾಟಕಂ
ಅನು : ಶ್ರೀನಿವಾಸ ರಾಘವಾಚಾರ್ಯ, ಮೈಸೂರು, ಕೆ. ಎಸ್. ನರಸಿಂಹಯ್ಯ ಪ್ರೆಸ್ - ೧೯೨೨
(ವೇದಾಂತ ತತ್ವಗಳನ್ನು ಸಾರುವ ಸಾಂಕೇತಿಕ ನಾಟಕ)

ಸಂಕಲ್ಪ ಸೂರ್ಯೋದಯ ಪ್ರಥಮಾಂಕ
ಅನು : ಎಂ.ಕೆ. ಶ್ರೀನಿವಾಸ ರಾಘವಾಚಾರ್ಯ, ಮೈಸೂರು - ೧೯೨೧

(ಸುಂದರರಾಜ ಕವಿ) - ಕರ್ಣಾಟಕ ಸ್ನುಷಾ ವಿಜಯಂ
ಅನು : ಮೈಸೂರು ಸೀತಾರಾಮಶಾಸ್ತ್ರ, ಮೈಸೂರು, ಜಿ.ಟಿ. ಎ. ಪ್ರೆಸ್ - ೧೮೯೭

ಹರಿಹರೋಪಾಧ್ಯಾಯ
ಕರ್ಣಾಟಕ ಭರ್ತೃಹರಿ ನಿರ್ವೇದ ನಾಟಕಂ : ಅನು : ಎಂ. ಕೃಷ್ಣಪ್ಪ
ಮೈಸೂರು, ಜಿ.ಟಿ. ಎ. ಪ್ರೆಸ್ - ೧೯೧೧.

ಭರ್ತೃಹರಿ ನಿರ್ವೇದ ನಾಟಕಂ - ಅನು : ಎ.ಕೇಶವಯ್ಯ
ಬೆಂಗಳೂರು, ಕರ್ಣಾಟಕ ಸಾಹಿತ್ಯ ಪರಿಷತ್ತು - ೧೯೩೪.

## ನಾಟಕಗಳ ಅನುವಾದಗಳು

**ಇಂಗ್ಲೀಷ್‌ನಿಂದ-**

| | | |
|---|---|---|
| ಆಂಟೋನಿ ಮತ್ತು ಕ್ಲಿಯೋ ಪಾತ್ರ | - | ಕೆ. ಮಲ್ಲರಾಜೇ ಅರಸ್ |
| ಆರ್ಯಕ್ | - | ಎಸ್.ಜಿ. ಶಾಸ್ತ್ರಿ |
| ಕರ್ನಾಟಕೋನ್ಮತ್ತ ರಾಘವಂ | - | ವೆಂಕಟಸುಬ್ಬಯ್ಯ - ೧೯೦೮ |
| ಕಮಲಾಕ್ಷ ಪದ್ಮಗಂಧಿಯರ ಕಥೆ | - | ವೆಂ.ಭೀ. ಭಂಡಿವಾಡ-೧೮೮೧ |
| ಕಲಾವತಿ ಪರಿಣಯ | - | ಶಾಮರಾಯ ವೆಂಕಟಾದ್ರಿ |
| ಕುಸುಮಾಕರ | - | ಅಣ್ಣಾಜಿರಾವ್ - ೧೯೦೫ |
| ಗಯ್ಯಾಳಿಯನ್ನು ಸಾಧು ಮಾಡುವಿಕೆ | - | ಎಸ್.ಜಿ. ನರಸಿಂಹಾಚಾರ್ಯ |
| | - | ಸೋಮನಾಥಯ್ಯ - ೧೮೯೭ |
| ಚಂಡಮಾರುತ | - | ಕರ್ನಾಟಕ ಗ್ರಂಥಮಾಲೆ, ಮೈಸೂರು - ೧೮೯೭ |
| ಚಂಡಿಮದಮರ್ದನ ನಾಟಕಂ | - | ಕೆ.ಲಕ್ಷ್ಮಣರಾವ್- ೧೯೧೦ |
| ಜಯಸಿಂಹರಾಜ ಚರಿತ್ರೆ | - | ಸಿ. ಎನ್.ಮಲ್ಲಪ್ಪ-೧೯೦೭ |
| ಜಯಸಿಂಹರಾಜ ಚರಿತ್ರೆ | - | ಎಂ.ಎಸ್.ಪುಟ್ಟಣ್ಣ-೧೮೮೧ |
| ಜಯಸಿಂಹರಾಜ ಚರಿತ್ರೆ | - | ನಂ. ಸುಬ್ಬಾಶಾಸ್ತ್ರಿ |
| ತ್ರಾಟಿಕಾ ಅಥವಾ ಮೊಂಡ ಗಂಡ ತುಂಟ | | |
| ಹೆಂಡತಿ ನಾಟಕ | - | ಗ.ಹು. ಹೊನ್ನಾಪುರಮಠ - ೧೯೨೦ |
| ನಿರ್ಮಲೆ | - | ಶ್ರೀರಾಮ - ೧೯೧೮ (೨) |
| ಪಾಂಚಾಲೀ ಪರಿಣಯಂ | - | ಆನಂದರಾವ್ - ೧೮೯೦ |

| | | |
|---|---|---|
| ಪ್ರಜ್ಞಾವತೀ ವಿಜಯ | - | ಸುಬ್ಬರಾಯ |
| ಪ್ರತಾಪರುದ್ರದೇವ | - | ಎಂ. ಎಲ್. ಶ್ರೀಕಂಠೇಶಗೌಡ - ೧೮೮೫ |
| ಪ್ರತಾಪಸಿಂಹ ಚರಿತ್ರ ನಾಟಕ | - | ಅಯ್ಯಾಶಾಸ್ತ್ರಿ |
| ಪ್ರಮೀಳಾರ್ಜುನೀಯಂ | - | ಎಂ. ಎಲ್. ಶ್ರೀಕಂಠೇಶಗೌಡ-೧೮೯೬ |
| ಮಂಜುಘೋಷ | - | ರಂಗಾಚಾರ್ಯ ಮುದ್ಗಲ್ |
| ಮಂಜುವಾಣಿ | - | ಶ್ರೀಕಂಠಶಾಸ್ತ್ರಿ - ೧೯೧೪ |
| ಮರ್ಚಂಟ್ ಆಫ್ ವೆನಿಸ್ | - | ಜಯರಾಯಾಚಾರ್ಯ |
| ಮ್ಯಾಕ್‌ಬೆತ್ | - | ಧಾರವಾಡ ಚೆನ್ನಬಸಪ್ಪ - ೧೮೮೧ |
| ಮೋಹಿನಿ ಅಥವಾ ನಿಂದಕರ ಪಾತ್ರ | - | ಗ.ಹು. ಹೊನ್ನಾಪುರಮಠ - ೧೮೮೧ |
| ಯವನಯಾಮಿನಿ ಕಥೆಗಳು | - | ಪಿ. ವೇದಮಿತ್ರ - ೧೯೦೫ |
| ಯವನಯಾಮಿನಿ ಕಥೆಗಳು | - | ಬಾಪು ಸುಬ್ಬರಾವ್ - ೧೯೦೧ |
| ರಮೇಶ-ಲಲಿತಾ | - | ಕೆರೂರ ವಾಸುದೇವಾಚಾರ್ಯ - ೧೯೧೭ |
| ರಾಘವೇಂದ್ರರಾವ್ ನಾಟಕ | - | ಗುಂಡೋಕೃಷ್ಣ ಚುರುಮುರಿ -೧೮೮೫ |
| ರಾಮವರ್ಮ-ಲೀಲಾವತಿ | - | ಎ. ಆನಂದರಾವ್ - ೧೮೮೯ |
| ರಾಮವರ್ಮ-ಲೀಲಾವತಿ | - | ಬಸವಪ್ಪಶಾಸ್ತ್ರಿ |
| ರಾಮವರ್ಮ-ಲೀಲಾವತಿ | - | ಎ.ವ್ಹಿ. ವರದಾಚಾರ್ |
| ರಾಮವರ್ಮ-ಲೀಲಾವತಿ | - | ಜಯರಾಯಾಚಾರ್ಯ |
| ರಾಸೆಲಾಸ | - | ಜಿವಾಜಿ ವಿಷ್ಣುಗೋರೆ - ೧೯೦೫ |
| ವಸಂತಯಾಮಿನೀ ಸ್ವಪ್ನ ಚಮತ್ಕಾರ | - | ಕೆರೂರ ವಾಸುದೇವಾಚಾರ್ಯ - ೧೯೧೬ |
| ವೆನಿಸುನಗರದ ವರ್ತಕ | - | ವೆಂಕಟಾಚಾರ್ |
| ವೇಣುಪುರಿಯ ವರ್ತಕ | - | ಸಿ. ಹನುಮಂತಗೌಡ - ೧೯೨೮ |
| ವೇಣುಪುರಿಯ ವರ್ತಕ | - | |
| ಶರಣಾಗತ | - | ಅಣ್ಣಾಜಿರಾವ್ ಮಲ್ಲೇಶ್ವರ |
| ಶೂರಸೇನ ಚರಿತ್ರೆ | - | ಬಸವಪ್ಪಶಾಸ್ತ್ರಿ - ೧೮೯೫ |
| ಸತೀಮಣಿ ವಿಜಯ | - | ಸೋಮನಾಥಯ್ಯ - ೧೮೯೭ |
| ಸಾಕ್ರೆಟೀಸನ ಕೊನೆಯ ದಿನಗಳು | - | ಎಸ್.ಜಿ. ಶಾಸ್ತ್ರಿ |
| ಸುರತ ನಗರದ ಶ್ರೇಷ್ಠಿ | - | ಕೆರೂರ ವಾಸುದೇವಾಚಾರ್ಯ - ೧೯೨೫ |
| ಸೂತ್ರದ ಬೊಂಬೆ | - | ಎಸ್.ಜಿ. ಶಾಸ್ತ್ರಿ |
| ಹ್ಯಾಂಲೆಟ್ | - | ಎ. ಆನಂದರಾವ್ - ೧೯೦೫ |
| ಹ್ಯಾಂಲೆಟ್ | - | ಜಯರಾಯಾಚಾರ್ಯ |
| ಹ್ಯಾಂಲೆಟ್ | - | ಜಿವಾಜಿ ವಿಷ್ಣುಗೋರೆ |

| | | |
|---|---|---|
| ಹ್ಯಾಂಲೆಟ್ | - | ಶಿವಲಿಂಗಸ್ವಾಮಿ, ಸಾವಳಗಿಮಠ |
| ಹೇಮಚಂದ್ರರಾಜ ವಿಲಾಸ | - | ಎಂ. ಎಸ್. ಪುಟ್ಟಣ್ಣ - ೧೮೯೯ |

<u>ಸಂಸ್ಕೃತ</u>

| | | |
|---|---|---|
| ಅಭಿಜ್ಞಾನ ಶಾಕುಂತಲ (ಕಾಳಿದಾಸ) | - | ಬೇಟೆರಾಯ ದೀಕ್ಷಿತ - ೧೮೯೧ |
| ಉತ್ತರ ರಾಮ ಚರಿತ (ಭವಭೂತಿ) | - | ಧೊಂಡೋ ನರಸಿಂಹ, ಮುಳಬಾಗಿಲ- ೧೮೯೨ |
| ಉತ್ತರ ರಾಮ ಚರಿತ (ಭವಭೂತಿ) | - | ಬಸವಪ್ಪಶಾಸ್ತ್ರಿ |
| ಉತ್ತರ ರಾಮ ಚರಿತ (ಭವಭೂತಿ) | - | ಸಿ.ಹನುಮಂತಗೌಡ |
| ಕರ್ಣಾಟಕ ಚಂದ್ರಲೋಕ (ಜಯದೇವ) | - | ಅಂಬಳೆ ಲಕ್ಷ್ಮೀನರಸಿಂಹಶಾಸ್ತ್ರಿ-೧೯೦೫ |
| ಕರ್ಣಾಟಕ ನಾಗಾನಂದ ನಾಟಕ(ಶ್ರೀಹರ್ಷ) | - | ನಂ. ಅನಂತ ನಾರಾಯಣಶಾಸ್ತ್ರಿ-೧೯೧೫ |
| ಕರ್ಣಾಟಕ ಪ್ರಿಯದರ್ಶಿಕಾ (ಶ್ರೀಹರ್ಷ) | - | ನಂ. ಶ್ರೀಕಂಠಶಾಸ್ತ್ರಿ (೧೯೦೫) |
| ಕರ್ಣಾಟಕ ವೇಣೀ ಸಂಹಾರ(ಭಟ್ಟನಾರಾಯಣ) | - | ಜಯರಾಮಾಚಾರ್ಯ |
| ಕರ್ಣಾಟಕೋನ್ಮತ್ತ ರಾಘವಂ(ಭಾಸ್ಕರಭಟ್ಟ) | - | ಸರ್ಜಾಪುರ ವೆಂಕಟಸುಬ್ಬಯ್ಯ-೧೯೦೮ |
| ಚಂಡಕೌಶಿಕ ನಾಟಕ | - | ಜಯರಾಮಾಚಾರ್ಯ |
| ಚಂಡಕೌಶಿಕ ನಾಟಕ | - | ಬಸವಪ್ಪಶಾಸ್ತ್ರಿ - ೧೮೯೭ |
| ಜಾನಕೀ ಪರಿಣಯ | - | ವೆಂಕಟರಾಯಕವಿ ಹನುಮಾನ್ - ೧೯೧೪ |
| ದಮಯಂತೀ ಸ್ವಯಂವರ | - | ಸಿ. ಸೂರ್ಯನಾರಾಯಣಪ್ಪ - ೧೯೯೭ |
| ನರಕಾಸುರ ವಿಜಯ | - | ಎಂ.ಕೆ. ನಂಜುಂಡಶಾಸ್ತ್ರಿ - ೧೮೯೩ |
| ನಾಗಾನಂದ ನಾಟಕ (ಶ್ರೀಹರ್ಷ) | - | ಗರಣಿ ಕೃಷ್ಣಮಾಚಾರ್ಯ - ೧೮೯೧ |
| ನಾಟಕ ಕಥಾ ರತ್ನಮಾಲೆ ಶಾಕುಂತಲ | - | ಎಸ್. ಶ್ರೀನಿವಾಸರಾವ್ - ೧೮೯೦ |
| ಪ್ರಬೋಧ ಚಂದ್ರೋದಯ | - | ಎಂ. ಕೃಷ್ಣಪ್ಪ - ೧೯೧೦ |
| ಮಾಲತೀ ಮಾಧವ (ಭವಭೂತಿ) | - | ನಂ. ಶ್ರೀಕಂಠಶಾಸ್ತ್ರಿ |
| ಮುದ್ರಾರಾಕ್ಷಸ ನಾಟಕಂ (ವಿಶಾಲದತ್ತ) | - | ಮೋ. ರಾಮಶಾಸ್ತ್ರಿ - ೧೯೦೮ |
| ಮೃಚ್ಛಕಟಿಕ (ಶೂದ್ರಕ) | - | ಬೋಳಂತೂರು ಕೃಷ್ಣಪ್ರಭು - ೧೯೧೭ |
| ಮೃಚ್ಛಕಟಿಕ (ಶೂದ್ರಕ) | - | ನಂ. ಸುಬ್ಬಾಶಾಸ್ತ್ರಿ |
| ಮೃಚ್ಛಕಟಿಕ (ಶೂದ್ರಕ) | - | ಗರಣಿ ಕೃಷ್ಣಮಾಚಾರ್ಯ |
| ಮೃಚ್ಛಕಟಿಕ (ಶೂದ್ರಕ) | - | ಧೊಂಡೋ ನರಸಿಂಹ, ಮುಳಬಾಗಿಲ- ೧೮೮೭ |

ಮಾಲವಿಕಾಗ್ನಿ ಮಿತ್ರ (ಕಾಳಿದಾಸ) - ಧೋಂಡೋ
ನರಸಿಂಹ, ಮುಳಬಾಗಿಲ- ೧೮೮೫

ರತ್ನಾವಳಿ (ಶ್ರೀಹರ್ಷ) - ಬಸವಪ್ಪಶಾಸ್ತ್ರಿ - ೧೯೨೯

ರತ್ನಾವಳಿ (ಶ್ರೀಹರ್ಷ) - ಸಿ. ಶಿವಶಂಕರಶಾಸ್ತ್ರಿ - ೧೮೯೯

ರಾಘವಾಭ್ಯುದಯಂ - ನಂ. ಶ್ರೀಕಂಠಶಾಸ್ತ್ರಿ - ೧೯೧೪

ರಾಮಾಯಣ ನಾಟಕಂ - ಸೊ. ಅಯ್ಯಾಶಾಸ್ತ್ರಿ - ೧೯೦೪

ವಾಸವದತ್ತಾ ವೃತ್ತಾಂತಂ (ಭಾಸ) - ವೆಂಕಟರಾಯ

ವಿಕ್ರಮೋರ್ವಶೀಯ (ಕಾಳಿದಾಸ) - ಬಸವಪ್ಪಶಾಸ್ತ್ರಿ

ವಿಕ್ರಮೋರ್ವಶೀಯ (ಕಾಳಿದಾಸ) - ಕೃ.ರಾ. ಒಡೆಯರ್

ವಿಕ್ರಮೋರ್ವಶೀಯ (ಕಾಳಿದಾಸ) - ಸೊ. ಅಯ್ಯಾಶಾಸ್ತ್ರಿ - ೧೯೧೧

ವೇಣಿ ಸಂಹಾರ (ಭಟ್ಟನಾರಾಯಣ) - ಧೊ.ನ. ಮುಳಬಾಗಿಲ - ೧೮೮೫

ವೇಣಿ ಸಂಹಾರ (ಭಟ್ಟನಾರಾಯಣ) - ಎಂ.ಕೆ. ಶ್ರೀನಿವಾಸ ರಾಘವಾಚಾರ್ಯ

ಶಕುಂತಲಾ - ಬಿ. ವೆಂಕಟಾಚಾರ್ಯ - ೧೮೮೭

ಶಕುಂತಲಾ - ಚುರುಮುರಿ ಶೇಷಗಿರಿರಾವ್ - ೧೮೭೯

ಶಕುಂತಲಾ - ಬಸವಪ್ಪ ಶಾಸ್ತ್ರಿ - ೧೮೭೯

ಶಕುಂತಲಾ - ಬೆಳ್ಳಾವೆ ನರಹರಿಶಾಸ್ತ್ರಿ - ೧೯೨೬ (೨)

ಶಕುಂತಲಾ - ಸೂಲಿಬೆಲೆ ಶಾಮರಾವ್

ಶಕುಂತಲ ನಾಟಕದ ನವೀನ ಟೀಕೆ - ಕೃ.ರಾ. ಒಡೆಯರ್ - ೧೮೪೭

ಶಕುಂತಲ ನಾಟಕ - ಶೇಷೋರಾಮಚಂದ್ರ, ಚುರಮುರಿ-೧೮೮೭

ಸಂಗೀತ ಪ್ರಿಯದರ್ಶಿಕಾ - ಶ್ರೀನಿವಾಸ ಕಟ್ಟಿ - ೧೮೯೩

ಸಂಗೀತ ಪ್ರೇಮಲೀಲಾ - ಫಕೀರಯ್ಯಾ ಇಂಡಿಮಠ - ೧೯೨೦

# ಪ್ರಾಥಮಿಕ ಆಕರಗಳು


| | | | |
|---|---|---|---|
| ೧ | ಪಾನ್ಯಂ ಸುಂದರ ಶಾಸ್ತ್ರಿ | ೧೯೨೨ | ಕರ್ಣಭಾರ ದೂತ ವಾಕ್ಯಮ್, ಕರ್ನಾಟಕ ಗ್ರಂಥಮಾಲೆ, ಮೈಸೂರು. |
| ೨ | ಪಾನ್ಯಂ ಸುಂದರ ಶಾಸ್ತ್ರಿ | | ಪಂಚರಾತ್ರಮ್ |
| ೩ | ಪಾನ್ಯಂ ಸುಂದರ ಶಾಸ್ತ್ರಿ | ೧೯೨೬ | ಅಭಿಷೇಕ ನಾಟಕಮ್ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ |
| ೪ | ಜಯರಾಯಾಚಾರ್ಯ | ೧೮೮೯ | ಕರ್ಣಾಟಕ ಚಂಡಕೌಶಿಕವೆಂಬ ಹರಿಶ್ಚಂದ್ರ ನಾಟಕಮ್, ಎಸ್. ಆರ್.ಕೆ.ವಿ. ಮತ್ತು ತಾರಕ ಪ್ರೆಸ್, ಮೈಸೂರು |
| ೫ | ಬೇಡೆರಾಯ ದೀಕ್ಷಿತ | ೧೮೯೧ | ಶಕುಂತಲ ನಾಟಕಮ್ |
| ೬ | ಎಂ.ಕೆ.ಶ್ರೀನಿವಾಸ ರಾಘವಾಚಾರ್ಯ | ೧೯೨೧ | ಸಂಕಲ್ಪ ಚಂದ್ರೋದಯ, ಕೆ.ವಿ.ವಿ. ಪ್ರೆಸ್, ಮೈಸೂರು |
| ೭ | ಎಸ್. ಎನ್. ನರಹರಯ್ಯ | ೧೯೨೬ | ಭರ್ತೃಹರಿ ನಿರ್ವೇದ ನಾಟಕಂ, ಶ್ರೀಕೃಷ್ಣ ಮುದ್ರಾಲಯ, ಮೈಸೂರು |
| ೮ | ಎಸ್. ಎನ್. ನರಹರಯ್ಯ | ೧೯೨೬ | ಕರ್ಪೂರ ಮಂಜರಿ, ಕ್ಯಾಕ್ಸಟ್ ಮುದ್ರಾಲಯ, ಬೆಂಗಳೂರು |
| ೯ | ಸಿದ್ಧಾಂತಿ ಶಿವಶಂಕರ ಶಾಸ್ತ್ರಿ | ೧೮೮೭ | ಅನುತಾಪಕ ಪ್ರೇಕ್ಷಣಿಕಂ ಮದ್ರಾಸ್, ವೀರರಾಘವ ಮುದ್ರಾಕ್ಷರ ಶಾಲೆ, ಮದ್ರಾಸ್ |
| ೧೦ | ಕೆ.ರಾಮಸ್ವಾಮಯ್ಯಂಗಾರ | ೧೯೦೯ | ಚಂದ್ರಕಲಾ ಕಲ್ಯಾಣಂ, ವಿಚಾರದರ್ಪಣ ಪ್ರೆಸ್, ಬೆಂಗಳೂರು |
| ೧೧ | ಶೈನಾಪುರ | ೧೯೩೩ | ಅಭಿಜ್ಞಾನ ಶಾಕುಂತಲಮ್, ರಾಮತತ್ವ ಮುದ್ರಣಾಲಯ ಬೆಳಗಾವಿ. |
| ೧೨ | ಸಿಂಗರಾರ್ಯ | | ಕರ್ನಾಟಕ ಕಾವ್ಯ ಮಂಜರಿ |
| ೧೩ | ಗ.ವೈ. ಕೃಷ್ಣಾಚಾರ್ಯ | | ಮೃಚ್ಛಕಟಿಕಂ |
| ೧೪ | | | ನಂಜನಗೂಡು ಸಂಬ ಕರ್ನಾಟಕ ವೃಚ್ಛಕಟಿಕಂ |
| ೧೫ | ಮೈಸೂರು ಸೀತಾರಾಮ ಶಾಸ್ತ್ರಿ | ೧೮೯೬ | ಕರ್ಣಾಟಕ ಸ್ನುಷಾ ವಿಜಯಂ |
| ೧೬ | ಮೈಸೂರು ಸೀತಾರಾಮ ಶಾಸ್ತ್ರಿ | ೧೮೯೭ | ಕರ್ಣಾಟಕ ಪಾರ್ವತಿ ಪರಿಣಯ, ಗ್ರಾಜ್ಯುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್, ಮೈಸೂರು |
| ೧೭ | ಎನ್. ಶ್ರೀಕಂಠಯ್ಯ | ೧೯೦೭ | ಪ್ರಿಯದರ್ಶಿಕೆ , ಧರ್ಮ ಪ್ರಕಾಶ ಮುದ್ರಾಲಯ, ಮಂಗಳೂರು |
| ೧೮ | ನಂ. ಶ್ರೀಕಂಠಶಾಸ್ತ್ರಿ | | ಕರ್ಣಾಟಕ ಪ್ರಿಯದರ್ಶಿಕೆ ನಾಟಕೆ |
| ೧೯ | ಧೋ.ನ. ಮುಳಬಾಗಲ | | |

# ಆಕರ ಗ್ರಂಥಗಳು


೧) ಜನ್ನ: ಅನಂತನಾಥ ಪುರಾಣಂ, ಸಂ: ಎಚ್.ದೇವೀರಪ್ಪ ಮತ್ತು ಎಂ.ಸಿ. ಪದ್ಮನಾಭ,ಮೈಸೂರು ವಿ.ವಿ., ೧೯೭೨.

೨) ಜನ್ನ : ಅನಂತನಾಥ ಪುರಾಣಂ, ಸಂ: ಟಿ.ಬಿ. ಮಹಿರಮಡಿ, ಧಾರವಾಡ, ಕರ್ನಾಟಕ ವಿ.ವಿ., ೧೯೭೫.

೩) ಜನ್ನ: ಅನಂತನಾಥ ಪುರಾಣಂ ಕಾವ್ಯ ಸಂಗ್ರಹ: ಸಂ: ಪ. ನಾಗರಾಜಯ್ಯ, ಮೈಸೂರು ಸನ್ಮತಿ ಪ್ರಕಾಶನ, ೧೯೯೪.

೪) ಜನ್ನ : ಯಶೋಧರ ಚರಿತೆ, ಸಂ: ಕ.ವೆ. ರಾಘವಾಚಾರ್, ಮೈಸೂರು ಉಷಾ ಸಾಹಿತ್ಯ ಮಾಲೆ, ೧೯೮೮.

೫) ಜನ್ನ : ಯಶೋಧರ ಚರಿತೆಯ ಪ್ರಕಾಶಿಕೆ, ಸಂ: ಹೆಚ್. ಎಂ. ಶಂಕರನಾರಾಯಣರಾವ್, ಮೈಸೂರು ಶಾರದಾ ಮಂದಿರ, ೧೯೭೮.

೬) ನಾರಚಂದ್ರ: ಪಂಪ ರಾಮಾಯಣಂ ಎಂಬ ರಾಮಚಂದ್ರ ಚರಿತ ಪುರಾಣಂ, ಬೆಂಗಳೂರು, ಕ.ಸಾ.ಪ., ೧೯೭೬.

೭) ಪಂಪ : ಆದಿಪುರಾಣಂ, ಸಂ: ಎಸ್.ಜಿ. ನರಸಿಂಹಾಚಾರ್, ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೯೫.

೮) ಪಂಪ : ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯ, ಪ್ರ.ಸಾ. : ಕೆ.ವಿ.ಪುಟ್ಟಪ್ಪ, ಮೈಸೂರು ವಿ.ವಿ., ೧೯೫೫.

೯) ಪಂಪ : ಪಂಪಭಾರತ ಕಥಾ ಲೋಕ, ಸಂ: ಆರ್. ಎಲ್.ಅನಂತರಾಮಯ್ಯ, ಮೈಸೂರು ಅಪರ್ಣ ಪ್ರಕಾಶನ, ೧೯೭೫.

೧೦) ಪಂಪ : ಆದಿ ಪುರಾಣ ಸಂಗ್ರಹ , ಸಂ: ಎಲ್. ಗುಂಡಪ್ಪ, ಮೈಸೂರು ವಿ.ವಿ., ೧೯೫೬.

೧೧) ರನ್ನ: ಗದಾಯುದ್ಧ, ಸಂ: ಎನ್. ಸುಭ್ರಮಣ್ಯಂ, ಬೆಂಗಳೂರು ತ.ವೆಂ. ಸ್ಮಾರಕ ಮಾಲೆ.

೧೨) ರನ್ನ: ಸಾಹಸಭೀಮ ವಿಜಯಂ : ಕೆ.ವಿ. ಕೃಷ್ಣಭಟ್ ಕುಂಬಳೆ ಸಂ.

೧೩) ರನ್ನ: ಸಾಹಸಭೀಮ ವಿಜಯಂ : ಸಂ: ಬಿ. ಎಸ್. ಸಣ್ಣಯ್ಯ ಮತ್ತು ರಾಮೇಗೌಡ, ಮೈಸೂರು ವಿ.ವಿ., ೧೯೮೫.

# ಗ್ರಂಥ ಋಣ


೧) ದಿ. ಆಲುರು ವೆಂಕಟರಾಯರು, ೧೯೬೮ (೯ನೇ ಆವೃತ್ತಿ) ಕರ್ನಾಟ ಗತ ವೈಭವ, ಸಮಾಜ ಪುಸ್ತಕಾಲಯ, ಧಾರವಾಡ.

೨) ಸಂ: ಡಾ. ಜಿ. ಎಸ್. ಶಿವರುದ್ರಪ್ಪ, ೧೯೮೫, ಶ್ರೀ ಜನ್ಮ ಶತಾಬ್ದಿ, ಕೃತಿ ಮಾಲೆ-೧೫, ಲೇ: ಕನ್ನಡ ನವೋದಯ ಮತ್ತು ಬಿ. ಎಂ.ಶ್ರೀ, ಕರ್ನಾಟಕದ ಏಕೀರಣರ, ಎಸ್. ಚಂದ್ರಶೇಖರ, ಪ್ರಕಾಶನ: ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ.

೩) Editor in Chief : S.S. Shashi, Enciclopedia Indica, A, Continuing Series India, Pakistan, Bangaladesh.

೪) ಸಂ. ಲೀಲಾಭಟ್, ೧೯೯೧, ಎಂ. ಎನ್. ಕಾಮತರ ಕೃತಿಗಳು, ಕರ್ನಾಟಕ ಸಂಘ, ಪುತ್ತೂರು (ದ.ಕ).

೫) ಹೆಚ್. ಎಂ. ಶಂಕರನಾರಾಯಣರಾವ್, ೧೯೭೭, ಕೆಂಪು ನಾರಾಯಣ ಕವಿ ಮತ್ತು ಕೃತಿ, ಗೀತಾ ಬುಕ್ ಹೌಸ್, ಮೈಸೂರು.

೬) ಎ. ಆರ್. ನಾಗಭೂಷಣ, ೧೯೯೩, ನಾಟಕ ಪ್ರವೇಶಿಕೆ, ಅಕ್ಷರ ಪ್ರಕಾಸಣ, ಹೆಗ್ಗೋಡು, ಸಾಗರ.

೭) ಸಂ: ಗೋಪಾಲ ಕೃಷ್ಣ ಅಡಿಗ, ೧೯೭೨ ಜುಲೈ, ಸಾಕ್ಷಿ, ತ್ರೈಮಾಸಿಕ ಪತ್ರಿಕೆ, ಲೇ: ಘಟಿಕಾ ಸ್ಥಾಪನಗಳು, ಜ್ಯೋತಿ ಕಾಮತ್.

೮) ಎ.ಆರ್. ಕೃಷ್ಣಶಾಸ್ತ್ರಿ ಸ್ಮಾರಕ ದತ್ತಿ ನಿಧ ಉಪನ್ಯಾಸ, ಜೂನ್ ೧೯೮೧, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಲೇ: ಕನ್ನಡದಲ್ಲಿ ಸಂಸ್ಕೃತ ನಾಟಕಗಳು, ಡಾ. ಕೆ. ಕೃಷ್ಣಮೂರ್ತಿ.

೯) BRIGHT (Editor in Chief), 1992, International Encyclopedia of Lingustics Volume A, New York Oxford, Oxford University Press.

೧೦) ಅಕ್ಷರ ಕೆ.ವಿ., ಭಾರತದ ರಂಗ ಸಂಪ್ರದಾಯಗಳು; ಪುನರಾವಲೋಕನದ ಒಂದು ಪ್ರಯತ್ನ.

೧೧) ಪ್ರೊ. ಕೃಷ್ಣರಾಮನ್, ನವೆಂಬರ್ ೯೩, ಫೆಬ್ರವರಿ ೯೪, ಪುನರ್ಲಿಖಿತ ಭಾರತೀಯ, ಕಾವ್ಯಶಾಸ್ತ್ರ ದತ್ತು, ಸಂವಾದ.

೧೨) ಸಂಭಾವನೆ, ೧೯೪೧, ರಾಜ ಸೇವಾಸಕ್ತ ಬೆಳ್ಳೂರ ಶ್ರೀಕಂಠಯ್ಯನವರಿಗೆ ಅವರ ಶಿಷ್ಯರೂ ಮಿತರೂ ಒಪ್ಪಿಸಿದ ಪ್ರಬಂಧಗಳ ಸಂಪುಟ, ಬೆಂಗಳೂರು

೧೩) ದ.ರಾ. ಬೇಂದ್ರೆ, ೧೯೧೪, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ.

೧೪) ಕನ್ನಡ ಪರಂಪರೆ ೧೯೫೩, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

೧೫) ಆಧುನಿಕ ಕನ್ನಡ ಸಾಹಿತ್ಯ ರೂಪಗಳು : ೧೯೯೩-೯೪, ಕರ್ನಾಟಕ ಭಾರತಿ (ಬೆಳ್ಳಿ ಹಬ್ಬ ಸಂಪುಟ).

೧೬) ಸಂ: ಡಾ. ಜಿ. ಎಸ್. ಶಿವರುದ್ರಪ್ಪ, ಡಾ. ಎಚ್. ಎಸ್. ವೆಂಕಟೇಶಮೂರ್ತಿ, ಡಾನರಹಳ್ಳಿ ಬಾಲ ಸುಬ್ರಮಣ್ಯ, ೧೯೯೯, ತಂಬೂರಿ ಅತ್ವತ್ಥ ೬೦, ಅಭಿನಂದನ ಗ್ರಂಥ, ಅತ್ವತ್ಥ ಅಭಿನಂದನ ಸಮಿತಿ, ಬೆಂಗಳೂರು.

೧೭) ಡಾ. ಹಾ.ಮಾ. ನಾಯಕ, ೧೯೮೮, ಸಂಪ್ರತಿ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.
೧೮) ಸಂ: ಡಾ. ಶ್ರೀರಂಗ, ಕನ್ನಡ ರಂಗಭೂಮಿ ನಡೆದು ಬಂದ ದಾರಿ, ಕ.ಸಾ.ಪ,ಬೆಂಗಳೂರು
೧೯) ಡಾ. ಎಚ್. ಎಸ್. ಗೋಪಾಲರಾವ್, ೧೯೯೬,ಕರ್ನಾಟಕ ಏಕೀಕರಣ ಇತಿಹಾಸ, ನವ ಕರ್ನಾಟಕ ಪ್ರಕಾಶನ.
೨೦) Robert. P. Gwinn, The New Encyclopedia Britannica Vol.22. The University of Chicago.
೨೧) ಅ.ರಾ. ಮಿತ್ರ, ೧೯೯೦, ಛಂದೋಮಿತ್ರ, ಕಾಮಧೇನು ಪ್ರಕಾಶನ, ಬೆಂಗಳೂರು.
೨೨) ಸಂ: ಹಿ.ಮ. ನಾಗಯ್ಯ, ಕನ್ನಡ ನುಡಿ, ಸಂ: ೩೫, ಸಂಚಿಕೆ-೨, ಚಿಕ್ಕಮಗಳೂರಿನಲ್ಲಿ ಕವಿ ಲಕ್ಷ್ಮೀಶ ಮಂಟಪದಲ್ಲಿ ನಡೆದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಾಹಿತ್ಯ ಗೋಷ್ಠಿ.
೨೩) ಕನ್ನಡಗರಿಗೆ ಒಳ್ಳೆಯ ಸಾಹಿತ್ಯ, ೧೯೪೮, ಭಾಷಣಗಳು ಮತ್ತು ಲೇಖನಗಳು, ಕಾವ್ಯಾಲಯ,ಮೈಸೂರು.
೨೪) ಯು. ಆರ್. ಅನಂತಮೂರ್ತಿ : ೧೯೭೧, ಪ್ರಜ್ಞೆ ಮತ್ತು ಪರಿಸರ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.
೨೫) ಸಿ.ಪಿ.ಕೆ., ೧೯೭೨, ಕಲಾಪ, ಶರತ ಪ್ರಕಾಶನ, ಮೈಸೂರು.
೨೬) ಡಾ. ಪ್ರಹ್ಲಾದ ಮುದಗಲ್, ೧೯೯೫, ಕನ್ನಡ ರಂಗ ಪರಂಪರೆ, ಬಾರ್ಲಿ ಬಿಂದುಮಾಧವ ಸ್ಮಾರಕ ಪ್ರತಿಷ್ಠಾನ.
೨೭) ಡಾ. ಎಚ್. ತಿಪ್ಪೇಸ್ವಾಮಿ, ೧೯೭೯, ಸಾಹಿತ್ಯ ಮತ್ತು ಸಮಕಾಲಿಣ ವಾಸ್ತವಿಕತೆ, ಚಾಮುಂಡಿ ಎಂಟರ್‌ಪ್ರೈಸಸ್.
೨೮) ಡಾ. ಹಾ.ಮಾ. ನಾಯಕ, ಬಿಡುಗಡೆಯ ಬಳ್ಳಿ, ಕನ್ನಡ ಅಧ್ಯಯನ ಸಂಸ್ಥೆ, ಪ್ರಕಟಣೆ, ಮೈಸೂರು, ೧೯೭೫.
೨೯) ಸಂ. ಡಾ. ಬಸವರಾಜ ಮಲಶೆಟ್ಟಿ, ೧೯೯೩, ವ್ಯಾಕರಣತೀರ್ಥ, ಕ.ಸಾ.ಪ.
೩೦) ಡಾ. ಎಸ್.ಕೆ. ರಾಮಶೇಷನ್, ೧೯೯೧, ಹರಿದಾಸ ಆಂದೋಲನ ಒಂದು ಅಧ್ಯಯನ, ಮಿತ್ರ ಪ್ರಿಂಟರ್ಸ್, ಮೈಸೂರು.
೩೧) ಬಸವರಾಜ ಮಲಶೆಟ್ಟಿ, ೧೯೮೩, ಪ್ರಾಚೀನ ಕರ್ನಾಟಕದಲ್ಲಿ ನಾಟಕ ಪರಂಪರೆ, ಶ್ರೀ ಜಿ. ಕೊಟ್ಟೂರು ಸ್ವಾಮಿಮಠ.
೩೨) ಸಂ: ಎಸ್. ವಿ. ಪರಮೇಶ್ವರ ಭಟ್ಟ, ೧೯೭೬, ಮಂಗಳಾವಲೋಕನ, ಎಸ್.ವಿ.ಪಿ. ಸಾಹಿತ್ಯ ಪ್ರಕಾಶನ ಸಂಸ್ಥೆ, ಮಂಗಳೂರು.
೩೩) ಎಲ್. ಎಸ್. ಶೇಷಗಿರಿರಾವ್, ೧೯೯೬, ಒಳನೋಟ ಪುರೋಗಾಮಿ, ಬೆಂಗಳೂರು.
೩೪) ಪಿ.ವಿ. ಶಾಸ್ತ್ರಿ, ೧೯೭೬, ಸಾಹಿತ್ಯದಲ್ಲಿ ತತ್ವವಾದಗಳು, ಸಮಾಜ ಪುಸ್ತಕಾಲಯ.
೩೫) ಎಲ್. ಎಸ್. ಶೇಷಗಿರಿರಾವ್, ೧೯೯೩, ಹೊಸಗನ್ನಡ ಸಾಹಿತ್ಯ, ಕ.ಸಾ.ಪ.

